|| ಶ್ರೀಃ ||

|| ಶ್ರೀ ಗುರುರಾಜೋ ವಿಜಯತೇ ||

ಶ್ರೀ ರಾಘವೇಂದ್ರತೀರ್ಥವಿರಚಿತಾ

# ತಂತ್ರದೀಪಿಕಾ

[ದ್ವಿತೀಯ ಸಂಪುಟ]

(ಶ್ರೀವೇದವ್ಯಾಸಪ್ರಣೀತ ಬ್ರಹ್ಮಮೀಮಾಂಸಾ ಶಾಸ್ತ್ರದ ಸಾಧನಾಧ್ಯಾಯ ಮತ್ತು ಫಲಾಧ್ಯಾಯಗಳ ವ್ಯಾಖ್ಯಾನ)

ಪ್ರೊ|| ಡಿ. ಪ್ರಹ್ಲಾದಾಚಾರ್ಯ, ಎಂ.ಎ, ವಿದ್ವಾನ್
ಇವರಿಂದ ರಚಿತವಾದ ಕನ್ನಡಾನುವಾದ ಸಹಿತ

ಪ್ರಕಾಶಕರು

ಶ್ರೀ ಗುರುರಾಜಾ ಅಸೋಸಿಯೇಷನ್ (ರಿ)

ಮಾಡಲ್‌ಹೌಸ್ ಬ್ಲಾಕ್, ಬಸವನಗುಡಿ

ಬೆಂಗಳೂರು-560004

TANTRADIPIKA by Sri Raghavendratirtha. II Vol. — Sadhana and Phala Adhyayas — Translated into Kannada by Vidwan D. Prahladacharya. Published by Sree Gururaja Association, Model House Street, Bangalore-4.
2000 Copies. October 1992.

Copies can be had from

The Secretary
SREE GURURAJA ASSOCIATION
Sri Raghavendraswamy Mutt
Model House Street
Bangalore-560 004

**Price : Rs. 35/-**

Printed at Deepak Printing Press, Basavangudi, Bangalore-4

ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರು
ಶ್ರೀ ಪೇಜಾವರ ಅಧೋಕ್ಷಜಮಠ
ಉಡುಪಿ–576 101

# ಅನುಗ್ರಹ ಸಂದೇಶ

ವೇದಾದಿ ಶಾಸ್ತ್ರಗಳಿಂದ ತತ್ವಜ್ಞಾನವನ್ನು ಪಡೆಯಲು ಬ್ರಹ್ಮಸೂತ್ರವು ನಮಗೆ ಮುಖ್ಯ ಸಹಕಾರಿಯಾಗಿದೆ. ಮಂದರಪರ್ವತದ ಸುತ್ತಲೂ ವಾಸುಕಿ ಸರ್ಪವನ್ನು ಹಗ್ಗವಾಗಿ ಬಂಧಿಸಿ ಕಡೆದಾಗ ಅಮೃತವು ದೊರೆತಂತೆ ಶಾಸ್ತ್ರವನ್ನು ಬ್ರಹ್ಮಸೂತ್ರದ ಜೊತೆಗೆ ಜೋಡಿಸಿ ಮಥಿಸಿದಾಗಲೇ ತತ್ವಜ್ಞಾನದ ಅಮೃತವನ್ನು ನಾವು ಪಡೆಯಬಲ್ಲೆವು. ಆದುದರಿಂದಲೇ ವೇದ, ಉಪನಿಷತ್ ಮುಂತಾದ ಮಂತ್ರಗಳಿಂದ ಬ್ರಹ್ಮಸೂತ್ರವು ಪ್ರಧಾನ ಸಹಕಾರಿಯಾಗಿ ತಂತ್ರವೆನಿಸಿದೆ. ಆಧ್ಯಾತ್ಮಿಕ ದರ್ಶನಕ್ಕೆ ಈ ಬ್ರಹ್ಮಸೂತ್ರಗಳನ್ನೇ ಅಡಿಗಲ್ಲೆಂದು ನಾವು ಪರಿಗಣಿಸಬಹುದು. ಆಚಾರ್ಯ ಮಧ್ವರು ತಾವು ರಚಿಸಿದ ಅನೇಕ ವ್ಯಾಖ್ಯಾನಗಳಿಂದ ಬ್ರಹ್ಮಸೂತ್ರದ ಸಂಕ್ಷಿಪ್ತ ಮತ್ತು ವಿಸ್ತೃತ ಅರ್ಥವಿವೇಚನೆಯನ್ನು ಮಾಡಿರುವರು. ಆದರೂ ಸರಳ ಸಂಗ್ರಹವಾಗಿ ಈ ಬ್ರಹ್ಮಸೂತ್ರಗಳ ಸಾರವನ್ನು ನಿರೂಪಿಸುವ 'ತಂತ್ರದೀಪಿಕೆ'ಯನ್ನು ರಚಿಸಿ ಜಿಜ್ಞಾಸುಗಳಿಗೆ ಅಮೋಘವಾದ ಉಪಕಾರವನ್ನು ಶ್ರೀ ರಾಘವೇಂದ್ರಸ್ವಾಮಿಗಳು ಮಾಡಿದ್ದಾರೆ. ಭೌತಿಕ ವಿಷಯದಲ್ಲಿ ಸಾಮಾನ್ಯ ಜನರ ಇಷ್ಟಾರ್ಥವನ್ನು ಪೂರೈಸಿರುವ ಕರುಣಾಮೂರ್ತಿಗಳಾದ ರಾಘವೇಂದ್ರ ಗುರುಗಳು ಆಧ್ಯಾತ್ಮಿಕ ವಿಷಯದಲ್ಲಿಯೂ ಬ್ರಹ್ಮಸೂತ್ರ, ಭಗವದ್ಗೀತೆ, ಉಪನಿಷತ್ ಮುಂತಾದ ಗ್ರಂಥಗಳ ಸರಳ ಅರ್ಥ ನಿರೂಪಣೆಯನ್ನು ನೀಡಿ ಜನರು ಸುಲಭವಾಗಿ ಈ ಗ್ರಂಥಗಳ ಸಾರವನ್ನು ಗ್ರಹಿಸುವಂತೆ ಅನುಗ್ರಹಿಸಿದ್ದಾರೆ. ರಾಯರ ಈ ಗ್ರಂಥಮಾಲಿಕೆಯಲ್ಲಿ 'ತಂತ್ರದೀಪಿಕಾ' ಒಂದು ಅಮೂಲ್ಯ ರತ್ನವಾಗಿದೆ. ನರಸಿಂಹರಾಜಾಕಾಲೋನಿಯ ಗುರುರಾಘವೇಂದ್ರ ಸಮಿತಿಯು ತನ್ನ ಅನೇಕ ಜ್ಞಾನಕಾರ್ಯಗಳ ಜೊತೆಗೆ ಇಂತಹ ಉಪಯುಕ್ತ ಶ್ರೇಷ್ಠ ಗ್ರಂಥಗಳ ಅನುವಾದ ಮಾಡಿಸಿ ಪ್ರಕಟಗೊಳಿಸುತ್ತಿರುವುದು ಅತ್ಯಂತ ಸ್ತುತ್ಯವೂ ಅನುಕರಣೀಯವೂ ಆಗಿದೆ. ಬಹಳ ಸಮಂಜಸವಾಗಿ ಈ ಗ್ರಂಥವನ್ನು ಅನುವಾದ ಮಾಡಿರುವ ನಮ್ಮ ಪರಮಪ್ರಿಯ ಶಿಷ್ಯರಾದ ಪ್ರಹ್ಲಾದಾಚಾರ್ಯರನ್ನೂ ಅಭಿನಂದಿಸಿ ಅವರಿಂದ ಇಂತಹ ಅನೇಕ ಕೃತಿಗಳು ರಚನೆಯಾಗಲೆಂದು ಆಶಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು
ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರು

ಶ್ರೀ ಶ್ರೀ ವಿದ್ಯಾಮಾನ್ಯತೀರ್ಥಶ್ರೀಪಾದರು
ಫಲಿಮಾರು ಭಂಡಾರಕೇರಿಮಠ
ಉಡುಪಿ-576101

# ಆಶೀರ್ವಾದ ಪತ್ರ

ಗಂಭೀರ ಬ್ರಹ್ಮಸೂತ್ರಗಳ ಅರ್ಥಜ್ಞಾನಕ್ಕಾಗಿ ತಂತ್ರದೀಪಿಕಾ ಗ್ರಂಥದ ಆವಶ್ಯಕತೆಯು ತುಂಬಾ ಇದೆ. ತಂತ್ರದೀಪಿಕಾ ಎಂಬ ಹೆಸರಿನ ಅರ್ಥವನ್ನು ತಿಳಿದಾಗ ಈ ವಿಷಯದ ಮನವರಿಕೆಯಾಗುವುದು. "ಸಕೃದುಚ್ಚರಿತ ಶಬ್ದಸ್ಯ ಅನೇಕಾರ್ಥೋಪಕಾರಕತ್ವಂ ತಂತ್ರಂ" ಗ್ರಂಥಗಳಲ್ಲಿ ಒಂದು ಶಬ್ದವನ್ನು ಅನೇಕಾರ್ಥಗಳ ವಿವಕ್ಷೆಯಿಂದ ಪ್ರಯೋಗಿಸುವುದು ಇದೆ. ಇಂತಹ ಶಬ್ದಗಳನ್ನು ತಂತ್ರನ್ಯಾಯದಿಂದ ಪ್ರಯೋಗಿಸಿದ್ದು ಎಂದು ಹೇಳುತ್ತಾರೆ. ಇಂತಹ ತಂತ್ರನ್ಯಾಯದಿಂದ ಪ್ರಯೋಗಿಸಿದ ಶಬ್ದಗಳು ಬ್ರಹ್ಮಸೂತ್ರಗಳಲ್ಲಿ ಬಹಳೇ ಇವೆ. ಭಾಷ್ಯ, ತತ್ವಪ್ರಕಾಶಿಕಾ ಗ್ರಂಥಗಳು ಬ್ರಹ್ಮಸೂತ್ರಗಳಲ್ಲಿ ತಂತ್ರನ್ಯಾಯದಿಂದ ಪ್ರಯೋಗಿಸಿದ ಶಬ್ದಗಳ ಬಹ್ವರ್ಥಗಳನ್ನು ಮಾತ್ರ ಹೇಳುತ್ತವೆ. ಯಾವ ಶಬ್ದಕ್ಕೆ ಎಷ್ಟು ಅರ್ಥ ಎಂಬುದನ್ನು ಪ್ರಾಯಃ ಹೇಳುವುದೇ ಇಲ್ಲ. ಈ ಪ್ರಮೇಯವನ್ನು ತಂತ್ರದೀಪಿಕಾ ಗ್ರಂಥವು ತಿಳಿಸುತ್ತದೆ, ಆದ್ದರಿಂದ ಈ ಗ್ರಂಥಕ್ಕೆ ಈ ಹೆಸರು ಅನ್ವರ್ಥಕವಾಗಿದೆ. ಅತ್ಯಾವಶ್ಯಕವಾದ ಈ ಗ್ರಂಥದ ಕನ್ನಡಾನುವಾದವನ್ನು ಸರಳವಾಗಿ ಪ್ರಾಮಾಣಿಕವಾಗಿ ಅನ್ಯೂನಾನತಿರಿಕ್ತವಾಗಿ ಶ್ರೀ ಡಿ.ಪ್ರಹ್ಲಾದಾಚಾರ್ಯರು ಮಾಡಿ ಸರ್ವಸಜ್ಜನರಿಗೆ ಮಹೋಪಕಾರ ಮಾಡಿದ್ದಾರೆ. ನಾವು ಇದನ್ನು ನೋಡಿ ತುಂಬಾ ಸಂತೋಷಪಟ್ಟಿದ್ದೇವೆ. ಶ್ರೀ ಗುರುರಾಜಾ ಅಸೋಸಿಯೇಷನ್, ಮಾಡಲ್ ಹೌಸ್ ಸ್ಟ್ರೀಟ್ ಇವರು ಇದನ್ನು ಸುಂದರವಾಗಿ ಪ್ರಕಾಶಪಡಿಸಿದ್ದು ಸರ್ವರಾಘವೇಂದ್ರ ಮಠದ ಸಂಸ್ಥೆಗಳಿಗೆ ಆದರ್ಶಭೂತವಾಗಿದೆ. ಶ್ರೀ ರಾಘವೇಂದ್ರಸ್ವಾಮಿಗಳಿಗೆ ಇದರಿಂದ ತುಂಬಾ ಸಂತೋಷವಾಗಿದೆ. ಇಂತಹ ಉತ್ತಮ ಕಾರ್ಯಗಳೇ ಈ ಸಂಸ್ಥೆಯಿಂದ ನಡೆಯುತ್ತಾ ಇರಲಿ ಎಂದು ಆಶಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

**ಶ್ರೀ ೧೦೮ ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರು**

ಮತ್ತು ಶ್ರೀ॥ ಎನ್. ಕೆ. ನರಸಿಂಹಮೂರ್ತಿಯವರ ಕನ್ನಡಾನುವಾದ ಸಹಿತವಾಗಿ ಶ್ರೀರಾಘವೇಂದ್ರಗುರುಸಾರ್ವಭೌಮರಿಂದ ರಚಿತವಾದ **" ಶ್ರೀರಾಮ ಚಾರಿತ್ರ್ಯ ಮಂಜರೀ "** ಮತ್ತು **" ಶ್ರೀಕೃಷ್ಣ ಚಾರಿತ್ರ್ಯ ಮಂಜರೀ "** ಗ್ರಂಥಗಳನ್ನೂ ಪ್ರಕಟಿಸಲಾಯಿತು.

ಅಂತೆಯೇ ಶ್ರೀ ಡಿ. ಪ್ರಹ್ಲಾದಾಚಾರ್ಯರ್, ಶ್ರೀ ಜಿ. ಗುರುವೆಂಕಟಾಚಾರ್ಯರ್ ಮತ್ತು ಶ್ರೀ ರಾಮವಿಠಲ – ಈ ಮೂವರು ವಿದ್ವಾಂಸರು ಸೇರಿ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದ ಮೊದಲ ಮೂರು ಅಧ್ಯಾಯಗಳ ಪ್ರತಿಪದಾರ್ಥ ಮತ್ತು ವಿಶೇಷ ವಿಷಯಗಳನ್ನೊಳಗೊಂಡ ಗ್ರಂಥವನ್ನು ಸಿದ್ಧಪಡಿಸಿಕೊಟ್ಟಿದ್ದು ನಮ್ಮ ಸಂಸ್ಥೆಯಿಂದ 30-5-1990 ರಲ್ಲಿ ಪ್ರಕಟಗೊಂಡಿತು.

ಪ್ರಕೃತ, ಶ್ರೀಹರಿಗುರುಗಳ ಪ್ರೇರಣಾನುಸಾರವಾಗಿ ಆಡಳಿತ ಮಂಡಲಿಯು, ಶ್ರೀಗುರುಸಾರ್ವಭೌಮರ ಕೃತಿರತ್ನಗಳಲ್ಲಿ ಶ್ರೇಷ್ಠವಾದ **"ತಂತ್ರದೀಪಿಕಾ"** ಗ್ರಂಥ ವನ್ನು ಕನ್ನಡಾನುವಾದ ಸಮೇತ ಪ್ರಕಟಿಸಲು ಕಾರ್ಯನಿರತವಾಗಿ, 1985 ರಲ್ಲಿ ಗ್ರಂಥಪ್ರಕಾಶನ ಉಪಸಮಿತಿಯನ್ನು ರಚಿಸಿತು. ಉಪಸಮಿತಿಯವರು ಗ್ರಂಥಾನುವಾದ ವನ್ನು ಮಾಡಲು ವೇದಮೂರ್ತಿ ಡಿ. ಪ್ರಹ್ಲಾದಾಚಾರ್ಯರ್, ಎಂ.ಎ., ವಿದ್ವಾನ್, ಅವರನ್ನು ಪ್ರಾರ್ಥಿಸಿದರು. ಸಂಸ್ಕೃತ ಶಾಸ್ತ್ರಗ್ರಂಥಗಳ ಕನ್ನಡಾನುವಾದ ಎಷ್ಟು ಕ್ಲಿಷ್ಟಕರವೆನ್ನುವುದು ವಿದ್ವದ್ವೇದ್ಯವಾದ ವಿಷಯ. ವೇದಮೂರ್ತಿ ಡಿ. ಪ್ರಹ್ಲಾದಾ ಚಾರ್ಯರು ನಮ್ಮ ಶ್ರೀಮಠದ ಮೇಲಿನ ಅಭಿಮಾನದಿಂದಲೂ, ಶ್ರೀ ಹರಿಗುರು ಗಳಲ್ಲಿರುವ ತಮ್ಮ ಭಕ್ತ್ಯಾದರಗಳ ದ್ಯೋತಕವಾಗಿಯೂ ಪ್ರಥಮ ಸಂಪುಟ ಒದಗಿಸಿ ದ್ದಲ್ಲದೆ ಈಗ ದ್ವಿತೀಯ ಸಂಪುಟದ ಅನುವಾದವನ್ನು ಒದಗಿಸಿದ್ದಾರೆ. ಇದಕ್ಕಾಗಿ ವೇದಮೂರ್ತಿ ಶ್ರೀ ಡಿ. ಪ್ರಹ್ಲಾದಾಚಾರ್ಯರಿಗೆ ನಮ್ಮ ಅನಂತ ವಂದನೆಗಳನ್ನು ಅರ್ಪಿಸುತ್ತೇವೆ.

ಕೊನೆಯಲ್ಲಿ ಸಮಸ್ತ ಮಾಧ್ವಬಂಧುಗಳಲ್ಲಿ ವಿನಂತಿ : ಶಾಸ್ತ್ರಗ್ರಂಥಗಳ ಭಾಷಾನುವಾದ, ಮುದ್ರಣ, ಸಂಯೋಜನಗಳು ಕಾಲನಿರ್ಬಂಧದಿಂದ ಆಗುವಂತಹ ಕೆಲಸಗಳಲ್ಲ. ಈ ಗ್ರಂಥದ ಪ್ರಕಟನೆಯಲ್ಲಿ ಕಾಲವಿಲಂಬವಾದುದಕ್ಕೆ ವಿಷಾದಿಸುತ್ತೇವೆ.

ಗ್ರಂಥಗ್ರಾಹಕರಲ್ಲಿ ಒಂದು ಬಿನ್ನಹ : ಶಾಸ್ತ್ರಗ್ರಂಥಗಳ ರಕ್ಷಣೆ ಹಾಗೂ ಪಾಠ ಪ್ರವಚನಗಳಿಗೆ ಗ್ರಂಥಗಳ ಮುದ್ರಣ–ಪ್ರಕಾಶನಗಳು ಅಗತ್ಯವೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಆದ್ದರಿಂದ ತತ್ತ್ವಜ್ಞಾನಾಕಾಂಕ್ಷಿಗಳೂ, ಶ್ರೀಮದಾಚಾರ್ಯರ ಅನುಗ್ರಹಾಕಾಂಕ್ಷಿಗಳೂ ಆದ ಸಹೃದಯರು ಈ ಗ್ರಂಥವನ್ನು ಪಡೆದು ನಮ್ಮ ಅಸೋಸಿಯೇಷನ್ ಹಮ್ಮಿಕೊಂಡಿರುವ ಮುಂದಿನ ಗ್ರಂಥಗಳ ಪ್ರಕಾಶನೆಗೆ ನೆರವು ನೀಡುವರೆಂದು ಆಶಿಸುತ್ತೇವೆ.

ದೀಪಕ್ ಮುದ್ರಣಾಲಯದ ಮಾಲೀಕರಾದ ಶ್ರೀ ಕೆ.ವಿ. ವೆಂಕಟೇಶಯ್ಯನವರು ಈ ಗ್ರಂಥವನ್ನು ಅಂದವಾಗಿ, ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರಿಗೂ ದೀಪಕ್ ಮುದ್ರಣಾಲಯದ ಸಿಬ್ಬಂದಿವರ್ಗಕ್ಕೂ ನಮ್ಮ ಅಭಿನಂದನೆಗಳು.

ತಂತ್ರದೀಪಿಕಾ ಪ್ರಕಾಶನದ ಈ ಸೇವೆಯಿಂದ ಶ್ರೀ ರಾಘವೇಂದ್ರ ಗುರ್ವಂತರ್ಯಾಮಿ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀರಾಮಚಂದ್ರಸ್ವಾಮಿ ಪ್ರೀತನಾಗಲಿ ಎಂದು ಪ್ರಾರ್ಥಿಸುವೆವು.

ಅಧ್ಯಕ್ಷರು ಮತ್ತು ಆಡಳಿತ ಮಂಡಲಿ ಸದಸ್ಯರು

1-10-1992 ಶ್ರೀ ಗುರುರಾಜಾ ಅಸೋಸಿಯೇಷನ್

|| ಶ್ರೀ: ||

# ಪೀ ೦ ಠಿ ಕೆ

ಮಹಾಮಹಿಮಶಾಲಿಗಳೆಂದು ಲೋಕವಿಖ್ಯಾತರಾದ ಶ್ರೀ ರಾಘವೇಂದ್ರ ಸ್ವಾಮಿಗಳು ದ್ವೈತವೇದಾಂತ ಗ್ರಂಥಕಾರರಲ್ಲಿ ಅಪ್ರತಿಮ ಟಿಪ್ಪಣೀಕಾರರೆಂದು ವಿದ್ವತ್ಸಮುದಾಯದಲ್ಲಿ ಪ್ರಖ್ಯಾತರಾದವರು. ಸುಮಾರು ನಲವತ್ತು ಗ್ರಂಥಗಳನ್ನು ರಚಿಸಿರುವ ಅವರು ದ್ವೈತವಾಙ್ಮಯಕ್ಕೆ ಸಲ್ಲಿಸಿರುವ ಸೇವೆ ಅಮೋಘವಾದದ್ದು. ಪ್ರಸ್ಥಾನತ್ರಯವೆಂದು ಪ್ರಸಿದ್ಧವಾಗಿರುವ ಬ್ರಹ್ಮಸೂತ್ರಗಳು, ಗೀತೆ, ಉಪನಿಷತ್ತು– ಇವುಗಳಿಗೆ ಮತ್ತು ಋಗ್ವೇದದ ಕೆಲವು ಭಾಗಕ್ಕೆ ನೇರವಾಗಿ ವ್ಯಾಖ್ಯಾನಗಳನ್ನು ರಚಿಸಿ ರುವುದಲ್ಲದೆ, ದ್ವೈತವೇದಾಂತಪ್ರಪಂಚದಲ್ಲಿ ಮುನಿತ್ರಯರೆಂದು ಪ್ರಖ್ಯಾತರಾದ ಶ್ರೀಮಧ್ವರು, ಶ್ರೀಜಯತೀರ್ಥರು ಮತ್ತು ಶ್ರೀವ್ಯಾಸತೀರ್ಥರ ಗ್ರಂಥಗಳಿಗೆ ಟಿಪ್ಪಣಿ ಗಳನ್ನು ರಚಿಸಿ ಜಿಜ್ಞಾಸುಗಳನ್ನು ಅನುಗ್ರಹಿಸಿರುವ ಅಸಾಧಾರಣ ಕೀರ್ತಿ ಶ್ರೀರಾಯ ರದ್ದು. ಉತ್ತರಮೀಮಾಂಸೆಗೆ ಮಾತ್ರವಲ್ಲದೆ ಪೂರ್ವಮೀಮಾಂಸಾ ಸೂತ್ರಗಳಿಗೂ ಸ್ವತಂತ್ರ ವ್ಯಾಖ್ಯಾನವನ್ನು ರಚಿಸಿರುವುದು ಶ್ರೀರಾಯರ ಮತ್ತೊಂದು ವೈಶಿಷ್ಟ್ಯ.

ದ್ವೈತವೇದಾಂತಗ್ರಂಥಗಳಿಗೆ ಟಿಪ್ಪಣಿಗಳನ್ನು ರಚಿಸಿರುವವರಲ್ಲಿ ಸರ್ವಮಾನ್ಯ ರಾದವರು ಕೆಲವರು ಮಾತ್ರ. ಶ್ರೀರಾಘವೇಂದ್ರಸ್ವಾಮಿಗಳು ಅವರಲ್ಲೊಬ್ಬರು. ಅವರು ತಮ್ಮ ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಕ್ಕೆ ಭಿನ್ನಾಭಿಪ್ರಾಯವೇ ಇಲ್ಲ. ಅವರ ಮಾತು ಸರ್ವರಿಗೂ ಶಿರೋಧಾರ್ಯ. ಅವರು ತಮ್ಮ ಗ್ರಂಥಗಳಲ್ಲಿ ಅನುಸರಿಸಿರುವ ಶೈಲಿಯೂ ವೈಶಿಷ್ಟ್ಯಪೂರ್ಣವಾದದ್ದು. ಅವರ ಮಾತುಗಳು ಮಿತ, ಸರಳ, ಆದರೆ ಅಷ್ಟೇ ಖಚಿತ ಮತ್ತು ತಲಸ್ಪರ್ಶಿಯಾದ ವಿವರಣೆ. ಆಧಾರಗ್ರಂಥಗಳ ಬಗ್ಗೆ ಅವರು ನೀಡುವ ಮಾಹಿತಿ ಸಂಶೋಧಕರಿಗೆ ಅತ್ಯಂತ ಸಹಾಯಕ. ವ್ಯಾಕರಣ ಮತ್ತು ಪೂರ್ವಮೀಮಾಂಸೆಯ ವಿಷಯಗಳು ಪ್ರಸ್ತುತವಾದ ಸಂದರ್ಭಗಳಲ್ಲಂತೂ ಆಯಾ ಶಾಸ್ತ್ರದ ಮರ್ಯಾದೆಯನ್ನನುಸರಿಸಿ ಅವರು ನೀಡುವ ವಿವರಣೆ ಆ ಶಾಸ್ತ್ರೀಯ ವಿಷಯಗಳ ನಮ್ಮ ಅರಿವಿಗೆ ಒಂದು ಪೂರ್ಣತೆಯನ್ನು ತಂದುಕೊಡುವಂಥಾದ್ದು. ವ್ಯಾಖ್ಯಾನಸಂದರ್ಭದಲ್ಲಿ ಅವರು ತೋರ್ಪಡಿಸುವ ಸೌಜನ್ಯವೂ ಅಪೂರ್ವವಾದದ್ದು. ಕ್ಲಿಷ್ಟವಾದ ಅನೇಕ ಕಡೆಗಳಲ್ಲಿ ಅವರು ತಮ್ಮ ವ್ಯಾಖ್ಯಾನವನ್ನು ಬರೆದ ನಂತರ ಅನ್ಯರ ವ್ಯಾಖ್ಯಾನಗಳನ್ನೂ ಉಲ್ಲೇಖಿಸುವುದುಂಟು. ಆದರೆ ಎಲ್ಲೂ ಖಂಡನೆಯ ಮಾತಿಲ್ಲ. ಅವುಗಳ ಯುಕ್ತಾಯುಕ್ತತೆಯ ವಿಚಾರ ಅಧ್ಯಯನ ಮಾಡುವವರ ವಿವೇಚನೆಗೆ

ಬಿಟ್ಟಿದ್ದು. ಇದು, ಶ್ರೀ ರಾಘವೇಂದ್ರಸ್ವಾಮಿಗಳ ಗ್ರಂಥಗಳ ವೈಶಿಷ್ಟ್ಯದ ಸ್ಥೂಲ ಪರಿಚಯವೆನ್ನಬಹುದು. ಒಟ್ಟಿನಲ್ಲಿ, ಐಹಿಕ ಫಲಗಳನ್ನರಸಿ ಬಂದವರ ವಿಷಯದಲ್ಲಿ ಶ್ರೀ ರಾಯರು ಎಷ್ಟು ಕರುಣಾಳುಗಳೋ, ಜ್ಞಾನವನ್ನರಸಿ ಬರುವವರಿಗೆ, ಅವರು ಅದಕ್ಕೂ ಮಿಗಿಲಾಗಿ ತಮ್ಮ ಗ್ರಂಥಗಳ ಮೂಲಕ ನಿರಂತರ ಕೃಪೆ ತೋರುತ್ತಿದ್ದಾರೆ.

ಬ್ರಹ್ಮಸೂತ್ರಗಳಿಗೆ ಸಂಬಂಧಪಟ್ಟಂತೆ ಶ್ರೀ ರಾಘವೇಂದ್ರಸ್ವಾಮಿಗಳು ರಚಿಸಿರುವ ಗ್ರಂಥಗಳು ಆರು. ಅವು—ಪರಿಮಳ, ಭಾವದೀಪ, ಪ್ರಕಾಶ, ತತ್ತ್ವಮಂಜರೀ, ನ್ಯಾಯಮುಕ್ತಾವಳೀ ಮತ್ತು ತಂತ್ರದೀಪಿಕಾ.

**ಪರಿಮಳ**—ಬ್ರಹ್ಮಸೂತ್ರಗಳ ವ್ಯಾಖ್ಯಾನವಾಗಿ ಶ್ರೀಮಧ್ವಾಚಾರ್ಯರು ರಚಿಸಿರುವ ಅನುವ್ಯಾಖ್ಯಾನಕ್ಕೆ ಶ್ರೀಜಯತೀರ್ಥರ ಲೋಕೋತ್ತರ ಟೀಕೆ ನ್ಯಾಯ ಸುಧೆಯೆಂದು ಪ್ರಸಿದ್ಧವಾಗಿದೆ. ಆ ನ್ಯಾಯಸುಧೆಯ ವಿಖ್ಯಾತ ಟಿಪ್ಪಣಿ-ಪರಿಮಳ. ಶ್ರೀ ರಾಘವೇಂದ್ರಸ್ವಾಮಿಗಳಿಗೆ ಪರಿಮಳಾಚಾರ್ಯರೆಂಬ ಪ್ರಶಸ್ತಿಯನ್ನು ತಂದುಕೊಟ್ಟ ಖ್ಯಾತಿ ಈ ಗ್ರಂಥದ್ದು.

**ಭಾವದೀಪ**—ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀಜಯತೀರ್ಥರು ರಚಿಸಿರುವ ಟೀಕೆ – ತತ್ತ್ವಪ್ರಕಾಶಿಕಾ. ಆ ಟೀಕೆಯ ಟಿಪ್ಪಣಿ ಭಾವದೀಪ. ಶ್ರೀ ರಾಯರು ರಚಿಸಿರುವ ಅನೇಕ ಟಿಪ್ಪಣಿಗಳನ್ನು ಅವರು ಭಾವದೀಪವೆಂದೇ ಕರೆದಿದ್ದಾರೆ. ಈ ಭಾವದೀಪವನ್ನು ತತ್ತ್ವಪ್ರಕಾಶಿಕಾ-ಭಾವದೀಪವೆಂದು ಕರೆಯುವ ವಾಡಿಕೆ ಇದೆ.

**ಪ್ರಕಾಶ**—ಶ್ರೀ ಜಯತೀರ್ಥರ ತತ್ತ್ವಪ್ರಕಾಶಿಕೆಗೆ ಶ್ರೀ ವ್ಯಾಸರಾಜರು ರಚಿಸಿರುವ ಉದ್ದಾಮವ್ಯಾಖ್ಯಾನ—ತಾತ್ಪರ್ಯಚಂದ್ರಿಕೆ. ಇದರ ಟಿಪ್ಪಣಿ ಪ್ರಕಾಶ. ಹೀಗೆ ಒಂದು ಗ್ರಂಥಕ್ಕೆ ಸಾಕ್ಷಾತ್ ವ್ಯಾಖ್ಯಾನ ಮತ್ತು ಆ ಗ್ರಂಥದ ವ್ಯಾಖ್ಯಾನದ ವ್ಯಾಖ್ಯಾನ ಇವೆರಡನ್ನೂ ರಚಿಸಿರುವ ಅಪೂರ್ವ ವೈಶಿಷ್ಟ್ಯ ಶ್ರೀ ರಾಯರದ್ದು.

**ತತ್ತ್ವಮಂಜರೀ**— ಇದು ಶ್ರೀಮದಾಚಾರ್ಯರ ಬ್ರಹ್ಮಸೂತ್ರಾಣುಭಾಷ್ಯದ ಟಿಪ್ಪಣಿ. 'ಅನಂತೋಽರ್ಥಃ ಪ್ರಕಟಿತಃ ತ್ವಯ್ಯಾಣೌ ಭಾಷ್ಯಸಂಗ್ರಹೇ' ಎಂದು ಶ್ರೀಮಧ್ವವಿಜಯದಲ್ಲಿ ಅಣುಭಾಷ್ಯವನ್ನು ವರ್ಣಿಸಲಾಗಿದೆ. ಈ ವರ್ಣನೆ ಅಕ್ಷರಶಃ ಸತ್ಯವೆಂದು ಶ್ರೀ ರಾಯರ ಈ ಟಿಪ್ಪಣಿಯು ಮನವರಿಕೆ ಮಾಡಿಕೊಡುವುದು.

**ನ್ಯಾಯಮುಕ್ತಾವಳೀ**—ಬ್ರಹ್ಮಸೂತ್ರಗಳ ಪ್ರತಿಯೊಂದು ಅಧಿಕರಣಗಳ ಶರೀರವನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಿರುವ ಸ್ವತಂತ್ರ ಗ್ರಂಥ.

**ತಂತ್ರದೀಪಿಕಾ**—ಬ್ರಹ್ಮಸೂತ್ರಗಳ ವ್ಯಾಖ್ಯಾನರೂಪವಾದ ಈ ಗ್ರಂಥಕ್ಕೆ ಶ್ರೀ ರಾಯರು ಇಟ್ಟಿರುವ ತಂತ್ರದೀಪಿಕಾ ಎಂಬ ಹೆಸರು ಅನ್ವರ್ಥವಾಗಿದೆ. ತಂತ್ರ ಎಂದರೆ ಶಾಸ್ತ್ರ. ಪ್ರಕೃತ, ಬ್ರಹ್ಮಮೀಮಾಂಸಾಶಾಸ್ತ್ರ. ಈ ವ್ಯಾಖ್ಯಾನವು ಆ ಶಾಸ್ತ್ರದ

ಬಗ್ಗೆ ಬೆಳಕು ಚೆಲ್ಲುವ ದೀಪಿಕೆಯಾಗಿದೆ. ಶ್ರೀ ರಾಘವೇಂದ್ರ ವಿಜಯದಲ್ಲಿ ಈ ಗ್ರಂಥ ರಚನೆಯನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ—

ಸೂತ್ರಪಾತ್ರರುಚಿರಂ ಕಲಿತರ್ಥಿ ನ್ಯಾಯಪೂರ್ವಕಸುಧಾಜ್ಯಭರೇಣ ।
ತಂತ್ರದೀಪಮನುಬೋಧಯದರ್ಥಂ ಭಾಷ್ಯವರ್ತಿಕಮಯಂ ತನುತೇಽಸ್ಮ ॥
(ಸರ್ಗ ೮, ಶ್ಲೋ. ೧೦)

'ಸೂತ್ರಾರ್ಥಗಳನ್ನು ಯಥಾವತ್ತಾಗಿ ಬೆಳಗಿಸುವ ಈ ತಂತ್ರದೀಪಕ್ಕೆ ಬ್ರಹ್ಮ ಸೂತ್ರಗಳೇ ಹಣತೆ. ಸೂತ್ರಭಾಷ್ಯವೇ ಬತ್ತಿ. ನ್ಯಾಯಸುಧೆಯೆಂಬ ಆಜ್ಯವನ್ನು ಸುರಿದು ಶ್ರೀ ರಾಘವೇಂದ್ರರು ಈ ದೀಪವನ್ನು ಪ್ರಜ್ವಲಗೊಳಿಸಿದರು'.

ಗ್ರಂಥದ ಹೆಸರೇ ಸೂಚಿಸುವಂತೆ ಬ್ರಹ್ಮಸೂತ್ರಗಳನ್ನು ವಿವರಿಸುವುದೇ ಶ್ರೀ ರಾಯರ ಉದ್ದೇಶ. ಸೂತ್ರಪ್ರಸ್ಥಾನಕ್ಕೆ ಸಂಬಂಧಿಸಿದ ಅವರ ಇತರ ಗ್ರಂಥ ಗಳಿಂದಲೂ ಸೂತ್ರವಿವರಣೆ ದೊರೆಯಬಹುದು. ಆದರೆ ಇಲ್ಲಿ ವಿವರಣೆಯ ರೀತಿ ವಿಭಿನ್ನವಾಗಿದೆ. ಇಲ್ಲಿ ಶ್ರೀ ರಾಯರು ಪ್ರತಿಯೊಂದು ಅಧಿಕರಣದ ಉದ್ದೇಶವನ್ನು ಮೊದಲು ಸಂಕ್ಷಿಪ್ತವಾಗಿ ಹೇಳಿ, ಪೂರ್ವಪಕ್ಷವನ್ನು ಸಂಗ್ರಹವಾಗಿ ನಿರೂಪಿಸುವರು. ಅನಂತರ ಆ ಪೂರ್ವಪಕ್ಷಕ್ಕೆ ಉತ್ತರ ನೀಡುವ ಸೂತ್ರವನ್ನು ಉಲ್ಲೇಖಿಸಿ ಅ ಸೂತ್ರವು ಒಂದು ಪರಿಪೂರ್ಣವಾದ ವಾಕ್ಯವಾಗುವುದಕ್ಕೆ ಆವಶ್ಯಕವಾದ ಪದಗಳ ಅಧ್ಯಾಹಾರ, ಅನುವೃತ್ತಿ, ಆವೃತ್ತಿ, ಶೇಷಪೂರಣ ಮೊದಲಾದವನ್ನು ಹೇಳುವರು ಹೀಗೆ ಪರಿಪೂರ್ಣ ವಾಕ್ಯವಾಗಿ ರೂಪುಗೊಂಡ ಸೂತ್ರಕ್ಕೆ ಅನ್ವಯಾನುಸಾರ ಪ್ರತಿಪದಾರ್ಥ ಹೇಳಿ ಸೂತ್ರದ ಭಾವವನ್ನೂ ಸಂಗ್ರಹಿಸುವರು. ತತ್ತ್ವಪ್ರದೀಪ, ಸುಧಾ, ಚಂದ್ರಿಕಾ ಮೊದಲಾದ ಗ್ರಂಥಗಳಲ್ಲಿ ಆ ಸೂತ್ರಕ್ಕೆ ಬೇರೊಂದು ವ್ಯಾಖ್ಯಾನ ಮಾಡಿದ್ದಲ್ಲಿ ಆ ವ್ಯಾಖ್ಯಾನವನ್ನೂ ಉಲ್ಲೇಖಿಸುವರು. ಸೂತ್ರಗಳಲ್ಲಿ ಮೇಲುನೋಟಕ್ಕೆ ಕಾಣಬರುವ ಪುನರುಕ್ತಿ, ವಿರೋಧ ಮೊದಲಾದವುಗಳನ್ನು ಪ್ರಸ್ತಾಪಿಸಿ ಪರಿಹರಿಸುವರು. ಅಲ್ಲದೆ, ಪ್ರತಿಪಾದದ ಕೊನೆಯಲ್ಲಿ ಆ ಪಾದದ ಅಧಿಕರಣಗಳಿಂದ ಸಿದ್ಧವಾಗುವ ಪ್ರಮೇಯ ಗಳನ್ನು ಸಂಗ್ರಹಿಸುವರು. ಹೀಗೆ ಈ ಗ್ರಂಥವು ದ್ವೈತಸಿದ್ಧಾಂತಕ್ಕನುಗುಣವಾದ, ಬ್ರಹ್ಮಸೂತ್ರಗಳ ಒಂದು ಪರಿಪೂರ್ಣ ವ್ಯಾಖ್ಯಾನವಾಗಿದೆ.

ಇಂತಹ ಪ್ರೌಢಶಾಸ್ತ್ರ ಗ್ರಂಥದ ಕನ್ನಡ ಅನುವಾದವನ್ನು ಸಿದ್ಧಗೊಳಿಸುವ ಹೊಣೆಗಾರಿಕೆಯನ್ನು ಶ್ರೀ ಕೆ. ಟಿ. ಪಾಂಡುರಂಗಿಯವರ ಸೂಚನೆಯಂತೆ ಮಾಡೆಲ್ ಹೌಸ್ ಬೀದಿಯ ಶ್ರೀ ರಾಯರ ಮಠದವರು ನನಗೊಪ್ಪಿಸಿದಾಗ ಹಿಂಜರಿಕೆಯ ಮನಸ್ಸಿನಿಂದಲೇ ನಾನದನ್ನು ಒಪ್ಪಿಕೊಂಡೆ. ಶಾಸ್ತ್ರ ಗ್ರಂಥಗಳ ಕನ್ನಡ ಅನುವಾದ ವನ್ನು ಎರಡು ರೀತಿಯಿಂದ ಮಾಡಲು ಸಾಧ್ಯವಿದೆ. ಒಂದು, ಸಾಮಾನ್ಯ ಓದುಗರಿಗೂ ಗ್ರಹಿಸಲು ಅನುಕೂಲವಾಗುವಂತೆ ಗ್ರಂಥದ ಘಟ್ಟಗಳ ಸಾರವನ್ನು ಮಾತ್ರ ತಿಳಿಗನ್ನಡ ದಲ್ಲಿ ಮೂಲದ ಛಾಯೆಯನ್ನು ಅನುಸರಿಸಿ ಸಂಗ್ರಹಿಸುವುದು. ಇನ್ನೊಂದು,

ಪ್ರತಿಯೊಂದು ವಾಕ್ಯವನ್ನೂ ಆದಷ್ಟು ಸರಳವಾಗಿ ಕನ್ನಡದಲ್ಲಿ ಅನುವಾದಿಸುವುದು. ಎರಡನೆ ರೀತಿಯು ಅನುವಾದದಲ್ಲಿ, ಮೂಲದಲ್ಲಿ ಬರುವ ಯಾವ ವಿಷಯುವನ್ನೂ, ಮುಖ್ಯ ವಿಷಯುದ ದೃಷ್ಟಿಯಿಂದ ಅದು ಗೌಣವಾಗಿರಲಿ, ಬಿಡಲಿ, ಅಲಕ್ಷಿಸಲಾಗದು. ಮೊದಲನೆ ರೀತಿಯು ಅನುವಾದ, ಶಾಸ್ತ್ರಪರಿಭಾಷೆಯು ಹೆಚ್ಚಿನ ಪರಿಚಯುವಿಲ್ಲದ ವರಿಗೂ ಎಟಕುವಂಥಾದ್ದು. ಇನ್ನೊಂದು ರೀತಿಯು ಅನುವಾದವನ್ನು ಗ್ರಹಿಸಲು ಶಾಸ್ತ್ರಾಭ್ಯಾಸದ ಹಿನ್ನೆಲೆ ಅತ್ಯಗತ್ಯ. ತಂತ್ರದೀಪಿಕೆಯು ಈ ಅನುವಾದ ಎರಡನೆ ರೀತಿಯುದಾಗಿದೆ. ಪ್ರತಿಯೊಂದು ಸೂತ್ರವೂ ವಿವಕ್ಷಿತವಾದ ಅರ್ಥವನ್ನು ಹೇಗೆ ಕೊಡುವುದೆಂದು ತೋರಿಸುವುದು ಶ್ರೀರಾಯರ ಈ ಗ್ರಂಥರಚನೆಯು ಮುಖ್ಯ ಉದ್ದೇಶ ಗಳಲ್ಲೊಂದೆನ್ನುವುದು ಸ್ಪಷ್ಟ. ಅಗತ್ಯವಾದ ಪದಗಳ ಅಧ್ಯಾಹಾರ. ಆವೃತ್ತಿ ಮೊದಲಾದ ವ್ಯಾಖ್ಯಾನ ತಂತ್ರಗಳೆಲ್ಲವನ್ನೂ ಅದಕ್ಕಾಗಿಯೇ ಈ ಗ್ರಂಥದಲ್ಲಿ ಶ್ರೀ ರಾಯರು ವಿಶೇಷವಾಗಿ ತೋರಿಸಿದ್ದಾರೆ. ಆ ಉದ್ದೇಶ ಅನುವಾದದ ಮೂಲಕ ಅಭ್ಯಾಸಿಗಳಿಗೆ ಮುಟ್ಟಬೇಕಾದಲ್ಲಿ ಪ್ರತಿಯೊಂದೂ ವಾಕ್ಯದ ಅನುವಾದವನ್ನೂ ಕೊಡ ಬೇಕಾಗುವುದು. ಅನುವಾದದ ಜೊತೆಗೆ ಮೂಲವನ್ನೂ ಕೊಟ್ಟಿರುವುದರಿಂದ ಶಾಸ್ತ್ರಾಭ್ಯಾಸದ ಸ್ವಲ್ಪ ಹಿನ್ನೆಲೆ ಇರುವವರಿಗೆ ಇಂತಹ ಅನುವಾದವನ್ನು ಅನುಸರಿಸು ವುದು ಕ್ಲೇಶಕರವಾಗಲಾರದೆಂದು ಭಾವಿಸಿದ್ದೇನೆ. ಅಲ್ಲದೆ, ವಿದ್ವಾಂಸರ ಸಹಾಯದಿಂದ ಗ್ರಂಥವನ್ನೊಮ್ಮೆ ಅರ್ಥ ಮಾಡಿಕೊಂಡಿರುವವರಿಗೆ ಮನನ ಮಾಡಲು ಇಂತಹ ಅನುವಾದಗಳು ಹೆಚ್ಚು ಉಪಯುಕ್ತವಾಗುವವು. ಕ್ಲೇಶವಿದ್ದ ಕಡೆ, ಪಾರಿಭಾಷಿಕ ಪದಗಳನ್ನು ಉಪಯೋಗಿಸಿರುವ ಕಡೆ ಮತ್ತು ಅಭ್ಯಾಸಿಗಳಿಗೆ ಸಾರವನ್ನು ಸಂಗ್ರಹಿಸಿ ಕೊಡುವುದು ಅಗತ್ಯವೆಂದೆನಿಸಿದ ಕಡೆಯಲ್ಲೆಲ್ಲ ಅಡಿಟಿಪ್ಪಣಿಗಳನ್ನು ಕೊಡಲಾಗಿದೆ. ಕೆಲವೆಡೆ ಓದುಗರ ಸೌಲಭ್ಯದ ದೃಷ್ಟಿಯಿಂದ ಪಾರಿಭಾಷಿಕ ಪದಗಳನ್ನು ಸ್ಥೂಲ ದೃಷ್ಟಿಯಿಂದ ಅನುವಾದಿಸಿರುವುದೂ ಉಂಟು.

ಈ ಅನುವಾದಗ್ರಂಥ ಬಿಡುಗಡೆಯಾಗುವ ಈ ಸಂದರ್ಭದಲ್ಲಿ ನನಗೆ ವೇದಾಂತ ವಿದ್ಯೆಯನ್ನು ಉಪದೇಶಿಸಿ ಅನುಗ್ರಹಿಸಿದ ಪರಮಪೂಜ್ಯ ಶ್ರೀ ಫಲಿಮಾರು ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರ ಮತ್ತು ಪರಮಪೂಜ್ಯ ಶ್ರೀ ಪೇಜಾವರಮಠಾಧೀಶ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಚರಣಸನ್ನಿಧಿ ಯಲ್ಲಿ ಭಕ್ತಿಕೃತಜ್ಞತಾಪೂರ್ವಕವಾದ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುವುದು ನನ್ನ ಆದ್ಯಕರ್ತವ್ಯವಾಗಿದೆ. ಈ ಅನುವಾದದಲ್ಲಿ ಗುಣಾಂಶವೇನಿದ್ದರೂ ಈ ಗುರು ದ್ವಯರಿಗೇ ಸೇರತಕ್ಕದ್ದೆಂದೂ ದೋಷಗಳೆಲ್ಲವೂ ನನ್ನದೆಂದೂ ವಿನಮ್ರತೆಯಿಂದ ನಿವೇದಿಸುತ್ತೇನೆ. ನನ್ನ ಪ್ರಾಧ್ಯಾಪಕರಾದ ಶ್ರೀ ಕೆ. ಟಿ. ಪಾಂಡುರಂಗಿಯವರ ಉತ್ತೇಜನ ಮಾರ್ಗದರ್ಶನಗಳ ನೆರವಿಲ್ಲದಿದ್ದಲ್ಲಿ ನಾನು ಈ ಅನುವಾದ ಕಾರ್ಯವನ್ನು ಒಪ್ಪಿಕೊಳ್ಳುವ ಧೈರ್ಯ ವಹಿಸುತ್ತಿರಲಿಲ್ಲ. ನನ್ನನ್ನು ನಿರ್ವ್ಯಾಜ ಅಭಿಮಾನದಿಂದ

ಹುರಿದುಂಬಿಸಿ, ಅಮೂಲ್ಯ ಸಲಹೆಗಳನ್ನು ನೀಡಿ ನನ್ನಿಂದ ಈ ಕೆಲಸವನ್ನು ಮಾಡಿಸಿದ ಶ್ರೀ ಪಾಂಡುರಂಗಿಯವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಈ ಗ್ರಂಥದ ಮುದ್ರಣಕಾಲದಲ್ಲಿ ಕರಡಚ್ಚನ್ನು ಪರಿಶೀಲಿಸಿಕೊಟ್ಟ ಶ್ರೀ ವೆಂಕಟ ರಮಣ ಉಪಾಧ್ಯಾಯರಿಗೆ ನನ್ನ ಕೃತಜ್ಞತೆಗಳು.

ಇಂತಹ ಒಂದು ಗ್ರಂಥದ ಮುದ್ರಣವಾಗಬೇಕೆಂದು ಸಂಕಲ್ಪಿಸಿದ ಮಾಡೆಲ್ ಹೌಸ್ ಬೀದಿಯ ಶ್ರೀ ರಾಘವೇಂದ್ರಮಠದ ಶ್ರೀ ಗುರುರಾಜಾ ಅಸೋಸಿಯೇಷನ್‌ನ ಸದಸ್ಯರು ಎಲ್ಲರ ಕೃತಜ್ಞತೆಗೆ ಪಾತ್ರರು ಶ್ರೀ ರಾಯರ ಭಕ್ತರು ಸಲ್ಲಿಸುವ ಕಾಣಿಕೆ ಯಲ್ಲಿ ಒಂದಂಶವನ್ನು ಜ್ಞಾನಕಾರ್ಯಕ್ಕೆ ಉಪಯೋಗಿಸಿದಲ್ಲಿ ಶ್ರೀ ರಾಯರಿಗೆ ಅತ್ಯಂತ ಪ್ರೀತಿಯಾಗುವುದೆಂದು ಮನಗಂಡು ಆ ಕಾರ್ಯವನ್ನು ಅತ್ಯಂತ ಶ್ರದ್ಧೆ ಯಿಂದ ನಡೆಸುತ್ತಿರುವ ಅಸಾಧಾರಣ ವೈಶಿಷ್ಟ್ಯ ಈ ಮಠದ ಆಡಳಿತ ಸಮಿತಿಯದ್ದು. ಎಲ್ಲ ಜಿಜ್ಞಾಸು ಭಕ್ತರ ಪರವಾಗಿ ಶ್ರೀ ಮಠದ ಆಡಳಿತ ಸಮಿತಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಅಲ್ಲದೆ, ನಾನಾ ಕಾರಣಗಳಿಂದ ನನ್ನ ಈ ಅನುವಾದಕಾರ್ಯ ವಿಲಂಬಗೊಂಡರೂ ತಾಳ್ಮೆಯಿಂದ ನನ್ನಿಂದ ಈ ಸೇವೆಯನ್ನು ಮಾಡಿಸಿದ ಶ್ರೀಮಠದ ಆಡಳಿತ ಸಮಿತಿಗೆ ನನ್ನ ಹಾರ್ದಿಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಗ್ರಂಥವನ್ನು ಮುದ್ರಿಸಿದ ದೀಪಕ್ ಮುದ್ರಣಾಲಯದ ಮಾಲೀಕರಾದ ಶ್ರೀ ಕೆ. ವಿ. ವೆಂಕಟೇಶಯ್ಯನವರು ಜ್ಞಾನಕಾರ್ಯದಲ್ಲಿ ಅತ್ಯಂತ ಶ್ರದ್ಧೆಯುಳ್ಳವರು. ನನ್ನಿಂದಾಗಿರಬಹುದಾದ ತೊಂದರೆಗಳನ್ನು ಸಹಿಸಿಕೊಂಡು ಅವರು ಸುಂದರವಾಗಿ ಈ ಗ್ರಂಥವನ್ನು ಮುದ್ರಿಸಿಕೊಟ್ಟಿದ್ದಾರೆ. ಅವರಿಗೆ ನನ್ನ ವೈಯುಕ್ತಿಕ ಕೃತಜ್ಞತೆಗಳು.

ಕೊನೆಯದಾಗಿ, ಗುರುಸಾರ್ವಭೌಮರಾದ ಶ್ರೀ ರಾಘವೇಂದ್ರಸ್ವಾಮಿಗಳು ಈ ಕಾರ್ಯದಲ್ಲಿರುವ ಲೋಪದೋಷಗಳೆಲ್ಲವನ್ನೂ ಕ್ಷಮಿಸಿ, ಈ ವಾಙ್ಮಯ ಸೇವೆಯನ್ನು ಸ್ವೀಕರಿಸಿ ವಿಶೇಷವಾಗಿ ಜ್ಞಾನವೃದ್ಧಿಯಾಗುವಂತೆ ನನ್ನನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಆಶ್ವಯುಜ ಶುದ್ಧ ಪಂಚಮಿ
ಶ್ರೀ ಆಂಗಿರಸ ಸಂವತ್ಸರ
**1-10-1992**

**ಡಿ. ಪ್ರಹ್ಲಾದಾಚಾರ್ಯ**

# ವಿಷಯಾನುಕ್ರಮಣಿಕೆ

## ತೃತೀಯಾಧ್ಯಾಯ - ಚತುರ್ಥ ಪಾದ

## ಚತುರ್ಥಾಧ್ಯಾಯ - ಪ್ರಥಮ ಪಾದ



## ಚತುರ್ಥಾಧ್ಯಾಯ - ದ್ವಿತೀಯ ಪಾದ

ಅಧಿಕರಣದ ಹೆಸರು ಪುಟಸಂಖ್ಯೆ

## ಚತುರ್ಥಾಧ್ಯಾಯ - ತೃತೀಯ ಪಾದ



## ಚತುರ್ಥಾಧ್ಯಾಯ - ಚತುರ್ಥಪಾದ

॥ श्रीः ॥

॥ श्रीजानकीवदनाम्भोजराजहंसाय रामचन्द्राय नमः ॥

॥ श्री गुरुभ्यो नमः ॥ हरिः ॐ ॥

श्रीराघवेन्द्रतीर्थविरचिता

# तन्त्रदीपिका

[द्वितीय संपुटम्]

साधनाध्याय—फलाध्याय

---

ಶ್ರೀರಾಘವೇಂದ್ರತೀರ್ಥ ವಿರಚಿತ

# ತಂತ್ರದೀಪಿಕಾ

[ಕನ್ನಡ ಅನುವಾದ ಸಹಿತ]

ದ್ವಿತೀಯ ಸಂಪುಟ

ಸಾಧನಾಧ್ಯಾಯ ಮತ್ತು ಫಲಾಧ್ಯಾಯ

# तृतीयाध्यायस्य प्रथम पादः

एवं समन्वयाविरोधाभ्यां ब्रह्मपदार्थो विचारितः। अत्राध्यायेऽथजिज्ञासापदाभ्यामुक्तानि वैराग्यभक्त्युपास्तिज्ञानरूपसाधनानि विचार्यन्ते। आद्यपादे ज्ञानहेतूपासनाङ्गभक्तिदार्ढ्यापादकवैराग्याय गत्यागतिस्वर्गनरकगर्भवासादिस्वरूपं निरूप्यते।

तदन्तरप्रतिपत्त्यधिकरणम्—१

॥ ॐ तदन्तरप्रतिपत्तौ रंहति सम्परिष्वक्तः प्रश्ननिरूपणाभ्याम् ॐ ॥ ३.१.१

अत्र नये जीवस्य भूताावियोगः साध्यते। तदिति प्रागुक्त-

---

# ತೃತೀಯಾಧ್ಯಾಯದ ಪ್ರಥಮ ಪಾದ

**ಈ ಅಧ್ಯಾಯದ ಮತ್ತು ಪ್ರಥಮ ಪಾದದ ವಿಷಯ**

ಹೀಗೆ ಸಮನ್ವಯಾಧ್ಯಾಯ ಮತ್ತು ಅವಿರೋಧಾಧ್ಯಾಯಗಳಿಂದ ಬ್ರಹ್ಮ ಪದಾರ್ಥವನ್ನು ವಿಚಾರಮಾಡಿದ್ದಾಯಿತು. ಈ ಅಧ್ಯಾಯದಲ್ಲಿ, 'ಅಥ' ಮತ್ತು 'ಜಿಜ್ಞಾಸಾ' ಪದಗಳಿಂದ ಹೇಳಲ್ಪಟ್ಟಿರುವ ವೈರಾಗ್ಯ, ಭಕ್ತಿ, ಉಪಾಸನೆ ಮತ್ತು ಜ್ಞಾನವೆಂಬ ಸಾಧನಗಳನ್ನು ವಿಚಾರಮಾಡಲಾಗುವುದು. ಈ ಸಾಧನಗಳಲ್ಲಿ ಜ್ಞಾನ ರೂಪ ಸಾಧನಕ್ಕೆ ಕಾರಣವಾದದ್ದು ಉಪಾಸನೆ. ಉಪಾಸನೆಗೆ ಅಂಗ 'ಭಕ್ತಿ'. ಭಕ್ತಿಗೆ ದೃಢತೆಯನ್ನು ತಂದುಕೊಡತಕ್ಕದ್ದು ವೈರಾಗ್ಯ. ಇಂತಹ ವೈರಾಗ್ಯದ ಉತ್ಪತ್ತಿಗಾಗಿ ಈ ಪಾದದಲ್ಲಿ ಪರಲೋಕ ಗಮನ, ಪುನಃ ಆಗಮನ, ಸ್ವರ್ಗ, ನರಕ, ಗರ್ಭವಾಸ ಮೊದಲಾದವುಗಳ ಸ್ವರೂಪವನ್ನು ನಿರೂಪಿಸಲಾಗುವುದು.

ತದಂತರಾಧಿಕರಣ--೧

## ಓಂ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಮ್ ಓಂ ೩-೧-೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜೀವನಿಗೆ ಭೂತಗಳಿಂದ ವಿಯೋಗವಿಲ್ಲವೆಂಬುದನ್ನು ಸಮರ್ಥಿಸಲಾಗುವುದು. 'ತತ್' ಶಬ್ದವು ಹಿಂದಿನ ಅಧಿಕರಣದಲ್ಲಿ ಪ್ರಸ್ತುತವಾದ

भूतपरामर्शः। निमित्तसप्तमी चेयम्। जीव इत्यर्थादन्वेति। प्रस्तुतत्वाद् भूतैरिति च। जीवः पूर्वदेहं हित्वा गच्छन् भूतैः सम्परिष्वक्तो रंहति गच्छति। किमर्थम्। तदन्तरप्रतिपत्तौ देहांतरप्राप्त्यर्थम्। कुतः? 'वेत्थ यथा पंचम्यामाहुतावापः पुरुषवचसो भवन्ति', 'इति तु पञ्चम्यामाहुतावापः पुरुषवचसो भवन्ति' इति

---

ಶರೀರವನ್ನು ಪರಾಮರ್ಶಿಸುವುದು. 'ಪ್ರತಿಪತ್ತೌ' ಎಂಬಲ್ಲಿರುವ ಸಪ್ತಮೀ ವಿಭಕ್ತಿಯು ನಿಮಿತ್ತವೆಂಬ ಅರ್ಥವನ್ನು ಹೇಳುವುದು. ಅರ್ಥಾತ್ ಸಿದ್ಧವಾದ ಜೀವಶಬ್ದವು ಅನ್ವಿತವಾಗುವುದು. ಪ್ರಸ್ತುತವಾದುದರಿಂದ 'ಭೂತೈಃ' ಎಂಬ ಪದವೂ ಅನ್ವಿತವಾಗುವುದು.

ಜೀವನು ಹಿಂದಿನ ದೇಹವನ್ನು ಬಿಟ್ಟು ಹೋಗುತ್ತ, ಭೂತೈಃ ಸಂಪರಿಷ್ವಕ್ತಃ-- ಭೂತಗಳಿಂದ ಸಂಯುಕ್ತನಾಗಿಯೇ, ರಂಹತಿ-ಹೋಗುವನು. ಏಕೆಂದರೆ, ತದಂತರ ಪ್ರತಿಪತ್ತೌ - ದೇಹಾಂತರದ ಪ್ರಾಪ್ತಿಗಾಗಿ ; ಏಕೆ ? 'ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ', 'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಎಂದು[1] ಪ್ರಶ್ನೆ ಮತ್ತು ಸಮಾಧಾನಗಳಿಂದ ಭೂತಸಂಯುಕ್ತನಾಗಿಯೇ ಜೀವನು ಲೋಕಾಂತರಕ್ಕೆ ಹೋಗುವನೆಂದು ತಿಳಿಯುವುದು ಎಂದು ಅರ್ಥ. ಅಪ್ ಪದದಿಂದ ಉಪಲಕ್ಷಿತನಾದ ಜೀವನು ಐದನೆಯ ಹೋಮಾಧಿಕರಣವಾದ ಸ್ತ್ರೀಯಲ್ಲಿ ಹೋಮಿಸಲ್ಪಟ್ಟವನಾಗಿ ಪುರುಷವಚಸಃ ಅಂದರೆ ಪುರುಷನೆಂಬ ಹೆಸರನ್ನು ಪಡೆಯುವನು ಎಂದು ಪರಿಹಾರಶ್ರುತಿಯ[2] ಅರ್ಥ.

---

1. ಛಾಂದೋಗ್ಯದಲ್ಲಿ ಬರುವ ಪ್ರಶ್ನೆಪರಿಹಾರಗಳು ಹೀಗಿವೆ :-- ಶ್ವೇತಕೇತುವು ತನ್ನ ತಂದೆಯ ಬಳಿ ಸಮಸ್ತ ವಿದ್ಯೆಯನ್ನೂ ಅಧ್ಯಯನ ಮಾಡಿ ಪಾಂಚಾಲ ರಾಜನ ಸಭೆಗೆ ಹೋಗುವನು. ಅಲ್ಲಿ ಆ ದೇಶದ ರಾಜನಾದ ಪ್ರವಹಣನು ಶ್ವೇತಕೇತುವಿನ ಅಹಂಕಾರ ಶಮನಕ್ಕಾಗಿ ಐದು ಪ್ರಶ್ನೆಗಳನ್ನು ಕೇಳುವನು. 'ವೇತ್ಥ ಯಥಾ' (ಛಾಂ ೫.೩.೯) ಎಂದು ಐದನೆಯ ಪ್ರಶ್ನೆ. ದ್ಯು, ಪರ್ಜನ್ಯ, ಧರಾ, ಪುರುಷ, ಯೋಷಿತ್ ಎಂಬ ಐದು ಅಗ್ನಿಗಳ ಮಧ್ಯೆ ಐದನೆಯ ಅಗ್ನಿಯಾದ ಸ್ತ್ರೀಯಲ್ಲಿ ರೇತೋರೂಪವಾದ ಐದನೆಯ ಆಹುತಿಯನ್ನು ಕೊಟ್ಟನಂತರ ಅಪ್ ಸಂಯುಕ್ತನಾದ ಜೀವನು ದೇಹವನ್ನು ಪಡೆದು ಪುರುಷನೆಂಬ ಹೆಸರನ್ನು ಪಡೆಯುವ ಬಗ್ಗೆ ನಿನಗೆ ಗೊತ್ತಿದೆಯೇ ಎಂದು ಪ್ರಶ್ನೆ.

2. ಉತ್ತರವನ್ನು ತಿಳಿಯದ ಶ್ವೇತಕೇತುವು ತಂದೆ ಉದ್ದಾಲಕನ ಬಳಿಗೆ ಬರುವನು. ಉತ್ತರ ಗೊತ್ತಿರದ ಉದ್ದಾಲಕನೇ ರಾಜನ ಬಳಿಗೆ ಬಂದು ಉತ್ತರವನ್ನು ಹೇಳಲು ಪ್ರಾರ್ಥಿಸುವನು. ರಾಜನು, ಸ್ವರ್ಗ, ಪರ್ಜನ್ಯ, ಭೂಮಿ, ಪುರುಷ, ಯೋಷಿತ್ ಇವುಗಳಲ್ಲಿ ಅಂತರ್ಗತವಾದ

प्रश्ननिरूपणाभ्यां ज्ञायत इत्यर्थः । अबुपलक्षितो जीवः पञ्चम्यामाहुतौ योषिति पुरुषवचसः पुरुष इति नामवानित्यर्थः । गतावभावे आगतौ भूतसम्बन्धोक्त्ययोगादिति भावः । तदंतरेत्युक्तिः भूतगतेः फलोक्त्यर्था । तेन तेषां देहभोगदानेन कृतार्थानां जीवेन सह गतिर्व्यर्थेति न शङ्क्यम् । अत एवान्तरेत्युक्तिः । प्राप्ताविति वाच्ये प्रतिपत्तावित्युक्तिः यं देहं प्रतिपद्यते ध्यायत्यन्ते तमिति सूचनाय । 'यं यं वाऽपि स्मरन्' इत्यादेरित्येके । सम्परीत्युक्तिरामुक्ति तत्परिष्वङ्गोऽस्त्येवेति द्योतयितुम् । 'भूतानां विनिवृत्तिस्तु मरणम्' इति स्मृतिस्तु भागविषयेत्यग्रे व्यक्तमिति भावः ॥ १ ॥

---

ಲೋಕಾಂತರವನ್ನು ಕುರಿತು ಹೋಗುವಾಗ ಜೀವನಿಗೆ ಭೂತಸಂಯೋಗವಿಲ್ಲದಿದ್ದಲ್ಲಿ ಬರುವಾಗ ಭೂತಸಂಬಂಧವನ್ನು ಹೇಳುವುದು ಸಾಧ್ಯವಿಲ್ಲವಾದ್ದರಿಂದ ಹೋಗುವಾಗಲೂ ಜೀವನಿಗೆ ಭೂತಸಂಬಂಧವಿರುವುದೆಂದು ತಿಳಿಯುವುದೆಂದು ಭಾವ.

**ಸೂತ್ರದ ಪದಗಳ ಸ್ವಾರಸ್ಯ**

'ತದಂತರ' ಎಂದು ಹೇಳಿರುವುದು ಜೀವನೊಂದಿಗೆ ಭೂತಗಳೂ ಹೋಗುವುದರ ಫಲವನ್ನು ಹೇಳುವುದಕ್ಕಾಗಿ. ಹೀಗೆ ದೇಹಾಂತರಪ್ರಾಪ್ತಿಯೆಂಬ ಫಲವನ್ನು ಸೂಚಿಸಿದ್ದರಿಂದ, ಜೀವನಿಗೆ ಈಗಾಗಲೇ ಶರೀರವನ್ನೂ, ತನ್ಮೂಲಕ ಭೋಗವನ್ನೂ ನೀಡಿರುವುದರಿಂದ ಕೃತಾರ್ಥಗಳಾಗಿರುವ ಭೂತಗಳು ಜೀವನೊಂದಿಗೆ ಲೋಕಾಂತರಕ್ಕೆ ಹೋಗುವುದು ವ್ಯರ್ಥವೆಂಬ ಶಂಕೆಗೆ ಅವಕಾಶವಿಲ್ಲ. ಆದ್ದರಿಂದಲೇ 'ಅಂತರ' ಎಂದು ಹೇಳಿರುವುದು. 'ಪ್ರಾಪ್ತೌ' ಎಂದು ಹೇಳಬಹುದಾಗಿದ್ದರೂ 'ಪ್ರತಿಪತ್ತೌ' ಎಂದು ಹೇಳಿರುವುದು, 'ಯಂ ಯಂ ವಾऽಪಿ ಸ್ಮರನ್' ಇತ್ಯಾದಿ ಪ್ರಮಾಣಗಳಿರುವುದರಿಂದ ಯಾವ ದೇಹವನ್ನು ಪ್ರತಿಪದ್ಯತೆ-- ಅಂತಕಾಲದಲ್ಲಿ ಧ್ಯಾನಿಸುವನೋ ಆ ದೇಹವನ್ನು ಪಡೆಯುವನು ಎಂದು ಸೂಚಿಸಲು—ಎಂಬುದಾಗಿ ಕೆಲವರು ಹೇಳುವರು. 'ಸಂ ಪರಿ' ಎಂದು ಉಪಸರ್ಗಗಳನ್ನು ಹೇಳಿರುವುದು ಮುಕ್ತಿಯಾಗುವವರೆಗೆ ಭೂತಗಳ ಸಂಬಂಧವು ಇದ್ದೇ ಇರುವುದೆಂದು ಸೂಚಿಸಲು. ಭೂತಗಳ ಸಂಬಂಧ ನಾಶವಾಗುವುದೇ ಮರಣ

---

ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಪಂಚಾಗ್ನಿ ವಿಷಯಕವಾದ ಸಮಾಧಾನಗಳನ್ನು ತಿಳಿಸುವನು. ಐದನೆಯ ಪ್ರಶ್ನೆಗೆ ಪರಿಹಾರ ನೀಡುವ ವಾಕ್ಯ-- 'ಇತಿ ತು ಪಂಚಮ್ಯಾಂ' ಎಂಬ ವಾಕ್ಯ. ಯೋಷಾಖ್ಯವಾದ ಅಗ್ನಿಯಲ್ಲಿ ರೇತೋರೂಪವಾದ ಆಹುತಿಯನ್ನು ಕೊಟ್ಟಾಗ ಮರಣಾನಂತರ ಜೀವನೊಂದಿಗೆ ಲೋಕಾಂತರಕ್ಕೆ ಹೋಗಿದ್ದ, ಜೀವನೊಂದಿಗೆ ಪುನಃ ಬಂದಿರುವ ಭೂತತ್ರಯಾತ್ಮಕವಾದ ಅಪ್ ಭೂತವು ಪುರುಷಶಬ್ದವಾಚ್ಯವಾಗುವುದೆಂದು ಈ ವಾಕ್ಯದ ಭಾವ.

त्र्यात्मकत्वाधिकरणम्—२

॥ ॐ त्र्यात्मकत्वात्तु भूयस्त्वात् ॐ ॥ ३.१.२

अत्र कृत्स्नभूतवियोग उच्यते। अपामिति अप्शब्द इति च शेषः। तेन तोरन्वयः। रंहतीत्यस्ति। जीवः सर्वभूतैः संपरिष्वक्तो रंहति। न त्वद्भिरेव। न च प्रश्नादिस्थाप्शब्दविरोधः। अपां त्र्यात्मकत्वात् क्षितिजलाग्न्यात्मकत्वात् तदुक्त्या तेषामप्युक्तेः। त्र्यात्मकत्वेऽपि श्रुतावप्शब्दस्तु भूयस्त्वादपां बाहुल्याद् युक्त इत्यर्थः। क्षित्यादितोऽपि बहुत्वोक्त्यै प्रकर्षप्रत्ययोक्तिः ॥ २ ॥

---

ಎಂದು ಹೇಳುವ 'ಭೂತಾನಾಂ ವಿನಿವೃತ್ತಿಸ್ತು ಮರಣಂ' ಎಂಬ ಸ್ಮೃತಿಯು ಮರಣದಲ್ಲಿ ಪಂಚಭೂತಗಳ ಕೆಲವು ಅಂಶಗಳ ಸಂಬಂಧವು ನಾಶವಾಗುವುದೆಂದು ಹೇಳುವ ಅಭಿಪ್ರಾಯವುಳ್ಳದ್ದೆಂದು ಮುಂದೆ ಸ್ಪಷ್ಟವಾಗುವುದೆಂದು ಭಾವ.

ತ್ರ್ಯಾತ್ಮಕತ್ವಾಧಿಕರಣ--೨

## ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ ೩.೧.೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಲೋಕಾಂತರಗಮನ ಸಮಯದಲ್ಲಿ ಜೀವನಿಗೆ ಎಲ್ಲ ಭೂತಗಳ ಸಂಬಂಧವಿರುವುದೆಂದು ಹೇಳಲಾಗುವುದು. 'ಅಪಾಂ' ಮತ್ತು 'ಅಪ್‌ಶಬ್ದಃ' ಎಂಬ ಶೇಷಗಳನ್ನು ಸೇರಿಸಿಕೊಳ್ಳಬೇಕು. ಆ 'ಅಪ್‌ಶಬ್ದ' ದೊಂದಿಗೆ 'ತು' ಶಬ್ದವು ಅನ್ವಿತವಾಗುವುದು. 'ರಂಹತಿ' ಎಂಬ ಪದವು ಅನುವೃತ್ತವಾಗುವುದು. ಜೀವನು ಸರ್ವಭೂತಗಳಿಂದಲೂ ಸಂಯುಕ್ತನಾಗಿಯೇ ಹೋಗುವನು. ಕೇವಲ ಅಪ್‌ನಿಂದ ಮಾತ್ರ ಯುಕ್ತನಾಗಿ ಹೋಗುವುದಿಲ್ಲ. ಹಾಗಾದರೆ, 'ವೇತ್ಥ ಯಥಾ' ಇತ್ಯಾದಿ ಪ್ರಶ್ನವಾಕ್ಯದಲ್ಲಿ ಮತ್ತು ಪರಿಹಾರ ವಾಕ್ಯದಲ್ಲಿರುವ 'ಅಪ್' ಶಬ್ದದ ವಿರೋಧ ಬರುವುದೆಂದರೆ ಅದು ಸರಿಯಲ್ಲ. ಏಕೆಂದರೆ, ಅಪಾಂ ತ್ರ್ಯಾತ್ಮಕತ್ವಾತ್-- ಅಪ್ ಭೂತವು ಕ್ಷಿತಿ, ಜಲ, ಅಗ್ನಿ ಈ ಮೂರನ್ನೂ ಒಳಗೊಂಡಿರುವುದರಿಂದ ಅಪ್-ಭೂತವನ್ನು ಹೇಳಿರುವುದರಿಂದ ಕ್ಷಿತಿ ಮತ್ತು ಅಗ್ನಿಗಳನ್ನೂ ಹೇಳಿದಂತಾಗುವುದು. ಭೂತಗಳು ಹೀಗೆ ತ್ರ್ಯಾತ್ಮಕವಾಗಿದ್ದರೂ ಶ್ರುತಿಯಲ್ಲಿ ಅಪ್‌ಶಬ್ದವನ್ನು ಹೇಳಿರುವುದು, ಭೂಯಸ್ತ್ವಾತ್-ಜಲಕ್ಕೆ ಬಾಹುಲ್ಯವಿರುವುದರಿಂದ ಯುಕ್ತವೆಂದು ಅರ್ಥ. ಪೃಥಿವೀ ಮತ್ತು ಅಗ್ನಿಗಳಿಗಿಂತ ಜಲಕ್ಕೆ ಬಾಹುಲ್ಯವನ್ನು ಹೇಳುವುದಕ್ಕಾಗಿ ಪ್ರಕರ್ಷವನ್ನು ಹೇಳುವ ಈಯಸುನ್ ಪ್ರತ್ಯಯವನ್ನು 'ಭೂಯಸ್' ಎಂಬಲ್ಲಿ ಪ್ರಯೋಗಿಸಲಾಗಿದೆ.

प्राणगत्यधिकरणम् —३

॥ ॐ प्राणगतेश्च ॐ ॥ ३.१.३

अत्र प्रागुक्तभूतगतिरेवोपपत्त्या साध्यते। चस्तु भूतानां प्राणाविनाभावसमुच्चये। 'करणैर्वाव न वियुज्यते' इति श्रुतेर्जीवेन सह प्राणानां गतेर्भूतानां 'यत्र वाव भूतानि तत्र करणानि' इति श्रुत्या प्राणाविनाभूतत्वाच्च भूतैस्संपरिष्वक्तो रंहति जीव इत्यर्थः (प्रश्नादौ साक्षाद् भूतगत्यनुक्तेरयं योगः) ॥ ३ ॥

अग्न्याद्यधिकरणम्—४

॥ ॐ अग्न्यादिगतिश्रुतेरिति चेन्न भाक्तत्वात् ॐ ॥

३.१.४

---

ಪ್ರಾಣಗತ್ಯಧಿಕರಣ—೩

ಓಂ ಪ್ರಾಣಗತೇಶ್ಚ ಓಂ ೩.೧.೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಹಿಂದಿನ ಅಧಿಕರಣದಲ್ಲಿ ಹೇಳಿದ ಭೂತಗಳ ಗಮನವನ್ನೇ ಈ ಅಧಿಕರಣದಲ್ಲಿ ಯುಕ್ತಿಯಿಂದ ಸಾಧಿಸಲಾಗುವುದು. 'ಚ' ಶಬ್ದವು ಭೂತಗಳಿಗಿರುವ ಇಂದ್ರಿಯಗಳ ಅವಿನಾಭಾವದ ಸಮುಚ್ಚಯವನ್ನು ಹೇಳುವುದು. 'ಕರಣೈರ್ವಾವ ನ ವಿಯುಜ್ಯತೇ' ಎಂಬ ಶ್ರುತಿಯಿಂದ ಜೀವನೊಂದಿಗೆ ಇಂದ್ರಿಯಗಳೂ ಲೋಕಾಂತರಕ್ಕೆ ಹೋಗುವವೆಂದು ತಿಳಿಯುವುದು. 'ಯತ್ರ ವಾವ ಭೂತಾನಿ ತತ್ರ ಕರಣಾನಿ' (ಭಾಲ್ಲವೇಯ ಶ್ರುತಿ) ಎಂಬ ಶ್ರುತಿಯಂತೆ ಭೂತಗಳು ಇಂದ್ರಿಯಗಳನ್ನು ಬಿಟ್ಟು ಇರುವುದಿಲ್ಲವಾದ್ದರಿಂದಲೂ ಕೂಡ ಭೂತಗಳಿಂದ ಸಂಯುಕ್ತನಾಗಿ ಜೀವನು ಲೋಕಾಂತರಕ್ಕೆ ಹೋಗುವನೆಂದು ಅರ್ಥ. ಛಾಂದೋಗ್ಯದ ಪ್ರಶ್ನೆಯಲ್ಲಾಗಲಿ ಪರಿಹಾರದಲ್ಲಾಗಲಿ ಭೂತಗಳ ಗಮನವನ್ನು ಸಾಕ್ಷಾತ್ತಾಗಿ ಹೇಳದಿರುವುದರಿಂದ ಈ ಸೂತ್ರ ಬಂದಿದೆ.

ಅಗ್ನ್ಯಾದ್ಯಧಿಕರಣ—೪

ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ

೩.೧.೪

अत्र प्राणगतिराक्षिप्य समर्थ्यते । प्राणानामित्यनुषङ्गः । नेत्यावर्तते । 'अग्निं वागप्येति वातं प्राणश्चक्षुरादित्यं मनश्चन्द्रमसं दिशः श्रोत्रम्' इति प्राणानामग्न्यादीन् प्रति गतिश्रुतेर्न प्राणगतिर्जीवेन सहेति चेन्न । भाक्तत्वात् भागविषयत्वात् । अग्न्यादिश्रुतेरित्यन्वयः । भूतानामपि तैरेव गतिर्ज्ञेया । 'पुरुषस्य मृतौ ब्रह्मन् प्राणा भागत एव तु । अधिदैवं प्राप्नुवन्ति भागतोऽनुव्रजन्ति तम् ॥' इति स्मृतेरिति भावः । भाक्तपदं चराचरेत्यत्र व्याख्यातम् ॥ ४ ॥

---

**ಅಧಿಕರಣದ ವಿಷಯು ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜೀವನೊಂದಿಗೆ ಇಂದ್ರಿಯಗಳ ಗಮನವನ್ನು ಆಕ್ಷೇಪಿಸಿ ಸಮರ್ಥಿಸಲಾಗುವುದು. 'ಪ್ರಾಣಾನಾಂ' ಎಂಬ ಪದವು ಅನುವೃತ್ತವಾಗುವುದು. 'ನ' ಶಬ್ದವು ಆವೃತ್ತವಾಗುವುದು. 'ಅಗ್ನಿಂ ವಾಗಪ್ಯೇತಿ ವಾತಂ ಪ್ರಾಣಶ್ಚಕ್ಷುರಾ–ದಿತ್ಯಂ ಮನಶ್ಚಂದ್ರಮಸಂ ದಿಶಃ ಶ್ರೋತ್ರಂ' (ಬೃ. ೫.೨.೧೩) ಎಂದು ಇಂದ್ರಿಯಗಳಿಗೆ ಅಗ್ನಿ ಮೊದಲಾದವುಗಳನ್ನು ಕುರಿತು ಗಮನವು ಶ್ರುತವಾಗಿರುವುದರಿಂದ ಜೀವನೊಂದಿಗೆ ಇಂದ್ರಿಯಗಳಿಗೆ ಗಮನವಿಲ್ಲ ಎಂದರೆ ಅದು ಸರಿಯಲ್ಲ. ಭಾಕ್ತತ್ವಾತ್- 'ಅಗ್ನ್ಯಾದಿಶ್ರುತೇಃ' ಎಂಬ ಪದವು ಇಲ್ಲಿ ಅನ್ವಿತವಾಗುವುದು. ಅಗ್ನ್ಯಾದಿಶ್ರುತಿಯು ಇಂದ್ರಿಯಗಳ ಅಂಶಗಳನ್ನು ಕುರಿತದ್ದಾದುದರಿಂದ ಇಂದ್ರಿಯಗಳು ಮತ್ತೊಂದು ಅಂಶದಿಂದ ಜೀವನೊಂದಿಗೆ ಹೋಗುವವು ; ಭೂತಗಳೂ ಇಂದ್ರಿಯಗಳೊಂದಿಗೆ ಹೋಗುವವೆಂದು ತಿಳಿಯಬೇಕು. '[1]ಪುರುಷಸ್ಯ ಮೃತೌ ಬ್ರಹ್ಮನ್ ಪ್ರಾಣಾ ಭಾಗತ ಏವ ತು । ಅಧಿದೈವಂ ಪ್ರಾಪ್ನುವಂತಿ ಭಾಗತೋಽನುವ್ರಜಂತಿ ತಮ್ ॥' ಎಂಬ ಸ್ಮೃತಿಯು ಇಂದ್ರಿಯಗಳ ಗಮನ ವಿಷಯದಲ್ಲಿ ಪ್ರಮಾಣವೆಂದು ಭಾವ. 'ಭಾಕ್ತ' ಪದವನ್ನು 'ಚರಾಚರ' (ಬ್ರ. ಸೂ. ೨.೩.೧೬) ಎಂಬಲ್ಲಿ ವ್ಯಾಖ್ಯಾನ ಮಾಡಲಾಗಿದೆ.

---

1. ಎಲೈ ಜ್ಞಾನಿವೃದ್ಧನೇ ! ಪುರುಷನ ಮರಣಾನಂತರ ಇಂದ್ರಿಯಗಳು ಮತ್ತು ಅವುಗಳ ಅಭಿಮಾನಿ ದೇವತೆಗಳು ಒಂದು ಅಂಶದಿಂದ ಮಾತ್ರ ಅಗ್ನ್ಯಾದಿಗಳನ್ನೂ ಅವುಗಳ ಅಭಿಮಾನಿ ದೇವತೆಗಳನ್ನೂ ಪ್ರವೇಶಿಸುವರು. ಇನ್ನೊಂದು ಅಂಶದಿಂದ ಆ ಪುರುಷನನ್ನು ಅನುಸರಿಸುವರು ಎಂದು ಚತುರ್ಮುಖನು ನಾರದನನ್ನು ಕುರಿತು ಹೇಳುವ ಬ್ರಾಹ್ಮಪುರಾಣದ ವಾಕ್ಯ.

प्रथमाधिकरणम्—५

## ॥ ॐ प्रथमेऽश्रवणादिति चेन्न ता एव ह्युपपत्तेः ॐ ॥
## ३.१.५

अत्र भूतगतिराक्षिप्य साध्यते। प्रथम इत्याद्यावर्तते। नेत्येतच्च। अग्निपदं विभज्यास्ति। 'एतस्मिन्नग्नौ देवाः श्रद्धां जुह्वति' इति प्रथमेऽग्नौ द्युाख्ये श्रवणात् श्रद्धायुक्तजीव-होमश्रवणात्। प्रथमे उपक्रमेऽश्रवणात् भूतसाहित्याश्रवणान्न भूतैः परिष्वक्तो रंहति जीव इति चेन्न। हि यस्मात् ता एव प्रस्तुता आप एव श्रद्धाशब्देनोच्यन्ते। कुतः? उपपत्तेः। 'इति तु पञ्चम्यामाहुतावापः' इत्युपसंहारस्योपपत्तेरित्यर्थः। चरमवाक्ये

---

ಪ್ರಥಮಾಧಿಕರಣ--೫

## ಓಂ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ ೩.೧.೫

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭೂತಗಳ ಗಮನವನ್ನು ಆಕ್ಷೇಪಿಸಿ ಸಮರ್ಥಿಸಲಾಗುವುದು. 'ಪ್ರಥಮೇ' ಇತ್ಯಾದಿ ಪದಗಳು ಆವೃತ್ತವಾಗುತ್ತವೆ. 'ನ' ಶಬ್ದವೂ ಆವೃತ್ತವಾಗುವುದು. ಹಿಂದಿನ ಸೂತ್ರದಿಂದ 'ಅಗ್ನಿ' ಪದವು ವಿಭಜಿತವಾಗಿ ಅನುವೃತ್ತವಾಗುವುದು. 'ಏತಸ್ಮಿನ್ ಅಗ್ನೌ ದೇವಾಃ ಶ್ರದ್ಧಾಂ ಜುಹ್ವತಿ' (ಛಾ. ೫.೪.೨) ಎಂಬುದಾಗಿ, ಪ್ರಥಮೇ - ಸ್ವರ್ಗವೆಂಬ ಪ್ರಥಮಾಗ್ನಿಯಲ್ಲಿ, ಶ್ರವಣಾತ್ - ಶ್ರದ್ಧಾಯುಕ್ತಜೀವನ ಹೋಮವು ಶ್ರುತವಾಗಿರುವುದರಿಂದ, ಪ್ರಥಮೇ - ಉಪಕ್ರಮದಲ್ಲಿ, ಅಶ್ರವಣಾತ್ - ಜೀವನು ಭೂತಸಹಿತನಾಗಿರುವನೆಂದು ಶ್ರುತವಾಗಿಲ್ಲದಿರುವುದರಿಂದ, ಭೂತಸಂಯುಕ್ತನಾಗಿ ಜೀವನು ಹೋಗುವುದಿಲ್ಲವೆಂದರೆ ಸರಿಯಲ್ಲ. ಹಿ-ಏಕೆಂದರೆ, ತಾ ಏವ- ಪ್ರಸ್ತುತವಾದ ಅಪ್‌ಗಳೇ ಶ್ರದ್ಧಾಶಬ್ದದಿಂದ ಹೇಳಲ್ಪಡುತ್ತವೆ. ಏಕೆ? ಉಪಪತ್ತೇಃ— 'ಇತಿ ತು ಪಂಚಮ್ಯಾಮಾಹುತಾವಾಪಃ' ಎಂಬ ಉಪಸಂಹಾರವು ಉಪಪನ್ನವಾಗುವುದರಿಂದ ಎಂದು ಅರ್ಥ. ಅಂತಿಮ ವಾಕ್ಯದಲ್ಲಿ ಭೂತತ್ರಯಾತ್ಮಕ

त्र्यात्मकापां श्रवणात् प्रथमवाक्येऽपि श्रद्धाशब्देनाजहल्लक्षणया श्रद्धया त्र्यात्मकाद्भिश्च युक्तो जीवो ग्राह्य इति भावः ॥ ५ ॥

### अश्रुतत्वाधिकरणम्—६

## ॥ ॐ अश्रुतत्वादिति चेन्नेष्टादिकारिणां प्रतीतेः ॐ ॥

३.१.६

अत्र भूतगतिरेव विशेषश्रुत्यभावेनाक्षिप्य साध्यते। नेत्यनुवर्तते। अश्रुतत्वात् 'अग्निं वागप्येति' इत्यादिवद्विशिष्य जीवेन भूतगतेरश्रुतत्वात् न सम्परिष्वक्तो रंहतीति चेन्न। इष्टादिकारिणाम् इष्टापूर्तादिकारिणां 'अथ हैनं यजमानं किं न जहाति? भूतान्येव

ವಾದ ಅಪ್ ಶ್ರುತವಾಗಿರುವುದರಿಂದ ಉಪಕ್ರಮ ವಾಕ್ಯದಲ್ಲೂ ಶ್ರದ್ಧಾಶಬ್ದದಿಂದ, ಅಜಹಲ್ಲಕ್ಷಣಾವೃತ್ತಿಯಿಂದ ಶ್ರದ್ಧೆಯಿಂದ ಮತ್ತು ಭೂತತ್ರಯಾತ್ಮಕವಾದ ಅಪ್ ಇಂದ ಯುಕ್ತನಾದ ಜೀವನನ್ನೇ ಗ್ರಹಿಸಬೇಕು ಎಂದು ಭಾವ.

### ಅಶ್ರುತತ್ವಾಧಿಕರಣ--೬

## ಓಂ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ ೩.೧.೬

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ವಿಶೇಷಶ್ರುತಿಯ ಆಧಾರವಿಲ್ಲದಿರುವುದರಿಂದ ಜೀವನೊಂದಿಗೆ ಭೂತಗಳ ಗಮನವು ಯುಕ್ತವಲ್ಲ ಎಂದು ಭೂತಗಮನವನ್ನೇ ಆಕ್ಷೇಪಿಸಿ ಸಾಧಿಸಲಾಗುವುದು. 'ನ' ಪದವು ಅನುವೃತ್ತವಾಗುವುದು. ಅಶ್ರುತತ್ವಾತ್-- 'ಅಗ್ನಿಂ ವಾಗಪ್ಯೇತಿ' ಇತ್ಯಾದಿ ಶ್ರುತಿಗಳಿರುವಂತೆ ಸ್ಪಷ್ಟವಾಗಿ ಜೀವನೊಂದಿಗೆ ಭೂತಗಳು ಹೋಗುವವೆಂದು ಹೇಳುವ ಶ್ರುತಿಗಳಿಲ್ಲವಾದ್ದರಿಂದ ಭೂತಸಂಯುಕ್ತವಾಗಿ ಜೀವನು ಹೋಗುವುದಿಲ್ಲ ಎಂದರೆ ಅದು ಸರಿಯಲ್ಲ. ಇಷ್ಟಾದಿಕಾರಿಣಾಂ ಪ್ರತೀತೇಃ-[1] ಇಷ್ಟಾಪೂರ್ತಾದಿ ಕರ್ಮಗಳನ್ನು ಮಾಡುವವರಿಗೆ 'ಅಥ ಹೈನಂ ಯಜಮಾನಂ ಕಿಂ ನ ಜಹಾತಿ

1. ಇಷ್ಟ-ಯಾಗ, ಪೂರ್ತ-ಅನ್ನದಾನಾದಿಗಳು.

भूतैरेव गच्छति' इति प्रत्यक्षश्रुत्या भूतैः सह गतिप्रतीतेरित्यर्थः । अपां प्राणानां च गतिश्रवणेन अर्थाद् भूतानां गतिसिद्धावपि इष्टादि-कारिणामिति विशिष्य श्रुत्यक्तिः कैमुत्यार्था ॥ ६ ॥

भाक्ताधिकरणम्—७

॥ ॐ भाक्तं वाऽनात्मवित्त्वात् तथाहि दर्शयति ॐ ॥
३.१.७

अत्र कर्मणो मुक्तिहेतुता नेत्युच्यते । वाशब्दो विकल्पार्थः । अमृतत्वमिति शेषः । 'अपाम सोमममृता अभूम' इति कर्मतः

---

ಭೂತಾನ್ಯೇವ ಭೂತೈರೇವ ಗಚ್ಛತಿ (ಕೌಂಡಿನ್ಯಶ್ರುತಿ) ಎಂಬ ಶ್ರುತಿಯಿಂದ ಸಾಕ್ಷಾತ್ತಾಗಿ ಭೂತಗಳೊಂದಿಗೆ ಗಮನವಿರುವುದೆಂದು ತಿಳಿದುಬಂದಿರುವುದರಿಂದ ಎಂದು ಅರ್ಥ. ಜೀವನೊಂದಿಗೆ, ಅಪ್‌ಗೂ ಇಂದ್ರಿಯಗಳಿಗೂ ಗಮನವಿರುವುದೆಂದು ಶ್ರುತವಾಗಿರುವುದರಿಂದಲೇ ಭೂತಗಳಿಗೂ ಗಮನವಿದೆಯೆಂದು ಸಿದ್ಧವಾಗುವುದಾದರೂ, ಪ್ರತ್ಯಕ್ಷ ಶ್ರುತಿಯೂ ಇರುವಾಗ ಭೂತಗಳ ಗಮನವಿದೆಯೆಂದು ಹೇಳಬೇಕಾದುದೇನು- ಎಂಬ ಕೈಮುತ್ಯವನ್ನು ಸೂಚಿಸಲು 'ಇಷ್ಟಾದಿಕಾರಿಣಾಂ' ಎಂಬ ಸೂತ್ರದಿಂದ ಸ್ಪಷ್ಟಶ್ರುತಿಯನ್ನು ಹೇಳಲಾಗಿದೆ.

ಭಾಕ್ತಾಧಿಕರಣ—೭

ಓಂ ಭಾಕ್ತಂ ವಾಽನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ ಓಂ ೩.೧.೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಕರ್ಮವು ಮುಕ್ತಿಸಾಧನವಲ್ಲವೆಂದು ಹೇಳಲಾಗುವುದು. 'ವಾ' ಶಬ್ದವು ವಿಕಲ್ಪವನ್ನು ಹೇಳುವುದು. 'ಅಮೃತತ್ವಂ' ಎಂಬ ಶೇಷವನ್ನು ಸೇರಿಸಿಕೊಳ್ಳಬೇಕು. 'ಅಪಾಮ ಸೋಮಂ ಅಮೃತಾ ಅಭೂಮ' (ಋ.೮.೪೮.೩) ಎಂದು ಕರ್ಮದಿಂದ ಲಭಿಸುವುದೆಂದು ಶ್ರುತವಾಗಿರುವ ಅಮೃತತ್ವವು ಕಾಮ್ಯಕರ್ಮಿಗಳಿಗೆ, ಭಾಕ್ತಂ – ಭಾಗವಿಷಯಕವಾದುದು, ಅಲ್ಪಕಾಲೀನವಾದುದೆಂದು ಭಾವ.

श्रुतममृतत्वं काम्यकर्मिणो भाक्तं भागविषयं, किञ्चित्कालीनमिति यावत्। कुतः? अनात्मवित्त्वात् आत्माज्ञानित्वात्। हि यस्मात् 'तमेवं विद्वान्', 'स एवमविदितो न भुनक्ति' इत्यादिश्रुतिस्तथा दर्शयति, तथा 'अमृतो वाव सोमपो भवति यावदिन्द्रः' इत्यादि-श्रुतिस्तथा दर्शयति अल्पकालीनामृतत्वं दर्शयतीत्यर्थः। वाशब्दाद-काम्यकर्मिणो ग्रहणम्। अकाम्यकर्मिणो जिज्ञासोश्चामृतत्वं भाक्तं गौणं ज्ञानद्वारा, ज्ञानिनश्चेत् मोक्षैकदेशातिशयरूपं भाक्तममृतत्वमित्यर्थः। कुतः? हि यस्मात् 'कर्मणा ज्ञानमातनोति' इति, 'आत्मानमेव लोकमुपास्ते न हास्य' इति च श्रुतिस्तथा दर्शयति उक्तार्थद्वयं दर्शय-तीत्यर्थः। उपास्ते जानाति चेत्यर्थात् ॥ ७ ॥

---

ಏಕೆಂದರೆ, ಅನಾತ್ಮವಿತ್ತ್ವಾತ್-ಅವರು ಆತ್ಮಜ್ಞಾನಿಗಳಲ್ಲವಾದ್ದರಿಂದ ; ಹಿ-ಏಕೆಂದರೆ, 'ತಮೇವಂ ವಿದ್ವಾನ್' (ತೈ. ಆ. ೩.೧೨.೭), 'ಸ ಏವಂ ಅವಿದಿತೋ ನ ಭುನಕ್ತಿ' (ಬೃ.೩.೪.೧೫)ಇತ್ಯಾದಿ ಶ್ರುತಿಯು ತಥಾ ದರ್ಶಯತಿ -ಆ ಅಮೃತತ್ವವು ಅಲ್ಪಕಾಲೀನವಾದುದೆಂದು ಪ್ರತಿಪಾದಿಸುತ್ತದೆ, ಹಾಗೆಯೇ 'ಅಮೃತೋ ವಾವ ಸೋಮಪೋ ಭವತಿ ಯಾವದಿಂದ್ರಃ' ಇತ್ಯಾದಿ ಶ್ರುತಿಯೂ, ತಥಾ ದರ್ಶಯತಿ - ಅಮೃತತ್ವವು ಅಲ್ಪಕಾಲೀನವಾದುದೆಂದು ಪ್ರತಿಪಾದಿಸುತ್ತದೆಂದು ಅರ್ಥ. 'ವಾ' ಶಬ್ದದಿಂದ ನಿಷ್ಕಾಮಕರ್ಮಿಗಳನ್ನು ಗ್ರಹಿಸಬೇಕು. ಜಿಜ್ಞಾಸುಗಳಾದ ನಿಷ್ಕಾಮಕರ್ಮಿಗಳಿಗಾದರೋ ಅಮೃತತ್ವವು, ಭಾಕ್ತಂ-ಗೌಣವಾದುದು, ಜ್ಞಾನದ್ವಾರಾ ಲಭಿಸುವಂಥಾದ್ದು. ಜ್ಞಾನಿಗಳಾದ ನಿಷ್ಕಾಮಕರ್ಮಿಗಳಿಗಾದರೊ ಅಮೃತತ್ವವು ಭಾಕ್ತ ಅಂದರೆ ಭಾಗವಿಷಯಕವಾದುದು, ಮೋಕ್ಷದ ಏಕದೇಶವಾಗಿರುವ ಅತಿಶಯರೂಪವಾದುದು. ಏಕೆಂದರೆ, ಹಿ-ಯಾವ ಕಾರಣದಿಂದ, 'ಕರ್ಮಣಾ ಜ್ಞಾನಮಾತ-ನೋತಿ' ಎಂಬ ಶ್ರುತಿ ಮತ್ತು 'ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ' ಎಂಬ ಶ್ರುತಿ, ತಥಾ ದರ್ಶಯತಿ-- ಈಗ ಹೇಳಿದ ಎರಡು ವಿಷಯಗಳನ್ನು ಪ್ರತಿಪಾದಿಸುವುದೋ ಆದ್ದರಿಂದ ಎಂದು ಅರ್ಥ. 'ಆತ್ಮಾನಮೇವ ಲೋಕಮುಪಾಸ್ತೇ' ಎಂಬ ಶ್ರುತಿಯಲ್ಲಿ ಯಾರು 'ಉಪಾಸಿಸುವನೋ' ಎಂದು ಹೇಳಿದ್ದರಿಂದಲೇ 'ತಿಳಿಯುವನೋ' ಎಂಬ ಅರ್ಥವೂ ಅರ್ಥಾತ್ ಲಭಿಸುವುದು.

कृतात्ययाधिकरणम्—८

॥ ॐ कृतात्ययेऽनुशयवान् दृष्टस्मृतिभ्याम् ॐ ॥

३.१.८

अत्र कर्मणां भोगेन निःशेषानाश उच्यते। कृतस्य कर्मणोऽत्यये स्वर्गादिभोगेन क्षयेऽनुशयवान् भुक्तकर्मशेषवान् आयाति। कुतः? 'शेषेणेमं लोकमायाति' इति, 'भुक्तशेषानुशयवानिमां प्राप्य भुवं पुनः' इति श्रुतिस्मृतिभ्यामित्यर्थः। भूम्यामल्पसम्पादने कर्मसमाप्तिरिति शंकानिरासाय स्मृत्युक्तिः ॥ ८ ॥

---

ಕೃತಾತ್ಯಯಾಧಿಕರಣ—೮

ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಮ್ ಓಂ

೩.೧.೮

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭೋಗದಿಂದ ಕರ್ಮಗಳ ನಿಃಶೇಷ ನಾಶವಾಗುವುದಿಲ್ಲವೆಂದು ಹೇಳಲಾಗುವುದು. ಕೃತಸ್ಯ- ಕರ್ಮಕ್ಕೆ, ಅತ್ಯಯೇ- ಸ್ವರ್ಗಾದಿಭೋಗದಿಂದ ಕ್ಷಯ ವಾದಾಗ, ಅನುಶಯವಾನ್- ಭುಕ್ತಕರ್ಮದ ಶೇಷದೊಂದಿಗೆ ಹಿಂದಿರುಗುತ್ತಾನೆ. ಏಕೆಂದರೆ, 'ಶೇಷೇಣ ಇಮಂ ಲೋಕಮಾಯಾತಿ' ಎಂಬ ಶ್ರುತಿ ಮತ್ತು 'ಭುಕ್ತ-ಶೇಷಾನುಶಯವಾನ್ ಇಮಾಂ ಪ್ರಾಪ್ಯ ಭುವಂ ಪುನಃ' ಎಂಬ ಸ್ಮೃತಿಗಳಿಂದ ಎಂದು ಅರ್ಥ. ಭೂಮಿಯಲ್ಲಿ ಸ್ವಲ್ಪ ಕರ್ಮವನ್ನು ಸಂಪಾದಿಸಿದಲ್ಲಿ ಕರ್ಮವು ಮುಗಿದು ಹೋಗುವುದು ಎಂಬ ಶಂಕೆಯನ್ನು ನಿರಾಕರಿಸಲು [1]ಸ್ಮೃತಿಯನ್ನು ಹೇಳಲಾಗಿದೆ.

---

1. 'ಭುಕ್ತಶೇಷಾನುಶಯವಾನಿಮಾಂ ಪ್ರಾಪ್ಯ ಭುವಂ ಪುನಃ ।
ಕರ್ಮ ಕೃತ್ವಾ ಪುನರ್ಗಚ್ಛೇತ್ ಪುನರಾಯಾತಿ ನಿತ್ಯಶಃ ॥'
ಆಚತುರ್ದಶವರ್ಷಾತ್ ಕರ್ಮಾಣಿ ನಿಯಮೇನ ತು ।
ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಮ್ ।
ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ॥

यथेताधिकरणम्—९

॥ ॐ यथेतमनेवं च ॐ ॥ ३.१.९

अत्र स्वर्गादागतिप्रकार उच्यते। यथा येन प्रकारेण इतं स्वर्गादि प्रति गतं तथा आयाति। अनेवं च ततोऽन्यमार्गेण चेत्यर्थः। यथेतमित्युक्त्या 'धूमादभ्रमभ्रादाकाशमाकाशाच्चन्द्रलोकं यथेतमाकाशमाकाशाद्वायुम्' इति श्रुतिः सूचिता। आकाशपर्यन्तं यथेतं ततोऽर्वागन्यथेति भावः ॥ ९ ॥

चरणाधिकरणम्—१०

॥ ॐ चरणादिति चेन्न तदुपलक्षणार्थेति कार्ष्णाजिनिः ॐ ॥ ३.१.१०

ಯಥೇತಾಧಿಕರಣ--೯

ಓಂ ಯಥೇತಮನೇವಮ್ ಚ ಓಂ ೩.೧.೯

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಸ್ವರ್ಗದಿಂದ ಆಗಮಿಸುವ ರೀತಿಯನ್ನು ಹೇಳಲಾಗುವುದು. ಯಥಾ- ಯಾವ ಪ್ರಕಾರದಿಂದ, ಇತಂ- ಸ್ವರ್ಗಾದಿಗಳಿಗೆ ಹೋಗಲಾಯಿತೋ ಹಾಗೆ ಆಗಮಿಸುತ್ತಾನೆ, ಅನೇವಂ ಚ- ಅದಕ್ಕಿಂತ ಭಿನ್ನವಾದ ಮಾರ್ಗದಿಂದಲೂ ಆಗಮಿಸುತ್ತಾನೆ ಎಂದು ಅರ್ಥ. 'ಯಥೇತಂ' ಎಂದು ಹೇಳಿದ್ದರಿಂದ 'ಧೂಮಾದಭ್ರಮ್ ಅಭ್ರಾದಾಕಾಶಮ್ ಆಕಾಶಾಚ್ಚಂದ್ರಲೋಕಂ ಯಥೇತಮಾಕಾಶಂ ಆಕಾಶಾದ್ವಾಯುಂ' ಎಂಬ ಶ್ರುತಿಯು ಸೂಚಿತವಾಗುವುದು. ಆಕಾಶದವರೆಗೆ ಹೇಗೆ ಹೋಗಲಾಯಿತೋ, ಆಕಾಶದಿಂದ ಕೆಳಗೆ ಬರುವಾಗ ಅದಕ್ಕಿಂತ ಭಿನ್ನರೀತಿಯಿಂದ ಬರುವನೆಂದು ಭಾವ.

ಚರಣಾಧಿಕರಣ--೧೦

ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ ೩.೧.೧೦

अत्र गतागतस्य कर्मफलत्वमुच्यते। यथेतमिति प्रकृतं गतागतं चरणात् कर्माङ्गभूताचाराद् भवति, न तु यज्ञादिकर्मभिः। 'रमणीयचरणा रमणीयां योनिमापद्यन्ते' इत्यादिश्रुतेरिति चेन्न। तदुपलक्षणार्था तस्य यज्ञादिकर्मणः अजहल्लक्षणयोपपादनार्था रमणीयेति श्रुतिरिति कार्ष्णाजिनिर्मन्यत इत्यर्थः। अतः काम्यकर्मणि वैराग्यं युक्तमिति भावः।

उक्तमाक्षिप्याह—

## ॥ ॐ आनर्थक्यमिति चेन्न तदपेक्षत्वात् ॐ ॥ ३.१.११

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಲೋಕಾಂತರ ಗಮನಾಗಮನಗಳು ಕರ್ಮಫಲಗಳೆಂದು ಹೇಳಲಾಗುವುದು. 'ಯಥೇತಮ್' (ಬ್ರ. ಸೂ. ೩.೧.೮) ಎಂಬ ಸೂತ್ರದಲ್ಲಿ ಪ್ರಸ್ತುತವಾಗಿರುವ ಗಮನಾಗಮನಗಳು, ಚರಣಾತ್- ಯಜ್ಞಾದಿಕರ್ಮಗಳಿಗೆ ಅಂಗ ವಾಗಿರುವ ಆಚಾರದಿಂದ ಉಂಟಾಗುವವು ಹೊರತು ಯಜ್ಞಾದಿಕರ್ಮಗಳಿಂದಲ್ಲ. 'ರಮಣೀಯಚರಣಾ ರಮಣೀಯಾಂ ಯೋನಿಮಾಪದ್ಯಂತೇ' (ಛಾಂ. ೫.೧೦.೭)[1] ಇತ್ಯಾದಿ ಶ್ರುತಿಯಿಂದ— ಎಂದರೆ ಅದು ಸರಿಯಲ್ಲ. ತದುಪಲಕ್ಷಣಾರ್ಥಾ— 'ರಮಣೀಯ' ಎಂಬ ಶ್ರುತಿಯು ರಮಣೀಯ ಚರಣಾದಿ ಪದದಿಂದ ಅಜಹಲಕ್ಷಣಾ-ವೃತ್ತಿಯಿಂದ ಯಜ್ಞಾದಿಕರ್ಮವನ್ನು ಗ್ರಹಿಸಬೇಕು ಎಂಬ ಉದ್ದೇಶವುಳ್ಳದ್ದು ಎಂದು ಕಾರ್ಷ್ಣಾಜಿನಿಗಳು ಅಭಿಪ್ರಾಯಪಡುತ್ತಾರೆ ಎಂದು ಅರ್ಥ. ಹೀಗೆ ಯಜ್ಞಾದಿ ಕಾಮ್ಯಕರ್ಮವು ಗತಾಗತಗಳಿಗೆ ಕಾರಣವಾದುದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯವು ಯುಕ್ತವೆಂದು ಭಾವ.

ಹೇಳಿದುದನ್ನು ಆಕ್ಷೇಪಿಸಿ ಉತ್ತರ ನೀಡುವ ಸೂತ್ರ--

## ಓಂ ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ಓಂ ೩.೧.೧೧

1. ರಮಣೀಯಾಚರಣಾ ಎಂಬ ಶ್ರುತಿಯಲ್ಲಿ ಯಜ್ಞಾದಿ ಕರ್ಮಕ್ಕೆ ಅಂಗವಾದ ಸದಾಚಾರವುಳ್ಳವರು ಶ್ರೇಷ್ಠ ಜನ್ಮವನ್ನೂ ದುರಾಚಾರಿಗಳು ನೀಚಜನ್ಮವನ್ನೂ ಪಡೆಯುವರೆಂದು ಹೇಳಿರುವುದರಿಂದ ಗತಾಗತಗಳು ಆಚಾರದ ಫಲವೇ ಹೊರತು ಕರ್ಮದ ಫಲವಲ್ಲ. ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯ ಅನಾವಶ್ಯಕವೆಂಬುದು ಪೂರ್ವ ಪಕ್ಷ. ರಮಣೀಯಚರಣ ಇತ್ಯಾದಿ ಶಬ್ದಗಳು ಅಜಹಲ್ಲಕ್ಷಣಾವೃತ್ತಿಯಿಂದ ಕರ್ಮವನ್ನೂ ಹೇಳುವುದರಿಂದ ಕರ್ಮವೂ ಗತಾಗತಗಳಿಗೆ ಸಾಧನವೆಂದು ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯ ಅವಶ್ಯಕವೆಂದು ಕಾರ್ಷ್ಣಾಜಿನಿಗಳ ಸಮಾಧಾನ.

चरणशब्दस्येति शेषः । उपलक्षणार्थत्वे चरणशब्दस्यानर्थक्यं स्यात् । यज्ञदिकृतां प्रकृतत्वेन ये यज्ञादिकारिणो रमणीया इत्यद्युक्त्यैवोपलक्षणसंभवादिति चेन्न । तदपेक्षत्वात्-तदिति चरण-मुच्यते । साध्वसाधुचरणापेक्षत्वाद् यज्ञादिकर्मिणां, रमणीयत्व-कपूयत्वयोरिति शेषः । यज्ञादिकृत्त्वे ससानेऽपि कथमेकेषां रमणी-यत्वमन्येषां कपूयत्वमिति न शंक्यम् । साध्वसाध्वाचारहेतुकत्वादिति द्योतयितुं चरणपदं श्रुतावर्थवदिति भावः ।

प्रकारान्तरेण चरणश्रुतिं व्याचष्टे—

॥ ॐ सुकृतदुष्कृते एवेति तु बादरिः ॐ ॥ ३.१.१२

---

**ಸೂತ್ರಾರ್ಥ**

'ಚರಣಶಬ್ದಸ್ಯ' ಎಂಬ ಶೇಷವನ್ನು ಸೇರಿಸಬೇಕು. ಚರಣಶಬ್ದವು ಅಜಹ ಲಕ್ಷಣಾದಿಂದ ಯಜ್ಞಾದಿಕರ್ಮವನ್ನು ಜ್ಞಾಪಿಸುವುದಾದರೆ ಚರಣಶಬ್ದವು ವ್ಯರ್ಥ ವಾದೀತು. ಯಜ್ಞಾದಿಕರ್ಮಗಳನ್ನು ಅನುಷ್ಠಾನ ಮಾಡುವವರೇ ಪ್ರಸಕ್ತರಾಗಿರು ವುದರಿಂದ 'ಯಾರು ಯಜ್ಞಾದಿಕರ್ಮವನ್ನು ಆಚರಿಸುವರೋ ಅವರು ರಮಣೀಯ ವಾದ ಯೋನಿಯನ್ನು ಪಡೆಯುವರು' ಎಂದು ಹೇಳುವುದರಿಂದಲೇ ಹೇಳಬೇಕಾದು ದನ್ನು ಜ್ಞಾಪಿಸಿದಂತಾಗುವುದು ಎಂದರೆ ಅದು ಸರಿಯಲ್ಲ. ತದಪೇಕ್ಷತ್ವಾತ್– 'ತತ್' ಪದವು ಆಚಾರವನ್ನು ಹೇಳುವುದು. ಯಜ್ಞಾದಿಕರ್ಮವನ್ನು ಆಚರಿಸು ವವರಿಗೆ ರಮಣೀಯ ಅಥವಾ ಕುತ್ಸಿತಯೋನಿಗಳು ಸಾಧು ಆಚಾರ ಮತ್ತು ಅಸಾಧು ಆಚಾರಗಳನ್ನು ಅವಲಂಬಿಸಿಯೇ ಆಗುವುವೆಂದು ಅರ್ಥ. ಇಲ್ಲಿ ರಮಣೀಯತ್ವ-ಕಪೂಯತ್ವಯೋಃ ಎಂಬ ಶೇಷವನ್ನು ಸೇರಿಸಲಾಗಿದೆ. ರಮಣೀಯಯೋನಿ ಮತ್ತು ಕುತ್ಸಿತಯೋನಿಗಳಿಗೆ ಸದಾಚಾರ, ದುರಾಚಾರಗಳು ಕಾರಣವಾದುದರಿಂದ, ಯಜ್ಞಾದಿ ಕರ್ಮಾನುಷ್ಠಾನವು ಸಮಾನವಾಗಿದ್ದರೂ ಕೆಲವರಿಗೆ ರಮಣೀಯಜನ್ಮ ಮತ್ತೆ ಕೆಲವರಿಗೆ ಕುತ್ಸಿತಜನ್ಮ – ಈ ವೈಷಮ್ಯವೇಕೆ ? ಎಂದು ಶಂಕಿಸಬಾರದು ಎಂದು ಸೂಚಿಸಲು ಶ್ರುತಿಯಲ್ಲಿ ಚರಣಪದವು ಸಾರ್ಥಕವಾಗಿದೆ ಎಂದು ಭಾವ.

ಪ್ರಕಾರಾಂತರದಿಂದ ಚರಣಶ್ರುತಿಯನ್ನು ವ್ಯಾಖ್ಯಾನಮಾಡುವ ಸೂತ್ರ—

**ಓಂ ಸುಕೃತದುಷ್ಕೃತೇ ಏವೇತಿ ತು ಬಾದರಿಃ ಓಂ ३.೧.೧೨**

चरण इत्यनुवर्त्यम् । रमणीयकपूयचरणे सुकृतदुष्कृते एव समीचीनासमीचीनधर्माधर्मावेव । न तु तदङ्गं. ततोऽन्ये । धर्मं कुरुतेत्यर्थे धर्मं चरतेति प्रयोगादिति बादरिर्मन्यते । तुशब्दोऽयमेव सूत्रकृत्सिद्धान्त इति सूचनार्थः । 'तुशब्दस्तु विशेषे स्यात् स्वसिद्धान्तेऽवधारणे' इति स्मृतेः ॥ १० ॥

अनिष्टादिकरणम्—११

॥ ॐ अनिष्टादिकारिणामपि च श्रुतम् ॐ ॥ ३.१.१३

अत्र पापकृतामपि गतागतमस्तीत्युच्यते । गतागतमित्यस्ति । इष्टं यागः । पूर्तदत्तादिरादिपदार्थः । नञ् तदभावे तद्विरुद्धे चास्ति ।

---

**ಸೂತ್ರಾರ್ಥ**

'ಚರಣೇ' ಎಂಬ ಪದವು ಅನುವೃತ್ತವಾಗುವುದು. ಸದಾಚಾರ ದುರಾಚಾರಗಳು, ಸುಕೃತದುಷ್ಕೃತೇ ಏವ - ಸಮೀಚೀನ ಧರ್ಮ, ಅಸಮೀಚೀನ ಅಧರ್ಮ ಇವುಗಳೇ ಆಗಿವೆ, ಹೊರತು ಧರ್ಮದ ಅಂಗವಾಗಿದ್ದು ಅದರಿಂದ ಭಿನ್ನವಲ್ಲ. 'ಧರ್ಮಂ ಕುರುತ' ಎಂಬ ಅರ್ಥದಲ್ಲಿ 'ಧರ್ಮಂ ಚರತ' ಎಂದು ಪ್ರಯೋಗ ಮಾಡುವುದರಿಂದ– ಎಂದು ಬಾದರಿಗಳು ಅಭಿಪ್ರಾಯಪಡುವರು. 'ತು' ಶಬ್ದವು ಸೂತ್ರಕಾರರ ಸಿದ್ಧಾಂತವೂ ಇದೇ ಆಗಿದೆಯೆಂದು ಸೂಚಿಸುವುದು. 'ತುಶಬ್ದಸ್ತು ವಿಶೇಷೇ ಸ್ಯಾತ್ ಸ್ವಸಿದ್ಧಾಂತೇ ಅವಧಾರಣೇ' ಎಂದು ಸ್ಮೃತಿಯು 'ತು' ಶಬ್ದಕ್ಕೆ ಸ್ವಸಿದ್ಧಾಂತವೆಂಬ ಅರ್ಥವಿರುವುದರಲ್ಲಿ ಪ್ರಮಾಣವಾಗಿದೆ.

ಅನಿಷ್ಟಾಧಿಕರಣ—೧೧

ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ಓಂ ೩.೧.೧೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಪಾಪಕರ್ಮಿಗಳಿಗೂ ಗಮನಾಗಮನಗಳಿವೆ ಎಂದು ಹೇಳಲಾಗುವುದು. 'ಗತಾಗತಂ' ಎಂಬ ಪದವು ಅಧ್ಯಾಹೃತವಾಗುವುದು. ಇಷ್ಟವೆಂದರೆ ಯಾಗ. ಪೂರ್ತ, ದತ್ತ ಮೊದಲಾದವುಗಳು 'ಅನಿಷ್ಟಾದಿ' ಎಂಬಲ್ಲಿರುವ ಆದಿಪದದ ಅರ್ಥ. 'ಅನಿಷ್ಟ' ಎಂಬಲ್ಲಿರುವ ನಞ್ ಯಾಗಾದಿಗಳ ಅಭಾವವನ್ನೂ, ಅವುಗಳಿಗೆ

इष्टापूर्ताद्यकारिणां तद्विरुद्धपापकारिणामपि गतागतं श्रुतं 'तद्य इह शुभकृतो ये चाशुभकृतस्ते शुभमनुभूयावर्तन्ते' इति श्रुतावित्यर्थः। न केवलमिष्टादिकारिणामित्यपेरर्थः। चस्तु दुःखान्तरसमुच्चये।

तद् व्यनक्ति—

॥ ॐ संयमने त्वनुभूयेतरेषामारोहावरोहौ तद्गतिदर्शनात् ॐ ॥ ३.१.१४

तुरेव। द्वितीयार्थे सप्तमी। सम्यग् यमनं शासनं सम्यग्यमशासनं अनुभूय तु अनुभूयैव इतरेषामनिष्टादिकारिणामारोहावरोहौ केषाञ्चिदारोहो व्युत्थानमन्येषामवरोहो नीचस्थाने नित्यनरके पातो

---

ವಿರುದ್ಧಕರ್ಮವನ್ನೂ ಹೇಳುವುದು. ಇಷ್ಟಾಪೂರ್ತಾದಿಗಳನ್ನು ಮಾಡದವರಿಗೂ, ತದ್ವಿರುದ್ಧ ಪಾಪಕರ್ಮವನ್ನು ಆಚರಿಸುವವರಿಗೂ 'ತದ್ಯ ಇಹ ಶುಭಕೃತೋ ಯೇ ಚಾಶುಭಕೃತಸ್ತೇ ಶುಭಮನುಭೂಯಾವರ್ತಂತೇ' (ಭಾಲ್ಲವೇಯ ಶ್ರುತಿ) ಎಂಬ ಶ್ರುತಿಯಲ್ಲಿ ಗಮನಾಗಮನಗಳು ಶ್ರುತವಾಗಿವೆ. ಇಷ್ಟಾದಿಕರ್ಮಗಳನ್ನು ಆಚರಿಸುವವರಿಗೆ ಮಾತ್ರವಲ್ಲ ಎಂದು 'ಅಪಿ' ಶಬ್ದದ ಅರ್ಥ. ಅನಿಷ್ಟಾದಿಕಾರಿಗಳಿಗೆ ದುಃಖಾಂತರದ ಸಮುಚ್ಚಯವನ್ನು 'ಚ' ಶಬ್ದವು ಹೇಳುವುದು.

ಇಷ್ಟಾದಿಕರ್ಮಗಳನ್ನು ಮಾಡದವರಿಗೆ ಮತ್ತು ವಿರುದ್ಧಕರ್ಮಗಳನ್ನು ಆಚರಿಸುವವರಿಗೆ ದುಃಖಾಂತರವೂ ಇದೆ ಎಂಬುದನ್ನು ಸ್ಪಷ್ಟಪಡಿಸುವ ಸೂತ್ರ—

## ಓಂ ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ಓಂ ೩.೧.೧೪

**ಸೂತ್ರಾರ್ಥ**

'ತು' ಶಬ್ದಕ್ಕೆ ಏವ ಎಂದು ಅರ್ಥ. 'ಸಂಯಮನೇ' ಎಂಬಲ್ಲಿರುವ ಸಪ್ತಮೀ ವಿಭಕ್ತಿಯು ದ್ವಿತೀಯಾವಿಭಕ್ತ್ಯರ್ಥವನ್ನು ಹೇಳುವುದು.ಸಂಯಮನವೆಂದರೆ ಸಮ್ಯಕ್ ಯಮನ - ಅಂದರೆ ಶಾಸನ. ಸಮೀಚೀನವಾಗಿ ಯಮಶಾಸನವನ್ನು, ಅನುಭೂಯ ತು- ಅನುಭವಿಸಿದ ನಂತರವೇ, ಇತರೇಷಾಂ - ಯಾಗಾದಿ ಕರ್ಮಗಳನ್ನು ಮಾಡದ ಮತ್ತು ವಿರುದ್ಧಕರ್ಮಗಳನ್ನು ಮಾಡುವ ಜೀವರಿಗೆ, ಆರೋಹಾವರೋಹೌ -

भवति । कुतः ? तद्गतिदर्शनात् – तेषामनिष्टादिकारिणां गतेरेवं-विधगतेः 'सर्वे वा एतेऽशुभकृतः संयमने प्रपतन्ति' इत्यादिश्रुतौ दर्शनादित्यर्थः । संयमनमिति वाच्ये सप्तम्युक्तिः यमशासनं क्वेत्याकाङ्क्षायां सम्यग् यमनं पापोपरमो यत्रेति व्युत्पत्त्या संयमने नरके इति सूचयितुम्, उदाहृतश्रुतिसूचनार्थं च । उक्तं च तत्त्वप्रदीपे संयमने नरके संयमनं दुःखमनुभूयेत्यादि । तुशब्दः संयमनमप्यन्येषाम् आरोहादिवद् वैकल्पिकं नेति द्योतयितुम् । अनिष्टादिकारिणामित्य-नुवृत्तावपि इतरेषामित्युक्तिः तन्मध्ये केषाञ्चिदारोहोऽन्येषां हरिद्वेषि-णामवरोह इति विकल्पसूचनार्था । प्राक् चशब्दोक्तव्यक्तिपरत्वादस्य योगस्यारोहावरोहौ चेति चशब्दाभावोऽपौनरुक्त्यं च बोध्यम् ।

स्मृतिश्चैवमित्याह—

---

ಕೆಲವರಿಗೆ ಆರೋಹ ಎಂದರೆ ನರಕದಿಂದ ಉತ್ಥಾನವೂ, ಮತ್ತೆ ಕೆಲವರಿಗೆ ಅವರೋಹ ಎಂದರೆ ನೀಚಸ್ಥಾನವಾದ ನಿತ್ಯನರಕದಲ್ಲಿ ಪತನವೂ ಆಗುವುದು. ಏಕೆಂದರೆ, ತದ್ಗತಿದರ್ಶನಾತ್ - ತೇಷಾಂ – ಆ ಅನಿಷ್ಟಾದಿಕಾರಿಗಳಿಗೆ, ಗತೇಃ - ಈ ವಿಧವಾದ ಗತಿಯಾಗುವುದೆಂದು 'ಸರ್ವೇ ವಾವ ತೇ ಅಶುಭಕೃತಃ ಸಂಯಮನೇ ಪ್ರಪತಂತಿ' (ಕೌಂಠರವ್ಯಶ್ರುತಿ) ಎಂಬ ಶ್ರುತಿಯಲ್ಲಿ ದೃಷ್ಟವಾಗಿರುವುದರಿಂದ ಎಂದು ಅರ್ಥ.

## ಸೂತ್ರದ ಪದಗಳ ಸ್ವಾರಸ್ಯ

'ಸಂಯಮನಂ' ಎಂದು ದ್ವಿತೀಯಾಭಕ್ತಿಯನ್ನು ಪ್ರಯೋಗಿಸಬೇಕಾಗಿದ್ದರೂ ಸಪ್ತಮೀವಿಭಕ್ತಿಯನ್ನು ಪ್ರಯೋಗಿಸಿರುವುದು – ಯಮಶಾಸನವೆಲ್ಲಾಗುವುದು ? ಎಂಬ ಜಿಜ್ಞಾಸೆಗೆ ಉತ್ತರವಾಗಿ 'ಸಮ್ಯಗ್ ಯಮನಂ ಯತ್ರ' ಎಂದರೆ 'ಪಾಪಗಳ ಶಮನವು ಸಮೀಚೀನವಾಗಿ ಎಲ್ಲಾಗುವುದೋ ಅದು' ಎಂಬ ವ್ಯುತ್ಪತ್ತಿಯಂತೆ ಸಂಯಮನಶಬ್ದವಾಚ್ಯವಾದ ನರಕದಲ್ಲಿ ಎಂದು ಸೂಚಿಸಲು ಮತ್ತು ಮೇಲೆ ಉದಾಹರಿಸಿದ ಶ್ರುತಿಯನ್ನು ಸೂಚಿಸಲು. ತತ್ತ್ವಪ್ರದೀಪದಲ್ಲಿ ಹೀಗೆಯೇ ಸಂಯಮನೇ - ನರಕದಲ್ಲಿ, ಸಂಯಮನಂ - ದುಃಖವನ್ನು ಅನುಭವಿಸಿ— ಇತ್ಯಾದಿ ಯಾಗಿ ಹೇಳಲಾಗಿದೆ. ಅನಿಷ್ಟಾದಿಕಾರಿಗಳಿಗೆ ಆರೋಹ ಅಥವಾ ಅವರೋಹಗಳು ವೈಕಲ್ಪಿಕವಾಗಿ ಆಗುವಂತೆ ಸಂಯಮನವೂ ವೈಕಲ್ಪಿಕವಾಗಿ ಆಗುವುದಿಲ್ಲವೆಂದು ಸೂಚಿಸಲು 'ತು' ಶಬ್ದವನ್ನು ಪ್ರಯೋಗಿಸಲಾಗಿದೆ. 'ಅನಿಷ್ಟಾದಿಕಾರಿಣಾಂ' ಎಂದು

॥ ॐ स्मरन्ति च ॐ ॥ ३.१.१५

'गच्छन्ति पापिनः सर्वे नरकं नात्र संशयः' इत्यादि, 'तानहं द्विषतः क्रूरान्' इति, 'सर्वदेवावरत्वेन यो जानाति च केशवम्' इत्यादि स्मरन्तीत्यर्थः। प्रागुक्तश्रुतिसमुच्चये चः। स्मृतिभूयस्त्वाय बहुवचनम् ॥ ११ ॥

अपिसप्ताधिकरणम्—१२

॥ ॐ अपि सप्त ॐ ॥ ३.१.१६

---

ಅನುವೃತ್ತಿ ಇದ್ದರೂ 'ಇತರೇಷಾಂ' ಎಂದು ಹೇಳಿರುವುದು, ಅವರ ಮಧ್ಯೆ ಕೆಲವರಿಗೆ ಆರೋಹವೂ, ಹರಿದ್ವೇಷಿಗಳಾದ ಇತರರಿಗೆ ಅವರೋಹವು ಆಗುವುದೆಂದು ವಿಕಲ್ಪವನ್ನು ಸೂಚಿಸಲು. ಈ ಸೂತ್ರವು ಹಿಂದಿನ ಸೂತ್ರದಲ್ಲಿ 'ಚ' ಶಬ್ದದಿಂದ ಉಕ್ತವಾದುದನ್ನೇ ವ್ಯಕ್ತಗೊಳಿಸುವ ಉದ್ದೇಶವನ್ನು ಹೊಂದಿರುವುದರಿಂದ 'ಆರೋಹಾವರೋಹೌ ಚ' ಎಂದು 'ಚ' ಶಬ್ದವಿಲ್ಲ ಮತ್ತು ಹಿಂದಿನ ಸೂತ್ರದಿಂದ ಈ ಸೂತ್ರಕ್ಕೆ ಪೌನರುಕ್ತ್ಯವೂ ಇಲ್ಲ.

ಹೀಗೆಯೇ ಸ್ಮೃತಿಯೂ ಇರುವುದು ಎಂದು ಹೇಳುವ ಸೂತ್ರ—

ಓಂ ಸ್ಮರಂತಿ ಚ ಓಂ ೩.೧.೧೫

**ಸೂತ್ರಾರ್ಥ**

'ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ' ಎಂದು ಮುಂತಾಗಿ, 'ತಾನಹಂ ದ್ವಿಷತಃ ಕ್ರೂರಾನ್' ಎಂದು, 'ಸರ್ವದೇವಾವರತ್ವೇನ ಯೋ ಜಾನಾತಿ ಚ ಕೇಶವಮ್' ಇತ್ಯಾದಿಯಾಗಿ ಸ್ಮರಿಸುವರು ಎಂದು ಅರ್ಥ. ಹಿಂದಿನ ಸೂತ್ರದಲ್ಲಿ ಹೇಳಿದ ಶ್ರುತಿಯು ಸಮುಚ್ಚಯವನ್ನು 'ಚ' ಶಬ್ದವು ಹೇಳುವುದು. ಸ್ಮೃತಿಗಳು ಬಹುಸಂಖ್ಯೆಯಲ್ಲಿರುವುದರಿಂದ 'ಸ್ಮರಂತಿ' ಎಂದು ಬಹುವಚನವನ್ನು ಪ್ರಯೋಗಿಸಲಾಗಿದೆ.

ಅಪಿಸಪ್ತಾಧಿಕರಣ—೧೨

ಓಂ ಅಪಿ ಸಪ್ತ ಓಂ ೩.೧.೧೬

अत्र हरिद्वेषिणः प्रागुक्तनित्यनरकः समर्थ्यते। संयमनमित्यस्ति। अपिपदात् स्मरन्तीत्यस्ति। संयमनं नरकं सप्तापि सप्रभेदमपि स्मरन्ति। न त्वेकविधम्। येन यावदिन्द्र इत्युक्तिविरोधः इत्यर्थः। 'रौरवोऽथ महांश्चैव' इत्यादिस्मृतिकर्तार इत्यर्थः। स्मृतौ पञ्चानामेवानित्यत्वोक्त्या यावदिन्द्र इत्युक्तेस्तत्परत्वादिति भावः। यद्यपि बहुकोटयो नरकाः, तथापि सप्त प्रधानानीत्यपिशब्द इति तत्वप्रदीपोक्तिः ॥ १२ ॥

---

## ಅಧಿಕರಣದ ವಿಷಯ ಮತ್ತು ಸೂತ್ರಾರ್ಥ

ಈ ಅಧಿಕರಣದಲ್ಲಿ ಹರಿದ್ವೇಷಿಗೆ ನಿತ್ಯನರಕವಾಗುವುದೆಂದು ಹಿಂದೆ ಹೇಳಿದುದನ್ನು ಸಮರ್ಥಿಸಲಾಗುವುದು. 'ಸಂಯಮನಂ' ಎಂಬ ಪದವು ಅನುವೃತ್ತವಾಗುವುದು. ಸೂತ್ರದಲ್ಲಿರುವ 'ಅಪಿ' ಪದದಿಂದಾಗಿ 'ಸ್ಮರಂತಿ' ಎಂಬ ಪದವೂ ಅನುವೃತ್ತವಾಗುವುದು. ಸಂಯಮನಂ - ನರಕವು, ಸಪ್ತ ಅಪಿ - ಸಪ್ತಪ್ರಭೇದಗಳನ್ನು ಪಡೆದಿದೆಯೆಂದೂ ಸ್ಮರಿಸುವರು. ಹೊರತು [1]'ಯಾವದಿಂದ್ರ' ಎಂಬ ವಚನವಿರೋಧ ಬರುವಂತೆ ನರಕವು ಒಂದೇ ವಿಧವೆಂದು ಸ್ಮರಿಸುವುದಿಲ್ಲ ಎಂದು ಅರ್ಥ. ರೌರವೋಥ ಮಹಾಂಶ್ಚೈವ' (ಮ. ಭಾ) ಎಂಬ ಸ್ಮೃತಿಕಾರರು ಎಂದು ಅರ್ಥ. ಸ್ಮೃತಿಯಲ್ಲಿ ಐದು ನರಕಗಳನ್ನು ಮಾತ್ರ ಅನಿತ್ಯವೆಂದು ಹೇಳಿರುವುದರಿಂದ 'ಯಾವದಿಂದ್ರ' ಎಂಬ ವಚನವು ಅನಿತ್ಯನರಕಪರವೆಂದು ಭಾವ. ಯದ್ಯಪಿ ಅನೇಕ ಕೋಟಿ ಸಂಖ್ಯಾಕವಾದ ನರಕಗಳಿವೆ, ಆದರೂ ಏಳು ಪ್ರಧಾನವಾದದ್ದು ಎಂದು ಅಪಿ[2] ಶಬ್ದವು ಹೇಳುವುದೆಂದು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ.

---

1. 'ಯಾವದಿಂದ್ರಾಶ್ಚತುರ್ದಶ' ಎಂಬ ವಚನದಿಂದ ನರಕವು ಅನಿತ್ಯವೆಂದು ತಿಳಿದು ಬರುವುದು. ಆದ್ದರಿಂದ ನಿತ್ಯನರಕವಿಲ್ಲ ಎಂದು ಆಕ್ಷೇಪ. 'ರೌರವೋऽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ । ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯನರಕಾಣಿ ಚ ॥ ತಾಮಸ್ರಶ್ಚಾಂಧತಾಮಿಸ್ರೋ ದ್ವೌ ನಿತ್ಯೌ ಸಂಪ್ರಕೀರ್ತಿತೌ' ಎಂಬ ಸ್ಮೃತಿಯಲ್ಲಿ ಏಳು ವಿಧವಾದ ನರಕಗಳನ್ನು ಹೇಳಿ ಅವುಗಳಲ್ಲಿ ಐದನ್ನು ಮಾತ್ರ ಅನಿತ್ಯವೆಂದು ಹೇಳಿದೆ. 'ಯಾವದಿಂದ್ರ' ಎಂಬ ವಚನವು ಅಂತಹ ಅನಿತ್ಯನರಕಪರವಾದುದು ಎಂದು ಸಿದ್ಧಾಂತ.

2. ಅಪಿ ಶಬ್ದವು ತಥಾಪಿ ಎಂಬ ಅರ್ಥವುಳ್ಳದ್ದೆಂದು ಭಾವ.

तत्राप्यधिकरणम्—१२

॥ ॐ तत्रापि च तद्व्यापारादविरोधः ॐ ॥ ३.१.१७

अत्र नरकस्य दुःखरूपतोच्यते । तत्रेति प्रस्तुतो नरक उच्यते । चशब्दो दुःखाभोगसमुच्चयार्थः । तत्रापि नरकेऽपि दुःखाभोगेनैव तद्व्यापारात् तस्येशस्य प्रेरणाख्यव्यापारादविरोधः 'सर्वं रमयति सर्वं न रमयति' इति सर्वनियन्तृत्वश्रुतिविरोधो वा नरकस्य सदुःखत्वे तन्नियन्तुरीशस्य दुःखाभोक्तृत्वविरोधो वा नेत्यर्थः । सम्भोगप्राप्तिरित्यत्र अभोगोक्तावपि इह चशब्देन तदुक्तिः भोगो न दर्शनमात्रं किन्तु तत्कृतनीचोच्चत्वम् । तत्तु नेशेऽस्तीति द्योतयितुम् ॥ १२ ॥

---

ತತ್ರಾಪ್ಯಧಿಕರಣ—೧೨

ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ ೩.೧.೧೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ನರಕವು ದುಃಖಸ್ವರೂಪವಾದುದೆಂದು ಹೇಳಲಾಗುವುದು. 'ತತ್ರ' ಪದವು ಪ್ರಸ್ತುತವಾದ ನರಕವನ್ನು ಹೇಳುವುದು. 'ಚ' ಶಬ್ದವು ದುಃಖ ಭೋಗಾಭಾವದ ಸಮುಚ್ಚಯವನ್ನು ಹೇಳುವುದು. ತತ್ರಾಪಿ - ನರಕದಲ್ಲೂ, ದುಃಖಭೋಗವಿಲ್ಲದಂತೆಯೇ, ತದ್ವ್ಯಾಪಾರಾತ್ - ಈಶ್ವರನ ಪ್ರೇರಣೆಯೆಂಬ ಕ್ರಿಯೆಯಿರುವುದರಿಂದ, ಅವಿರೋಧಃ - 'ಸರ್ವಂ ರಮಯತಿ ಸರ್ವಂ ನ ರಮಯತಿ' (ಕೌಷಾರವಶ್ರುತಿ) ಎಂಬ, ಭಗವಂತನಿಗೆ ಸರ್ವನಿಯಂತೃತ್ವವನ್ನು ಹೇಳುವ ಶ್ರುತಿ ವಿರೋಧವಾಗಲೀ, ನರಕದಲ್ಲಿ ದುಃಖವಿದ್ದಲ್ಲಿ ನರಕಕ್ಕೆ ನಿಯಾಮಕನಾದ ಭಗವಂತನಿಗೆ ದುಃಖಭೋಗವಿಲ್ಲದಿರುವುದರ ವಿರೋಧವಾಗಲೀ ಇಲ್ಲವೆಂದು ಅರ್ಥ. 'ಸಂಭೋಗ ಪ್ರಾಪ್ತಿಃ' (ಬ್ರ. ಸೂ. ೧.೨.೮) ಎಂಬ ಸೂತ್ರದಲ್ಲಿ ಈಶ್ವರನಿಗೆ ಸುಖದುಃಖ ಭೋಗವಿಲ್ಲವೆಂದು ಹೇಳಿದ್ದರೂ, ಭೋಗವೆಂದರೆ ಕೇವಲ ಜ್ಞಾನವಲ್ಲ, ಕಿಂತು ಅನುಭವದಿಂದ ಉಂಟಾಗುವ ನೀಚತ್ವ ಅಥವಾ ಉಚ್ಚತ್ವ. ಇಂತಹ ನೀಚತ್ವವಾಗಲೀ ಉಚ್ಚತ್ವವಾಗಲೀ ಭಗವಂತನಲ್ಲಿಲ್ಲ ಎಂದು ಸೂಚಿಸಲು ಈ ಸೂತ್ರದಲ್ಲೂ 'ಚ' ಶಬ್ದದಿಂದ ಭೋಗಾಭಾವವನ್ನು ಹೇಳಲಾಗಿದೆ.

विद्याधिकरणम्—१४

॥ ॐ विद्याकर्मणोरिति तु प्रकृतत्वात् ॐ ॥ ३.१.१८

अत्र भूतानां साधन एव स्वातन्त्र्यं न तु पितृयानादिफल प्राप्तावित्युच्यते । तुरेव । इतिशब्दः श्रौतपदार्थस्यार्थोक्तिपरः । 'एतयोः पथोर्नैकतरेण च' इति श्रुतावेतयोरित्यस्य विद्याकर्मणो-रित्येवार्थः । न तु देवयानपितृयानयोरित्यर्थः । येन फलस्वातन्त्र्यं स्यादिति भावः । कुतः । प्रकृतत्वात् । विद्याकर्मणोरित्यन्वेति । 'तद्य इत्थं विदुर्ये चेमेऽरण्ये श्रद्धा तप इत्युपासते तेऽर्चिषमभि-संम्भवन्ति । अथ य इमे ग्रामा इष्टापूर्ते दत्तमित्युपासते ते धूमम्'

---

ವಿದ್ಯಾಧಿಕರಣ—೧೪

ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ
೩.೧.೧೮

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜೀವರಿಗೆ ಸಾಧನದಲ್ಲಿ ಸ್ವಾತಂತ್ರ್ಯವಿದೆಯೇ ಹೊರತು ಪಿತೃಯಾನ ಮೊದಲಾದ ಫಲವನ್ನು ಪಡೆಯುವುದರಲ್ಲಿಲ್ಲ ಎಂದು ಹೇಳಲಾಗುವುದು. 'ತು' ಶಬ್ದಕ್ಕೆ ಏವ ಎಂದು ಅರ್ಥ. 'ಇತಿ' ಶಬ್ದವು ಶ್ರುತಿಯಲ್ಲಿರುವ ಪದಗಳ ಅರ್ಥವನ್ನು ಹೇಳುವ ತಾತ್ಪರ್ಯವುಳ್ಳದ್ದು. 'ಏತಯೋಃ ಪಥೋರ್ನ ಕತರೇಣ ಚ' ಎಂಬ ಶ್ರುತಿಯಲ್ಲಿ 'ಏತಯೋಃ' ಎಂಬ ಪದಕ್ಕೆ 'ವಿದ್ಯೆ-ಕರ್ಮಗಳ' ಎಂದಿಷ್ಟೇ ಅರ್ಥ, ಹೊರತು 'ದೇವಯಾನ–ಪಿತೃಯಾನಗಳ' ಎಂದು ಅರ್ಥವಲ್ಲ. ಹಾಗೆ ಅರ್ಥವಿದ್ದಲ್ಲಿ ಜೀವರಿಗೆ ಫಲದ ವಿಷಯದಲ್ಲಿ ಸ್ವಾತಂತ್ರ್ಯವಿದೆ ಎಂದಾಗುತ್ತಿತ್ತು ಎಂದು ಭಾವ. 'ಏತಯೋಃ' ಎಂಬ ಪದಕ್ಕೆ 'ವಿದ್ಯಾ-ಕರ್ಮಗಳ' ಎಂದೇ ಏಕೆ ಅರ್ಥಮಾಡಬೇಕು ಎಂಬ ಶಂಕೆಗೆ ಉತ್ತರ – ಪ್ರಕೃತತ್ವಾತ್. 'ವಿದ್ಯಾಕರ್ಮಣೋಃ' ಎಂಬ ಪದವು ಅನ್ವಿತವಾಗುವುದು. 'ತದ್ಯ ಇತ್ಥಂ ವಿದುರ್ಯೇ ಚೇಮೇ ಅರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ ಅಥ ಯ ಇಮೇ ಗ್ರಾಮೇ ಇಷ್ಟಾಪೂರ್ತೇ

इति विद्याकर्मरूपमार्गयोरपि प्रकृतत्वादित्यर्थः । एके तु तुरप्यर्थः । इतिशब्दो वाक्यविशेषद्योतकः । 'तद्य इत्थं' इत्यादिवाक्ये देवयानाद्युपस्थापकविद्याकर्मणोरपि प्रकृतत्वादित्यर्थ इत्याहुः । विद्याकर्मपदप्रयोगात् 'विद्यापथः कर्मपथो द्वौ पन्थानौ प्रकीर्तितौ । तद्वर्जितस्त्रिधा याति तिर्यग् वा नरकं तमः ॥' इति स्मृतिः सूचिता ॥१४॥

---

ದತ್ತಮಿತ್ಯುಪಾಸತೇ ತೇ ಧೂಮಂ' ಎಂದು ವಿದ್ಯಾಕರ್ಮಗಳೆಂಬ ಮಾರ್ಗಗಳೂ ಪ್ರಕೃತವಾಗಿರುವುದರಿಂದ ಎಂದು ಅರ್ಥ[1].

**ಸೂತ್ರದ ವ್ಯಾಖ್ಯಾನಾಂತರ**

ಕೆಲವರು– 'ತು' ಶಬ್ದಕ್ಕೆ ಅಪಿ ಎಂದು ಅರ್ಥ. 'ಇತಿ' ಶಬ್ದವು ವಾಕ್ಯ ವಿಶೇಷವನ್ನು ಸೂಚಿಸುವುದು. 'ತದ್ಯ ಇತ್ಥಂ' ಇತ್ಯಾದಿ ವಾಕ್ಯದಲ್ಲಿ ದೇವಯಾನ ಮೊದಲಾದವುಗಳನ್ನು ಜ್ಞಾಪಿಸುವ ವಿದ್ಯಾ-ಕರ್ಮಗಳೂ ಪ್ರಕೃತವಾಗಿರುವುದರಿಂದ ಎಂದರ್ಥವೆಂದು ಹೇಳುವರು.

ವಿದ್ಯಾ–ಕರ್ಮ ಪದಗಳನ್ನು ಪ್ರಯೋಗಿಸಿರುವುದರಿಂದ 'ವಿದ್ಯಾಪಥಃ ಕರ್ಮಪಥೋ ದ್ವೌ ಪಂಥಾನೌ ಪ್ರಕೀರ್ತಿತೌ । ತದ್ವರ್ಜಿತಃ ತ್ರಿಧಾ ಯಾತಿ ತಿರ್ಯಗ್ ವಾ ನರಕಂ ತಮಃ ॥' ಎಂಬ ಸ್ಮೃತಿಯು ಸೂಚಿತವಾಗುವುದು.

---

1. 'ಅಥೈತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣಿ ಅಸಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ ಮ್ರಿಯಸ್ವೇತ್ಯೇತ್ ತೃತೀಯಂ ಸ್ಥಾನಮ್' (ಛಾಂ. ೫.೧೦.೮) ಎಂಬ ಶ್ರುತಿಯಲ್ಲಿ-- ಈ ಎರಡು ಮಾರ್ಗಗಳಲ್ಲಿ ಯಾವೊಂದರಿಂದಲೂ ಯಾರು ಹೋಗುವುದಿಲ್ಲವೋ ಅಂತಹ ಜೀವರು ಅಲ್ಪವಾದ, ಸುಖದುಃಖಮಿಶ್ರಿತವಾದ, ಪುನಃ ಪುನಃ ಆವೃತ್ತವಾಗುವ ಗತ್ಯಾದಿಗಳನ್ನು ಪಡೆಯುವರು. ಪುನಃ ಪುನಃ ಜನನ ಮರಣಗಳನ್ನು ಪಡೆಯುವರು ಎಂದು ಹೇಳಿದೆ. 'ಈ ಎರಡು ಮಾರ್ಗಗಳು' ಎಂದರೆ 'ತದ್ಯ ಇತ್ಥಂ' ಎಂಬ ಹಿಂದಿನ ವಾಕ್ಯದಲ್ಲಿ ಪ್ರಕೃತವಾಗಿರುವ ಅರ್ಚಿಮಾರ್ಗ ಮತ್ತು ಧೂಮಮಾರ್ಗ. ಇಂತಹ ಮಾರ್ಗಗಳೆಂಬ ಫಲವನ್ನು ಪಡೆಯಲು ಜೀವರಿಗೆ ಸ್ವಾತಂತ್ರ್ಯವಿದೆ ಎಂದು ಈ ವಾಕ್ಯದಿಂದ ಭಾಸವಾಗುವುದು ಎಂದು ಪೂರ್ವಪಕ್ಷಿಯ ವಾದ. ಹಿಂದಿನ ವಾಕ್ಯದಲ್ಲಿ ವಿದ್ಯೆ, ಕರ್ಮಗಳೆಂಬ ಸಾಧನಗಳೂ ಪ್ರಕೃತವಾಗಿವೆ. 'ಈ ಎರಡು ಮಾರ್ಗ'ಗಳೆಂದರೆ ಆ ಸಾಧನಗಳೇ ಹೊರತು ಅರ್ಚಿರಾದಿಮಾರ್ಗಗಳೆಂಬ ಫಲವಲ್ಲ. ಆದ್ದರಿಂದ ಫಲದಲ್ಲಿ ಜೀವರಿಗೆ ಸ್ವಾತಂತ್ರ್ಯವಿಲ್ಲವೆಂದು ಸಿದ್ಧಾಂತ.

न तृतीयाधिकरणम्—१५

## ॥ ॐ न तृतीये तथोपलब्धेः ॐ ॥ ३.१.१९

अत्रान्धतमसस्य दुःखमात्रत्वमुच्यते । सुखमिति शेषः । तृतीये 'तिर्यग् वा नरकं तमः' इत्युक्ततृतीयेऽन्धतमस इत्यर्थः । न सुखमित्यस्ति । कुतः । तथोपलब्धेः । 'अथाविद्वानकर्म' इत्यादिश्रुतौ तथा दर्शनादित्यर्थः । उपलब्धेरित्येव वाच्ये तथेत्युक्तिः यथाशब्दमुपेयं न तु दुःखस्य सुखव्याप्यत्वबुद्धिरादर्तव्येति वा विवक्षितार्थबोधकत्वं श्रुतेरस्तीति वा सूचयितुम् ।

---

ನ ತೃತೀಯೊಧಿಕರಣ—೧೫

## ಓಂ ನ ತೃತೀಯೇ ತಥೋಪಲಬ್ಧೇಃ ಓಂ ೩.೧.೧೯

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಅಂಧತಮಸವು ಕೇವಲ ದುಃಖರೂಪವಾಗಿದೆ ಎಂದು ಹೇಳಲಾಗುವುದು. 'ಸುಖಂ' ಎಂಬ ಶೇಷವನ್ನು ಸೇರಿಸಬೇಕು. ತೃತೀಯೇ—'ತಿರ್ಯಗ್ ವಾ ನರಕಂ ತಮಃ' ಎಂಬಲ್ಲಿ ಹೇಳಿರುವ ಮೂರನೆಯದಾದ ಅಂಧತಮಸದಲ್ಲಿ ಎಂದು ಅರ್ಥ. 'ನ ಸುಖಂ' ಎಂಬ ಪದಗಳು ಅನ್ವಿತವಾಗುವುವು. ಅಂಧತಮಸದಲ್ಲಿ ಸುಖವಿಲ್ಲವೆಂಬುದಕ್ಕೆ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ – ತಥೋಪಲಬ್ಧೇಃ – [1]'ಅಥಾವಿದ್ವಾನಕರ್ಮ' ಎಂಬ ಶ್ರುತಿಯಲ್ಲಿ ಹಾಗೆ ತಿಳಿದು ಬರುವುದರಿಂದ ಎಂದು ಅರ್ಥ. 'ಉಪಲಬ್ಧೇಃ' ಎಂದಿಷ್ಟೇ ಹೇಳಬಹುದಾಗಿದ್ದರೂ 'ತಥಾ' ಎಂದು ಹೇಳಿರುವುದು—ಶ್ರುತಿಯಲ್ಲಿ ಹೇಗೆ ಹೇಳಿದೆಯೋ ಹಾಗೆ ಅಂಗೀಕರಿಸಬೇಕು ಹೊರತು ಎಲ್ಲಿ ದುಃಖವಿದೆಯೋ ಅಲ್ಲಿ ಸುಖವೂ ಇರುವುದು ಎಂಬ ವ್ಯಾಪ್ತಿಜ್ಞಾನದಲ್ಲಿ ಆದರ ಮಾಡತಕ್ಕದ್ದಲ್ಲ ಎಂದಾಗಲೀ, ಅಂಧತಮಸವು ಕೇವಲ ದುಃಖರೂಪವಾದುದು ಎಂಬ ವಿವಕ್ಷಿತವಾದ ವಿಷಯವನ್ನು ತಿಳಿಸುವ ಸಾಮರ್ಥ್ಯವು ಶ್ರುತಿಗೆ ಇರುವುದೆಂದಾಗಲೀ ಸೂಚಿಸಲು.

---

1. 'ಅಥ ಅವಿದ್ವಾನ್ ಅಕರ್ಮಾ ಅವಾಗ್ಗಚ್ಛತಿ । ತ್ರಿಧಾ ಹ ವಾ ಅವಾಗ್ಗತಿಃ । ತಿರ್ಯಗ್ ಯಾತನಾ ತಮ ಇತಿ । ದ್ವೇ ವಾವ ಸುಖಾನುವೃತ್ತೇ । ನ ತಮಃ ಸುಖಾನುವೃತ್ತಂ ಕೇವಲಂ ಹ್ಯೇವಾತ್ರ ದುಃಖಂ ಭವತಿ' ಎಂದು ಶ್ರುತಿ.

स्मृतियुक्तिभ्यां चैवमित्याह—

॥ ॐ स्मर्यतेऽपि च लोके ॐ ॥ ३.१.२०

न तृतीये सुखमित्येतत् 'तिर्यक्षु नरके चैव सुखलेशो विधीयते। नान्धेतमसि' इति स्मर्यते। लोकेऽपि सिद्धमिति शेषः। लौकिक दृष्टान्तयुक्तयुक्तिसिद्धमित्यर्थः। यथा राजाप्रियो नरः सुखित्वेन राजानिष्टत्वात् न सुखभाग् एवमीशाप्रियोऽन्धतमसस्थः सुखित्वेन ईशानिष्टत्वात् न सुखभागित्यनुमानसिद्धमित्यर्थः। अत्यप्रिये सुखमपि तथैव परमेश्वरः' इति युक्तिमूलस्मृतिसमुच्चये चः।

इतश्चैवमित्याह—

---

ಅಂಧತಮಸದಲ್ಲಿ ಸುಖಲೇಶವೂ ಇಲ್ಲವೆನ್ನುವುದು ಸ್ಮೃತಿ ಮತ್ತು ಯುಕ್ತಿಗಳಿಂದಲೂ ಸಿದ್ಧವಾಗಿದೆ ಎಂದು ಹೇಳುವ ಸೂತ್ರ—

ಓಂ ಸ್ಮರ್ಯತೇಽಪಿ ಚ ಲೋಕೇ ಓಂ ೩.೧.೨೦

**ಸೂತ್ರಾರ್ಥ**

ಅಂಧತಮಸದಲ್ಲಿ ಸುಖವಿಲ್ಲವೆನ್ನುವುದನ್ನು 'ತಿರ್ಯಕ್ಷು ನರಕೇ ಚೈವ ಸುಖಲೇಶೋ ವಿಧೀಯತೇ ! ನಾಂಧೇತಮಸಿ' (ಭವಿಷ್ಯತ್ಪರ್ವ) ಎಂಬ ಸ್ಮೃತಿಯಲ್ಲಿ ಹೇಳಲಾಗಿದೆ. ಲೋಕೇಽಪಿ ಸಿದ್ಧಮ್--ಇಲ್ಲಿ 'ಸಿದ್ಧಮ್' ಎಂಬ ಶೇಷವನ್ನು ಸೇರಿಸಲಾಗಿದೆ –ಲೌಕಿಕದೃಷ್ಟಾಂತಯುಕ್ತವಾದ ಯುಕ್ತಿಯಿಂದ ಸಿದ್ಧವಾಗಿದೆ ಎಂದು ಅರ್ಥ. 'ಹೇಗೆ ರಾಜನಿಗೆ ಅಪ್ರಿಯನಾದ ಪುರುಷನು, ಅವನು ಸುಖಿಯಾಗಿರಲೆಂದು ರಾಜನು ಇಚ್ಛಿಸುವುದಿಲ್ಲವಾದ್ದರಿಂದ ಸುಖಿಯಾಗಿರಲಾರನೋ ಹಾಗೆಯೇ ಭಗವಂತನಿಗೆ ಅಪ್ರಿಯನಾದ ಅಂಧತಮಸದಲ್ಲಿರುವ ಜೀವನು ಸುಖಿಯಾಗಿರಲೆಂದು ಭಗವಂತನು ಇಚ್ಛಿಸುವುದಿಲ್ಲವಾದ್ದರಿಂದ ಸುಖಭಾಗಿಯಾಗುವುದಿಲ್ಲ' ಎಂಬ ಯುಕ್ತಿಯಿಂದ ಸಿದ್ಧವಾಗಿದೆ ಎಂದು ಅರ್ಥ. 'ಅತಿಪ್ರಿಯೇ ಯಥಾ ರಾಜಾ ನ ದುಃಖಂ ಸಹತೇ ಕ್ವಚಿತ್ । ಅತ್ಯಪ್ರಿಯೇ ಸುಖಮಪಿ ತಥೈವ ಪರಮೇಶ್ವರಃ ॥' ಎಂಬ ಯುಕ್ತಿಸಹಿತಸ್ಮೃತಿಯ ಸಮುಚ್ಚಯವನ್ನು 'ಚ' ಶಬ್ದವು ಹೇಳುವುದು.

ಈ ಮುಂದಿನ ಕಾರಣದಿಂದಲೂ ಅಂಧತಮಸವು ಕೇವಲ ದುಃಖರೂಪವಾಗಿದೆ ಎಂದು ಹೇಳುವ ಸೂತ್ರ—

॥ ॐ दर्शनाच्च ॐ ॥ ३.१.२१

न तृतीये सुखमित्येतद् विरिञ्चिप्रत्यक्षाच्च सिद्धमित्यर्थः। तच्च 'नारायणप्रसादेन' इत्यादिस्मृत्या बोध्यमिति भावः।

अर्थापत्तितोऽप्येवमित्याह—

॥ ॐ तृतीये शब्दावरोधः संशोकजस्य ॐ ॥ ३.१.२२

तृतीय इत्यस्ति। तृतीये यत्तृतीयं तत्रेत्युक्त्या तमस्त्रिविध-मिति गम्यते। मोहस्येति शेषः। तृतीयेऽपि तृतीये तमसि विषये

---

ಓಂ ದರ್ಶನಾಚ್ಚ ಓಂ ೩.೧.೨೧

**ಸೂತ್ರಾರ್ಥ**

ಅಂಧತಮಸದಲ್ಲಿ ಸುಖವಿಲ್ಲವೆನ್ನುವ ವಿಷಯು ಚತುರ್ಮುಖನ ಪ್ರತ್ಯಕ್ಷ ದಿಂದಲೂ ಸಿದ್ಧವಾಗಿದೆ ಎಂದು ಅರ್ಥ. ಚತುರ್ಮುಖನಿಗೆ ಅಂತಹ ಪ್ರತ್ಯಕ್ಷ ವಿದ್ದಿತೆನ್ನುವುದು 'ನಾರಾಯಣಪ್ರಸಾದೇನ' ಇತ್ಯಾದಿ ಸ್ಮೃತಿಯಿಂದ ತಿಳಿಯು ಬೇಕೆಂದು ಭಾವ.

ಅಂಧತಮಸದಲ್ಲಿ ಸುಖವಿಲ್ಲವೆನ್ನುವುದು ಅರ್ಥಾಪತ್ತಿ ಪ್ರಮಾಣದಿಂದಲೂ ಸಿದ್ಧವಾಗುವುದು ಎಂದು ಹೇಳುವ ಸೂತ್ರ—

ಓಂ ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ ಓಂ ೩.೧.೨೨

**ಸೂತ್ರಾರ್ಥ**

'ತೃತೀಯೇ' ಎಂಬ ಪದವು ಅಧ್ಯಾಹೃತವಾಗುವುದು. 'ತೃತೀಯೇ ಯತ್ ತೃತೀಯಂ ತತ್ರ'— ಮೂರನೆಯದರಲ್ಲಿ ಯಾವುದು ಮೂರನೆಯದೋ ಆ ವಿಷಯು ದಲ್ಲಿ ಎಂಬ ಉಕ್ತಿಯಿಂದ, ತಿರ್ಯಕ್, ಯಾತನಾ, ತಮಸ್ಸು ಎಂಬ ಅಧೋಗತಿಗಳಲ್ಲಿ ಮೂರನೆಯದಾದ ತಮಸ್ಸು ಮೂರುವಿಧವೆಂದು ತಿಳಿದುಬರುವುದು. 'ಮೋಹಸ್ಯ'

संशोकजस्य अतिदुःखजन्यस्य मोहस्य शब्दावरोधः शब्देन प्राप्तिः शब्दश्रवणेन प्राप्तिर्भवतीत्यर्थः । तमसि तृतीयतमसो वर्णने तच्छ्रोतॄणामतिदुःखं भवति, तेन च मूर्च्छेति तदन्यथानुपपत्त्या न तत्र सुखमस्तीति सिद्धमिति भावः । अर्थापत्तेरनुमानत्वेऽपि तद्विशेषत्वात् पृथगुक्तिः । न तृतीये श्रुतिस्मृतियुक्तिदृष्ट्यर्थापत्तिभ्य इति वाच्ये योगविभागो युक्तेः स्मार्तत्वं दृष्टेरस्तित्वस्यापि स्मृत्यायत्तत्वं तृतीयेऽपि तृतीयस्य दुःखमात्रत्वमर्थापत्तिसिद्धमित्यादिविशेषद्योतनार्थं इत्यूह्यम् । तदुक्तमतिसप्तेत्यत्र तत्वप्रदीपे– सर्वत्र चेत्थमेव सूत्रपदानां कृत्यमुपक्षि-

---

ಎಂಬ ಶೇಷವನ್ನು ಸೇರಿಸಬೇಕು. ತೃತೀಯೇऽಪಿ ತೃತೀಯೇ - ಗತಿಗಳಲ್ಲಿ ಮೂರನೆಯದಾದ ತಮಸ್ಸಿನ ಮೂರನೆ ಪ್ರಭೇದದ ವಿಷಯದಲ್ಲಿ, ಸಂಶೋಕಜಸ್ಯ – ಅತಿದುಃಖದಿಂದ ಉಂಟಾಗುವ ಮೂರ್ಛೆಗೆ, ಶಬ್ದಾವರೋಧಃ-ಶಬ್ದದಿಂದ ಪ್ರಾಪ್ತಿಯು ಅಂದರೆ ಶಬ್ದವನ್ನು ಕೇಳುವುದರಿಂದಲೇ ಮೂರ್ಛೆಯು ಪ್ರಾಪ್ತಿಯಾಗುವುದು ಎಂದು ಅರ್ಥ. ತಮಸ್ಸುಗಳಲ್ಲಿ ಮೂರನೆ ತಮಸ್ಸನ್ನು ವರ್ಣಿಸಿದಾಗ ಅದನ್ನು ಕೇಳಿದವರಿಗೆ ಅತಿ ದುಃಖವೂ ಅದರಿಂದಾಗಿ ಮೂರ್ಛೆಯೂ ಉಂಟಾಗುವುದೆನ್ನುವುದು ತಮಸ್ಸಿನಲ್ಲಿ ಸುಖವಿದ್ದಲ್ಲಿ ಅನುಪಪನ್ನವಾಗುವುದರಿಂದ ಅಲ್ಲಿ ಸುಖವಿಲ್ಲವೆನ್ನುವುದು ಸಿದ್ಧವಾಗುವುದೆಂದು ಭಾವ.

**ಅರ್ಥಾಪತ್ತಿಯನ್ನು ಪ್ರತ್ಯೇಕವಾಗಿ ಹೇಳಿರುವುದರ ಮತ್ತು ಸೂತ್ರಗಳನ್ನು ವಿಭಜಿಸಿರುವುದರ ಸಮರ್ಥನೆ.**

ಅರ್ಥಾಪತ್ತಿಯೂ ಅನುಮಾನಪ್ರಮಾಣವೇ ಆಗಿದ್ದರೂ ಅನುಮಾನದಲ್ಲಿ ಒಂದು ವಿಶೇಷಬಗೆಯಾದುದರಿಂದ ಅನುಮಾನದಿಂದ ಪ್ರತ್ಯೇಕವಾಗಿ ಹೇಳಲಾಗಿದೆ. 'ನ ತೃತೀಯೇ ಶ್ರುತಿಸ್ಮೃತಿಯುಕ್ತಿದೃಷ್ಟ್ಯರ್ಥಾಪತ್ತಿಭ್ಯಃ' ಎಂದು ಒಂದೇ ಸೂತ್ರವನ್ನು ರಚಿಸಲು ಸಾಧ್ಯವಿದ್ದರೂ, ಯುಕ್ತಿಯು ಸ್ಮೃತಿಸಿದ್ಧವಾದುದು, ಪ್ರತ್ಯಕ್ಷದ ಅಸ್ತಿತ್ವವೂ ಸ್ಮೃತಿಗೆ ಅಧೀನವಾದುದು, ಅಧೋಗತಿಗಳಲ್ಲಿ ಮೂರನೆಯದಾದ ತಮಸ್ಸಿನ ಮೂರನೆಯ ಪ್ರಕಾರವು ಕೇವಲ ದುಃಖರೂಪವಾದುದೆಂಬ ವಿಷಯು ಅರ್ಥಾಪತ್ತಿ ಪ್ರಮಾಣಸಿದ್ಧವಾಗುವುದು— ಇತ್ಯಾದಿ ವಿಶೇಷಗಳನ್ನು ಸೂಚಿಸಲು ಸೂತ್ರಗಳನ್ನು ವಿಭಜಿಸಲಾಗಿದೆ ಎಂದು ಊಹಿಸಬೇಕು. ಇದನ್ನು 'ಅಪಿ ಸಪ್ತ'

पति, न तु निरुक्ति, सूक्ष्मबुद्धिभिः अधिकारिभिर्भाव्यमिति ज्ञापयन्निति ।

शोकजमोहप्राप्तिः श्रोतॄणां भवतीत्येतत् स्मृत्याऽऽह—

॥ ॐ स्मरणाच्च ॐ ॥ ३.१.२३

तृतीये शब्दावरोधः संशोकजस्येत्यस्य 'महातमस्त्रिधा प्रोक्तम्' इत्यादिना स्मरणादित्यर्थः । प्राक् तमसो दुःखमात्रत्वे स्मृत्युक्तिः । अत्र तु तमस्त्रैविध्ये तृतीयश्रोतृमोहप्राप्तौ चेति भेदः । त्रैविध्यस्य चेति चार्थ इति भाति ॥ १५ ॥

(ಬ್ರ. ಸೂ. ೩.೧.೧೬) ಎಂಬ ಅಧಿಕರಣದಲ್ಲಿ ತತ್ತ್ವಪ್ರದೀಪದಲ್ಲಿ ಹೀಗೆ ಹೇಳಲಾಗಿದೆ — ಅಧಿಕಾರಿಗಳು 'ಸೂಕ್ಷ್ಮಬುದ್ಧಿಗಳಾಗಿರಬೇಕೆಂದು ಜ್ಞಾಪಿಸುತ್ತ ಎಲ್ಲೆಡೆಯಲ್ಲಿ ಇದೇ ರೀತಿ ಸೂತ್ರಪದಗಳ ಪ್ರಯೋಜನವನ್ನು ಭಾಷ್ಯಕಾರರು ಸೂಚಿಸುವರು ಹೊರತು ಕಂಠೋಕ್ತವಾಗಿ ಹೇಳುವುದಿಲ್ಲ' ಎಂದು.

ತಮಸ್ಸಿನ ವರ್ಣನೆಯನ್ನು ಕೇಳಿದವರಿಗೆ ದುಃಖದಿಂದ ಮೂರ್ಛೆಯುಂಟಾಗುವುದು ಎಂಬುದಕ್ಕೆ ಆಧಾರ ಸ್ಮೃತಿಯೆಂದು ಹೇಳುವ ಸೂತ್ರ—

ಓಂ ಸ್ಮರಣಾಚ್ಚ ಓಂ ೩.೧.೨೩

**ಸೂತ್ರಾರ್ಥ**

ತಮಸ್ಸಿನ ವರ್ಣನೆಯನ್ನು ಕೇಳಿದವರಿಗೆ ಮೂರ್ಛೆಯುಂಟಾಗುವುದೆನ್ನುವುದು 'ಮಹಾತಮಸ್ತ್ರಿಧಾ ಪ್ರೋಕ್ತಂ[1]' ಇತ್ಯಾದಿ ಸ್ಮೃತಿಯಿಂದ ಸಿದ್ಧವಾಗುವುದು ಎಂದು ಅರ್ಥ.

**'ಸ್ಮರ್ಯತೇಽಪಿ ಚ ಲೋಕೇ'** (ಬ್ರ.ಸೂ. ೩.೧.೨೦) **ಎಂಬ ಸೂತ್ರದಿಂದ ಈ ಸೂತ್ರಕ್ಕೆ ಭೇದ.**

1. ಮಹಾತಮಸ್ತ್ರಿಧಾ ಪ್ರೋಕ್ತಂ ಊರ್ಧ್ವಂ ಮಧ್ಯಂ ತಥಾಽಧರವಮ್ ।
ಶ್ರವಣಾದೇವ ಮೂರ್ಛಾದಿಃ ಅಧರಸ್ಯ ಯತೋ ಭವೇತ್ ॥
ತಸ್ಮಾತ್ ನ ವಿಸ್ತರೇಣೈತತ್ ಕಥ್ಯತೇ ರಾಜಸತ್ತಮ ॥ (ಕೌರ್ಮಪುರಾಣ)

## तत्स्वाभाव्याधिकरणम्—१६

## ॥ ॐ तत्स्वाभाव्यापत्तिरुपपत्तेः ॐ ॥ ३.१.२४

अत्र कर्मिणां धूमादिदेवताभवनं नेत्युच्यते। तदिति विद्यासूत्रे प्रकृतधूमादिरुच्यते। तत एव कर्मण इति चान्वेति। 'धूमो भूत्वाऽभ्रं भवति' इत्यादौ धूमादिभवनं नाम कर्मिणः तत्स्वाभाव्यापत्तिः। तस्य धूमादेः स्वभाव इव स्वभावो यस्य स तत्स्वभावः। गजमुख इत्यादिवत्। तत्स्वभावस्य भावः तत्स्वाभाव्यं धूमादिदेवता

---

ಹಿಂದೆ ತಮಸ್ಸು ಕೇವಲ ದುಃಖರೂಪವಾದುದೆನ್ನುವ ವಿಷಯದಲ್ಲಿ ಸ್ಮೃತಿಯನ್ನು ಉದಾಹರಿಸಲಾಯಿತು. ಇಲ್ಲಿ, ತಮಸ್ಸು ಮೂರು ವಿಧವಾದುದು ಮತ್ತು ಮೂರನೆಯದಾದ ತಮಸ್ಸಿನ ಸ್ವರೂಪವನ್ನು ಕೇಳಿದವರಿಗೆ ಮೂರ್ಛೆಯುಂಟಾಗುವುದು ಎಂಬ ವಿಷಯದಲ್ಲಿ ಸ್ಮೃತಿಯನ್ನು ಹೇಳಲಾಗಿದೆ ಎಂದು ಎರಡು ಸೂತ್ರಗಳಿಗೆ ಭೇದವಿದೆ. 'ತಮಸ್ಸಿನ ತ್ರೈವಿಧ್ಯವನ್ನೂ ಸ್ಮರಿಸಲಾಗಿದೆ' ಎಂದು ಈ ಸೂತ್ರದಲ್ಲಿರುವ 'ಚ' ಶಬ್ದದ ಅರ್ಥವೆಂದು ತೋರುವುದು.

## ತತ್ಸ್ವಾಭಾವ್ಯಾಧಿಕರಣ—೧೬

## ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ ೩-೧-೨೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಕರ್ಮಗಳನ್ನು ಆಚರಿಸಿದವರು ಧೂಮಾದಿ ದೇವತೆಗಳಾಗುವರು ಎಂಬುದನ್ನು ನಿರಾಕರಿಸಲಾಗುವುದು. 'ತತ್' ಶಬ್ದವು ವಿದ್ಯಾಸೂತ್ರ (ಬ್ರ.ಸೂ. ೩.೧.೧೮) ದಲ್ಲಿ ಪ್ರಕೃತವಾದ ಧೂಮಾದಿ ದೇವತೆಗಳನ್ನು ಹೇಳುವುದು. ಪ್ರಸ್ತುತವಾಗಿರುವುದರಿಂದಲೇ 'ಕರ್ಮಣಃ' ಎಂಬ ಪದವೂ ಅನ್ವಿತವಾಗುವುದು. 'ಧೂಮೋ ಭೂತ್ವಾ ಅಭ್ರಂ ಭವತಿ' ಇತ್ಯಾದಿ ಶ್ರುತಿಯಲ್ಲಿ ಹೇಳಿರುವ 'ಧೂಮಾದಿಗಳಾಗುವುದು' ಎಂದರೆ ಕರ್ಮಗಳನ್ನು ಆಚರಿಸಿದವನಿಗೆ, ತತ್ಸ್ವಾಭಾವ್ಯಾಪತ್ತಿಃ - ಗಜಮುಖನೆಂದರೆ ಗಜದ ಮುಖದಂತೆ ಮುಖವುಳ್ಳವನು ಎಂದು ಅರ್ಥವಾಗುವಂತೆ ಇಲ್ಲಿ 'ತತ್ಸ್ವಭಾವ' ವೆಂದರೆ ಆ ಧೂಮಾದಿಗಳ ಸ್ವಭಾವದಂತೆ ಸ್ವಭಾವವುಳ್ಳವನು ಎಂದು ಅರ್ಥ. 'ತತ್ಸ್ವಭಾವಸ್ಯ ಭಾವಃ ತತ್ಸ್ವಾಭಾವ್ಯಂ' ಎಂಬ ವಿಗ್ರಹದಂತೆ ಧೂಮಾದಿ ದೇವತೆಗಳ ಸ್ವಭಾವಕ್ಕೆ ಸದೃಶವಾದ ಸ್ವಭಾವವನ್ನು ಪಡೆಯುವುದೆಂದು

स्वभावसदृशस्वभावत्वप्राप्तिः, न तु तदैक्यं तत्पदप्राप्तिर्वेत्यर्थः। तत्सादृश्यं च तद्देवताप्रवेशेन तद्गतिस्थित्यादौ स्वस्य गतिस्थित्यादिरिति बोध्यम्। कुतः ? उपपत्तेः। अन्यस्यान्यत्वादृष्ट्या अस्यैवार्थस्योपपत्तेरित्यर्थः ॥ १६ ॥

नातिचिरेणाधिकरणम्—१७

॥ ॐ नातिचिरेण विशेषात् ॐ ॥ ३.१.२५

अत्र स्वर्गादवरूढस्य कर्मिणः अचिरेण गर्भवासादिप्राप्तिरुच्यते। योनिमाप्नोतीति शेषः। कर्मीत्यस्ति। कर्मी नातिचिरेण, नसमासः,

---

ಆ ಶ್ರುತಿಯ ಅರ್ಥವೇ ಹೊರತು ಧೂಮಾದಿ ದೇವತೆಗಳ ಐಕ್ಯವಾಗಲೀ, ಅವರ ಪದಪ್ರಾಪ್ತಿಯಾಗಲೀ ಆಗುವುದೆಂದಲ್ಲ ಎಂದು ಸೂತ್ರದ ಅರ್ಥ. ಧೂಮಾದಿ ದೇವತೆಗಳ ಸಾದೃಶ್ಯವೆಂದರೆ ಆ ದೇವತೆಗಳನ್ನು ಪ್ರವೇಶಿಸಿ ಅವರ ಗಮನ, ಸ್ಥಿತಿಗಳನ್ನು ಅನುಸರಿಸಿ ತಾನೂ ಗಮನ, ಸ್ಥಿತಿಗಳನ್ನು ಪಡೆಯುವುದು ಎಂದು ತಿಳಿಯಬೇಕು. ಶ್ರುತಿಗೆ ಹೀಗೇಕೆ ಅರ್ಥವನ್ನು ಹೇಳಬೇಕೆಂಬ ಪ್ರಶ್ನೆಗೆ ಉತ್ತರ— ಉಪಪತ್ತೇಃ - ಒಬ್ಬರು ಮತ್ತೊಬ್ಬರಾಗುವುದು ಎಲ್ಲೂ ಕಂಡಿಲ್ಲವಾದ್ದರಿಂದ ಈ ಅರ್ಥವೇ ಯುಕ್ತವಾಗಿದೆ ಎಂದು ಅರ್ಥ.

ನಾತಿಚಿರೇಣಾಧಿಕರಣ—೧೭

ಓಂ ನಾತಿಚಿರೇಣ ವಿಶೇಷಾತ್ ಓಂ ೩.೧.೨೫

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಸ್ವರ್ಗದಿಂದ ಕೆಳಗಿಳಿದ ಕರ್ಮಿಯು ವಿಲಂಬವಿಲ್ಲದೆ ಗರ್ಭವಾಸಾದಿಗಳನ್ನು ಪಡೆಯುವನೆಂದು ಹೇಳಲಾಗುವುದು.

'ಯೋನಿಂ ಆಪ್ನೋತಿ' ಎಂಬ ಶೇಷವನ್ನು ಸೇರಿಸಬೇಕು. 'ಕರ್ಮಿ' ಎಂಬ ಪದವು ಅಧ್ಯಾಹೃತವಾಗುವುದು. ಕರ್ಮಿಯು, ನಾತಿಚಿರೇಣ— ಈ ಪದವು ನ ಶಬ್ದದೊಂದಿಗೆ ಆದ ಸಮಾಸವಾಗಿದೆ—ಬೇಗನೇ ಎಂದು ಅರ್ಥ. ಅಥವಾ, ಅತಿ ವಿಲಂಬದಿಂದ ಜನ್ಮವನ್ನು ಪಡೆಯುವುದಿಲ್ಲ, ಶೀಘ್ರವೇ ಪಡೆಯುವನು ಎಂದು ಅರ್ಥ.

अचिरेणैवेत्यर्थः । यद्वा अतिचिरेण न योनिमाप्नोति, किन्त्वचिरेणेत्यर्थः । कुतः ? विशेषात् । 'तद्य इह रमणीयचरणा अभ्याशो ह यत्ते रमणीयां योनिमापद्यन्ते' इति विशेषश्रवणादित्यर्थः । अचिरेणेति वाच्ये नातीत्याद्युक्तिः, 'यथेतमाकाशमाकाशाद्वायुं' इत्यादिश्रुतौ बहुस्थानगमनोक्त्या चिरेणेति न शङ्क्यम् । अतिचिरेण आगमनस्यैव तत्र निषेधादिति द्योतयितुम् । अत एवातीत्युक्तिः । 'स्वर्गलोकादवाक् प्राप्तो वत्सरात् पूर्वमेव तु । मातुः शरीरमाप्नोति' इति स्मृतेरिति भावः ॥ १७ ॥

अन्याधिकरणम्—१८

॥ ॐ अन्याधिष्ठिते पूर्ववदभिलापात् ॐ ॥ ३.१.२६

ಏಕೆಂದರೆ, ವಿಶೇಷಾತ್ - '[1]ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ' ಎಂದು ವಿಶೇಷಶ್ರುತಿ ಇರುವುದರಿಂದ ಎಂದು ಅರ್ಥ.

**'ನಾತಿಚಿರೇಣ' ಎಂಬ ಪ್ರಯೋಗದ ವಿಶೇಷ**

'ಅಚಿರೇಣ' ಎಂದು ಹೇಳಬಹುದಾಗಿದ್ದರೂ 'ನಾತಿಚಿರೇಣ' ಎಂದು ಹೇಳಿರುವುದು— 'ಯಥೇತಮಾಕಾಶಂ, ಆಕಾಶಾದ್ವಾಯುಂ' ಇತ್ಯಾದಿ ಶ್ರುತಿಯಲ್ಲಿ ಅನೇಕ ಸ್ಥಾನಗಳಿಗೆ ಜೀವನು ಹೋಗುವನೆಂದು ಹೇಳಿರುವುದರಿಂದ ವಿಲಂಬವಾಗುವುದೆಂದು ಶಂಕಿಸಬಾರದು, ಬಹು ವಿಲಂಬದಿಂದ ಆಗಮನವನ್ನು ಮಾತ್ರ ಅಲ್ಲಿ ನಿಷೇಧಿಸಲಾಗಿದೆ ಎಂದು ಸೂಚಿಸಲು— ಆದ್ದರಿಂದಲೆ ಸೂತ್ರದಲ್ಲಿ 'ಅತಿ' ಎಂದು ಹೇಳಲಾಗಿದೆ. 'ಸ್ವರ್ಗಲೋಕಾದವಾಕ್ ಪ್ರಾಪ್ತೋ ವತ್ಸರಾತ್ ಪೂರ್ವಮೇವ ತು । ಮಾತುಃ ಶರೀರಮಾಪ್ನೋತಿ' ಎಂದು ಸ್ಮೃತಿಯಿದೆ ಎಂದು ಭಾವ.

ಅನ್ಯಾಧಿಕರಣ—೧೮

**ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ ೩.೧.೨೬**

1. ಕರ್ಮಿಗಳಲ್ಲಿ ಯಾರು ಸದಾಚಾರಪೂರ್ವಕ ಸತ್ಕರ್ಮಾನುಷ್ಠಾನವನ್ನು ಮಾಡಿರುವರೋ ಅವರು ಈ ಭೂಮಿಯಲ್ಲಿ ವಿಲಂಬವಿಲ್ಲದೆ ಸಮೀಚೀನವಾದ ಜನ್ಮವನ್ನು ಪಡೆಯುವರೆಂದು ಶ್ರುತ್ಯರ್ಥ.

अत्र कर्मिणो व्रीह्यादिभावो नेत्युच्यते। व्रीह्यादिदेहे प्रवेश इति शेषः। कर्मिण इत्यस्ति। 'त इह व्रीहियवास्तिला माषा इति जायन्ते' इति व्रीह्यादिभावो नाम अन्याधिष्ठिते व्रीह्यादिदेहे प्रवेश एव। न तु तदभिमानित्वम्। येन तच्छेदादिना दुःखं कर्मिणः शङ्क्येतेत्यर्थः। कथं तर्हि व्रीहियवा इत्यैक्योक्तिः? पूर्ववत् धूमो भूत्वेति पूर्वोक्तिर्यथा तथेति। कुतः? अभिलापात्। 'सोऽत्रागतः स्थावरान् प्रविश्य भोगेन' इत्यादिश्रुतावभिलापादित्यर्थः। व्रीह्यादिदेह इति वाच्ये अन्येत्याद्युक्तिः स्वर्गादवाग्गतस्य व्रीह्यादिदेहानभिमाने तेषां वृद्धिर्न स्यादिति न शङ्क्यम्। अन्येनाभिमानिजीवेन अधिष्ठितत्वादिति वक्तुम्।

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಕರ್ಮಿಯು ವ್ರೀಹಿ ಮೊದಲಾದ ಧಾನ್ಯಭಾವವನ್ನು ಪಡೆಯುವುದಿಲ್ಲವೆಂದು ಹೇಳಲಾಗುವುದು. 'ವ್ರೀಹ್ಯಾದಿ ದೇಹದಲ್ಲಿ ಪ್ರವೇಶ' ಎಂಬ ಶೇಷವನ್ನು ಸೇರಿಸಬೇಕು. 'ಕರ್ಮಿಣಃ' ಎಂಬ ಪದವು ಅಧ್ಯಾಹೃತವಾಗುವುದು. 'ತ ಇಹ ವ್ರೀಹಿಯವಾಃ ತಿಲಾ ಮಾಷಾ ಇತಿ ಜಾಯಂತೇ' (ಛಾಂ. ೬.೫.೧೦) ಎಂಬಲ್ಲಿ ಹೇಳಿದ ವ್ರೀಹ್ಯಾದಿಭಾವವೆಂದರೆ, ಅನ್ಯಾಧಿಷ್ಠಿತೇ - ಇನ್ನೊಬ್ಬ ಜೀವನಿಂದ ಅಧಿಷ್ಠಿತವಾದ ವ್ರೀಹ್ಯಾದಿದೇಹದಲ್ಲಿ ಪ್ರವೇಶವೇ ಹೊರತು ಆ ದೇಹದ ಮೇಲೆ ಅಭಿಮಾನವಿರುವುದಲ್ಲ. ಅಭಿಮಾನವು ಇರುವುದಾದಲ್ಲಿ ಆ ದೇಹವನ್ನು ಛೇದಿಸುವುದು ಮೊದಲಾದವುಗಳಿಂದ ಕರ್ಮಿಗೆ ದುಃಖವಾಗಬಹುದೆಂದು ಶಂಕಿಸಬಹುದಿತ್ತು ಎಂದು ಅರ್ಥ. ಹಾಗಾದರೆ 'ವ್ರೀಹಿಯವಾಃ' ಎಂದು ಕರ್ಮಿಗಳಿಗೆ ವ್ರೀಹಿಯವಗಳ ಅಭೇದವನ್ನು ಹೇಳಿದುದು ಹೇಗೆ ಎಂಬ ಶಂಕೆಗೆ ಉತ್ತರ—ಪೂರ್ವವತ್–'ಧೂಮೋ ಭೂತ್ವಾ' ಎಂದು ಹಿಂದೆ ಹೇಳಿದುದು ಹೇಗೋ ಹಾಗೆ ಎಂದು. ಏಕೆಂದರೆ, ಅಭಿಲಾಪಾತ್— '[1]ಸೋಽವಾಗ್ಗತಃ ಸ್ಥಾವರಾನ್ ಪ್ರವಿಶ್ಯ ಭೋಗೇನ' (ಕೌಷಾರವಶ್ರುತಿ) ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಎಂದು ಅರ್ಥ.

---

1. 'ಸೋಽವಾಗ್ಗತಃ ಸ್ಥಾವರಾನ್ ಪ್ರವಿಶ್ಯ ಆಭೋಗೇನೈವ ವ್ರಜನ್ ಸ್ಥೂಲಂ ಶರೀರಮೇತಿ, ಸ್ಥೂಲಾತ್ ಶರೀರಾತ್ ಭೋಗಾನನುಭುಂಕ್ತೇ' ಎಂದು ಶ್ರುತಿ.

उक्तमाक्षिप्याह—

॥ ॐ अशुद्धमिति चेन्न शब्दात् ॐ ॥ ३.१.२७

कर्मेत्यन्वेति । यज्ञाख्यं कर्माशुद्धं दुःखसाधनं हिंसात्वात् द्विजहिंसावत् । अतो दुःख न शङ्क्य कर्मिण इत्ययुक्तमिति चेन्न । शब्दात् शब्दविहितत्वादित्यर्थः । हिंसात्वस्याप्रयोजकत्वादित्यर्थः ॥ १७ ॥

रेतोऽधिकरणम्—१९

॥ ॐ रेतस्सिग्योगोऽथ ॐ ॥ ३.१.२८

---

**ಸೂತ್ರದ 'ಅನ್ಯಾಧಿಷ್ಠಿತೇ' ಪದದ ಸ್ವಾರಸ್ಯ**

'ವ್ರೀಹ್ಯಾದಿದೇಹದಲ್ಲಿ' ಎಂದು ಹೇಳಬಹುದಾಗಿದ್ದರೂ 'ಅನ್ಯ' ಇತ್ಯಾದಿಯಾಗಿ ಹೇಳಿರುವುದು — ಇನ್ನೊಬ್ಬ ಅಭಿಮಾನಿ ಜೀವನು ಆ ದೇಹದಲ್ಲಿರುವುದರಿಂದ ಸ್ವರ್ಗದಿಂದ ಕೆಳಗೆ ಬಂದ ಜೀವನಿಗೆ ವ್ರೀಹ್ಯಾದಿ ದೇಹದಲ್ಲಿ ಅಭಿಮಾನವಿಲ್ಲದಿದ್ದಲ್ಲಿ ಆ ದೇಹಗಳ ಬೆಳವಣಿಗೆಯೇ ಆಗಲಾರದು ಎಂದು ಶಂಕಿಸಬಾರದು—ಎಂದು ಹೇಳಲು.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

**ಓಂ ಅಶುದ್ಧಮಿತಿ ಚೇನ್ನ ಶಬ್ದಾತ್ ಓಂ ೩.೧.೨೭**

**ಸೂತ್ರಾರ್ಥ**

'ಕರ್ಮ' ಎಂಬ ಪದವು ಇಲ್ಲಿ ಅನ್ವಯವನ್ನು ಪಡೆಯುವುದು. ಯಜ್ಞರೂಪ ಕರ್ಮವು, ಅಶುದ್ಧಂ - ದುಃಖಸಾಧನವಾಗಿದೆ, ಹಿಂಸೆಯಾದುದರಿಂದ, ಬ್ರಾಹ್ಮಣ ಹಿಂಸೆಯಂತೆ. ಆದ್ದರಿಂದ ಯಜ್ಞರೂಪವಾದ ಕರ್ಮವನ್ನಾಚರಿಸುವವನಿಗೆ ದುಃಖವಿಲ್ಲವೆಂದು ಶಂಕಿಸಬಾರದು ಎನ್ನುವುದು ಯುಕ್ತವಲ್ಲ ಎಂದರೆ ಅದು ಸರಿಯಲ್ಲ. ಶಬ್ದಾತ್ - ಶ್ರುತಿವಿಹಿತವಾದುದರಿಂದ ಎಂದು ಅರ್ಥ.

ರೇತೋಽಧಿಕರಣ—೧೯

**ಓಂ ರೇತಸ್ಸಿಗ್ಯೋಗೋಽಥ ಓಂ ೩.೧.೨೮**

अत्र स्वर्गादवरूढस्य पितृप्रवेशः साध्यते । कर्मिण इत्यस्ति । अथेत्यनन्तरं मातृयोग इति शेषः । कर्मिणो रेतस्सिग्योगः पितृप्रवेशः । अथ ततः पश्चात् मातृयोग इत्यर्थः । तथा च 'मातुरेवोदरं व्रजेत्' इति वचनाविरोधः । मातृयोगस्य पश्चादपि सत्त्वात् । एवेत्यस्यायोगव्यावर्तकत्वादित्यर्थः । पितृयोग इति वाच्ये रेतस्सिगित्युक्तिः पितृप्रवेशानुपयोगो न शङ्क्यः । देहपरिणामाय रेतसोऽपेक्षितत्वेन ईशक्लृप्त्या तत्सेकयोगोपयोगादिति सूचनार्था, 'ततो रेतस्सिचमेवानुप्रविशत्यथ मातरं' इति श्रुतिसूचनार्था च ॥ १९ ॥

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಸ್ವರ್ಗದಿಂದಿಳಿದ ಜೀವನಿಗೆ ಪಿತೃಪ್ರವೇಶವನ್ನು ಸಾಧಿಸಲಾಗುವುದು. 'ಕರ್ಮಿಣಃ' ಎಂಬ ಪದವು ಅಧ್ಯಾಹೃತವಾಗುವುದು. 'ಅಥ' ಎಂಬ ಪದದ ನಂತರ 'ಮಾತೃಯೋಗಃ' ಎಂಬ ಶೇಷವನ್ನು ಸೇರಿಸಬೇಕು. ಕರ್ಮಿಗೆ, ರೇತಸ್ಸಿಗ್ಯೋಗಃ - ಪಿತೃವಿನ ಪ್ರವೇಶವಾಗುವುದು, ಅಥ - ಅನಂತರ ಮಾತೃವಿನ ಸಂಬಂಧವಾಗುವುದೆಂದು ಅರ್ಥ. ಆದ್ದರಿಂದ 'ಮಾತುರೇವೋದರಂ ವ್ರಜೇತ್' ಎಂಬ ವಚನವಿರೋಧವಿಲ್ಲ. ಏಕೆಂದರೆ, ಮಾತೃಸಂಬಂಧ ಅನಂತರವೂ ಆಗುವುದು. 'ಮಾತುರೇವ' ಎಂಬಲ್ಲಿ ಏವಕಾರವು ಮಾತೃವಿನ ಸಂಬಂಧವಿಲ್ಲದಿಲ್ಲ ಎಂದು ಮಾತ್ರ ಹೇಳುವುದೆಂದು ಭಾವ.

**'ರೇತಃಸಿಕ್' ಎಂಬ ಪದದ ಸ್ವಾರಸ್ಯ**

'ಪಿತೃಯೋಗ' ಎಂದು ಹೇಳಬಹುದಾಗಿದ್ದರೂ, ಪಿತೃಪ್ರವೇಶವು ಅನುಪಯುಕ್ತವೆಂದು ಶಂಕಿಸಬಾರದು; ಭಗವಂತನ ನಿಯಮದಂತೆ ದೇಹವು ರೂಪವನ್ನು ತಳೆಯಲು ರೇತಸ್ಸಿನ ಅಪೇಕ್ಷೆಯಿರುವುದರಿಂದ ರೇತಸ್ಸೇಚನ ಮಾಡುವ ಪಿತೃವಿನ ಪ್ರವೇಶವು ಉಪಯುಕ್ತವಾಗಿದೆ. ಈ ವಿಷಯವನ್ನೂ ಮತ್ತು 'ತತೋ ರೇತಸ್ಸಿಚಮೇವಾನುಪ್ರವಿಶತಿ, ಅಥ ಮಾತರಂ' (ಕೌಂತರವ್ಯ) ಎಂಬ ಶ್ರುತಿಯನ್ನೂ ಸೂಚಿಸಲು 'ರೇತಸ್ಸಿಕ್' ಎಂದು ಹೇಳಲಾಗಿದೆ.

योन्यधिकरणम्—२०

॥ ॐ योनेः शरीरम् ॐ ॥ ३.१.२९

अत्र कर्मिणः पितृद्वारा योनिप्रवेशेन देहप्राप्तिस्साध्यते। अथेत्यस्ति। तत् प्रकृतादर्थान्तरे वर्तते। कर्मी पितृक्रमेण योनेः प्रवेशानन्तरं शरीरं लभते। अथ क्वचित् मान्धातृद्रोणद्रुपदशुकादौ तपःशक्त्या तेन विनैव शरीरप्राप्तिरित्यर्थः ॥ २० ॥

इति श्रीराघवेन्द्रयतिकृतायां तन्त्रदीपिकायां तृतीयाध्यायस्य प्रथमः पादः ॥ श्रीकृष्णार्पणमस्तु ॥

---

ಯೋನ್ಯಧಿಕರಣ—೨೦

ಓಂ ಯೋನೇಃ ಶರೀರಂ ಓಂ ೩.೧.೨೯

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಪಿತೃದ್ವಾರಾ ಯೋನಿಪ್ರವೇಶವಾದ ಕರ್ಮಿಗೆ ದೇಹಪ್ರಾಪ್ತಿಯಾಗುವುದೆಂದು ಸಾಧಿಸಲಾಗುವುದು. 'ಅಥ' ಎಂಬ ಪದವು ಅನುವೃತ್ತವಾಗುವುದು. ಆ 'ಅಥ' ಶಬ್ದವು ಪ್ರಕೃತ ವಿಷಯವನ್ನು ಬಿಟ್ಟು ವಿಷಯಾಂತರವನ್ನು ಹೇಳುವುದು. ಕರ್ಮಿಯು ಪಿತೃವಿನ ಮೂಲಕ ಯೋನಿಯನ್ನು ಪ್ರವೇಶಿಸಿದ ನಂತರ ಶರೀರವನ್ನು ಪಡೆಯುವನು. ಅಥ– ಕೆಲವು ಕಡೆಯಲ್ಲಿ ಅಂದರೆ ಮಾಂಧಾತೃ, ದ್ರೋಣ, ದ್ರುಪದ, ಶುಕ ಮೊದಲಾದವರಿಗೆ ಅವರ ತಪಸ್ಸಿನ ಸಾಮರ್ಥ್ಯದಿಂದಾಗಿ ಯೋನಿಪ್ರವೇಶವಿಲ್ಲದೇ ಶರೀರ ಲಭಿಸಿದೆ ಎಂದು ಅರ್ಥ.

ಶ್ರೀ ರಾಘವೇಂದ್ರಯತಿಗಳು ರಚಿಸಿದ ತಂತ್ರದೀಪಿಕೆಯಲ್ಲಿ
ತೃತೀಯಾಧ್ಯಾಯದ ಪ್ರಥಮ ಪಾದವು ಸಮಾಪ್ತವಾಯಿತು.
॥ ಶ್ರೀ ಕೃಷ್ಣಾರ್ಪಣಮಸ್ತು ॥

# तृतीयाध्याये द्वितीयः पादः

उक्तवैराग्यापाद्यदार्ढ्यकोपासनाङ्गभक्त्युत्पत्तये भगवन्महिमाऽत्र पादेऽभिधीयते ।

सन्ध्याधिकरणम्—१

॥ ॐ सन्ध्ये सृष्टिराह हि ॐ ॥ ३.२.१

अत्र स्वप्नार्थतद्धियोरीशाधीनत्वमुच्यते । जाग्रत्सुप्तिसन्धौ भवतीति सन्ध्ये स्वप्ने सृष्टिरर्थानामिति योग्यतयाऽन्वयः । निरोधश्चे-

---

# ತೃತೀಯಾಧ್ಯಾಯದ ದ್ವಿತೀಯ ಪಾದ

**ಈ ಪಾದದ ವಿಷಯ**

ಹಿಂದಿನ ಪಾದದಲ್ಲಿ ನಿರೂಪಿಸಿದ ವೈರಾಗ್ಯದಿಂದ ದಾರ್ಢ್ಯವನ್ನು ಪಡೆಯುವ ಮತ್ತು ಉಪಾಸನೆಗೆ ಅಂಗವಾಗಿರುವ ಭಕ್ತಿಯ ಜನನಕ್ಕಾಗಿ ಈ ಪಾದದಲ್ಲಿ ಭಗವನ್ಮಹಿಮೆಯನ್ನು ಹೇಳಲಾಗುವುದು.

**ಸಂಧ್ಯಾಧಿಕರಣ—೧**

## ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ೩.೨.೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಸ್ವಾಪ್ನಪದಾರ್ಥ ಮತ್ತು ಅವುಗಳ ದರ್ಶನ— ಇವೆರಡು ಭಗವಂತನ ಅಧೀನವೆಂದು ಹೇಳಲಾಗುವುದು. ಸಂಧ್ಯವೆಂದರೆ ಜಾಗ್ರತ್ ಮತ್ತು ಸುಷುಪ್ತಿ— ಇವುಗಳ ಸಂಧಿಕಾಲದಲ್ಲಿ ಉಂಟಾಗುವ ಸ್ವಪ್ನ. ಸಂಧ್ಯೇ- ಸ್ವಪ್ನದಲ್ಲಿ, ಸೃಷ್ಟಿಃ - ಪದಾರ್ಥಗಳ ಸೃಷ್ಟಿಯಾಗುವುದು. ಇಲ್ಲಿ ಅನ್ವಯಯೋಗ್ಯವಾದುದರಿಂದ 'ಪದಾರ್ಥಗಳ' ಎಂಬ ಪದವು ಅನ್ವಿತವಾಗಿದೆ. ಸ್ವಪ್ನದಲ್ಲಿ ಪದಾರ್ಥಗಳ ನಿರೋಧವೂ ಆಗುವುದೆಂದು ಉಪಲಕ್ಷಣಯಾ ಗ್ರಹಿಸಬೇಕು. ಸ್ವಾಪ್ನಪದಾರ್ಥಗಳಿಗೆ ಸೃಷ್ಟಿ

त्युपलक्ष्यते। कुतः? हि यस्मादाह शब्द इति विपरिणम्यानुवृत्तिर्वा, श्रुतिरिति शेषो वा। 'अथ रथान् रथयोगान् पथः सृजते' इत्यादि-श्रुतिरित्यर्थः। एवं च सन्ध्ये एवार्थानां सृष्टिनिरोधसत्त्वेन प्रागूर्ध्वम-दृष्टिमात्रेण असत्त्वाभावात् स्वमार्थतद्धियोरीशाधीनत्वमेवेति भावः।

कर्त्रभावात् न तत्सृष्टिर्युक्तेत्यत आह—

ॐ निर्मातारं चैके पुत्रादयश्च ॐ ३.१.२

एक इति पूर्वोत्तरयोरन्वेति। एके शाखिनः सन्ध्येऽर्थानां

---

ನಿರೋಧಗಳಿರುವುದೆನ್ನಲು ಆಧಾರವೇನು ? ಎಂಬ ಶಂಕೆಗೆ ಉತ್ತರ— ಹಿ ಆಹ. 'ಅಶಾದ್ಧಮಿತಿ ಚೇನ್ನ ಶಬ್ದಾತ್' (ಬ್ರ. ಸೂ. ೩.೧.೨೭) ಎಂಬ ಸೂತ್ರದಿಂದ 'ಶಬ್ದಾತ್' ಎಂಬ ಪದದ ವಿಭಕ್ತಿಯನ್ನು ಬದಲಾಯಿಸಿ 'ಶಬ್ದಃ' ಎಂಬುದಾಗಿ ಈ ಸೂತ್ರಕ್ಕೆ ಅನುವೃತ್ತಿ ಮಾಡಬೇಕು. ಅಥವಾ 'ಶ್ರುತಿಃ' ಎಂಬ ಶೇಷವನ್ನು ಸೇರಿಸ ಬೇಕು. 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಇತ್ಯಾದಿ ಶ್ರುತಿಯು ಸ್ವಾಪ್ನಪದಾರ್ಥಗಳ ಸೃಷ್ಟಿಯನ್ನು ಹೇಳುವುದೆಂದು ಅರ್ಥ. ಹೀಗೆ, ಸ್ವಪ್ನದಲ್ಲೇ ಪದಾರ್ಥಗಳ ಸೃಷ್ಟಿ-ನಿರೋಧಗಳಿರುವುದರಿಂದ, ಸ್ವಪ್ನದ ಮುಂಚೆ ಮತ್ತು ಅನಂತರ ಸ್ವಾಪ್ನಪದಾರ್ಥಗಳು ಕಾಣಿಸುವುದಿಲ್ಲವಾದ್ದರಿಂದ ಮಾತ್ರವೇ ಸ್ವಾಪ್ನಪದಾರ್ಥಗಳು ಮಿಥ್ಯೆಯೆಂದಾಗುವುದಿಲ್ಲ. ಆದ್ದರಿಂದ ಸ್ವಾಪ್ನಪದಾರ್ಥಗಳು ಮತ್ತು ಅವುಗಳ ದರ್ಶನ ಭಗವದಧೀನವಾಗಿಯೇ ಇರುವುದೆಂದು ಭಾವ.

ಸ್ವಾಪ್ನವಸ್ತುಗಳನ್ನು ಸೃಜಿಸಬಲ್ಲ ಕರ್ತೃವಿಲ್ಲದಿರುವುದರಿಂದ ಅವುಗಳ ಸೃಷ್ಟಿ ಸಾಧ್ಯವಾಗಲಾರದು ಎಂಬ ಆಶಂಕೆಗೆ ಉತ್ತರ—

## ಓಂ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ಓಂ ೩.೧.೨

**ಸೂತ್ರಾರ್ಥ**

ಸೂತ್ರದಲ್ಲಿರುವ 'ಏಕೇ' ಎಂಬ ಪದವು ಹಿಂದೆ ಮತ್ತು ಮುಂದೆ— ಹೀಗೆ ಎರಡು ಸ್ಥಲದಲ್ಲಿಯೂ ಅನ್ವಯವನ್ನು ಪಡೆಯುವುದು. ಏಕೇ - ಕೆಲವು ವೇದ ಶಾಖಿಗಳು ಸ್ವಪ್ನದಲ್ಲಿ, ನಿರ್ಮಾತಾರಂ ಚ - ಪದಾರ್ಥಗಳನ್ನು ನಿರ್ಮಿಸುವವನಿರುವ

निर्मातारं च 'कामं कामं पुरुषो निर्ममाणः' इत्याहुः। न सृष्टिमात्रं श्रूयत इति चार्थः। पुत्रादयश्च – 'एतस्माद्ध्येव पुत्रो जायते' इत्यादिना सन्ध्ये पुत्रादयश्चेशेन सृज्यन्त इति एके आहुरिति योज्यम्। निर्मातारमिति पुत्रेति च श्रुतिविशेषसूचनार्थम्। अत्राद्यश्रुतौ ईशस्य स्पष्टं सन्ध्यकर्तृत्वाप्रतीतेः पुत्रादयश्चेति श्रुत्यन्तरोक्तिः। जीवस्य सुप्तत्वेऽपि ईशस्य कर्तृत्वं युक्तमिति भावः।

ॐ मायामात्रं तु कार्त्स्न्येनानभिव्यक्तस्वरूपत्वात् ॐ

३.२.३

---

ನೆಂದು 'ಕಾಮಂ ಕಾಮಂ ಪುರುಷೋ ನಿರ್ಮಮಾಣಃ[1] (ಕಠ. ೫.೮) ಎಂಬ ಶ್ರುತಿಯಲ್ಲಿ ಹೇಳುವರು. ಸ್ವಾಪ್ನಪದಾರ್ಥಗಳ ಸೃಷ್ಟಿ ಮಾತ್ರವೇ ಶ್ರುತಿ ಪ್ರತಿಪಾದ್ಯವಲ್ಲವೆಂದು 'ಚ' ಶಬ್ದದ ಅರ್ಥ. ಪುತ್ರಾದಯಶ್ಚ – 'ಏತಸ್ಮಾದ್ಧ್ಯೇವ ಪುತ್ರೋ ಜಾಯತೇ' (ಗೌಪವನ ಶ್ರುತಿ) ಇತ್ಯಾದಿ ಶ್ರುತಿಯಿಂದ ಸ್ವಪ್ನದಲ್ಲಿ ಪುತ್ರರೇ ಮೊದಲಾದವರು ಈಶ್ವರನಿಂದ ಸೃಷ್ಟಿಸಲ್ಪಡುವರೆಂದು ಕೆಲ ವೇದಶಾಖಿಗಳು ಹೇಳುವರು. ಇಲ್ಲಿ 'ಹೇಳುವರು' ಎಂಬ ಪದವನ್ನು ಯೋಜಿಸಲಾಗಿದೆ.

**ಸೂತ್ರದ ಪದಗಳ ಪ್ರಯೋಜನ ಮತ್ತು ಎರಡು ಶ್ರುತಿಗಳನ್ನು ಸೂಚಿಸಿರುವುದರ ಕಾರಣ—**

'ನಿರ್ಮಾತಾರಂ' ಮತ್ತು 'ಪುತ್ರ' ಎಂಬ ಪದಗಳನ್ನು ಶ್ರುತಿವಿಶೇಷಗಳನ್ನು ಸೂಚಿಸುವುದರ ಸಲುವಾಗಿ ಪ್ರಯೋಗಿಸಲಾಗಿದೆ. ಇಲ್ಲಿ, ಮೊದಲನೆಯ ಶ್ರುತಿಯಲ್ಲಿ ಈಶ್ವರನು ಸ್ವಾಪ್ನಪದಾರ್ಥಗಳ ಕರ್ತೃವೆನ್ನುವುದು ಸ್ಪಷ್ಟವಾಗಿ ತೋರುವುದಿಲ್ಲವಾದ್ದರಿಂದ 'ಪುತ್ರಾದಯಶ್ಚ' ಎಂದು ಇನ್ನೊಂದು ಶ್ರುತಿಯನ್ನು ಹೇಳಲಾಗಿದೆ.

ಜೀವನು ನಿದ್ರಿಸುತ್ತಿದ್ದು ಕರ್ತೃವಾಗಲು ಸಾಧ್ಯವಿಲ್ಲದಿದ್ದರೂ, ಈಶ್ವರನಿಗೆ ಸ್ವಾಪ್ನಪದಾರ್ಥಗಳ ಕರ್ತೃತ್ವವು ಯುಕ್ತವೆಂದು ಭಾವ.

**ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತ-ಸ್ವರೂಪತ್ವಾತ್ ಓಂ ೩.೨.೩**

तुरेव। मायेति तन्त्रेण ईशेच्छावासने उच्येते। सन्ध्यमित्यस्ति। सन्ध्यं स्वप्नसम्बन्ध्यर्थजातं मायामात्रं तु मायाभ्यां संस्कारेशेच्छाभ्यां मात्रं तु निर्मितमेव। माङ् माने इत्यतः कर्मणि त्रप्रत्ययः। अनादि-मनोगतसंस्कारान् उपादानीकृत्य ईशः स्वेच्छया निमित्तेन निर्मिमीते। नान्येनेत्यर्थः। कुतो मायामयत्वम्? अत उक्तं -कात्स्न्र्येनेत्यादि। साकल्येनानभिव्यक्तस्वरूपत्वात् मायामात्रमेव, न बाह्योपादानकम्। तथात्वे सम्यगभिव्यक्तिः स्यादित्यर्थः। अनभिव्यक्तेत्याद्युक्त्या

---

**ಸೂತ್ರಾರ್ಥ**

'ತು' ಶಬ್ದವು ಏವ ಎಂಬ ಅರ್ಥವುಳ್ಳದ್ದು. 'ಮಾಯಾ' ಶಬ್ದವು [1]ತಂತ್ರ-ದಿಂದ ಈಶ್ವರೇಚ್ಛೆ ಮತ್ತು ವಾಸನೆ ಎಂಬ ಅರ್ಥಗಳನ್ನು ಹೇಳುವುದು. 'ಸಂಧ್ಯಂ' ಎಂಬ ಪದ ಅಧ್ಯಾಹೃತವಾಗುವುದು. ಸಂಧ್ಯಂ – ಸ್ವಪ್ನಕ್ಕೆ ಸಂಬಂಧಿಸಿದ ಸಮಸ್ತ ಪದಾರ್ಥಗಳು, ಮಾಯಾಮಾತ್ರಂ ತು - ಮಾಯೆಗಳಿಂದ ಅಂದರೆ ಸಂಸ್ಕಾರ ಮತ್ತು ಭಗವದಿಚ್ಛೆ ಇವುಗಳಿಂದ, ಮಾತ್ರಂ ತು – ನಿರ್ಮಿತವಾಗಿಯೇ ಇವೆ. ಮಾಙ್ ಮಾನೇ ಎಂಬ ಧಾತುವಿಗೆ ಕರ್ಮಾರ್ಥದಲ್ಲಿ 'ತ್ರ' ಪ್ರತ್ಯಯವನ್ನು ಸೇರಿಸಿದಾಗ 'ಮಾತ್ರ' ಶಬ್ದವು ನಿಷ್ಪನ್ನವಾಗುವುದು. ಅನಾದಿಯಾದ ಮನಸ್ಸಿನಲ್ಲಿರುವ ಸಂಸ್ಕಾರಗಳನ್ನು ಉಪಾದಾನಕಾರಣವಾಗಿಟ್ಟುಕೊಂಡು ಭಗವಂತನು ತನ್ನ ಇಚ್ಛೆಯೆಂಬ ನಿಮಿತ್ತ ಕಾರಣದಿಂದ ಸ್ವಾಪ್ನಪದಾರ್ಥಗಳನ್ನು ನಿರ್ಮಿಸುವನು. ಬೇರೆ ಕಾರಣಗಳಿಂದ ಸ್ವಾಪ್ನವಸ್ತುಗಳ ಸೃಷ್ಟಿಯಾಗುವುದಿಲ್ಲವೆಂದು ಅರ್ಥ.

ಸ್ವಾಪ್ನವಸ್ತುಗಳು ಸಂಸ್ಕಾರದಿಂದ ನಿರ್ಮಿತವಾಗಿವೆ ಎಂದೇಕೆ ಹೇಳಬೇಕು ಎಂಬ ಆಶಂಕೆಗೆ ಉತ್ತರವಾಗಿ 'ಕಾರ್ತ್ಸ್ನ್ಯೇನ' ಇತ್ಯಾದಿ ಹೇಳಲಾಗಿದೆ. ಸಂಪೂರ್ಣವಾಗಿ ಸ್ವಾಪ್ನವಸ್ತುಗಳ ಸ್ವರೂಪವು ಅಭಿವ್ಯಕ್ತವಾಗುವುದಿಲ್ಲವಾದ್ದರಿಂದ ಅವು ಸಂಸ್ಕಾರದಿಂದಲೇ ನಿರ್ಮಿತವಾದವು ಹೊರತು ಬಾಹ್ಯ ಉಪಾದಾನ ಕಾರಣಗಳಿಂದಲ್ಲ. ಬಾಹ್ಯ ಉಪಾದಾನ ಕಾರಣಗಳಿಂದ ನಿರ್ಮಿತವಾಗಿದ್ದಲ್ಲಿ ಆ ವಸ್ತುಗಳು ಚೆನ್ನಾಗಿ ಅಭಿವ್ಯಕ್ತವಾಗಬೇಕಿದ್ದಿತು ಎಂದು ಅರ್ಥ.

---

1. ಸಕೃದುಕ್ತಸ್ಯ ಅನೇಕೋಪಕಾರಕತ್ವಂ ತಂತ್ರಮ್ - ಒಮ್ಮೆ ಉಚ್ಚರಿಸಲ್ಪಟ್ಟ ಪದವು ವಿಭಿನ್ನ ಅರ್ಥಗಳನ್ನು ನೀಡುವ ಮೂಲಕ ನಾನಾ ರೀತಿಯಿಂದ ಉಪಕಾರಕವಾಗುವ ವಿಧಾನಕ್ಕೆ ತಂತ್ರವೆಂದು ಹೆಸರು.

'मनोगतांस्तु' इत्याद्युक्तिः सूचिता। यद्यपि 'त्रिगुणात्मिकाऽथ-ज्ञानं च विष्णुशक्तिस्तथैव च। मायाशब्देन भण्यन्ते' इति स्मृतेः, 'माया वयुनमभिख्या' इति प्रज्ञानामसु पाठाद्वा मायाशब्दस्य प्रज्ञार्थत्वम्। तथापि तज्जन्या वासनाऽत्र लक्ष्यत इत्यदोषः।

सन्ध्यार्थस्य बाह्यार्थाजन्यत्वे शुक्तिरूप्यवदसत्त्वं स्यादत आह—

॥ ॐ सूचकश्च हि श्रुतेराचक्षते च तद्विदः ॐ ॥ ३.१.४

**'ಅನಭಿವ್ಯಕ್ತ' ಪದದ ಪ್ರಯೋಜನ ಮತ್ತು ಮಾಯಾ ಶಬ್ದಕ್ಕೆ ಸಂಸ್ಕಾರವೆಂಬ ಅರ್ಥದ ಸಮರ್ಥನೆ—**

'ಅನಭಿವ್ಯಕ್ತ' ಎಂಬ ಶಬ್ದದಿಂದ [1]'ಮನೋಗತಾಂಸ್ತು' ಇತ್ಯಾದಿ ವಚನವು ಸೂಚಿತವಾಗಿದೆ. 'ತ್ರಿಗುಣಾತ್ಮಿಕಾಽಥ ಜ್ಞಾನಂ ಚ ವಿಷ್ಣುಶಕ್ತಿಸ್ತಥೈವ ಚ। ಮಾಯಾಶಬ್ದೇನ ಭಣ್ಯಂತೇ' ಎಂಬ ಸ್ಮೃತಿಯಿಂದ ಅಥವಾ 'ಮಾಯಾ ವಯುನ-ಮಭಿಖ್ಯಾ' ಎಂಬುದಾಗಿ ಪ್ರಜ್ಞೆಯ ನಾಮಗಳ ಮಧ್ಯೆ ಪಠಿತವಾಗಿರುವುದರಿಂದ ಮಾಯಾ ಶಬ್ದಕ್ಕೆ ಪ್ರಜ್ಞೆ ಎಂದೇ ಅರ್ಥವಿದೆ. ಆದರೂ, ಪ್ರಜ್ಞೆಯಿಂದ ಜನಿಸುವ ಸಂಸ್ಕಾರವನ್ನು ಇಲ್ಲಿ ಮಾಯಾಶಬ್ದವು ಲಕ್ಷಣಾವೃತ್ತಿಯಿಂದ ಹೇಳುವುದರಿಂದ ಯಾವ ದೋಷವೂ ಇಲ್ಲ.

ಸ್ವಾಪ್ನವಸ್ತುಗಳು ಬಾಹ್ಯವಸ್ತುಗಳಿಂದ ಜನಿಸಿದವುಗಳಲ್ಲದಿದ್ದಲ್ಲಿ ಶುಕ್ತಿರಜತದಂತೆ ಮಿಥ್ಯೆಯಾಗಬೇಕಾದೀತು ಎಂಬ ಆಶಂಕೆಗೆ ಉತ್ತರ—

**ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ಓಂ**
**೩.೩.೪**

1. ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ।
ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತಿ ಗೀಯತೇ॥
ಯದನ್ಯಥಾತ್ವಂ ಜಾಗ್ರತ್ತ್ವಂ ಸಾ ಭ್ರಾಂತಿಸ್ತತ್ರ ತತ್ಕೃತಾ।
ಅನಭಿವ್ಯಕ್ತರೂಪತ್ವಾತ್ ನಾನ್ಯಸಾಧನಜಂ ಭವೇತ್॥ (ಬ್ರಹ್ಮಾಂಡ ಪುರಾಣ)

आद्यश्चो हेतौ । सन्ध्योऽर्थः शुभाशुभसूचको यतोऽतो नासन्निति योज्यम् । कुतः ? श्रुतेः । 'यदा कर्मसु काम्येषु' इति, 'कृष्णं कृष्णदन्तं पश्यति' इत्यादिश्रुतेः प्रत्यक्षतः फलदर्शनाच्चेति हेरर्थः । तद्विदः सन्ध्यार्थविदो व्यासादयः 'यद्वाऽपि ब्राह्मणो ब्रूयात्' इत्याद्याचक्षते चेत्यर्थः ॥ १ ॥

### पराभिध्यानाधिकरणम्—२

## ॐ पराभिध्यानात्तु तिरोहितं ततो ह्यस्य बन्धविपर्ययौ ॐ ३.२.५

---

**ಸೂತ್ರಾರ್ಥ**

ಸೂತ್ರದ ಮೊದಲನೆ 'ಚ' ಶಬ್ದವು ಹೇತ್ವರ್ಥಕವಾಗಿದೆ. ಸ್ವಾಪ್ನಪದಾರ್ಥಗಳು ಶುಭಾಶುಭ ಸೂಚಕಗಳಾಗಿರುವುದರಿಂದ ಅಸತ್ ಅಲ್ಲ. ಇಲ್ಲಿ 'ಅಸತ್ ಅಲ್ಲ' ಎಂಬ ಪದಗಳನ್ನು ಯೋಜಿಸಿಕೊಳ್ಳಬೇಕು. ಅಸತ್ತಲ್ಲವೇಕೆ ಎಂಬ ಪ್ರಶ್ನೆಗೆ ಉತ್ತರ- ಶ್ರುತೇಃ — '[1]ಯದಾ ಕರ್ಮಸು ಕಾಮ್ಯೇಷು' ಎಂಬುದಾಗಿ ಮತ್ತು '[2]ಕೃಷ್ಣಂ ಕೃಷ್ಣದಂತಂ ಪಶ್ಯತಿ' ಇತ್ಯಾದಿ ಶ್ರುತಿಗಳಿರುವುದರಿಂದ. 'ಪ್ರತ್ಯಕ್ಷದಿಂದ ಸ್ವಪ್ನಫಲವು ಕಂಡುಬರುವುದರಿಂದಲೂ' ಎಂದು 'ಹಿ' ಶಬ್ದದ ಅರ್ಥ. ತದ್ವಿದಃ - ಸ್ವಾಪ್ನ ಪದಾರ್ಥಗಳ ಸ್ವರೂಪವನ್ನು ತಿಳಿದ ವ್ಯಾಸರೇ ಮೊದಲಾದವರು 'ಯದ್ವಾಽಪಿ ಬ್ರಾಹ್ಮಣೋ ಬ್ರೂಯಾತ್' ಎಂದು ಮೊದಲಾಗಿ ಹೇಳಿರುವರೆಂದು ಅರ್ಥ.

### ಪರಾಭಿಧ್ಯಾನಾಧಿಕರಣ—೨

## ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ ೩.೨.೫

---

1. ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿಪಶ್ಯತಿ ।
ಸಮೃದ್ಧಿಂ ತತ್ರ ಜಾನೀಯಾತ್ ತಸ್ಮಿನ್ ಸ್ವಪ್ನನಿದರ್ಶನೇ ॥ (ಛಾಂ. ೫.೨.೯)

ಕಾಮ್ಯ ಕರ್ಮಗಳನ್ನು ಮಾಡುತ್ತಿರುವ ಸಂದರ್ಭಗಳಲ್ಲಿ ಸ್ವಪ್ನದಲ್ಲಿ ಸ್ತ್ರೀಯನ್ನು ನೋಡಿದಲ್ಲಿ ತನಗೆ ಶ್ರೇಯೋಲಾಭವಾಗುವುದೆಂದು ತಿಳಿಯಬೇಕು ಎಂದು ಶ್ರುತಿಯ ಭಾವ.

2. 'ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ' (ಐ. ಆ. ೩.೨.೪.)

ಸ್ವಪ್ನದಲ್ಲಿ ಕಪ್ಪು ಬಣ್ಣದ, ಕಪ್ಪು ಹಲ್ಲಿನ ಪುರುಷನನ್ನು ನೋಡಿದರೆ ಅದು ತನಗೆ ಮರಣ ಸೂಚಕವೆಂದು ಭಾವಿಸಬೇಕೆಂದು ಭಾವ.

अत्र सन्ध्यतिरोधायकत्वम् ईशस्योच्यते ।तुरेव । सन्ध्यमित्यस्ति । पराभिध्यानात्तु ईशेच्छात एव, सन्ध्यं तिरोहितं तिरोधीयते । न ज्ञानेन । हि यस्मादस्य जीवस्य बन्धमोक्षौ तत ईशादित्यर्थः । यथा बन्धमोक्षयोः अज्ञानज्ञाननिमित्तत्वप्रसिद्धावपि न बन्धमोक्षावज्ञान-ज्ञानाधीनौ, तयोर्जडत्वेनास्वातन्त्र्यात्, किन्तु ईशायत्तौ, तथा सन्ध्या-विर्भावतिरोभावयोः अज्ञानज्ञाननिमित्तत्वप्रतीतावपि ईशाधीनतैवेति भावः । हिशब्दो बन्धादेरज्ञानाद्यनधीनत्वप्रसिद्ध्यर्थः । हेत्वर्थो वा । बन्धमोक्षावित्युक्त्या 'स्वप्नादिबुद्धिकर्ता च' इत्यादिस्मृतिः सूचिता ॥ २ ॥

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನಿಗೆ ಸ್ವಪ್ನವನ್ನು ಮರೆಮಾಡುವ ಮಹಿಮೆಯನ್ನು ಹೇಳಲಾಗುವುದು.

'ತು' ಶಬ್ದಕ್ಕೆ ಏವ ಎಂದು ಅರ್ಥ. 'ಸಂಧ್ಯಂ' ಎಂಬ ಪದವು ಅನುವೃತ್ತ ವಾಗುವುದು. ಪರಾಭಿಧ್ಯಾನಾತ್ ತು - ಭಗವಂತನ ಇಚ್ಛೆಯಿಂದಲೇ, ಸಂಧ್ಯಂ – ಸ್ವಪ್ನವು, ತಿರೋಹಿತಂ - ಮರೆಯಾಗುವುದು, ಜ್ಞಾನದಿಂದಲ್ಲ. ಹಿ - ಏಕೆಂದರೆ, ಅಸ್ಯ - ಈ ಜೀವನಿಗೆ, ಬಂಧ-ಮೋಕ್ಷಗಳು, ತತಃ - ಈಶನಿಂದ ಉಂಟಾಗುವುದ ರಿಂದ ಎಂದು ಅರ್ಥ. ಹೇಗೆ ಬಂಧ-ಮೋಕ್ಷಗಳು ಅಜ್ಞಾನ-ಜ್ಞಾನಗಳಿಂದ ಉಂಟಾಗುವವೆಂದು ಪ್ರಸಿದ್ಧಿಯಿದ್ದರೂ, ಅವುಗಳು ಜಡವಾಗಿದ್ದು ಅಸ್ವತಂತ್ರ ಗಳಾಗಿರುವುದರಿಂದ, ಅಂತಹ ಅಜ್ಞಾನ-ಜ್ಞಾನಗಳಿಗೆ ಬಂಧ ಮೋಕ್ಷಗಳು ಅಧೀನ ವಲ್ಲವೋ ಅದರ ಬದಲು ಭಗವಂತನಿಗೆ ಅಧೀನವಾಗಿವೆಯೋ ಹಾಗೆ, ಸ್ವಪ್ನದ ಆವಿರ್ಭಾವ ಮತ್ತು ತಿರೋಭಾವಗಳು ಅಜ್ಞಾನ-ಜ್ಞಾನಗಳಿಂದ ಉಂಟಾಗುವವು ಎಂದು ತೋರಿದರೂ ವಾಸ್ತವಿಕವಾಗಿ ಅವು ಭಗವಂತನಿಗೇ ಅಧೀನವಾಗಿವೆ ಎಂದು ಭಾವ.

**'ಹಿ' ಶಬ್ದದ ಅರ್ಥ ಮತ್ತು ಸೂತ್ರದಲ್ಲಿ ಬಂಧ-ಮೋಕ್ಷ ಶಬ್ದಗಳ ಪ್ರಯೋಜನ-**

'ಹಿ' ಶಬ್ದವು 'ಬಂಧ ಮೊದಲಾದವುಗಳು ಅಜ್ಞಾನಾದಿಗಳಿಗೆ ಅಧೀನವಲ್ಲ ವೆಂಬುದು ಪ್ರಸಿದ್ಧವಾಗಿದೆ ಎಂಬ ಅರ್ಥವುಳ್ಳದ್ದು. ಅಥವಾ ಹೇತುವನ್ನು

देहयोगाधिकरणम्—३

॥ ॐ देहयोगाद्वासोऽपि ॐ ॥ ३.२.६

अत्र जाग्रदवस्थाप्रवर्तकत्वम् ईशस्योच्यते। अपिः 'पराभिध्यानात्तु' इत्यनुकर्षकः। सुप्तिसमुच्चायक इत्येके। अस्येत्यस्ति। तृतीयार्थे पञ्चमी। देहयोगेन देहाभिमानेन वासोऽपि स्थितिरपि जाग्रदवस्थाऽपीत्यर्थः पराभिध्यानादेव न कालादित इत्यर्थः। जाग्रदपीति वाच्ये देहेत्याद्युक्तिः तत्स्वरूपव्यक्त्यर्था। साऽप्यवस्थान्तरे

---

ಹೇಳುವುದು. ಸೂತ್ರದಲ್ಲಿರುವ 'ಬಂಧವಿಪರ್ಯಯೌ' ಎಂಬ ಪದದಿಂದ 'ಸ್ವಪ್ನಾದಿಬುದ್ಧಿಕರ್ತಾ ಚ' ಎಂಬ ಸ್ಮೃತಿಯು[1] ಸೂಚಿತವಾಗುವುದು.

ದೇಹಯೋಗಾಧಿಕರಣ—೩

ಓಂ ದೇಹಯೋಗಾದ್ವಾಸೋऽಪಿ ಓಂ ೩.೨.೬

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನು ಜಾಗ್ರದವಸ್ಥಾಪ್ರೇರಕನೆಂದು ಹೇಳಲಾಗುವುದು.

'ಅಪಿ' ಶಬ್ದವು 'ಪರಾಭಿಧ್ಯಾನಾತ್ ತು' ಎಂಬ ಪದಗಳ ಅನುವೃತ್ತಿಯನ್ನು ಸೂಚಿಸುವುದು. ಸುಪ್ತಿಯ ಸಮುಚ್ಚಯವನ್ನು ಈ ಪದವು ಹೇಳುವುದೆಂದು ಕೆಲವರು ಹೇಳುವರು. 'ಅಸ್ಯ' ಎಂಬ ಪದವೂ ಅನುವೃತ್ತವಾಗುವುದು. 'ದೇಹಯೋಗಾತ್' ಎಂಬ ಪದದ ಪಂಚಮೀ ವಿಭಕ್ತಿಯು ತೃತೀಯಾ[2] ವಿಭಕ್ತಿಯ ಅರ್ಥವನ್ನು ಹೇಳುವುದು. ದೇಹಯೋಗೇನ - ದೇಹಾಭಿಮಾನದಿಂದ ಜ್ಞಾಪಿತವಾಗುವ, ವಾಸೋऽಪಿ - ಸ್ಥಿತಿಯೂ ಎಂದರೆ ಜಾಗ್ರದವಸ್ಥೆಯೂ, ಪರಾಭಿಧ್ಯಾನಾತ್ ತು – ಭಗವಂತನ ಇಚ್ಛೆಯಿಂದಲೇ ಉಂಟಾಗುವುದಲ್ಲದೆ ಕಾಲ ಮೊದಲಾದ ನಿಮಿತ್ತಗಳಿಂದಲ್ಲ.

---

1. ಸ್ವಪ್ನಾದಿಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ ।
ತದಿಚ್ಛಯಾ ಯತೋ ಹ್ಯಸ್ಯ ಬಂಧಮೋಕ್ಷೌ ಪ್ರತಿಷ್ಠಿತೌ ॥
(ಕೂರ್ಮ ಪುರಾಣ)

2. ಇತ್ಥಂಭೂತಲಕ್ಷಣವೆಂಬ ತೃತೀಯಾ ವಿಭಕ್ತ್ಯರ್ಥವನ್ನು ಹೇಳುವುದೆಂದು ಅಭಿಪ್ರಾಯ. 'ದೇಹಾಭಿಮಾನದಿಂದ ಜ್ಞಾಪಿತವಾಗುವ ಜಾಗ್ರದವಸ್ಥಾತ್ವ ವಿಶಿಷ್ಟವಾದ ಸ್ಥಿತಿ' ಎಂದು ಒಟ್ಟು ಅರ್ಥ.

जीवस्य देहानभिमानेन तस्यान्यायत्तत्वेऽपि जागरणे मम देह इति स्वातन्त्र्याभिमानेन न तदधीनत्वं जाग्रत्त्वस्येति न शङ्क्यम् । 'स एव जागरिते स्थापयति' इत्यादिश्रुतिविरोधादिति द्योतयितुमित्येके । गजाश्वादिदर्शनस्य स्नानादिभोगस्य च स्वप्नजागरणयोः साम्यात् तयोः को भेद इति न शङ्क्यं, जाग्रति देहाभिमानभावात्,अन्यदा तदभावाद्भेद इति द्योतयितुमित्यन्ये ॥ ३ ॥

---

**'ದೇಹಯೋಗಾತ್' ಎಂಬ ಪದಪ್ರಯೋಗದ ಪ್ರಯೋಜನ**

'ಜಾಗ್ರದಪಿ' ಎಂದು ಹೇಳಬೇಕಿದ್ದರೂ 'ದೇಹ' ಇತ್ಯಾದಿಯಾಗಿ ಹೇಳಿರುವುದು ಜಾಗ್ರದವಸ್ಥೆಯ ಸ್ವರೂಪವನ್ನು ಸ್ಪಷ್ಟಪಡಿಸಲು. ಇತರ ಅವಸ್ಥೆಗಳಲ್ಲಿ ಜೀವನಿಗೆ ದೇಹಾಭಿಮಾನವಿಲ್ಲದಿರುವುದರಿಂದ ಆ ಅವಸ್ಥೆಗಳು ಇನ್ನೊಬ್ಬರಿಗೆ ಅಧೀನವಾಗಿದ್ದಿರಬಹುದು. ಆದರೆ ಜಾಗ್ರದವಸ್ಥೆಯಲ್ಲಿ 'ನನ್ನ ದೇಹ' ಎಂದು ಜೀವನಿಗೆ ಸ್ವಾತಂತ್ರ್ಯಾಭಿಮಾನವಿರುವುದರಿಂದ ಜಾಗ್ರದವಸ್ಥೆಯು ಭಗವದಧೀನವಲ್ಲ—ಎಂದು ಶಂಕಿಸತಕ್ಕದ್ದಲ್ಲ. ಹಾಗೆ ಒಪ್ಪಿದಲ್ಲಿ 'ಸ ಏವ ಜಾಗರಿತೇ ಸ್ಥಾಪಯತಿ' ಇತ್ಯಾದಿ ಶ್ರುತಿವಿರೋಧ[1] ಬರುವುದು ಎಂದು ಸೂಚಿಸಲು ಜಾಗ್ರದವಸ್ಥೆಯ ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ ಎಂದು ಕೆಲವರು ಹೇಳುವರು.

ಗಜ, ಅಶ್ವ ಮೊದಲಾದವುಗಳ ನೋಟ, ಹೂವಿನ ಮಾಲೆ ಮೊದಲಾದವುಗಳ ಭೋಗ ಸ್ವಪ್ನಾವಸ್ಥೆಯಲ್ಲೂ ಇದೆ, ಜಾಗ್ರದವಸ್ಥೆಯಲ್ಲೂ ಇದೆ. ಆದ್ದರಿಂದ ಈ ಎರಡು ಅವಸ್ಥೆಗಳಿಗೆ ಭೇದವಿಲ್ಲ— ಎಂದು ಶಂಕಿಸತಕ್ಕದ್ದಲ್ಲ. ಜಾಗ್ರದವಸ್ಥೆಯಲ್ಲಿ ದೇಹದಲ್ಲಿ ಅಭಿಮಾನವಿರುತ್ತದೆ, ಸ್ವಪ್ನಾವಸ್ಥೆಯಲ್ಲಿ ದೇಹಾಭಿಮಾನವಿರುವುದಿಲ್ಲ. ಆದ್ದರಿಂದ ಈ ಅವಸ್ಥೆಗಳಿಗೆ ಭೇದವಿದೆ ಎಂದು ಸೂಚಿಸಲು ಜಾಗ್ರದವಸ್ಥೆಯ ಸ್ವರೂಪವನ್ನು ಸೂತ್ರದಲ್ಲಿ ಸ್ಪಷ್ಟಪಡಿಸಿರುವರು ಎಂದು ಇತರ ಕೆಲವರು ಹೇಳುವರು.

---

1. ದೇಹಾಭಿಮಾನವಿರುವ ಸ್ಥಿತಿಯೇ ಜಾಗ್ರದವಸ್ಥೆ ಎಂದು ಸೂಚಿಸಿ ಅಂತಹ ಅವಸ್ಥೆಯೂ ಭಗವದಧೀನವೆಂದು ಹೇಳುವ ಸೂತ್ರಕಾರರು ಭಗವದಧೀನತ್ವವನ್ನು ಒಪ್ಪದಿದ್ದಲ್ಲಿ 'ಸ ಏವ ಜಾಗರಿತೇ' ಇತ್ಯಾದಿ ಶ್ರುತಿವಿರೋಧವನ್ನು ಸೂಚಿಸುತ್ತಿದ್ದಾರೆಂದು ಭಾವ.

## तदभावाधिकरणम्—४

### ॥ ॐ तदभावो नाडीषु तच्छ्रुतेरात्मनि हि ॐ ॥ ३.२.७

अत्रेशस्य सुप्तप्राप्यत्वमहिमोच्यते । अस्येत्यस्ति । जीवस्य तदभावः प्रस्तुतजाग्रत्स्वप्नाभावः, सुप्तिरिति यावत् , नाडीष्वात्मनि नाडीस्थपरमात्मनि । कुतः ? तच्छ्रुतेः । तस्य नाडीस्थत्वस्य आत्मस्थत्वस्य च 'आसु तदा नाडीषु सुप्तो भवति', 'सता सौम्य

---

## ತದಭಾವಾಧಿಕಣ--೪

### ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ ೩.೨.೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನು ಸುಪ್ತಜೀವರಿಂದ ಪ್ರಾಪ್ಯನೆಂಬ ಮಹಿಮೆಯನ್ನು ಹೇಳಲಾಗುವುದು.

'ಅಸ್ಯ' ಎಂಬ ಪದವು ಅನುವೃತ್ತವಾಗುವುದು. ಅಸ್ಯ - ಜೀವನಿಗೆ, ತದಭಾವಃ - ಪ್ರಸ್ತುತವಾದ ಜಾಗ್ರತ್–ಸ್ವಪ್ನಗಳ ಅಭಾವವು ಎಂದರೆ ಸುಪ್ತಿಯು, ನಾಡೀಷು ಆತ್ಮನಿ - ನಾಡಿಯಲ್ಲಿರುವ ಪರಮಾತ್ಮನಲ್ಲಾಗುವುದು. ಏಕೆಂದರೆ, ತಚ್ಛ್ರುತೇಃ-- ತಸ್ಯ - ಜೀವನು ನಾಡಿಯಲ್ಲಿರುವುದರ ಮತ್ತು ಪರಮಾತ್ಮನಲ್ಲಿರುವುದರ, ಶ್ರುತೇಃ— 'ಆಸು ತದಾ ನಾಡೀಷು ಸುಪ್ತೋ ಭವತಿ'[1] (ಛಾಂ. ೮.೬.೩), 'ಸತಾ ಸೋಮ್ಯ ತದಾ ಸಂಪನ್ನೋ ಭವತಿ'[2] (ಛಾ. ೬.೮.೧) ಎಂಬ ಶ್ರುತಿಗಳಲ್ಲಿ ಶ್ರವಣವಿರುವುದರಿಂದ ಎಂದು ಅರ್ಥ.

---

1. 'ತದ್ಯತ್ರೈತತ್ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತಿ' ಎಂಬ ಹಿಂದಿನ ವಾಕ್ಯದಲ್ಲಿ ಸುಷುಪ್ತಿಕಾಲದಲ್ಲಿ ಜೀವನು ಇಂದ್ರಿಯವ್ಯಾಪಾರವಿಲ್ಲದವನಾಗಿ ಸ್ವರೂಪಸುಖವನ್ನು ಅನುಭವಿಸುತ್ತ ಸ್ವಪ್ನವನ್ನು ನೋಡುವುದಿಲ್ಲವೆಂದು ಹೇಳಿ 'ಆಸು ತದಾ' ಇತ್ಯಾದಿ ಮುಂದಿನ ವಾಕ್ಯದಲ್ಲಿ ಜೀವನು ಸುಷುಪ್ತಿಕಾಲದಲ್ಲಿ ಸುಷುಮ್ನಾನಾಡಿಯಲ್ಲಿರುವನೆಂದು ಹೇಳಿದೆ.

2. ಸುಷುಪ್ತಿಕಾಲದಲ್ಲಿ ಜೀವನು ಸಚ್ಛಬ್ದವಾಚ್ಯನಾದ ಭಗವಂತನನ್ನು ಹೊಂದುವನೆಂದು ಶ್ರುತ್ಯರ್ಥ.

तदा सम्पन्नो भवति' इति श्रवणादित्यर्थः । श्रुतिद्वयनिर्वाहस्पष्टीकरणाय नाडीस्थ इत्यनुक्त्वा विभज्योक्तिरिति केचित् । सुप्तिरिति वाच्ये तदभाव इत्युक्तिः सुप्तिस्वरूपप्रदर्शनाय । तेन बाह्यान्तरिन्द्रियाणाम् उपरतिरेव, न ज्ञानमात्रस्येति स्वरूपज्ञप्त्या स्वरूपसुखभोगस्तदा युक्त इति बोध्यम् । नाडीष्विति बहुवचनं श्रुत्यनुसारात् । श्रुतौ च प्रतिदेहं तद्बाहुल्यादिति ज्ञेयम् । हेति 'तन्नाडीसंस्थितं विष्णुं मध्ये जीवः प्रपद्यते' इत्यादिप्रसिद्धिद्योतकमिति भाति ॥ ४ ॥

---

**ಸೂತ್ರದ ಪದಗಳ ಸ್ವಾರಸ್ಯ**

'ಆಸು ತದಾ ನಾಡೀಷು ಸುಪ್ತೋ ಭವತಿ' ಎಂಬ ಶ್ರುತಿ ಮತ್ತು 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಎಂಬ ಶ್ರುತಿ— ಇವೆರಡರ ನಿರ್ವಾಹವನ್ನು ಸ್ಪಷ್ಟಪಡಿಸಲು [1] 'ನಾಡೀಸ್ಥಃ' ಎಂದು ಒಂದು ಪದವನ್ನು ಉಪಯೋಗಿಸದೆ 'ನಾಡೀಷು' ಎಂದು ವಿಭಾಗ ಮಾಡಲಾಗಿದೆ ಎಂದು ಕೆಲವರು ಹೇಳುವರು.

'ಸುಪ್ತಿಃ' ಎಂಬ ಪದದ ಬದಲು ತದಭಾವಃ—ಜಾಗ್ರತ್-ಸ್ವಪ್ನಗಳ ಅಭಾವವು ಎಂದು ಹೇಳಿರುವುದು ಸುಷುಪ್ತಿಯ ಸ್ವರೂಪವನ್ನು ತಿಳಿಸಲು. ಹೀಗೆ ಸುಪ್ತಿಯ ಸ್ವರೂಪವನ್ನು ತಿಳಿಸಿದ್ದರಿಂದ, ಸುಪ್ತಿಕಾಲದಲ್ಲಿ ಬಾಹ್ಯ ಮತ್ತು ಅಂತರಿಂದ್ರಿಯಗಳು ವಿರಮಿಸಿರುತ್ತವೆ ಹೊರತು ಯಾವುದೇ ಜ್ಞಾನವಿರುವುದಿಲ್ಲವೆಂದು ಹೇಳಲಾಗದು. ಆದ್ದರಿಂದ ಆ ಕಾಲದಲ್ಲಿ ಆತ್ಮಸ್ವರೂಪವೇ ಆಗಿರುವ ಜ್ಞಾನದಿಂದ ಸುಖದ ಅನುಭವವಾಗುವುದು ಯುಕ್ತವಾಗಿದೆಯೆಂದು ತಿಳಿಯಬೇಕು. ಸುಷುಮ್ನಾನಾಡಿಯೊಂದನ್ನೇ ಜೀವನು ಸುಷುಪ್ತಿಕಾಲದಲ್ಲಿ ಹೊಂದುವುದಾದರೂ 'ಆಸು ತದಾ ನಾಡೀಷು' ಎಂಬ ಶ್ರುತಿಯನ್ನನುಸರಿಸಿ ಸೂತ್ರದಲ್ಲಿ 'ನಾಡೀಷು' ಎಂದು ಬಹುವಚನವನ್ನು ಪ್ರಯೋ-

---

1. 'ನಾಡೀಸ್ಥಃ' ಎಂಬ ಸಮಾಸಪದವನ್ನು ಪ್ರಯೋಗಿಸಿದ್ದಲ್ಲಿ ನಾಡಿಯಲ್ಲಿರುವ ಪರಮಾತ್ಮನನ್ನು ಜೀವನು ಸುಪ್ತಿಕಾಲದಲ್ಲಿ ಆಶ್ರಯಿಸುವನು ಎಂದರ್ಥವಾಗುವುದು. ಆ ಕಾಲದಲ್ಲಿ ಜೀವನು ನಾಡಿಯಲ್ಲಿರುವನು ಎಂದು ಹೇಳುವ ಶ್ರುತಿಯ ಮತ್ತು ಪರಮಾತ್ಮನನ್ನು ಹೊಂದುವನೆಂದು ಹೇಳುವ ಶ್ರುತಿಯ ತೋರಿಕೆಯ ವಿರೋಧದ ಪರಿಹಾರವಾಗಲಾರದು. 'ನಾಡಿಗಳಲ್ಲಿ ಜೀವನಿರುವನು, ಪರಮಾತ್ಮನನ್ನೂ ಆಶ್ರಯಿಸಿರುವನು' ಎಂಬ ಅರ್ಥ ಬರುವಂತೆ 'ನಾಡೀಷು ತಚ್ಛ್ರುತೇಃ' ಎಂದು ವ್ಯಸ್ತಪದಗಳನ್ನು ಪ್ರಯೋಗಿಸಿದಾಗ 'ನಾಡಿಯಲ್ಲಿರುವ ಪರಮಾತ್ಮನಲ್ಲಿ ಜೀವನು ಆಶ್ರಿತನಾಗಿರುವನು' ಎಂಬ ಶ್ರುತಿದ್ವಯನಿರ್ವಾಹವು ಸ್ಪಷ್ಟವಾಗುವುದೆಂದು ಭಾವ.

प्रबोधाधिकरणम् —५

॥ ॐ अतः प्रबोधोऽस्मात् ॐ ॥ ३.२.८

अत्रेशस्य सुप्तप्रबोधकत्वमुच्यते । अस्येत्यास्ति । जीवस्य सुप्ति-प्रबोधः अस्मात् प्रकृतात् परमात्मनो भवति । कुतः ? अतः जीवस्था-त्मन्येव सुप्तत्वादित्यर्थः । ईशेन स्वान्तर्निवेशितस्य तत्प्रेरणां विना उद्बोद्धुमशक्यत्वादिति भावः। प्रबोध इत्युक्त्या 'एष एव सुप्तं प्रबोधयति' इत्यादिश्रुतिः सूच्यते । भेरीताडनादेः प्रबोधकत्वदृष्टिः निमित्तत्व-मात्रविषयेति भावः ॥ ५ ॥

---

ಗಿಸಲಾಗಿದೆ. ಶ್ರುತಿಯಲ್ಲಿ ಬಹುವಚನ ಪ್ರಯೋಗಕ್ಕೆ ದೇಹ ಬೇರೆಯಾದಂತೆ ನಾಡಿಗಳೂ ಭಿನ್ನವಾಗಿದ್ದು ಒಟ್ಟಿನಲ್ಲಿ ಅನೇಕ ಸುಷುಮ್ನಾನಾಡಿಗಳಿರುವುದು ಕಾರಣ ಎಂದು ತಿಳಿಯಬೇಕು. 'ಹ' ಎಂಬ ಸೂತ್ರದ ಪದವು 'ತನ್ನಾಡೀಸಂಸ್ಥಿತಂ ವಿಷ್ಣುಂ ಮಧ್ಯೇ ಜೀವಃ ಪ್ರಪದ್ಯತೇ' ಇತ್ಯಾದಿಯಾಗಿ ಜೀವನು ಸುಪ್ತಿಕಾಲದಲ್ಲಿ ನಾಡೀಸ್ಥ ವಿಷ್ಣುವನ್ನು ಆಶ್ರಯಿಸಿರುವನೆಂಬ ವಿಷಯದಲ್ಲಿರುವ ಪ್ರಸಿದ್ಧಿಯನ್ನು ಸೂಚಿಸುವುದೆಂದು ಭಾಸವಾಗುವುದು.

ಪ್ರಬೋಧಾಧಿಕರಣ--೫

ಓಂ ಅತಃ ಪ್ರಬೋಧೋಽಸ್ಮಾತ್ ಓಂ ೩.೨.೮

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಸುಪ್ತರನ್ನು ಎಚ್ಚರಿಸುವವನೂ ಭಗವಂತನೇ ಎಂದು ಹೇಳಲಾಗುವುದು.

'ಅಸ್ಯ' ಎಂಬ ಪದವು ಅನುವೃತ್ತವಾಗುವುದು. ಅಸ್ಯ - ಜೀವನಿಗೆ, ಪ್ರಬೋಧಃ -ಸುಪ್ತಿಯಿಂದ ಎಚ್ಚರವು ಪ್ರಕೃತನಾದ ಪರಮಾತ್ಮನಿಂದಲೇ ಉಂಟಾಗುವುದು. ಏಕೆಂದರೆ, ಅತಃ - ಜೀವನು ಪರಮಾತ್ಮನಲ್ಲೇ ಸುಪ್ತನಾಗುವುದರಿಂದ ಎಂದು ಅರ್ಥ. ಸುಪ್ತಿಕಾಲದಲ್ಲಿ ಭಗವಂತನಿಂದ ತನ್ನೊಳಗೆ ಇರಿಸಲ್ಪಟ್ಟ ಜೀವನು ಭಗವಂತನ ಪ್ರೇರಣೆಯಿಲ್ಲದೆ ಎಚ್ಚರಗೊಳ್ಳಲು ಸಾಧ್ಯವಿಲ್ಲವೆಂದು ಭಾವ.

कर्मानुस्मृत्याधिकरणम्—६

॥ ॐ स एव च कर्मानुस्मृतिशब्दविधिभ्यः ॐ ॥ ३.१.९

अत्रेशस्य सर्वजनीनसर्वावस्थाप्रवर्तकत्वमुच्यते । स एव प्रस्तुतात्मेव सर्वावस्थाप्रवर्तक इति शेषः । चः पक्षान्तरव्यावर्तकः । न देशकालान्तरेऽन्य इति एवेत्यतोऽर्थाल्लब्धस्यापि वाचनिकत्वाय चशब्दः

**'ಪ್ರಬೋಧ' ಶಬ್ದಪ್ರಯೋಗದ ಪ್ರಯೋಜನ**

'ಪ್ರಬೋಧ' ಎಂಬ ಪದಪ್ರಯೋಗದಿಂದ 'ಏಷ ಏವ ಸುಪ್ತಂ ಪ್ರಬೋಧಯತಿ' (ಕೌಂಡಿನ್ಯ ಶ್ರುತಿ) ಎಂಬ ಶ್ರುತಿಯು ಸೂಚಿತವಾಗುವುದು. ಭೇರೀತಾಡನ ಮೊದಲಾದುವುಗಳಿಂದ ಎಚ್ಚರವಾಗುವುದು ಕಂಡಿದ್ದರೂ ಆ ತಿಳುವಳಿಕೆಯು ಭೇರಿತಾಡನಾದಿಗಳನ್ನು ಒಂದು ನಿಮಿತ್ತವೆಂದಿಷ್ಟೇ ಗ್ರಹಿಸುವುದೆಂದು ಭಾವ.

ಕರ್ಮಾನುಸ್ಮೃತ್ಯಧಿಕರಣ—೬

ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ ೩.೨.೯

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವಂತನು ಎಲ್ಲ ಜನರ ಎಲ್ಲ ಅವಸ್ಥೆಗಳಿಗೂ ಪ್ರೇರಕನೆಂದು ಹೇಳಲಾಗುವುದು.

ಸ ಏವ - ಪ್ರಸ್ತುತನಾದ ಪರಮಾತ್ಮನೇ ಸರ್ವಾವಸ್ಥೆಗಳ ಪ್ರವರ್ತಕನಾಗಿದ್ದಾನೆ. ಇಲ್ಲಿ 'ಸರ್ವಾವಸ್ಥಾಪ್ರವರ್ತಕಃ' ಎಂಬ ಶೇಷವನ್ನು ಸೇರಿಸಬೇಕು. 'ಚ' ಶಬ್ದವು ಪಕ್ಷಾಂತರವನ್ನು ನಿರಾಕರಿಸುವುದು. 'ದೇಶಾಂತರದಲ್ಲಾಗಲಿ, ಕಾಲಾಂತರದಲ್ಲಾಗಲಿ ಇನ್ನೊಬ್ಬ ಪ್ರವರ್ತಕನಲ್ಲ' ಎಂದು 'ಏವ' ಶಬ್ದದಿಂದ[1] ಅರ್ಥಾತ್ ಲಭಿಸುವುದಾದರೂ ಸಾಕ್ಷಾತ್ ಶಬ್ದದಿಂದಲೇ ಆ ಅರ್ಥವು ಲಭಿಸಬೇಕೆಂಬ ದೃಷ್ಟಿಯಿಂದ 'ಚ' ಶಬ್ದವನ್ನು ಪ್ರಯೋಗಿಸಲಾಗಿದೆ. ಅನ್ಯರು ಪ್ರವರ್ತಕರಲ್ಲವೇಕೆ

1. ಅನ್ಯಯೋಗವ್ಯವಚ್ಛೇದಾರ್ಥಕವಾದ 'ಏವ' ಶಬ್ದದಿಂದ ಈಶ್ವರಭಿನ್ನನಲ್ಲಿ ಸರ್ವಾವಸ್ಥಾಪ್ರೇರಕತ್ವವಿಲ್ಲವೆಂಬ ಅರ್ಥ ಲಭಿಸುವುದಾದರೂ 'ದೇಶಾಂತರ-ಕಾಲಾಂತರಗಳಲ್ಲಿ ಮತ್ತೊಬ್ಬ ಪ್ರವರ್ತಕನಲ್ಲವೆಂಬ ಅರ್ಥ 'ಏವ' ಶಬ್ದದಿಂದ ಸಾಕ್ಷಾತ್ತಾಗಿ ಲಭಿಸಲಾರದು ಎಂದು ಭಾವ.

कुतः ? कर्मानुस्मृतिशब्दविधिभ्यः । कर्मेति धर्माधर्मरूपं व्यापारमात्रं वा । तेन तस्य ईशैकायत्तत्वश्रुतिर्लक्ष्यते । 'स एव साधुकर्म कारयति । एष ह्येवासाधुकर्म कारयति' इति कर्मणामीशायत्तत्वश्रुतेः । स्वप्नादिप्राप्तेश्च तदन्तर्भावात् । 'प्रदर्शकस्तु सर्वेषां स्वप्नादेरेक एव तु ।' इत्यभिमतार्थानुसारिस्मृतेः । 'एष स्वप्नान् दर्शयति' इत्यादिशब्दात् । 'आत्मानमेव लोकमुपासीत' इत्यात्मन एवोपास्यत्वविधेरित्यर्थः । अन್यस्यापि प्रेरकत्वे एवकारायोगादिति भावः ॥ ६ ॥

---

ಎಂಬ ಆ ಶಂಕೆಗೆ ಉತ್ತರ— 'ಕರ್ಮಾನುಸ್ಮೃತಿಶಬ್ದವಿಧಿಭ್ಯಃ' ಎಂದು. ಕರ್ಮವೆಂದರೆ ಧರ್ಮಾಧರ್ಮರೂಪವಾದ ಕರ್ಮ. ಅಥವಾ, ಕ್ರಿಯಾಸಾಮಾನ್ಯವೂ ಆಗಬಹುದು. ಆ ಧರ್ಮಾಧರ್ಮರೂಪವಾದ ಕರ್ಮ ಅಥವಾ ಕ್ರಿಯಾ ಸಾಮಾನ್ಯದಿಂದ ಇಲ್ಲಿ ಅಂತಹ ಕರ್ಮವು ಭಗವಂತನೊಬ್ಬನಿಗೇ ಅಧೀನವೆಂದು ಹೇಳುವ ಶ್ರುತಿಯನ್ನು ಲಕ್ಷಣಯಾ ಗ್ರಹಿಸಬೇಕು. '[1]ಸ ಏವ ಸಾಧು ಕರ್ಮ ಕಾರಯತಿ ಏಷ ಹ್ಯೇವಾಸಾಧು ಕರ್ಮ ಕಾರಯತಿ' ಎಂಬ, ಸ್ವಪ್ನಾದಿಪ್ರಾಪ್ತಿರೂಪವಾದ ಕ್ರಿಯೆಯೂ ಒಳಗೊಂಡಂತೆ ಎಲ್ಲ ಕ್ರಿಯೆಗಳು ಭಗವದಧೀನವೆಂದು ಹೇಳುವ ಶ್ರುತಿಯಿಂದ, '[2]ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು' ಎಂಬ ಸರ್ವಾವಸ್ಥಾಪ್ರೇರಕನು ಭಗವಂತನೇ ಎಂಬ ಅಭಿಮತವಾದ ವಿಷಯಕ್ಕೆ ಅನುಸಾರಿಯಾದ ಸ್ಮೃತಿಯಿಂದ, 'ಏಷ ಸ್ವಪ್ನಾನ್ ದರ್ಶಯತಿ' ಎಂಬ ಶ್ರುತಿಯಿಂದ, 'ಆತ್ಮಾನಮೇವ ಲೋಕಮುಪಾಸೀತ' (ಬೃ. ೩.೪.೧೫) ಎಂಬ ಪರಮಾತ್ಮನನ್ನೇ ಉಪಾಸನೆ ಮಾಡತಕ್ಕದ್ದು ಎಂದು ಹೇಳುವ ವಿಧಿಯಿಂದ ಭಗವಂತನೇ ಸರ್ವಾವಸ್ಥಾಪ್ರೇರಕನೆಂದು ಸಿದ್ಧನಾಗುವನೆಂದು ಅರ್ಥ. ಇನ್ನೊಬ್ಬನೂ ಪ್ರವರ್ತಕನಾಗಿದ್ದಲ್ಲಿ ಈ ಶ್ರುತಿಸ್ಮೃತಿಗಳಲ್ಲಿ ಏವಕಾರವು ಯುಕ್ತವಾಗಲಾರದೆಂದು ಭಾವ.

---

1. ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿ ಈ ಶ್ರುತ್ಯರ್ಥವನ್ನು ವಿವರಿಸಲಾಗಿದೆ. 'ಏಷ ಹ್ಯೇವ ಸಾಧು ಕರ್ಮ ಕಾರಯತಿ ............ ಏಷ ಉ ಏವಾಸಾಧು ಕರ್ಮ ಕಾರಯತಿ' [ಕೌ. ೩.೮] ಎಂಬ ಶ್ರುತಿಯ ಅರ್ಥಾನುವಾದವೆಂದು ತೋರುವುದು.

2. 'ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು ।
ಪರಮಃ ಪುರುಷೋ ವಿಷ್ಣುಸ್ತತೋಽನ್ಯೋ ನಾಸ್ತಿ ಕಶ್ಚನ ॥'
ಎಂದು ಪೂರ್ಣ ಶ್ಲೋಕ.

सम्पत्त्यधिकरणम्—७

॥ ॐ मुग्धेऽर्धसम्पत्तिः परिशेषात् ॐ ॥ ३.२.१०

अत्रेशस्य मोहाख्यावान्तरावस्थास्थितजीवस्य अर्धप्राप्यत्वमुच्यते। अस्येत्यात्मनीति चास्ति। मुग्धे मोहे मूर्छायां, भावे क्तः, जीवस्य आत्मन्यर्धप्राप्तिः। न सम्यक् प्राप्तिः। कुतः? परिशेषात्—आत्मविदूरत्वसामीप्यप्रवेशार्धप्रवेशेषु आद्यत्रिकस्य 'हृदयस्थात् पराज्जीवः' इति स्मृत्या जाग्रदाद्यवस्थान्तरत्वेनार्धप्रवेशस्यैव परिशेषादित्यर्थः।

---

ಸಂಪತ್ತ್ಯಧಿಕರಣ—೭

ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ ೩.೨.೧೦

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಮೋಹಾವಸ್ಥೆಯೆಂಬ ಅವಾಂತರಾವಸ್ಥೆಯಲ್ಲಿರುವ ಜೀವರಿಂದ ಭಗವಂತನು ಅರ್ಧಪ್ರಾಪ್ಯನೆಂದು ಹೇಳಲಾಗುವುದು.

'ಅಸ್ಯ' ಮತ್ತು 'ಆತ್ಮನಿ' ಎಂಬ ಪದಗಳು ಅನುವೃತ್ತವಾಗುವುವು. ಮುಗ್ಧೇ-ಮೋಹದಲ್ಲಿ ಎಂದರೆ ಮೂರ್ಛೆಯಲ್ಲಿ, — ಮುಗ್ಧಶಬ್ದದಲ್ಲಿ 'ಕ್ತ' ಪ್ರತ್ಯಯವು [1]ಭಾವಾರ್ಥದಲ್ಲಿ ಬಂದಿದೆ, —ಜೀವನಿಗೆ, ಆತ್ಮನಿ- ಪರಮಾತ್ಮನಲ್ಲಿ, ಅರ್ಧಸಂಪತ್ತಿಃ-ಪೂರ್ಣಪ್ರಾಪ್ತಿಯಾಗುವುದಿಲ್ಲ, ಏಕೆಂದರೆ, ಪರಿಶೇಷಾತ್ - ಭಗವಂತನಿಂದ ದೂರದಲ್ಲಿರುವುದು, ಸಮೀಪದಲ್ಲಿರುವುದು, ಭಗವಂತನಲ್ಲಿ ಪ್ರವೇಶಿಸುವುದು, ಅರ್ಧಪ್ರವೇಶಿಸುವುದು ಇವುಗಳಲ್ಲಿ ಮೊದಲನೆಯ ಮೂರು 'ಹೃದಯಸ್ಥಾತ್ ಪರಾಜ್ಜೀವಃ' ಇತ್ಯಾದಿ ಸ್ಮೃತಿಗನುಗುಣವಾಗಿ ಜಾಗ್ರದವಸ್ಥೆ ಮೊದಲಾದ ಅವಸ್ಥೆಗಳಾಗಿವೆ. ಆದ್ದರಿಂದ ಅರ್ಧಪ್ರವೇಶವೊಂದೇ ಉಳಿಯುವುದು ಎಂದು ಅರ್ಥ. ಅತಿದೂರವೂ ಅತಿಸಮೀಪವೂ ಅಲ್ಲದ ಸ್ಥಿತಿಯು ಬಹುಕಾಲವಿರುವುದಿಲ್ಲವಾದ್ದರಿಂದ ಆ ಸ್ಥಿತಿಯು ಮೋಹಾವಸ್ಥೆಯಲ್ಲವೆಂದು ಭಾವ.

---

1. ಭಾವಾರ್ಥವೆಂದರೆ ಧಾತ್ವರ್ಥ. ಮುಹ್ ಧಾತ್ವರ್ಥವಾದ ಮೋಹವೆಂಬ ಅರ್ಥವೇ ಕ್ತಪ್ರತ್ಯಯಕ್ಕೂ ಕೂಡ ಎಂದು ಆಶಯ.

नातिदूरसामीप्यस्याचिरकालीनत्वात् न तस्य मोहत्वमिति भावः। स्वप्नादिवत् न मोहः स्वतन्त्रावस्थेति द्योतनाय व्यवधानेनास्योक्तिः। जन्मादिसूत्रोक्तसृष्ट्यादिकर्तृत्वस्य प्रपञ्चनमेतैर्योगैः कृतमित्यपौनरुक्त्यम् ॥ ७ ॥

न स्थानतोऽप्यधिकरणम्—८

॥ ॐ न स्थानतोऽपि परस्योभयलिङ्गं सर्वत्र हि ॐ ॥
३.२.११

अत्रेशस्य सर्वत्र निर्दोषाशेषगुणत्वमभिन्नत्वं च साध्यते। स्थानत इति तद्भेदो लक्ष्यते। आद्यादित्वात् सप्तम्यर्थे तसिः। उभशब्दपर्याय

---

**ಮೋಹಾವಸ್ಥೆಯನ್ನು ಜಾಗ್ರತ್-ಸ್ವಪ್ನಾವಸ್ಥೆಗಳ ಜೊತೆಗೆ ಹೇಳದಿರುವ ಕಾರಣ ಮತ್ತು ಈ ಅಧಿಕರಣಗಳಿಗೆ ಪುನರುಕ್ತಿಯ ಪರಿಹಾರ.**

ಸ್ವಪ್ನ ಮೊದಲಾದ ಅವಸ್ಥೆಗಳಂತೆ ಮೋಹಾವಸ್ಥೆಯು ಇತರ ಅವಸ್ಥೆಗಳ ಮಿಶ್ರಣವಿಲ್ಲದ ಸ್ವತಂತ್ರ ಅವಸ್ಥೆಯಲ್ಲವೆಂದು ಸೂಚಿಸಲು ಇತರ ಅವಸ್ಥೆಗಳನ್ನು ನಿರೂಪಿಸಿದ ನಂತರ ಬೇರೆ ವಿಷಯದ ವ್ಯವಧಾನದೊಂದಿಗೆ ಮೋಹಾವಸ್ಥೆಯನ್ನು ನಿರೂಪಿಸಲಾಗಿದೆ. 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಿರುವ ಸೃಷ್ಟ್ಯಾದಿ ಕರ್ತೃತ್ವದ ವಿವರಣೆಯನ್ನೇ ಈ ವರೆಗಿನ ಈ ಪಾದದ ಸೂತ್ರಗಳಿಂದ ಮಾಡಲಾಗಿದೆಯಾದ್ದರಿಂದ ಪೌನರುಕ್ತ್ಯವಿಲ್ಲ.

ನ ಸ್ಥಾನತೋಽಪ್ಯಧಿಕರಣ—೮

ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ
ಸರ್ವತ್ರ ಹಿ ಓಂ ೩.೨.೧೧

**ಅಧಿಕರಣದ ವಿಷಯ**

ಈ ಅಧಿಕರಣದಲ್ಲಿ ಭಗವಂತನ ಸರ್ವರೂಪಗಳಲ್ಲೂ ನಿರ್ದೋಷತ್ವ, ಅಶೇಷ ಗುಣಪೂರ್ಣತ್ವ ಮತ್ತು ಅಭೇದಗಳಿರುವುದೆಂದು ಸಾಧಿಸಲಾಗುವುದು.

उभयशब्दः । उभशब्दश्च संख्यातदन्यार्थयोर्वाचकः । उभावुदात्त इति सूत्रे द्व्यर्थत्वस्य वृत्त्यादौ दर्शितत्वात् । एवं चोभयहेतुक इत्यत्र संख्यापरत्वेऽपीह भिन्नपरत्वं न विरुद्ध्यते ।

सुरनरतिर्यगाद्यक्ष्यादिस्थानभेदेऽपि परस्येशस्योभयलिङ्गं भिन्नरूपं नास्ति । 'लिंङ्गं स्वरूपमुद्दिष्टं लिंङ्गं ज्ञापकमेव च' इत्यादेः । उपलक्षणमेतत् । दोषित्वादि च नेत्यपि ध्येयम् । कुतः ? सर्वत्र हि । हि यस्मात् सर्वस्थानेषु निर्दोषाशेषगुणो निर्भेदश्च परः 'सर्वभूतेष्वेतमेव ब्रह्मेत्याचक्षते' इत्यादौ श्रूयत इत्यर्थः ।

---

**'ಸ್ಥಾನತಃ' ಮತ್ತು 'ಉಭಯ' ಶಬ್ದಗಳ ಅರ್ಥ**

'ಸ್ಥಾನತಃ' ಎಂಬಲ್ಲಿರುವ ಸ್ಥಾನಪದವು ಲಕ್ಷಣಾವೃತ್ತಿಯಿಂದ ಸ್ಥಾನಭೇದವನ್ನು ಹೇಳುವುದು. 'ಆದ್ಯಾದಿಭ್ಯಃ ಉಪಸಂಖ್ಯಾನಮ್' ಎಂಬ ವಾರ್ತಿಕಾನುಸಾರ 'ತಸಿ' ಪ್ರತ್ಯಯವು ಸಪ್ತಮೀ ವಿಭಕ್ತಿಯ ಅರ್ಥವನ್ನು ಹೇಳುವುದು. ಉಭಯ ಶಬ್ದವು ಉಭಶಬ್ದಸಮಾನಾರ್ಥಕವಾದ ಶಬ್ದವಾಗಿದೆ. ಉಭಶಬ್ದವು ಸಂಖ್ಯೆ ಮತ್ತು 'ಭಿನ್ನ' ಎಂಬ ಎರಡು ಅರ್ಥಗಳನ್ನೂ ಹೇಳುವುದು. 'ಉಭಾವುದಾತ್ತೌ' (ಪಾ. ಸೂ. ೫.೨.೪೪) ಎಂಬ ಸೂತ್ರ ವ್ಯಾಖ್ಯಾನಸಂದರ್ಭದಲ್ಲಿ ವೃತ್ತಿಗ್ರಂಥದಲ್ಲಿ ಉಭಶಬ್ದಕ್ಕೆ ಎರಡು ಅರ್ಥಗಳಿರುವುದನ್ನು ತೋರಿಸಲಾಗಿದೆ. ಆದ್ದರಿಂದ, 'ಉಭಯಹೇತುಕೇ' (ಬ್ರ. ಸೂ. ೨.೨.೧೮) ಎಂಬ ಸೂತ್ರದಲ್ಲಿ ಉಭಯ-ಶಬ್ದವು ಸಂಖ್ಯಾರ್ಥಕವಾಗಿದ್ದರೂ ಈ ಸೂತ್ರದಲ್ಲಿ 'ಭಿನ್ನ' ಎಂಬ ಅರ್ಥವನ್ನು ಹೇಳಿದಲ್ಲಿ ವಿರೋಧವೇನಿಲ್ಲ.

**ಸೂತ್ರಾರ್ಥ**

ದೇವತೆಗಳು, ಮಾನವರು, ತಿರ್ಯಕ್ ಪ್ರಾಣಿಗಳು, ಮತ್ತು ಅಕ್ಷಿ ಮೊದಲಾದ ಸ್ಥಾನಭೇದವಿದ್ದರೂ, ಪರಸ್ಯ – ಭಗವಂತನಿಗೆ, ಉಭಯಲಿಂಗಂ - ಭಿನ್ನರೂಪಗಳು, ನ - ಇಲ್ಲ. 'ಲಿಂಗಂ ಸ್ವರೂಪಮುದ್ದಿಷ್ಟಂ ಲಿಂಗಂ ಜ್ಞಾಪಕಮೇವ ಚ' ಇತ್ಯಾದಿ ಪ್ರಮಾಣಾನುಸಾರ ಲಿಂಗಶಬ್ದವು ಸ್ವರೂಪಾರ್ಥಕವಾಗಿದೆ. ಭಗವಂತನಿಗೆ ಭಿನ್ನ ರೂಪಗಳಿಲ್ಲವೆಂದಿರುವುದು ಉಪಲಕ್ಷಣ. ದೋಷ ಮೊದಲಾದವುಗಳೂ ಇಲ್ಲವೆಂದು ತಿಳಿಯಬೇಕು. ಭಗವಂತನಿಗೆ ಸ್ಥಾನಭೇದದಿಂದ ರೂಪಭೇದವಿಲ್ಲವೆನ್ನುವುದು ಹೇಗೆ ಎಂಬ ಆಶಂಕೆಗೆ **ಉತ್ತರ— ಸರ್ವತ್ರ ಹಿ— ಹಿ - ಯಾವ ಕಾರಣದಿಂದ, ಸರ್ವತ್ರ -**

उभयत्वमिति वाच्ये लिङ्गमित्युक्तिर्न पाण्याद्येकैकदेशेनानेकत्र स्थितिः, किन्तु समग्रेषु विग्रहेष्वनेकत्र सत्स्वपि तेषां भिन्नत्वमात्रं नेति द्योतयितुम् । अर्भकौकस्त्वादित्यत्र व्योमवत् सर्वगतस्याप्येकैकत्र स्थितिः, अल्पश्रुतेरित्यत्रैकैकत्र स्थितांशस्यापि पूर्णत्वमुक्तम् । अत्र चैकैकत्र स्थितस्य समग्रावयवत्वमुच्यत इति भेदः । रूपमिति वाच्ये

---

ಸರ್ವಸ್ಥಾನಗಳಲ್ಲಿರುವ ಪರಮಾತ್ಮನು ನಿರ್ದೋಷನೂ, ಅಶೇಷ ಗುಣಪೂರ್ಣನೂ, ಭೇದರಹಿತನೂ ಆಗಿರುವನೆಂದು 'ಸರ್ವಭೂತೇಷು ಏತಮೇವ ಬ್ರಹ್ಮ' (ಐ. ಆ. ೩.೪.೩.೧೦) ಇತ್ಯಾದಿ ಶ್ರುತಿಗಳಲ್ಲಿ ಶ್ರುತನಾಗಿರುವನೋ ಆ ಕಾರಣದಿಂದ ಎಂದು ಅರ್ಥ.

**'ಲಿಂಗ' ಪದದ ಪ್ರಯೋಜನ ಮತ್ತು ಪುನರುಕ್ತಿಯ ಪರಿಹಾರ**

'ಉಭಯತ್ವಂ' ಎಂದು ಹೇಳಬಹುದಾಗಿದ್ದರೂ ಲಿಂಗಶಬ್ದವನ್ನು ಹೇಳಿರುವುದು— ಒಂದು ಕಡೆ ಹಸ್ತ, ಮತ್ತೊಂದೆಡೆಯಲ್ಲಿ ಪಾದ ಹೀಗೆ ಒಂದೊಂದು ಅವಯವದ ಮೂಲಕ ಭಗವಂತನು ಅನೇಕ ಕಡೆ ಇರುವುದೆಂದಲ್ಲ, ಅದರ ಬದಲು ಭಗವಂತನ ಸಮಸ್ತ ಶರೀರಗಳೇ ಅನೇಕ ಕಡೆ ಇರುವುದಾದರೂ ಅವುಗಳಿಗೆ ಭೇದ ಮಾತ್ರವಿಲ್ಲವೆಂದು ಸೂಚಿಸಲು[1].

'ಅರ್ಭಕೌಕಸ್ತ್ವಾತ್....' (ಬ್ರ. ಸೂ. ೧.೨.೭) ಎಂಬಲ್ಲಿ ಆಕಾಶದಂತೆ ಭಗವಂತನು ಸರ್ವಗತನಾಗಿದ್ದರೂ ಒಂದೊಂದೆಡೆಯಲ್ಲೂ ಇರುವನೆಂದು ಹೇಳಲಾಗಿದೆ. 'ಅಲ್ಪಶ್ರುತೇಃ....' (ಬ್ರ.ಸೂ. ೧.೩.೫) ಎಂಬಲ್ಲಿ ಒಂದೊಂದೆಡೆಯಲ್ಲಿ ಇರುವ ಭಗವಂತನ ಅಂಶಗಳಿಗೂ ಪೂರ್ಣತ್ವವನ್ನು ಹೇಳಿದೆ. ಇಲ್ಲಾದರೋ ಒಂದೊಂದು

---

1. ಉಭಯತ್ವವೆಂದರೆ ಭೇದ. ನ ಉಭಯತ್ವಂ ಎಂದೇ ಹೇಳಿದ್ದರೂ ನಾನಾ ಸ್ಥಾನಗಳಲ್ಲಿರುವ ಭಗವಂತನಿಗೆ ಭೇದವಿಲ್ಲವೆಂದು ಅರ್ಥವಾಗುವಾಗ ಲಿಂಗಪದವೇಕೆ ಎಂದು ಶಂಕೆ. ಭಗವಂತನ ಒಂದು ಶರೀರವೇ ಒಂದೆಡೆ ಅದರ ಹಸ್ತ, ಮತ್ತೊಂದೆಡೆ ಅದರ ಪಾದ ಹೀಗೆ ಸರ್ವತ್ರ ವ್ಯಾಪಿಸಿದೆ ಎಂದರೂ ನಾನಾ ಸ್ಥಾನದಲ್ಲಿರುವ ಭಗವಂತನಿಗೆ ಭೇದವಿಲ್ಲವೆಂದಾಗಬಹುದು. ಆದರೆ ಭಗವಂತನ ಸಮಗ್ರ ಸ್ವರೂಪವೇ ನಾನಾ ಸ್ಥಾನಗಳಲ್ಲಿರುವುದು. ಆದರೂ ಅವುಗಳಿಗೆ ಭೇದವಿಲ್ಲವೆಂಬ ವಿವಕ್ಷಿತಾರ್ಥದ ಸಿದ್ಧಿಗಾಗಿ ಸ್ವರೂಪಾರ್ಥಕವಾದ ಲಿಂಗಪದವನ್ನು ಪ್ರಯೋಗಿಸಲಾಗಿದೆ ಎಂದು ಭಾವ.

लिङ्गमित्युक्तिः स्थानभेदो न परस्योभयत्वे लिङ्गम् , अप्रयोजकत्वादिति तत्त्वप्रदीपोक्तदिशाऽर्थान्तरसूचनाय ।

उक्तमाक्षिप्याह—

॥ ॐ न भेदादिति चेन्न प्रत्येकमतद्वचनात् ॐ ॥
३.२.१२

परस्येत्यस्ति । भेदेत्युपलक्षणम् । 'कार्यकारणबद्धौ' इति श्रुतौ

---

ಸ್ಥಾನದಲ್ಲಿರುವ ಭಗವಂತನು ಸಮಗ್ರ ಅವಯುವಯುಕ್ತನೆಂದು ಹೇಳಲಾಗಿದೆಯೆಂದು ಈ ಸೂತ್ರಗಳಿಗೆ ಭೇದವಿದೆ.

'ರೂಪ'ವೆಂದು ಹೇಳಬಹುದಾಗಿದ್ದರೂ 'ಲಿಂಗ' ಪದವನ್ನು ಹೇಳಿರುವುದು— ಸ್ಥಾನಭೇದವು ಪರಮಾತ್ಮನು ಭಿನ್ನನೆಂದು ಸಾಧಿಸಲು ಲಿಂಗವಾಗಲಾರದು, ಅಪ್ರಯೋಜಕವಾದುದರಿಂದ— ಎಂಬ ತತ್ತ್ವಪ್ರದೀಪದಲ್ಲಿ ಹೇಳಿದಂತೆ ಸೂತ್ರಕ್ಕೆ ಅರ್ಥಾಂತರವನ್ನು ಸೂಚಿಸಲು.

ಈಗ ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ಓಂ
## ೩.೨.೧೨

**ಸೂತ್ರಾರ್ಥ**

'ಪರಸ್ಯ' ಎಂಬ ಪದವು ಅನುವೃತ್ತವಾಗುವುದು. ಭೇದಶಬ್ದವು ಉಪಲಕ್ಷಣವಾಗಿದೆ. [1]'ಕಾರ್ಯಕಾರಣಬದ್ಧೌ' ಎಂಬ ಶ್ರುತಿಯಲ್ಲಿ — ಜಾಗ್ರತ್ಕಾಲದಲ್ಲಿ

---

1. ಕಾರ್ಯಕಾರಣಬದ್ಧೌ ತೌ ಇಷ್ಯೇತೇ ವಿಶ್ವತೈಜಸೌ ।
ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇ ನ ಸಿದ್ಧತಃ ॥ (ಮಾ. ೨.೧೬)
ಎಂದು ಮಾಂಡೂಕ್ಯ ಶ್ರುತಿ. ಕಾರ್ಯವೆಂದರೆ ಅಜ್ಞಾನಕಾರ್ಯವಾದ 'ನಾನು' 'ನನ್ನದು' ಎಂಬ ಭ್ರಮೆ. ಕಾರಣವೆಂದರೆ ಅಂತಹ ಭ್ರಮೆಗೆ ಕಾರಣವಾದ ಅಜ್ಞಾನ. ಜೀವನಲ್ಲಿರುವ ಅಂತಹ ಭ್ರಮರೂಪವಾದ ಜಾಗ್ರದವಸ್ಥೆ ಮತ್ತು ಅದಕ್ಕೆ ಕಾರಣವಾದ ಅಜ್ಞಾನ-- ಇಂತಹ ಬಂಧನಕ್ಕೆ ವಿಶ್ವನಾಮಕ ಭಗವಂತನು ಸ್ವಾಮಿಯಾಗಿರುವನು. ತೈಜಸನಾಮಕನು ಅಜ್ಞಾನ ಕಾರ್ಯವಾದ ಸ್ವಪ್ನ ಮತ್ತು ಕಾರಣವಾದ ಅಜ್ಞಾನ ಇಂತಹ ಜೀವಗತ ಬಂಧಕ್ಕೆ ಸ್ವಾಮಿಯಾಗಿರುವನು. ಜಾಗ್ರತ್-ಸ್ವಪ್ನಗಳಿಗೆ ಕಾರಣವಾದ ಅಜ್ಞಾನರೂಪ ಸುಪ್ತಿಯೆಂಬ ಬಂಧನಕ್ಕೆ ಪ್ರಾಜ್ಞನಾಮಕ ಭಗವಂತನು ಸ್ವಾಮಿಯಾಗಿರುವನು. ಈ ಯಾವುದೇ ಬಂಧವನ್ನು ನಿಯಮನ ಮಾಡುವ ವ್ಯಾಪಾರಗಳು ತುರ್ಯನಾಮಕ ಭಗವದ್ರೂಪದಲ್ಲಿ ಇಲ್ಲವೆಂದು ಸಿದ್ಧಾಂತದಲ್ಲಿ ಶ್ರುತ್ಯರ್ಥ. ಅಂತಹ ಬಂಧನಕ್ಕೊಳಗಾಗಿರುವರು ವಿಶ್ವಾದಿ ಭಗವದ್ರೂಪಗಳೆಂದೇ ಭಾವಿಸಿ ಪೂರ್ವಪಕ್ಷ.

जाग्रद्बद्धो विश्वः, स्वप्नबद्धस्तैजसोऽज्ञानबद्धः प्राज्ञ इत्यादिभेददोषित्वादिवचनात् नाभेदः परस्येति चेन्न। प्रत्येकमतद्वचनात्। तत् भेदः। अतत् अभेदः। 'एष न आत्माऽन्तर्याम्यमृतः' इत्यत्र पृथिव्यन्तर्याम्येव तवान्तर्यामीति 'अयमेव सः योऽयमात्मा' इत्यादौ

---

ವಿಶ್ವನಾಮಕ ಪರಮಾತ್ಮನು ಬಂಧನಕ್ಕೊಳಗಾಗಿರುವನು, ಸ್ವಪ್ನಸಮಯದಲ್ಲಿ ತೈಜಸನಾಮಕ ಭಗವಂತನು ಬದ್ಧನಾಗಿರುವನು. ಅಜ್ಞಾನದಿಂದ ಬದ್ಧನಾಗಿರುವವನು ಪ್ರಾಜ್ಞನಾಮಕ ಭಗವಂತನು –– ಇತ್ಯಾದಿಯಾಗಿ ಪರಮಾತ್ಮನ ರೂಪಗಳಲ್ಲಿ ಭೇದವನ್ನೂ, ದೋಷ ಮೊದಲಾದವುಗಳನ್ನೂ ಹೇಳಿರುವುದರಿಂದ ಪರಮಾತ್ಮನ ರೂಪಗಳಲ್ಲಿ ಅಭೇದವಿಲ್ಲ ಎಂದರೆ ಅದು ಸರಿಯಲ್ಲ. ಪ್ರತ್ಯೇಕಮತದ್ವಚನಾತ್[1]– ತತ್ ಎಂದರೆ ಭೇದ. ಅತತ್ ಎಂದರೆ ಅಭೇದ. '[2]ಏಷ ತ ಆತ್ಮಾಽತರ್ಯಾಮ್ಯ-ಮೃತಃ' (ಬೃ. ೫.೭.೩) ಎಂಬಲ್ಲಿ ಪೃಥಿವಿಯ ಅಂತರ್ಯಾಮಿಯೇ ನಿನ್ನ ಅಂತರ್ಯಾಮಿಯಾಗಿರುವನು ಎಂದು, '[3]ಅಯಮೇವ ಸಃ ಯೋಽಯಮಾತ್ಮಾ' [ಬೃ. ೪.೫.೧] ಇತ್ಯಾದಿ [4] ಶ್ರುತಿಗಳಲ್ಲಿ ಭಗವಂತನ ರೂಪಗಳಿಗೆ, ಪ್ರತ್ಯೇಕಂ –

---

1. 'ನ ಭೇದಾದಿತಿ ಚೇನ್ನ' ಎಂದು ಸೂತ್ರದ ಉಪಕ್ರಮದಲ್ಲಿ ಪ್ರಸ್ತುತವಾಗಿರುವ ಭೇದವನ್ನು 'ಅತದ್ವಚನಾತ್' ಎಂಬಲ್ಲಿರುವ ತತ್ ಪದವು ಪರಾಮರ್ಶಿಸುವುದೆಂದು ಭಾವ.

2. 'ಯಃ ಪೃಥಿವ್ಯಾಂ ತಿಷ್ಠನ್', 'ಯೋಽಪ್ಸು ತಿಷ್ಠನ್', 'ಯೋಽಗ್ನೌ ತಿಷ್ಠನ್' ಇತ್ಯಾದಿಯಾಗಿ ಭಗವಂತನಿಗೆ ಪೃಥಿವೀ, ಅಪ್ ಮೊದಲಾದ ಅನೇಕ ಸ್ಥಾನಗಳನ್ನು ಹೇಳಿ ಪ್ರತ್ಯೇಕವಾಗಿ ಪ್ರತಿಯೊಂದು ಸ್ಥಾನದಲ್ಲಿರುವ ಭಗವದ್ರೂಪಕ್ಕೂ 'ಏಷ ತೆ ಆತ್ಮಾಽಂತರ್ಯಾ-ಮ್ಯಮೃತಃ' ಎಂದು ಭಗವದ್ರೂಪಗಳಿಗೆ ಪರಸ್ಪರ ಅಭೇದವನ್ನು ಹೇಳಿರುವುದರಿಂದ ಎಂದು ಭಾವ.

3. 'ಅಯಮೇವ ಸಃ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಮ್' ಎಂದು ಶ್ರುತಿ. 'ತೇಜೋಮಯೋಮೃತಮಯಃ ಪುರುಷಃ' ಎಂಬ ಹಿಂದಿನ ವಾಕ್ಯದಲ್ಲಿ ಪ್ರಕೃತನಾಗಿರುವ ತೇಜಃಪೂರ್ಣನೂ, ನಿತ್ಯಸ್ವರೂಪನೂ ಪೂರ್ಣನೂ ಆದ ಭಗವಂತನೇ ಪೂರ್ವೋಕ್ತನಾಗಿರುವ ಸರ್ವಗನಾದ ಹಯಶೀರ್ಷಾಖ್ಯ ಭಗವಂತನು. ಅವನ ಈ ರೂಪವು ನಿತ್ಯಮುಕ್ತವಾಗಿದೆ. ಈ ಸರ್ವ ಜಗತ್ತು ಅವನಿಗೆ ಅಧೀನವಾಗಿದೆ ಎಂದು ಅರ್ಥ.

4. 'ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಚ ಬಹೂನಿ ಚಾನಂತಾನಿ ಚ। ತದೇತದ್ ಬ್ರಹ್ಮ ಅಪೂರ್ವಂ ಅನಪರಂ ಅನಂತರಂ ಬಾಹ್ಯಂ ಅಯಮಾತ್ಮಾ ಬ್ರಹ್ಮ ಸರ್ವಾನುಭೂರಿತ್ಯನುಶಾಸನಮ್' ಇತ್ಯಾದಿ ಶ್ರುತಿಗಳು ಆದಿಪದಸೂಚಿತವಾಗಿವೆ.

ईश्वररूपाणां प्रत्येकं परस्परं मूलरूपेण चाभेदवचनादित्यर्थः । 'बद्धो बन्धादिसाक्षित्वत्' इत्यादौ निर्दोषतावचनादित्युपलक्ष्यते ।

अतद्वचनादित्येव पूर्तौ प्रत्येकमित्युक्तिरादरसूचनार्था । तेन भेदोक्तितः अभेदोक्तेः प्राबल्यमिति भावः ।

---

ಪ್ರತಿಯೊಂದು ರೂಪಕ್ಕೂ ಪರಸ್ಪರವಾಗಿ ಮತ್ತು ಮೂಲರೂಪದೊಂದಿಗೆ ಅಭೇದವನ್ನು ಹೇಳಿರುವುದರಿಂದ ಎಂದು ಅರ್ಥ. '[1]ಬದ್ಧೊ ಬಂಧಾದಿಸಾಕ್ಷಿತ್ವಾತ್' ಇತ್ಯಾದಿ ಪ್ರಮಾಣಗಳಲ್ಲಿ ಭಗವಂತನು ನಿರ್ದೋಷಿಯೆಂದು ಹೇಳಿರುವುದರಿಂದ-- ಎಂಬುದೂ ಇಲ್ಲಿ ಉಪಲಕ್ಷಣಯಾ ಸೂಚಿತವಾಗಿದೆ.

**ಸೂತ್ರದ 'ಪ್ರತ್ಯೇಕಂ' ಶಬ್ದದ ಸ್ವಾರಸ್ಯ—**

'ಅತದ್ವಚನಾತ್' ಎಂದಿಷ್ಟೇ ಸಾಕಾಗಿದ್ದರೂ 'ಪ್ರತ್ಯೇಕಂ' ಎಂದು ಹೇಳಿರುವುದು ಭಗವದ್ರೂಪಗಳ ಅಭೇದದಲ್ಲಿ ಶ್ರುತಿಗೆ [2]ಆದರವಿದೆಯೆಂದು ಸೂಚಿಸಲು. ಆದ್ದರಿಂದ ಭಗವದ್ರೂಪಗಳಿಗೆ ಭೇದವನ್ನು ಹೇಳುವ ವಾಕ್ಯಗಳಿಗಿಂತ ಅಭೇದವನ್ನು ಹೇಳುವ ವಾಕ್ಯಗಳಿಗೆ ಪ್ರಾಬಲ್ಯವೆಂದು ಭಾವ.

ಭಗವದ್ರೂಪಗಳಿಗೆ ಅಭೇದವನ್ನು ಹೇಳುವ ವಾಕ್ಯವು ಕೆಲವು ಭಗವದ್ರೂಪಗಳಿಗೆ ಮಾತ್ರ ಸಂಬಂಧಿಸಿರುವ ಸಾಧ್ಯತೆಯಿರುವುದರಿಂದ ಅಂತಹ ಅಭೇದವಾಕ್ಯದಿಂದ

---

1. 'ಬದ್ಧೋ ಬಂಧಾದಿಸಾಕ್ಷಿತ್ವಾತ್ ಭಿನ್ನೋ ಭಿನ್ನೇಷು ಸಂಸ್ಥಿತೇಃ ।
ನಿರ್ದೋಷಾದ್ವಯರೂಪೋऽಪಿ ಕಥ್ಯತೇ ಪರಮೇಶ್ವರಃ ॥ [ಬ್ರಹ್ಮತರ್ಕ]

ಪರಮೇಶ್ವರನು ನಿರ್ದೋಷನಾಗಿದ್ದರೂ ಜೀವಗತವಾದ ಬಂಧನ, ದುಃಖ ಮೊದಲಾದವುಗಳಿಗೆ ಸಾಕ್ಷಿಯಾಗಿರುವುದರಿಂಡ ಬದ್ಧನೆಂದೂ, ಹಾಗೆಯೇ ಪರಸ್ಪರ ಅಭಿನ್ನನಾಗಿದ್ದರೂ ಭಿನ್ನ ಭಿನ್ನ ಸ್ಥಾನಗಳಲ್ಲಿರುವುದರಿಂದ ಭಿನ್ನನೆಂದೂ ಹೇಳಲ್ಪಡುವನು ಎಂದು ಅರ್ಥ.

2. 'ಯಃ ಪೃಥಿವ್ಯಾಂ ತಿಷ್ಠನ್', 'ಯೋऽಪ್ಸು ತಿಷ್ಠನ್' ಇತ್ಯಾದಿಯಾಗಿ ನಾನಾ ಸ್ಥಾನಗಳಲ್ಲಿ ಭಗವದ್ರೂಪಗಳನ್ನು ಹೇಳಿ ಒಮ್ಮೆ 'ಏಷ ತ ಆತ್ಮಾ ಅಂತರ್ಯಾಮ್ಯಮೃತಃ' ಎಂದು ಆ ರೂಪಗಳಿಗೆ ಅಭೇದವನ್ನು ಹೇಳಿದ್ದರೂ ಸಾಕಾಗಿತ್ತು. ಆದರೆ, ಒಂದೊಂದು ಸ್ಥಾನವನ್ನು ಹೇಳಿದ ಬಳಿಕವೂ 'ಏಷ ತ ಆತ್ಮಾ' ಇತ್ಯಾದಿ ಅಭೇದವನ್ನು ಹೇಳಿರುವುದು ಭಗವದ್ರೂಪಗಳ ಅಭೇದವಿಷಯದಲ್ಲಿ ಶ್ರುತಿಯ ಆದರವನ್ನು ಸೂಚಿಸುವುದೆಂದು ಭಾವ.

अभेदोक्तेः कतिपयरूपपरत्वसम्भवात् न ततो भेदश्रुतेर्बाध इत्यत आह—

॥ ॐ अपि चैवमेके ॐ ॥ ३.२.१३

एकेऽपि शाखिनः एवमभेदं 'अमात्रोऽनन्तमात्रश्च' इति परस्य (वर्णयन्ति) पठन्तीत्यर्थः। चशब्दोऽनन्तरूपत्वं चेशे समुच्चिनोति। अमात्रो न भिन्नांशरहित इत्यर्थात्। भेदव्यपदेशः स्थान भेदादैश्वर्याच्च युक्त इति भावः ॥ ८ ॥

---

ಭಗವದ್ರೂಪಗಳಿಗೆ ಭೇದವನ್ನು ಹೇಳುವ ಶ್ರುತಿಗೆ ಬಾಧವಿಲ್ಲ ಎಂಬ ಆಶಂಕೆಗೆ ಸಮಾಧಾನವನ್ನು ಹೇಳುವ ಸೂತ್ರ—

ಓಂ ಅಪಿ ಚೈವಮೇಕೇ ಓಂ ೩.೨.೧೩

**ಸೂತ್ರಾರ್ಥ**

ಏಕೇಽಪಿ– [1] ಇತರ ಶಾಖಿಗಳೂ ಕೂಡ, ಏವಂ - ಹೀಗೆ ಭಗವದ್ರೂಪಗಳ ಅಭೇದವನ್ನು 'ಅಮಾತ್ರೋಽನಂತಮಾತ್ರಶ್ಚ' ಎಂದು ಪಠಿಸುವರು ಎಂದು ಅರ್ಥ. 'ಚ' ಶಬ್ದವು ಭಗವಂತನು ಅನಂತರೂಪನೂ ಆಗಿರುವನೆಂದು ಸಮುಚ್ಚಯವನ್ನು ಹೇಳುವುದು. 'ಅಮಾತ್ರಃ' ಎಂದು ಹೇಳಿರುವುದರಿಂದ ಭಿನ್ನಾಂಶರಹಿತನೆಂದು ಅರ್ಥಾತ್ ಸಿದ್ಧವಾಗುವುದು.

ಭಗವದ್ರೂಪಗಳಲ್ಲಿ ಭೇದವನ್ನು ಹೇಳಿರುವುದು ಆ ರೂಪಗಳ ಸ್ಥಾನಭೇದದಿಂದ ಮತ್ತು ಭಗವಂತನಿಗಿರುವ ಮಹಾಮಹಿಮೆಯಿಂದ ಯುಕ್ತವೆಂದು ಭಾವ.

---

1. ಹಿಂದಿನ ಸೂತ್ರದಲ್ಲಿ ಸೂಚಿಸಲಾದ ಕಾಣ್ವಶಾಖಿಗಳಲ್ಲದೆ ಮಾಂಡೂಕಶಾಖಿಗಳೂ ಕೂಡ -- 'ಅಮಾತ್ರೋಽನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ । (ಮಾಂ. ೪.೭) ಎಂದು ಭಗವದ್ರೂಪಗಳಿಗೆ ಅಭೇದವನ್ನು ಹೇಳುವರು. ಇಲ್ಲಿ ಅಮಾತ್ರನೆಂದರೆ ಅಂಶರಹಿತನೆಂದರ್ಥ. ಅರ್ಥಾತ್ ಭಿನ್ನಾಂಶರಹಿತನೆಂದು ಸಿದ್ಧವಾಗುವುದು.

अरूपाधिकरणम्—९

## ॥ ॐ अरूपवदेव हि तत्प्रधानत्वात् ॐ ॥ ३.२.१४

अत्रेशस्याप्राकृतदेहत्वमुच्यते। तदिति तन्त्रम्। व्यस्तं समस्तं च। तत् प्रस्तुतं ब्रह्म अरूपवदेव प्राकृतादिदेहरहितमेव। येनानित्यता 'अरूपमनामयम्' इति श्रुतिविरोधो वा स्यात्। कुतः? तत्प्रधानत्वात्। तस्य ब्रह्मणस्तेभ्यः प्रकृतिभूतेभ्य उत्तमत्वात्। हिशब्दः 'अस्थूलमनणु'

---

ಅರೂಪಾಧಿಕರಣ—೯

## ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ ೩-೨-೧೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನ ದೇಹವು ಅಪ್ರಾಕೃತವಾದುದೆಂದು ಹೇಳಲಾಗುವುದು.

'ತತ್ಪ್ರಧಾನತ್ವಾತ್' ಎಂಬಲ್ಲಿ ಒಮ್ಮೆ ಶ್ರುತವಾಗಿರುವ 'ತತ್' ಶಬ್ದವು ಸೂತ್ರಾರ್ಥವಿವರಣೆಗೆ ಅನೇಕ ರೀತಿಯಿಂದ ಉಪಕಾರಕವಾಗಿದೆ. ಈ ಪದವು ಭಿನ್ನ ಪದವೆಂದೂ, ಸಮಾಸವನ್ನು ಹೊಂದಿರುವ ಪದವೆಂದೂ ಗ್ರಹಿಸಬೇಕು. ತತ್ – ಪ್ರಸ್ತುತನಾದ ಬ್ರಹ್ಮನು, ಅರೂಪವದೇವ - ಅನಿತ್ಯತೆಯಾಗಲೀ, 'ಅರೂಪಮನಾಮಯಂ' ಎಂಬ ಶ್ರುತಿವಿರೋಧವಾಗಲೀ ಯಾವುದರಿಂದಾಗಿ ಬರಬಹುದೋ ಅಂತಹ ಪ್ರಾಕೃತವೇ ಮೊದಲಾದ ದೇಹಗಳಿಂದ ರಹಿತನಾಗಿಯೇ ಇರುವನು. ಏಕೆಂದರೆ, ತತ್ಪ್ರಧಾನತ್ವಾತ್ — ತಸ್ಯ - ಆ ಬ್ರಹ್ಮನಿಗೆ, ತೇಭ್ಯಃ - ಆ ಪ್ರಕೃತಿ, ಭೂತ ಮೊದಲಾದುವುಗಳಿಗಿಂತ, (ಪ್ರಧಾನತ್ವಾತ್–) ಶ್ರೇಷ್ಠತೆಯಿರುವುದರಿಂದ. 'ಹಿ' ಶಬ್ದವು 'ಅಸ್ಥೂಲಮನಣು' (ಬೃ. ೫.೮.೮) ಎಂಬ ಶ್ರುತಿ ಇರುವುದರಿಂದಲೂ ಬ್ರಹ್ಮನಿಗೆ ಪ್ರಾಕೃತಾದಿ ದೇಹಗಳಿಲ್ಲವೆಂದು ಸೂಚಿಸುವುದು. ತನಗೆ ಅಧೀನವಾಗಿರುವ ಪ್ರಕೃತಿ ಮೊದಲಾದವುಗಳಿಂದ ತನಗೆ ಬಂಧನವು ಸಾಧ್ಯವಾಗುವುದಿಲ್ಲವೆಂದು ಭಾವ.

इत्यादिश्रुतेश्चेति सूचयति । स्वाधीनेन प्रकृत्यादिनाऽऽत्मबन्धायोगादिति भावः ।

स्वेच्छादिना निमित्तेनापि न तादृशं रूपमिति वक्तुं श्रुतेरपि सूचनम्। अत्र परस्येति प्रस्तावादरूपवानिति वाच्ये क्लीबोक्तिर्हिशब्दोक्तश्रुत्यनुसारात् । अरूपमिति वाच्ये मतुप् रूपरूपिभेदनिवृत्त्यर्थ इत्याहुः । 'अन्यभाव' इत्युक्तस्य समर्थनमत्रेत्येके । तत्त्वप्रदीपे तु तत्रान्यवस्तुस्वभावव्यावृत्तिरुक्ता, न तु नीरूपता । साऽत्रोच्यत इत्युक्तम् ।

---

**'ಹಿ' ಶಬ್ದ ಮತ್ತು 'ಅರೂಪವತ್' ಶಬ್ದದ ವಿಶೇಷ ಪ್ರಯೋಜನ**

ಸ್ವೇಚ್ಛೆ ಮೊದಲಾದ ಕಾರಣದಿಂದಲೂ ಭಗವಂತನಿಗೆ ಪ್ರಾಕೃತ ರೂಪವಿಲ್ಲವೆಂದು ಹೇಳುವುದಕ್ಕಾಗಿ 'ಹಿ' ಶಬ್ದದಿಂದ ಶ್ರುತಿಯನ್ನೂ ಸೂಚಿಸಲಾಗಿದೆ. 'ನ ಸ್ಥಾನತೋಽಪಿ ಪರಸ್ಯ' ಎಂಬಲ್ಲಿ 'ಪರಸ್ಯ' ಎಂಬ ಪ್ರಸ್ತಾವವಿರುವುದರಿಂದ ಈ ಸೂತ್ರದಲ್ಲಿ 'ಅರೂಪವಾನ್' ಎಂದಿರಬೇಕಾಗಿದ್ದರೂ 'ಹಿ' ಶಬ್ದವು ಸೂಚಿಸಿದ ಶ್ರುತಿಯನ್ನನುಸರಿಸಿ 'ಅರೂಪವತ್' ಎಂದು ನಪುಂಸಕಲಿಂಗವನ್ನು ಹೇಳಲಾಗಿದೆ. [1]'ಅರೂಪಂ' ಎಂದೇ ಹೇಳಬಹುದಾಗಿದ್ದರೂ ಮತುಪ್‌ಪ್ರತ್ಯಯವನ್ನು ಉಪಯೋಗಿಸಿರುವುದು ಭಗವಂತನ ರೂಪಕ್ಕೂ ರೂಪಿಯಾದ ಭಗವಂತನಿಗೂ ಭೇದವಿಲ್ಲವೆಂದು ತಿಳಿಸಲೆಂದು ಕೆಲವರು ಹೇಳುವರು. 'ಅನ್ಯಭಾವ' (ಬ್ರ.ಸೂ. ೧.೩.೧೨) ಎಂಬಲ್ಲಿ ಹೇಳಿರುವುದರ ಸಮರ್ಥನೆಯನ್ನು ಇಲ್ಲಿ ಮಾಡಲಾಗಿದೆಯೆಂದು ಕೆಲವರು ಹೇಳುವರು. ತತ್ತ್ವಪ್ರದೀಪದಲ್ಲಾದರೋ— 'ಅನ್ಯಭಾವವ್ಯಾವೃತ್ತೇಶ್ಚ' ಎಂಬಲ್ಲಿ ಬ್ರಹ್ಮನಿಗೆ ಇತರ ವಸ್ತುಗಳ ಸ್ವಭಾವವಿಲ್ಲವೆಂದಿಷ್ಟೇ ಹೇಳಿದೆ ಹೊರತು ಭಗವಂತನಿಗೆ ಪ್ರಾಕೃತರೂಪವಿಲ್ಲವೆಂದು ಹೇಳಿಲ್ಲ. ಅದನ್ನು ಇಲ್ಲಿ ಹೇಳಲಾಗುವುದು— ಎಂದು ಹೇಳಿದೆ.

---

1. 'ಅರೂಪಂ' ಎಂದು ಹೇಳಿದಾಗ ಭಗವಂತನಿಗೆ ರೂಪವಿಲ್ಲವೆಂದಿಷ್ಟೇ ಹೇಳಿದಂತಾಗುವುದು. ಅರೂಪವತ್ ಎಂದು ಹೇಳಿದಲ್ಲಿ ರೂಪವತ್ ಶಬ್ದದಿಂದ ಸಾಮಾನ್ಯವಾಗಿ ತಿಳಿದುಬರುವ ರೂಪ ಮತ್ತು ರೂಪಾಶ್ರಯಗಳ ಭೇದವನ್ನೂ ನಿಷೇಧಿಸಿದಂತಾಗುವುದು ಎಂದು ಭಾವ.

अरूपित्वे 'रुग्मवर्णं' इति रूपित्वविरोधः, सौन्दर्यसौलक्षण्याद्यभावश्चेत्यत आह—

॥ ॐ प्रकाशवच्चावैयर्थ्यम् ॐ ॥ ३.२.१५

'यदा पश्यः पश्यते रुग्मवर्णं', 'श्यामात् शबलं प्रपद्ये', 'सुवर्णज्योतिः' इत्यादिरूपित्वश्रुतीनामिति शेषः। अवैयर्थ्यं वैय्यर्थ्यमप्रामाण्यं च नेत्यर्थः। सौन्दर्याद्यभावश्च नेत्युपलक्ष्यते। कुतः? रूपित्वात् ब्रह्मण इति भावः। तर्ह्यरूपित्वश्रुतिविरोध इत्यत उक्तं प्रकाशवदिति। प्रकाशस्येव, नास्ति प्रकाश इत्यादिव्यवहारस्येवेति

---

ಭಗವಂತನು ರೂಪರಹಿತನಾಗಿರುವುದಾದಲ್ಲಿ 'ರುಗ್ಮವರ್ಣಂ' (ಮು. ೩.೧.೩) ಎಂದು ರೂಪವನ್ನು ಹೇಳಿರುವ ಶ್ರುತಿಯ ವಿರೋಧವು ಬರುವುದು. ಅಲ್ಲದೆ ಭಗವಂತನಿಗೆ ಸೌಂದರ್ಯವಾಗಲಿ, ಸುಲಕ್ಷಣತೆಯಾಗಲಿ ಇಲ್ಲವೆಂದಾಗುವುದು ಎಂಬ ಆಶಂಕೆಗೆ ಸಮಾಧಾನ ಹೇಳುವ ಸೂತ್ರ—

ಓಂ ಪ್ರಕಾಶವಚ್ಚಾವೈಯ್ಯರ್ಥ್ಯಮ್ ಓಂ ೩.೨.೧೫

**ಸೂತ್ರಾರ್ಥ**

" 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ', 'ಶ್ಯಾಮಾತ್ ಶಬಲಂ ಪ್ರಪದ್ಯೇ' (ಛಾಂ. ೮.೧೩.೧), 'ಸುವರ್ಣಜ್ಯೋತಿಃ' (ಪೈ. ೩.೧೦) ಇವೇ ಮೊದಲಾದ ಭಗವಂತನಿಗೆ ರೂಪವಿದೆಯೆಂದು ಹೇಳುವ ಶ್ರುತಿಗಳಿಗೆ"— ಇಷ್ಟಂಶವನ್ನು ಇಲ್ಲಿ ಶೇಷವನ್ನಾಗಿ ಸೇರಿಸಬೇಕು— ಅವೈಯ್ಯರ್ಥ್ಯಂ - ವ್ಯರ್ಥತೆಯಾಗಲೀ ಅಪ್ರಾಮಾಣ್ಯವಾಗಲಿ ಇಲ್ಲವೆಂದು ಅರ್ಥ. ಭಗವಂತನಿಗೆ ಸೌಂದರ್ಯಾದಿಗಳು ಇಲ್ಲದಂತಾಗುವುದೂ ಇಲ್ಲ — ಎಂಬುದನ್ನು ಇಲ್ಲಿ ಉಪಲಕ್ಷಣವಾಗಿ ಗ್ರಹಿಸಬೇಕು. ಭಗವಂತನಿಗೆ ರೂಪವಿದೆಯೆಂದು ಹೇಳುವ ಶ್ರುತಿಗಳಿಗೆ ವೈಯ್ಯರ್ಥ್ಯಾದಿಗಳಿಲ್ಲದಿರುವುದಕ್ಕೆ ಕಾರಣ ಬ್ರಹ್ಮನೂ ರೂಪಿಯಾಗಿರುವುದು ಎಂದು ಭಾವ. ಹಾಗಾದಲ್ಲಿ, ಬ್ರಹ್ಮನಿಗೆ ರೂಪವಿಲ್ಲವೆಂದು ಹೇಳುವ ಶ್ರುತಿಯು ವಿರೋಧ ಬರುವುದು ಎಂಬ ಆಶಂಕೆಗೆ ಉತ್ತರ— 'ಪ್ರಕಾಶವತ್' ಎಂದು. ಪ್ರಕಾಶಕ್ಕೆ ಹೇಗೋ ಹಾಗೆ — ಪ್ರಕಾಶವಿಲ್ಲವೆಂಬ

यावत् । तत्त्वप्रदीपदिशा चशब्दोऽरूपित्वश्रुतीनां चेत्यन्वेति । अवैय्यर्थ्यमित्यन्वयः । यथा गृहान्तश्चाक्षुषादिप्रकाशे सत्यपि तस्य सौरादिलौकिकप्रकाशवैलक्षण्यात् नास्ति प्रकाश इत्युक्तिस्तथा रूपित्वेऽपि ब्रह्मणो विलक्षणाप्राकृतरूपित्वाद् अरूपश्रुत्यप्रामाण्यं नेत्यर्थः ।

वृत्त्यन्तरं तु रूपशब्दस्य प्राकृतरूपे व्युत्पन्नतया अप्राकृतेऽव्युत्पन्त्याऽरूपित्वश्रतीनां वैय्यर्थ्यं न । प्रकाशवत् प्रकाशवाचिशब्दस्येव । यथाऽप्राकृतप्रकाशेऽपि ब्रह्मणि सुवर्णज्योतिरिति प्रकाशशब्दस्तथा

---

ವ್ಯವಹಾರಕ್ಕೆ ಹೇಗೋ ಹಾಗೆ ಎಂದು ತಾತ್ಪರ್ಯ. ತತ್ತ್ವಪ್ರದೀಪರೀತ್ಯಾ 'ಚ' ಶಬ್ದವು 'ರೂಪವಿಲ್ಲವೆಂದು ಹೇಳುವ ಶ್ರುತಿಗಳಿಗೂ ಕೂಡ' ಎಂದು ಅನ್ವಯವನ್ನು ಪಡೆಯುವುದು. ಆ ಶ್ರುತಿಗಳಿಗೂ ವೈಯ್ಯರ್ಥ್ಯವಿಲ್ಲವೆಂದು ಅನ್ವಯ. ಹೇಗೆ ಮನೆಯೊಳಗೆ ಚಕ್ಷುರಿಂದ್ರಿಯವೇ ಮೊದಲಾದ ಪ್ರಕಾಶವಿದ್ದರೂ ಆ ಪ್ರಕಾಶವು ಸೂರ್ಯಪ್ರಕಾಶ ಮೊದಲಾದ ಲೋಕಗೋಚರವಾದ ಪ್ರಕಾಶಕ್ಕಿಂತ ವಿಲಕ್ಷಣವಾದುದರಿಂದ ಮನೆಯಲ್ಲಿ ಬೆಳಕಿಲ್ಲವೆಂದು ಹೇಳಲಾಗುವುದೋ ಹಾಗೆಯೇ ಬ್ರಹ್ಮನಿಗೆ ರೂಪವಿದ್ದರೂ ಆ ರೂಪವು ಲೋಕವಿಲಕ್ಷಣವಾದ ಅಪ್ರಾಕೃತವಾದ ರೂಪವಾದುದರಿಂದ ಭಗವಂತನಿಗೆ ರೂಪವಿಲ್ಲವೆಂದು ಹೇಳುವ ಶ್ರುತಿಗೆ ಅಪ್ರಾಮಾಣ್ಯವಿಲ್ಲವೆಂದು ಅರ್ಥ.

**ಸೂತ್ರದ ವ್ಯಾಖ್ಯಾನಾಂತರ**

ಈ ಸೂತ್ರದ ಇನ್ನೊಂದು ವ್ಯಾಖ್ಯಾನವಾದರೋ ಹೀಗಿದೆ— ರೂಪಶಬ್ದವು ಪ್ರಾಕೃತರೂಪವನ್ನು ಹೇಳುವುದೆಂದು ತಿಳಿದಿರುವುದರಿಂದ, ಅಪ್ರಾಕೃತರೂಪವನ್ನು ಹೇಳಬಲ್ಲುದೆಂದು ತಿಳಿಯದಿರುವುದರಿಂದ ಭಗವಂತನಿಗೆ ರೂಪವನ್ನು ಹೇಳುವ ಶ್ರುತಿಗಳು ವ್ಯರ್ಥವೆಂದು ಹೇಳತಕ್ಕದ್ದಲ್ಲ. ಪ್ರಕಾಶವತ್ - ಪ್ರಕಾಶವಾಚಕ ಶಬ್ದದಂತೆ. ಬ್ರಹ್ಮನು ಅಪ್ರಾಕೃತತೇಜಸ್ಸುಳ್ಳವನಾದರೂ ಅವನನ್ನು ಕುರಿತು 'ಸುವರ್ಣಜ್ಯೋತಿಃ' ಎಂದು ಪ್ರಕಾಶವಾಚಕ ಶಬ್ದವು ಹೇಗೆ ಪ್ರಯೋಗಿಸಲ್ಪಟ್ಟಿದೆಯೋ ಹಾಗೆ ಭಗವಂತನ ಅಪ್ರಾಕೃತರೂಪವನ್ನು ಹೇಳಲು ರೂಪಶಬ್ದವೂ ಪ್ರಯೋಗಿಸಲ್ಪಟ್ಟಿದೆ. ಈ ವಿಷಯದಲ್ಲಿ ಯುಕ್ತಿಯು 'ಬುದ್ಧ್ಯರ್ಥಃ ಪಾದವತ್' (ಬ್ರ.ಸೂ. ೩.೨.೩೪) ಎಂಬಲ್ಲಿ ಮುಂದೆ ಸ್ಪಷ್ಟವಾಗುವುದು– ಎಂದು ಭಾವ.

रूपशब्दोऽपि । उपपत्तिस्तु 'बुद्ध्यर्थः पादवत्' इत्यग्रे व्यक्ती-भविष्यतीति भावः ।

तस्याप्राकृतत्वं कुतः ? सर्वरूपाणां प्राकृतत्वादित्यत आह—

॥ ॐ आह च तन्मात्रं ॐ ॥ ३.२.१६

रूपमिति प्रकृतमन्वेति । तद्गुणसारत्वादिति प्रस्तुतौ ज्ञानानन्दौ तदिति परामृश्येते । रूपं तन्मात्रं ज्ञानानन्दादिमात्रं चाह 'ऐकात्म्य-प्रत्ययसारं', 'आनन्दमात्रमजरम्' इत्यादिश्रुतिर्न प्राकृतमित्यर्थः ।

---

ಎಲ್ಲ ರೂಪಗಳೂ ಪ್ರಾಕೃತವೇ ಆಗಿರುವುದರಿಂದ ಭಗವಂತನಿಗೆ ಅಪ್ರಾಕೃತ ರೂಪವಿರುವುದು ಹೇಗೆ ಎಂಬ ಆಶಂಕೆಗೆ ಸಮಾಧಾನ—

ಓಂ ಆಹ ಚ ತನ್ಮಾತ್ರಮ್ ಓಂ ೩.೨.೧೬

**ಸೂತ್ರಾರ್ಥ**

ಪ್ರಸ್ತುತವಾಗಿರುವ 'ರೂಪಂ' ಎಂಬ ಶಬ್ದವು ಇಲ್ಲಿ ಅನ್ವಯವನ್ನು ಪಡೆಯುವುದು. ಸೂತ್ರದಲ್ಲಿರುವ 'ತತ್' ಶಬ್ದವು 'ತದ್‌ಗುಣಸಾರತ್ವಾತ್' (ಬ್ರ. ಸೂ. ೨.೩.೨೯) ಎಂಬಲ್ಲಿ ಪ್ರಸ್ತುತವಾಗಿರುವ ಜ್ಞಾನಾನಂದಗಳನ್ನು ಪರಾಮರ್ಶಿಸುವುದು. ರೂಪಂ - ಭಗವಂತನ ದೇಹವು, ತನ್ಮಾತ್ರಂ - ಕೇವಲ ಜ್ಞಾನಾನಂದಾತ್ಮಕವಾದುದೆಂದು, ಆಹ - '[1]ಐಕಾತ್ಮ್ಯಪ್ರತ್ಯಯಸಾರಂ' (ಮಾಂ. ೨.೭), [2]'ಆನಂದಮಾತ್ರಮಜರಂ' [ಚತುರ್ವೇದಶಿಖಾ] ಇತ್ಯಾದಿ ಶ್ರುತಿಯು ಹೇಳುವುದು, ಪ್ರಾಕೃತವಾದುದೆಂದು ಹೇಳುವುದಿಲ್ಲವೆಂದು ಅರ್ಥ.

---

1. ಬ್ರಹ್ಮನು ಪ್ರಧಾನನೂ, ಪೂರ್ಣನೂ, ಜ್ಞಾನಸ್ವರೂಪನೂ ಆಗಿರುವನೆಂದು ಶ್ರುತಿಯ ಅರ್ಥ.

2. ಆನಂದಮಾತ್ರಮಜರಂ ಪುರಾಣಂ ಏಕಂ ಸಂತಂ ಬಹುಧಾ ದೃಶ್ಯಮಾನಮ್ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥
ಎಂದು ಶ್ರುತಿ. ಬ್ರಹ್ಮನು ಸರ್ವದಾ ಸುದೃಢನು, ಆದಿರಹಿತನು, ಸರ್ವೋತ್ಕೃಷ್ಟನು ಮತ್ತು ನಿರ್ದೋಷನು. ಆದ್ದರಿಂದಲೇ ಆನಂದಸ್ವರೂಪನು. ಮತ್ಸ್ಯಾದಿ ಬಹುರೂಪದಿಂದ ತೋರುವ ಆ ಪರಮಾತ್ಮನನ್ನು ಯಾರು ತಮ್ಮ ದೇಹದಲ್ಲಿ ನೋಡುವರೋ ಅವರಿಗೇ ಶಾಶ್ವತವಾದ ಸುಖ, ಇತರರಿಗಲ್ಲ--ಎಂದು ಶ್ರುತ್ಯರ್ಥ.

उक्तश्रुतौ देहस्य ज्ञानाद्यात्मता न श्रुतेत्यत आह—

॥ ॐ दर्शयति चाथो अपि स्मर्यते ॐ ॥ ३.२.१७

'आनन्दरूपममृतं यद्विभाति' इति श्रुतिरानन्दात्मकं रूपं दर्शयति च। अथो इत्यर्थान्तरमुच्यते। अथो अपि ज्ञानात्मकमपि रूपं स्मर्यते। 'शुद्धस्फटिकसङ्काशं वासुदेवं निरञ्जनम्। चिन्तयीत यतिर्नान्यं ज्ञानरूपादृते हरेः ॥' इति स्मर्यत इत्यर्थः। पूर्वत्रेशतदे-

---

ಮೇಲೆ ಹೇಳಿದ ಶ್ರುತಿಯಲ್ಲಿ ದೇಹವು ಜ್ಞಾನಾನಂದಾತ್ಮಕವೆಂದು ಶ್ರುತ ವಾಗಿಲ್ಲವೆಂಬ ಶಂಕೆಗೆ ಉತ್ತರ—

## ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ ೩.೨.೨೦

**ಸೂತ್ರಾರ್ಥ**

'ಆನಂದರೂಪಮಮೃತಂ ಯದ್ವಿಭಾತಿ' (ಮು. ೨.೨.೮) ಎಂಬ ಶ್ರುತಿಯು ಭಗವಂತನ ದೇಹವು ಆನಂದಾತ್ಮಕವೆಂಬುದನ್ನೂ ಹೇಳುವುದು. 'ಅಥೋ' ಎಂಬ ಪದವು ಆನಂದವ್ಯತಿರಿಕ್ತವಾದ ಇನ್ನೊಂದು ವಸ್ತುವನ್ನು ಹೇಳುವುದು. ಅಥೋ ಅಪಿ – ಭಗವಂತನ ಶರೀರವು ಜ್ಞಾನಾತ್ಮಕವೆಂದೂ, ಸ್ಮರ್ಯತೇ - [1]'ಶುದ್ಧಸ್ಫಟಿಕ-ಸಂಕಾಶಂ ವಾಸುದೇವಂ ನಿರಂಜನಮ್ । ಚಿಂತಯೀತ ಯತಿರ್ನಾನ್ಯಂ ಜ್ಞಾನ-ರೂಪಾದೃತೇ ಹರೇಃ' [ಮಾತ್ಸ್ಯಪುರಾಣ] ಎಂಬ ಸ್ಮೃತಿಯಲ್ಲಿ ಹೇಳಲಾಗಿದೆ ಎಂದು ಅರ್ಥ.

**ಹಿಂದಿನ ಸೂತ್ರ ಮತ್ತು ಈ ಸೂತ್ರಗಳಿಗೆ ವ್ಯತ್ಯಾಸ**

ಹಿಂದಿನ ಸೂತ್ರದಲ್ಲಿ ಭಗವಂತನಿಗೂ ಅವನ ದೇಹಕ್ಕೂ ಅಭೇದವಿದೆಯೆಂದು

---

1. ಶುದ್ಧ ಸ್ಫಟಿಕದಂತೆ ಶುಕ್ಲವರ್ಣನೂ ದೋಷರಹಿತನೂ ಆದ ವಾಸುದೇವನನ್ನೇ ಪ್ರಧಾನನೆಂದು ಯತಿಯು ಧ್ಯಾನಿಸತಕ್ಕದ್ದು. ಜ್ಞಾನಶರೀರನಾದ ಆ ಹರಿಯನ್ನಲ್ಲದೆ ಇತರರನ್ನು ಧ್ಯಾನಿಸತಕ್ಕದಲ್ಲ.

हयोरैक्यबुद्ध्या ईशस्य ज्ञानाद्यात्मकत्वे श्रुतिरुक्ता। अत्र तु विशिष्येति बोध्यम् ॥ ९ ॥

उपमाधिकरणम्—१०

॥ ॐ अत एव चोपमा सूर्यकादिवत् ॐ ॥ ३.२.१८

अत्रेशस्य जीवेन भेदाभेदौ नेत्युच्यते। उपमेत्यनन्तरं 'न भेदात्' इति सूत्रात् 'इति चेन्न' इत्यनुवर्तनीयम्। 'ततो ह्यस्य' इत्यतो 'ह्यस्य' इति च। चः सूर्यकादिवच्चेति भिन्नक्रमः। अत एवेति तन्त्रम्।

---

ಭಾವಿಸಿ ಭಗವಂತನು ಜ್ಞಾನಾನಂದಾತ್ಮಕನೆಂಬ ವಿಷಯದಲ್ಲಿ ಶ್ರುತಿಯನ್ನು ಉದಾಹರಿಸಲಾಯಿತು. ಈ ಸೂತ್ರದಲ್ಲಾದರೋ ಭಗವಂತನ ದೇಹವು ಜ್ಞಾನಾನಂದಾತ್ಮಕವೆಂದು ಪ್ರತ್ಯೇಕವಾಗಿ ಹೇಳಲು ಶ್ರುತಿಯನ್ನು ಉದಾಹರಿಸಲಾಗಿದೆ ಎಂದು ತಿಳಿಯುವುದು.

ಉಪಮಾಧಿಕರಣ—೧೦

ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ
೩.೨.೧೮

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನಿಗೆ ಜೀವನಿಂದ ಭೇದಾಭೇದಗಳಿಲ್ಲವೆಂದು ಹೇಳಲಾಗಿದೆ.

'ಉಪಮಾ' ಪದದ ಅನಂತರ 'ನ ಭೇದಾದಿತಿ ಚೇನ್ನ (೩.೨.೧೨) ಎಂಬ ಸೂತ್ರದಿಂದ 'ಇತಿ ಚೇನ್ನ' ಎಂಬ ಪದಗಳನ್ನು ಅನುವರ್ತಿಸಬೇಕು. 'ತತೋ ಹ್ಯಸ್ಯ' [ಬ್ರ.ಸೂ. ೩.೨.೫] ಎಂಬ ಸೂತ್ರದಿಂದ 'ಹಿ ಅಸ್ಯ' ಎಂಬ ಪದಗಳು ಅನುವೃತ್ತವಾಗುವುವು. 'ಚ' ಶಬ್ದವು ಸೂತ್ರದಲ್ಲಿ ಸೂಚಿಸಿರುವ ಕ್ರಮಕ್ಕಿಂತ ಭಿನ್ನವಾದ ರೀತಿಯಲ್ಲಿ 'ಸೂರ್ಯಕಾದಿವಚ್ಚ' ಎಂದು ಅನ್ವಿತವಾಗುವುದು. 'ಅತ ಏವ' ಎಂಬ ಪದಗಳು ಒಮ್ಮೆ ಪ್ರಯುಕ್ತವಾಗಿದ್ದರೂ ಅನೇಕ ರೀತಿಯಿಂದ ಉಪಕಾರವಾಗುವಂತೆ ಯೋಜಿಸಲ್ಪಡುವುವು.

अत एव—ईशतद्रूपाणामभेदस्य 'न स्थानतः' इत्यत्रोक्तत्वादेव, अत एव-चेतनत्वांशांशित्वादिहेतोरेव अस्य जीवस्य उपमा मत्स्यादि-साम्यं, मत्स्यादिवदीशाभेद इति यावत्, इति चेन्न। सूर्यकादिवत्। सूर्यादिप्रतिबिम्बसूर्यकच्छायादिवत्। योग्यतया प्रतिबिम्बत्वादिति हेतुरन्वेति। जीवो नेशाभिन्न इति साध्यसमुच्चये चः। सूर्यकादिः प्रतिबिम्बत्वात् सूर्यादिना यथा नाभिन्नस्तथा जीवोऽपीशेनेत्यर्थः।

यद्वा 'अत एव' इत्यावर्तते। द्वितीयम् उपमेत्यतः परं योज्यम्। आद्यं तन्त्रम्। उपमाशब्दः उपमावत्प्रतिबिम्बपरः। अत एव

---

ಅತ ಏವ - ಭಗವಂತನಿಗೂ ಅವನ ರೂಪಗಳಿಗೂ ಅಭೇದವನ್ನು 'ನ ಸ್ಥಾನತಃ' (ಬ್ರ.ಸೂ. ೩.೨.೧೧) ಎಂಬ ಸೂತ್ರದಲ್ಲಿ ಹೇಳಿರುವುದರಿಂದಲೇ, ಅತ ಏವ - ಚೇತನನಾಗಿರುವಿಕೆ, ಭಗವಂತನ ಅಂಶವಾಗಿರುವಿಕೆ ಮೊದಲಾದ ಹೇತುಗಳಿಂದಲೇ, ಅಸ್ಯ - ಈ ಜೀವನಿಗೆ, ಉಪಮಾ - ಮತ್ಸ್ಯಾದಿ ಭಗವದ್ರೂಪಗಳ ಸಾಮ್ಯವು — ಮತ್ಸ್ಯಾದಿಗಳಿಗಿರುವಂತೆ ಭಗವಂತನ ಅಭೇದವೆಂದು ತಾತ್ಪರ್ಯ— ಇರುವುದೆಂದರೆ ಅದು ಸರಿಯಲ್ಲ. ಸೂರ್ಯಕಾದಿವತ್ - ಸೂರ್ಯ ಮೊದಲಾದವರ ಪ್ರತಿಬಿಂಬಗಳಾದ ಸೂರ್ಯಕ, ನೆರಳು ಮೊದಲಾದವುಗಳಂತೆ. ಅನ್ವಯಯೋಗ್ಯವಾದುದರಿಂದ 'ಪ್ರತಿಬಿಂಬವಾದುದರಿಂದ' ಎಂಬ ಹೇತುವು ಅನ್ವಿತವಾಗುವುದು. 'ಚ' ಶಬ್ದವು 'ಜೀವನು ಭಗವಂತನಿಂದ ಅಭಿನ್ನನಲ್ಲ' ಎಂಬ ಸಾಧ್ಯದ ಸಮುಚ್ಚಯವನ್ನು ಸೂಚಿಸುವುದು. ಸೂರ್ಯಕ ಮೊದಲಾದವು ಸೂರ್ಯ ಪ್ರತಿಬಿಂಬವಾದುದರಿಂದ ಸೂರ್ಯಾದಿಗಳಿಂದ ಹೇಗೆ ಅಭಿನ್ನವಲ್ಲವೋ ಹಾಗೆಯೇ ಜೀವನೂ ಈಶನ ಪ್ರತಿಬಿಂಬನಾದುದರಿಂದ ಈಶನಿಂದ ಅಭಿನ್ನನಲ್ಲವೆಂದು ಅರ್ಥ.

**ಸೂತ್ರದ ವ್ಯಾಖ್ಯಾನಾಂತರ**

ಅಥವಾ, 'ಅತ ಏವ' ಎಂಬ ಪದಗಳು ಆವೃತ್ತವಾಗುವುವು. ಎರಡನೆಯ 'ಅತ ಏವ' ಎಂಬ ಪದಗಳನ್ನು 'ಉಪಮಾ' ಪದದ ನಂತರ ಯೋಜಿಸಬೇಕು. ಮೊದಲನೆಯ 'ಅತ ಏವ' ಎಂಬ ಪದಗಳನ್ನು ಅನೇಕೋಪಕಾರಕವಾಗುವಂತೆ ಯೋಜಿಸಬೇಕು. 'ಉಪಮಾ' ಶಬ್ದವು ಬಿಂಬದ ಉಪಮೆಯನ್ನು ಪಡೆದಿರುವ ಪ್ರತಿಬಿಂಬವನ್ನು ಹೇಳುವ ತಾತ್ಪರ್ಯವುಳ್ಳದ್ದು. ಅತ ಏವ - ಮತ್ಸ್ಯ ಮೊದಲಾದ

मत्स्यादिस्वांशरूपाणाम् ईशेन ज्ञानाद्यविशेषस्योक्तत्वादेव । अत एव-जीवस्यापि स्वरूपांशत्वे मत्स्याद्यविशेषापातादेव उपमा प्रतिबिम्बः ईशप्रतिबिम्बो जीवः । अत एव ईशप्रतिबिम्बत्वादेव सूर्यकादिवत् नेशाभिन्नो जीव इति च अस्यार्थः ।

आद्येऽर्थे हेतुसिद्धिः 'रूपं रूपं' इत्यादिश्रुत्यधीना । अन्त्येऽर्थे सूत्रोक्तयुक्त्यधीना ।

---

ಭಗವತ್ಸ್ವರೂಪಾಂಶವಾಗಿರುವ ರೂಪಗಳಿಗೆ ಭಗವಂತನಿಂದ ಜ್ಞಾನಾದಿ ವಿಷಯಗಳಲ್ಲಿ ಯಾವುದೇ ವಿಶೇಷವಿಲ್ಲವೆಂದು ಹೇಳಿರುವುದರಿಂದಲೇ, ಅತ ಏವ - ಜೀವನೂ ಭಗವತ್ಸ್ವರೂಪಾಂಶವಾಗಿದ್ದಲ್ಲಿ ಮತ್ಸ್ಯಾದಿ ರೂಪಗಳಿಗಿಂತ ಯಾವುದೇ ವಿಶೇಷವಿಲ್ಲದಿರುವಂತಾಗುವ ಪ್ರಸಂಗವಿರುವುದರಿಂದಲೇ, ಉಪಮಾ - ಪ್ರತಿಬಿಂಬನು- ಜೀವನು ಭಗವಂತನ ಪ್ರತಿಬಿಂಬನಾಗಿರುವನು. ಅತ ಏವ - ಈಶನ ಪ್ರತಿಬಿಂಬನಾದುದರಿಂದಲೇ ಸೂರ್ಯಕಾದಿಗಳು ಹೇಗೆ ಸೂರ್ಯಾಭಿನ್ನವಲ್ಲವೋ ಹಾಗೆಯೇ ಜೀವನೂ ಈಶಾಭಿನ್ನನಲ್ಲ— ಎಂದೂ ಈ ಸೂತ್ರದ ಅರ್ಥವಾಗಿದೆ.

ಸೂತ್ರಕ್ಕೆ ಮೇಲೆ ಹೇಳಿದ ಎರಡು ಅರ್ಥಗಳ ಪೈಕಿ ಮೊದಲನೆ ಅರ್ಥದಲ್ಲಿ ಹೇತುವಿನ ಸಿದ್ಧಿಯು 'ರೂಪಂ ರೂಪಂ' ಎಂಬ ಶ್ರುತಿಯನ್ನು ಅವಲಂಬಿಸಿದೆ. ಎರಡನೆ ಅರ್ಥದಲ್ಲಿ ಹೇತುವಿನ ಸಿದ್ಧಿಯು ಸೂತ್ರದಲ್ಲಿ ಹೇಳಿರುವ ಯುಕ್ತಿಗೆ ಅಧೀನವಾಗಿದೆ[1].

---

1. ಜೀವನು ಈಶಪ್ರತಿಬಿಂಬನಾಗಿರುವುದರಿಂದ ಮತ್ಸ್ಯಾದ್ಯವತಾರಗಳಂತೆ ಈಶಾಭಿನ್ನನಲ್ಲವೆಂದು ಮೊದಲನೆ ಅರ್ಥ. ಈ ಅರ್ಥದಲ್ಲಿ 'ಜೀವನು ಈಶಪ್ರತಿಬಿಂಬ' ಎಂಬ ಹೇತುವು 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬ ಶ್ರುತಿಯಿಂದ ಸಿದ್ಧವಾಗುವುದು. ಜೀವನು ಈಶಪ್ರತಿಬಿಂಬನಾಗಿರುವುದರಿಂದ ಈಶಾಭಿನ್ನನಲ್ಲವೆಂಬ ಎರಡನೆ ಅರ್ಥದಲ್ಲಿ 'ಜೀವನು ಈಶ ಪ್ರತಿಬಿಂಬ'ನೆಂಬ ಹೇತುವು ಸೂತ್ರವೇ ಹೇಳಿರುವ 'ಜೀವನು ಭಗವಂತನ ಸ್ವರೂಪಾಂಶವಾದಲ್ಲಿ ಮತ್ಸ್ಯಾದ್ಯವತಾರಗಳಿಗೂ ಜೀವನಿಗೂ ಯಾವುದೇ ವಿಶೇಷವಿಲ್ಲವಾದೀತು' ಎಂಬ ಯುಕ್ತಿಯನ್ನು ಅವಲಂಬಿಸಿದೆ.

'अत एव चोपमा' इत्यंशस्य वृत्त्यन्तरं तु – तृतीयार्थे तसिः। अत एव – 'पृथगुपदेशात्', 'तद्गुणसारत्वात्', 'सन्ध्ये सृष्टिः' इत्युक्तभिन्नत्वरूपसाध्य-सादृश्य-बिम्बाधीनत्वरूपसाधनधर्मैरेव, उपमा सूर्यकादिदृष्टान्तो न तूपाध्यायत्तत्वादिना। येनानित्यत्वादिदोषः स्यादिति। एतदर्थसूचनायैव द्वितीयेऽर्थे प्रतिबिम्ब इति वाच्ये

---

## ಸೂತ್ರದ ಒಂದು ಭಾಗಕ್ಕೆ ಇನ್ನೊಂದು ವ್ಯಾಖ್ಯಾನ

'ಅತ ಏವ ಚೋಪಮಾ' ಎಂಬ ಸೂತ್ರದ ಅಂಶಕ್ಕೆ ಇನ್ನೊಂದು ವ್ಯಾಖ್ಯಾನ ಹೀಗಿದೆ— 'ಅತಃ' ಎಂಬಲ್ಲಿ ತಸಿಪ್ರತ್ಯಯವು ತೃತೀಯಾ ವಿಭಕ್ತ್ಯರ್ಥವನ್ನು ಹೇಳುವುದು. ಅತ ಏವ – 'ಪೃಥಗುಪದೇಶಾತ್ (ಬ್ರ.ಸೂ. ೨.೩.೨೮) 'ತದ್ಗುಣ ಸಾರತ್ವಾತ್' (ಬ್ರ. ಸೂ. ೨.೩.೨೯), 'ಸಂಧ್ಯೇ ಸೃಷ್ಟಿಃ' (ಬ್ರ. ಸೂ. ೩.೨.೧) ಎಂಬ ಸೂತ್ರಗಳಲ್ಲಿ ಹೇಳಿದ 'ಭಗವಂತನ ಭೇದ' ಎಂಬ ಸಾಧ್ಯ ಮತ್ತು 'ಭಗವಂತನ ಸಾದೃಶ್ಯ', 'ಭಗವದ್ರೂಪವಾದ ಬಿಂಬಕ್ಕೆ ಅಧೀನವಾಗಿರುವುದು' ಮೊದಲಾದ ಸಾಧನಗಳು— ಇವುಗಳ ದೃಷ್ಟಿಯಿಂದಲೇ, ಉಪಮಾ– ಸೂರ್ಯಕವೇ ಮೊದಲಾದ ದೃಷ್ಟಾಂತಗಳನ್ನು ಕೊಡಲಾಗಿದೆ ಹೊರತು ಜೀವಭಾವವು ಉಪಾಧಿಗೆ ಅಧೀನ ವಾಗಿರುವುದೆಂದು ವಿವರಿಸಲು ಆ ದೃಷ್ಟಾಂತಗಳನ್ನು ಕೊಟ್ಟಿಲ್ಲ, ಹಾಗಿದ್ದಲ್ಲಿ ಜೀವನಿಗೆ ಅನಿತ್ಯತ್ವವೇ ಮೊದಲಾದ ದೋಷಗಳು ಉಂಟಾಗುತ್ತಿದ್ದವು— ಎಂದು. ಈ ಅರ್ಥವನ್ನು ಸೂಚಿಸುವ ಸಲುವಾಗಿಯೇ ಸೂತ್ರದ ಎರಡನೆ ಅರ್ಥದ ದೃಷ್ಟಿಯಿಂದ ಸೂತ್ರದಲ್ಲಿ ಪ್ರತಿಬಿಂಬ ಪದವನ್ನು ಹೇಳಬೇಕಾಗಿದ್ದರೂ ಅದರ ಬದಲು ಉಪಮಾ ಪದವನ್ನು ಹೇಳಲಾಗಿದೆ[1].

## ಜೀವೇಶರಿಗೆ ಭೇದಾಭೇದವನ್ನು ನಿರಾಕರಿಸುವ ಬದಲು ಅಭೇದವನ್ನು ನಿರಾಕರಿಸುತ್ತಿರುವುದರ ವಿವರಣೆ—

ಜೀವನು ಈಶಾಭಿನ್ನನೆಂಬ ಅಂಶದಲ್ಲಿ ಮಾತ್ರ ವಿವಾದವಿರುವುದರಿಂದ ಈ

---

1. ಮೂರನೇ ವ್ಯಾಖ್ಯಾನದಂತೆ ಉಪಮಾಪದವನ್ನು ದೃಷ್ಟಾಂತ ಎಂಬ ಅರ್ಥದಲ್ಲಿ ತೆಗೆದುಕೊಳ್ಳಲಾಗಿದೆ. ಎರಡನೆ ಅರ್ಥವನ್ನನುಸರಿಸಿ ಪ್ರತಿಬಿಂಬಪದವನ್ನು ಸೂತ್ರದಲ್ಲಿ ಸೇರಿಸಿದ್ದರೆ ಮೂರನೆ ವ್ಯಾಖ್ಯಾನ ಸಾಧ್ಯವಾಗುತ್ತಿರಲಿಲ್ಲವೆಂದು ಭಾವ.

उपमेत्युक्तिः । अभेदांश एव विवादात् तन्निरासः । पृथगित्यत्रोक्तं भेदमुपेत्याभेदस्यापि शङ्कनादपौनरुक्त्यम् । आद्यवृत्तौ भेदेऽविगानात् अभेदमात्रं शङ्कितम् ॥ १० ॥

### अम्बुवदधिकरणम्—११

॥ ॐ अम्बुवदग्रहणात्तु न तथात्वम् ॐ ॥ ३.२.१९

अत्रेशभक्तेः स्वरूपसुखाभिव्यक्तिरूपफलमुच्यते । अंबुवदिति सादृश्यार्थे वतिः । न मतुप् । स्नेहात्मकाम्बुपदेन मानसस्नेहो

---

ಸೂತ್ರದಲ್ಲಿ ಅಭೇದವನ್ನು ಮಾತ್ರ ನಿರಾಕರಿಸಲಾಗಿದೆ. 'ಪೃಥಗುಪದೇಶಾತ್' (ಬ್ರ.ಸೂ. ೨.೩.೨೮) ಎಂಬಲ್ಲಿ ಹೇಳಿರುವ ಭೇದವನ್ನು ಅಂಗೀಕರಿಸಿ ಅಭೇದವೂ ಇದೆಯೆಂದು ಶಂಕಿಸುತ್ತಿರುವುದರಿಂದ ಪೃಥಗುಪದೇಶಾಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿಯಿಲ್ಲ. ಮೊದಲನೆ ವ್ಯಾಖ್ಯಾನದಲ್ಲಿ, ಭೇದ ವಿಷಯದಲ್ಲಿ ವಿವಾದವಿಲ್ಲದಿರುವುದರಿಂದ ಜೀವೇಶರಿಗೆ ಅಭೇದವನ್ನು ಮಾತ್ರ ಶಂಕಿಸಲಾಗಿದೆ.

### ಅಂಬುವದಧಿಕರಣ--೧೧

## ಓಂ ಅಂಬುವದಗ್ರಹಣಾತ್ತು ನ ತಥಾತ್ವಮ್ ಓಂ
## ೩.೨.೧೯

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನಲ್ಲಿ ಮಾಡುವ ಭಕ್ತಿಗೆ ಸ್ವರೂಪಸುಖಾಭಿವ್ಯಕ್ತಿಯೆಂಬ ಫಲವಿದೆಯೆಂದು ಹೇಳಲಾಗುವುದು.

'ಅಂಬುವತ್' ಎಂಬಲ್ಲಿ ಸಾದೃಶ್ಯಾರ್ಥಕವಾದ ವತಿಪ್ರತ್ಯಯವಿದೆ. ಮತುಪ್ ಪ್ರತ್ಯಯವಿಲ್ಲ. [1]ಸ್ನೇಹ ಸ್ವಭಾವದ ಜಲವನ್ನು ಹೇಳುವ ಅಂಬುಪದವು ಮನಸ್ಸಿನ

---

1. ಪುಡಿ ಪುಡಿಯಾಗಿರುವ ಮಣ್ಣು ಮೊದಲಾದವನ್ನು ಉಂಡೆ ಮಾಡಲು ಸಹಕರಿಸುವ ಜಲದಲ್ಲಿರುವ ಒಂದು ವಿಶೇಷಗುಣ- ಸ್ನೇಹ.

लक्ष्यते। तथैव तत्त्वप्रदीपोक्तेः। ग्रहणं ज्ञानम्। अस्य विशेषणमम्बुवदिति। अम्बुवदग्रहणाद् ग्रहणाभावाद्—अम्बुसदृशज्ञानाभावादित्यर्थः, स्नेहयुक्तज्ञानाभावादिति यावत् — भक्त्यभावादिति तात्पर्यार्थः। 'तथात्वम्' इत्यनेन 'अत एव' इति पूर्वत्र प्रकृतं तद्गुणसारत्वरूपसादृश्यं परामृश्यते। तुर्विशेषे। व्यज्यत इति शेषः। भक्तिं विना सुखात्मकत्वरूपसादृश्यं न तु व्यज्यते न सम्यग् व्यज्यत इत्यर्थः।

सुप्तौ भक्तिं विनाऽपि व्यक्तिरस्तीत्यतः तुरुक्तः। भक्तिं

---

ಪರಿಣಾಮರೂಪವಾದ ಸ್ನೇಹವನ್ನು ತಿಳಿಸುವುದು. ಹೀಗೆಯೇ ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ. ಗ್ರಹಣವೆಂದರೆ ಜ್ಞಾನ. 'ಅಂಬುವತ್' ಎಂಬ ಪದವು ಗ್ರಹಣಪದಕ್ಕೆ ವಿಶೇಷಣವಾಗಿದೆ. ಅಂಬುವದಗ್ರಹಣಾತ್-ಜ್ಞಾನವಿಲ್ಲದಿರುವುದರಿಂದ–ಅಂಬುಸದೃಶವಾದ ಜ್ಞಾನವಿಲ್ಲದಿರುವುದರಿಂದ ಎಂದು ಅರ್ಥ. ಸ್ನೇಹಸಹಿತವಾದ ಜ್ಞಾನವಿಲ್ಲದಿರುವುದರಿಂದ ಎಂದು ಒಟ್ಟು ಅರ್ಥ. 'ಭಕ್ತಿ ಇಲ್ಲದಿರುವುದರಿಂದ' ಎಂದು ಅಭಿಪ್ರೇತವಾದ ಅರ್ಥ. 'ತಥಾತ್ವಂ' ಎಂಬ ಪದವು ಹಿಂದಿನ ಸೂತ್ರದಲ್ಲಿ 'ಅತ ಏವ' ಎಂಬ ಪದಗಳಿಂದ ಪ್ರಕೃತವಾಗಿರುವ [1]ತದ್ಗುಣಸಾರತ್ವರೂಪವಾದ ಸಾದೃಶ್ಯವನ್ನು ಪರಾಮರ್ಶಿಸುವುದು. 'ತು' ಶಬ್ದವು ವಿಶೇಷಾರ್ಥಕವಾಗಿದೆ. 'ಅಭಿವ್ಯಕ್ತವಾಗುವುದು ಎಂಬ ಪದವನ್ನು ಶೇಷವಾಗಿ ಸೇರಿಸಬೇಕು. ಭಕ್ತಿ ಇಲ್ಲದಿದ್ದಲ್ಲಿ ಜೀವನಿಗಿರುವ ಸುಖಸ್ವರೂಪತ್ವವೆಂಬ ಭಗವಂತನ ಸಾದೃಶ್ಯವು ಸರಿಯಾಗಿ ಅಭಿವ್ಯಕ್ತವಾಗುವುದಿಲ್ಲವೆಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

ಸುಷುಪ್ತಿಯಲ್ಲಿ ಭಕ್ತಿ ಇಲ್ಲದಿದ್ದರೂ ಜೀವಸ್ವರೂಪಸುಖದ ಅಭಿವ್ಯಕ್ತಿಯಾಗು

---

1. ಭಗವಂತನಂತೆ ಜ್ಞಾನಾನಂದಾದಿಗುಣ ಸ್ವರೂಪನಾಗಿರುವಿಕೆ.

विनेति वाच्ये 'अम्बुवत्' इत्याद्युक्तिः भक्तिस्वरूपोक्त्यर्था । एवमपि स्नेहपूर्वकज्ञानाभावादिति वाच्ये 'अम्बु' इत्युक्तिरम्बुगतस्नेहस्येव भक्त्येकदेशस्नेहस्य सहजत्वं द्योतयितुम् । गृह्णाति — अर्थं न मुञ्चतीति ज्ञानशब्दार्थसूचनाय ग्रहणपदमिति केचित् । भक्त्या तथात्वं व्यज्यत इत्यन्वयमुखेन वाच्ये व्यतिरेकमुखेनोक्तिः भक्त्य-

---

ವುದರಿಂದ ಭಕ್ತಿ ಇಲ್ಲದಿದ್ದಲ್ಲಿ ಸ್ವರೂಪಸುಖದ ಅಭಿವ್ಯಕ್ತಿಯಿಲ್ಲವೆನ್ನುವುದು ಹೇಗೆ ಎಂಬ ಆಶಂಕೆಯನ್ನು ನಿವಾರಿಸಲು ಸೂತ್ರದಲ್ಲಿ 'ತು'[1] ಶಬ್ದವನ್ನು ಹೇಳಲಾಗಿದೆ. 'ಭಕ್ತಿಂ ವಿನಾ' ಎಂದೇ ಹೇಳಬಹುದಾಗಿದ್ದರೂ 'ಅಂಬುವತ್' ಇತ್ಯಾದಿಯಾಗಿ ಹೇಳಿರುವುದು ಭಕ್ತಿಯ ಸ್ವರೂಪ[2]ವನ್ನು ತಿಳಿಸಲು. ಹೀಗೆ ಭಕ್ತಿಯ ಸ್ವರೂಪವನ್ನು ತಿಳಿಸುವ ಉದ್ದೇಶವಿದ್ದಲ್ಲಿ 'ಸ್ನೇಹಪೂರ್ವಕ ಜ್ಞಾನವಿಲ್ಲದಿರುವುದರಿಂದ' ಎಂದೇ ಹೇಳಬಹುದಾಗಿದ್ದರೂ, ಜಲದ ಧರ್ಮವಾದ ಸ್ನೇಹಗುಣವು ಹೇಗೆ ಜಲದ ಸಹಜ ಧರ್ಮವೋ ಹಾಗೆ ಭಕ್ತಿಯ ಒಂದು ಭಾಗವಾದ ಸ್ನೇಹವೂ ಸಹಜವಾದದ್ದು ಎಂದು ಸೂಚಿಸಲು 'ಅಂಬು' ಇತ್ಯಾದಿ ಹೇಳಲಾಗಿದೆ. ಗೃಹ್ಣಾತಿ ಅಂದರೆ 'ವಿಷಯುವನ್ನು ಬಿಡುವುದಿಲ್ಲ' ಎಂಬುದಾಗಿ ಜ್ಞಾನದ ಸ್ವಭಾವವನ್ನು ಸೂಚಿಸಲು ಜ್ಞಾನ ಎಂಬ ಅರ್ಥದಲ್ಲಿ ಗ್ರಹಣಪದವನ್ನು ಪ್ರಯೋಗಿಸಲಾಗಿದೆ ಎಂದು ಕೆಲವರು ಹೇಳುವರು. 'ಭಕ್ತಿಯಿಂದ ಜೀವನಲ್ಲಿ ಭಗವಂತನ ಸಾದೃಶ್ಯವು ಅಭಿವ್ಯಕ್ತವಾಗುವುದು' ಎಂದು ಅನ್ವಯರೂಪದಿಂದ ಹೇಳಬಹುದಾಗಿದ್ದಿತು. ಆದರೂ, ಭಕ್ತಿ ಇಲ್ಲದಿದ್ದರೂ ಸುಷುಪ್ತಿಯಲ್ಲಿ ಸ್ವರೂಪಸುಖದ ಅಭಿವ್ಯಕ್ತಿಯಾಗುವುದರಿಂದ ಸ್ವರೂಪಸುಖದ

---

1. 'ತು' ಶಬ್ದವು ವಿಶೇಷಾರ್ಥಕವಾದುದೆಂದು ಈಗಾಗಲೆ ಹೇಳಿದೆ. ಭಕ್ತಿ ಇಲ್ಲದಿದ್ದಲ್ಲಿ ವಿಶೇಷರೀತಿಯಿಂದ ಸ್ವರೂಪಸುಖದ ಅಭಿವ್ಯಕ್ತಿಯಾಗಲಾರದೆಂದು ಭಾವ.

2. ಸ್ನೇಹಗುಣಯುಕ್ತವಾದ ಜಲದ ಸಾದೃಶ್ಯವನ್ನು ಹೇಳುವ ಮೂಲಕ ಸ್ನೇಹಸಹಿತ ಮಾಹಾತ್ಮ್ಯಜ್ಞಾನರೂಪವಾದುದು ಭಕ್ತಿಯೆಂದು ತಿಳಿಸುವ ದೃಷ್ಟಿಯಿಂದ-- ಎಂದು ಭಾವ.

-भावेऽपि सुप्तौ सुखव्यक्तिरस्ति किं भक्त्येति शङ्किते, भक्त्यभावे सुखं न सम्यग् व्यज्यत इति समाधातुम् । एके तु — पुंस्त्वादिवदित्यत्रोक्तं सादृश्यस्याभिव्यक्तत्वं तथात्वमिति परामृश्यत इत्याहुः ॥ ११ ॥

## वृद्धिह्रासाधिकरणम्—१२

## ॥ ॐ वृद्धिह्रासभाक्त्वमन्तर्भावादुभयसामञ्जस्यादेवम् ॐ ॥ ३.२.२०

अत्र प्राक् फलहेतुतयोक्तभक्तेस्तारतम्यमुच्यते । अम्बुवद्-

---

ಅಭಿವ್ಯಕ್ತಿಗಾಗಿ ಭಕ್ತಿಯೇಕೆ ? ಎಂದು ಶಂಕಿಸಿದಲ್ಲಿ ಭಕ್ತಿ ಇಲ್ಲದಿದ್ದಲ್ಲಿ ಸುಖವು ಸರಿಯಾಗಿ ವ್ಯಕ್ತವಾಗುವುದಿಲ್ಲ ಎಂದು ಸಮಾಧಾನವನ್ನು ಸೂಚಿಸಲು 'ಭಕ್ತಿ ಇಲ್ಲದಿದ್ದಲ್ಲಿ ಸಾದೃಶ್ಯದ ಅಭಿವ್ಯಕ್ತಿಯಿಲ್ಲ' ಎಂದು ವ್ಯತಿರೇಕಮುಖದಿಂದ ಹೇಳಲಾಗಿದೆ. ಕೆಲವರು — 'ಪುಂಸ್ತ್ವಾದಿವತ್' (ಬ್ರ. ಸೂ. ೨.೩.೩೧) ಎಂಬಲ್ಲಿ ಹೇಳಿರುವ 'ಸಾದೃಶ್ಯದ ಅಭಿವ್ಯಕ್ತಿ' ಯನ್ನು ಈ ಸೂತ್ರದ 'ತಥಾತ್ವಂ' ಎಂಬ ಪದವು ಪರಾಮರ್ಶಿಸುವುದು ಎಂದು ಹೇಳುವರು.

## ವೃದ್ಧಿಹ್ರಾಸಾಧಿಕರಣ—೧೨

## ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಂ ಓಂ ೩.೨.೨೦

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಹಿಂದಿನ ಅಧಿಕರಣದಲ್ಲಿ ಸ್ವರೂಪಸುಖಾಭಿವ್ಯಕ್ತಿಯೆಂಬ ಫಲಕ್ಕೆ ಸಾಧನವೆಂದು ಹೇಳಲಾದ ಭಕ್ತಿಯ ತಾರತಮ್ಯವನ್ನು ಈ ಅಧಿಕರಣದಲ್ಲಿ ಹೇಳಲಾಗುವುದು.

ग्रहणपदोक्तभक्तिरिहान्वेति । भक्तेः वृद्धिह्रासभाक्त्वम् आधिक्यन्यूनतावत्त्वमस्ति । कुतः ? अन्तर्भावात् । ब्रह्मादीनामस्मदादीनां च भक्तत्वेऽन्तर्भावात् । तेषां महदल्पफलत्वादिति भावः । फलतारतम्येऽपि कुतो भक्तितारतम्यम् ? अत उक्तम् उभयेत्यादि । परस्येत्यस्ति । एवं भक्तितारतम्याङ्गीकार एवेशस्य उभयान् ब्रह्मादीन् अस्मदादीन् प्रति सामंजस्यसम्भवादित्यर्थः । अन्यथा निर्बीजं विषमफलदातुरीशस्य वैषम्यापत्तेः। फलवैषम्यानुपपत्त्या भक्तिवैषम्यमिति भावः ।

---

'ಅಂಬುವದಗ್ರಹಣ' ಎಂಬ ಪದದಿಂದ ಹೇಳಲಾದ ಭಕ್ತಿಯು ಇಲ್ಲಿ ಅನ್ವಿತವಾಗುವುದು. ಭಕ್ತಿಗೆ, ವೃದ್ಧಿಹ್ರಾಸಭಾಕ್ತ್ವಂ — ಆಧಿಕ್ಯ ನ್ಯೂನತೆಗಳನ್ನು ಹೊಂದಿರುವಿಕೆಯು ಇದೆ. ಏಕೆಂದರೆ, ಅಂತರ್ಭಾವಾತ್—ಚತುರ್ಮುಖ ಬ್ರಹ್ಮನಂತಹವರೂ ಮತ್ತು ನಮ್ಮಂತಹವರೂ ಭಕ್ತವರ್ಗದಲ್ಲಿ ಸೇರಿರುವುದರಿಂದ, ಚತುರ್ಮುಖ ಬ್ರಹ್ಮಾದಿಗಳು ಮಹಾಫಲವನ್ನೂ, ನಮ್ಮಂತಹವರು ಅಲ್ಪಫಲವನ್ನೂ ಹೊಂದುವುದರಿಂದ ಎಂದು ಭಾವ. ಫಲದಲ್ಲಿ ತಾರತಮ್ಯವಿದ್ದರೂ ಭಕ್ತಿಯಲ್ಲಿ ತಾರತಮ್ಯವನ್ನೇಕೆ ಅಂಗೀಕರಿಸಬೇಕು ಎಂಬ ಶಂಕೆಗೆ ಉತ್ತರ — 'ಉಭಯ' ಇತ್ಯಾದಿ. '[1]ಪರಸ್ಯ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಹೀಗೆ ಭಕ್ತಿತಾರತಮ್ಯವನ್ನು ಅಂಗೀಕರಿಸಿದಲ್ಲಿ ಮಾತ್ರ ಪರಮಾತ್ಮನಿಗೆ, ಉಭಯಾನ್ – ಚತುರ್ಮುಖಬ್ರಹ್ಮ ಮೊದಲಾದವರನ್ನೂ ನಮ್ಮಂತಹವರನ್ನೂ ಕುರಿತು, ಸಾಮಂಜಸ್ಯವು ಉಂಟಾದೀತೆಂದು ಅರ್ಥ. ಹಾಗಿಲ್ಲದಿದ್ದಲ್ಲಿ, ಕಾರಣವೇ ಇಲ್ಲದೆ ಕೆಲವರಿಗೆ ಹೆಚ್ಚು, ಕೆಲವರಿಗೆ ಕಡಿಮೆ ಹೀಗೆ ವಿಷಮಫಲವನ್ನು ಕೊಡುವ ಈಶನಿಗೆ ವೈಷಮ್ಯವಿದೆಯೆಂದಾದೀತು. ಫಲದಲ್ಲಿ ವೈಷಮ್ಯವಿರುವುದರಿಂದ ಭಕ್ತಿಯಲ್ಲೂ ವೈಷಮ್ಯವಿರುವುದೆಂದು ಭಾವ.

---

1. ಪರಮಾತ್ಮನಿಗೆ.

फलतारतम्यं कुत इत्यत आह—

॥ ॐ दर्शनाच्च ॐ ॥ ३.२.२१

'अथात आनन्दस्य मीमांसा' इत्यादौ फलतारतम्यदर्शनात् । चशब्दात् 'यथा भक्तिविशेषोऽत्र' इत्यादिस्मरणाच्चेत्यर्थः । फले वैषम्येऽपि भक्तौ तत् कुतः ? अन्यवैषम्यहेतुकत्वोपपत्तेरिति शङ्कां निरसितुं स्मृतिरुक्तेति ध्येयम् । फलवैषम्यश्रुतेरन्यथासिद्धिः 'अक्षरधियाम्' इत्यत्र निरसिष्यते ॥ १२ ॥

---

ಫಲದಲ್ಲಿ ತಾರತಮ್ಯವಿದೆ ಎನ್ನುವುದರಲ್ಲೇನು ಪ್ರಮಾಣ ಎಂಬ ಪ್ರಶ್ನೆಗೆ ಸಮಾಧಾನ—

ಓಂ ದರ್ಶನಾಚ್ಚ ಓಂ ೩.೨.೨೧

**ಸೂತ್ರಾರ್ಥ**

'ಅಥಾತ ಆನಂದಸ್ಯ ಮೀಮಾಂಸಾ' (ತೈ. ೨.೮) ಇತ್ಯಾದಿ ಶ್ರುತಿಗಳಲ್ಲಿ ಫಲ ತಾರತಮ್ಯವಿರುವುದು ದೃಷ್ಟವಾಗಿರುವುದರಿಂದ. 'ಚ' ಶಬ್ದದಿಂದ '[1]ಯಥಾ ಭಕ್ತಿವಿಶೇಷೋಽತ್ರ' ಇತ್ಯಾದಿಯಾಗಿ ಸ್ಮರಿಸಲಾಗಿರುವುದರಿಂದಲೂ—ಎಂದು ಅರ್ಥ.

ಫಲವೈಷಮ್ಯವಿದ್ದರೂ ಭಕ್ತಿಯಲ್ಲೇಕೆ ವೈಷಮ್ಯವನ್ನು ಒಪ್ಪಬೇಕು ? ಭಕ್ತಿಯಲ್ಲಿ ವೈಷಮ್ಯವಿಲ್ಲದಿದ್ದರೂ, ಇತರ ಕಾರಣಗಳ ವೈಷಮ್ಯದಿಂದಾಗಿ ಫಲ ವೈಷಮ್ಯವಿರಬಹುದು ಎಂಬ ಶಂಕೆಯನ್ನು ನಿರಾಕರಿಸಲು ಸ್ಮೃತಿಯನ್ನೂ ಹೇಳಲಾಗಿದೆಯೆಂದು ತಿಳಿಯಬೇಕು. ಫಲವೈಷಮ್ಯವನ್ನು ಹೇಳುವ ಶ್ರುತಿಗೆ ಬೇರೆ ಅರ್ಥವಿದೆ ಎಂಬ ಆಕ್ಷೇಪವನ್ನು 'ಅಕ್ಷರಧಿಯಾಂ' (ಬ್ರ. ಸೂ. ೩.೩.೩೪) ಎಂಬಲ್ಲಿ ನಿರಾಕರಿಸಲಾಗುವುದು.

---

1. 'ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ ।
ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ ॥

ಎಂದು ಸ್ಮೃತಿ. ಸಂಸಾರದಲ್ಲಿ ಜ್ಞಾನಿಗಳಿಗೆ ಪರಮಾತ್ಮನಲ್ಲಿ ಉಂಟಾಗುವ ಭಕ್ತ್ಯತಿಶಯವನ್ನನುಸರಿಸಿ ಅವರಿಗೆ ಲಿಂಗಶರೀರಭಂಗವಾದ ನಂತರ ಮೋಕ್ಷದಲ್ಲಿ ಆನಂದಾಭಿವ್ಯಕ್ತಿಯಲ್ಲೂ ವಿಶೇಷವುಂಟಾಗುವುದು ಎಂದು ಸ್ಮೃತಿಯ ಭಾವ.

प्रकृताधिकरणम्—१३

॥ ॐ प्रकृतैतावत्त्वं हि प्रतिषेधति ततो ब्रवीति च भूयः ॐ ॥ ३.२.२२

अत्रेशस्य जन्मादिसूत्रोक्तं विश्वपातृत्वं साध्यते। पर इत्यस्ति। विश्वपालक इति योग्यतयाऽन्वेति। परो विश्वपालकः। न स्वभावात् पालनसिद्धिः। कुतः? हि यस्मात् प्रकृतस्य 'अस्येदेषा सुमतिः' इत्यादिना प्रकृतस्य सृष्टिलयकर्तृत्वस्य एतावत्त्वं तावन्मात्रत्वं प्रतिषेधति,

---

ಪ್ರಕೃತಾಧಿಕರಣ—೧೩

ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ ೩.೨.೨೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವಂತನಿಗೆ ಜನ್ಮಾದಿಸೂತ್ರದಲ್ಲಿ ಹೇಳಿದ ವಿಶ್ವಪಾಲಕತ್ವವನ್ನು ಸಮರ್ಥಿಸಲಾಗುವುದು.

'ಪರಃ' ಎಂಬ ಪದವು ಅಧ್ಯಾಹೃತವಾಗುವುದು. ಅನ್ವಯಯೋಗ್ಯವಾದ 'ವಿಶ್ವಪಾಲಕಃ' ಎಂಬ ಪದವು ಅನ್ವಿತವಾಗುವುದು. ಪರಃ ವಿಶ್ವಪಾಲಕಃ — ಪರಮಾತ್ಮನು ವಿಶ್ವಪಾಲಕನಾಗಿರುವನು. ವಿಶ್ವಕ್ಕೆ ಸ್ವಾಭಾವಿಕವಾಗಿಯೇ ಪಾಲನೆಯುಂಟಾಗಲಾರದು. ಏಕೆಂದರೆ, ಹಿ - ಯಾವ ಕಾರಣದಿಂದ, ಪ್ರಕೃತಸ್ಯ - 'ಅಸ್ಯೇದೇಷಾ ಸುಮತಿಃ[1]' ಇತ್ಯಾದಿ ಶ್ರುತಿಯಿಂದ ಪ್ರಕೃತವಾಗಿರುವ ಸೃಷ್ಟಿ

---

1. ಅಸ್ಯೇದೇಷಾ ಸುಮತಿಃ ಪಪ್ರಥಾನಾಽಭವತ್ ಪೂರ್ವ್ಯಾ ಭೂಮನಾ ಗೌಃ ।
ಅಸ್ಯ ಸನೀಳಾ ಅಸುರಸ್ಯ ಯೋನೌ ಸಮಾನ ಆಭರಣೇ ಬಿಭ್ರಮಾಣಾಃ ।
ಕಿಂ ಸ್ವಿದ್ಧನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ।
ಸಂತಸ್ಥಾನೇ ಅಜರೇ ಇತಊತೀ ಅಹಾನಿ ಪೂರ್ವೀರುಷಸೋಽಜರಂತ।

ततः सृष्ट्यादिकर्तृत्वाद् भूयः अधिकं पातृत्वमपि ब्रवीति 'नैतावदेना परो अन्यदस्त्युक्षा स द्यावापृथिवी बिभर्ति' इति श्रुतिः चशब्दात् 'सृष्टिं च पालनं चैव' इति स्मृतिश्चात इत्यर्थः। श्रुतौ उक्तार्थस्य स्पष्टत्वाय स्मृतेरत्युक्तिः ॥ १३ ॥

---

ಕರ್ತೃತ್ವ ಮತ್ತು ಲಯಕರ್ತೃತ್ವಗಳಿಗೆ, ಏತಾವತ್ತ್ವಂ - ಅವುಗಳಷ್ಟೇ ಭಗವಂತನಿಗಿರುವುದು ಎನ್ನುವುದನ್ನು, ಪ್ರತಿಷೇಧತಿ - ಶ್ರುತಿಯು ನಿಷೇಧಿಸುತ್ತಿದೆ ; ತತಃ - ಆ ಸೃಷ್ಟ್ಯಾದಿಕರ್ತೃತ್ವಗಳಿಗಿಂತಲೂ, ಭೂಯಃ - ಅಧಿಕವಾಗಿ ಪಾಲಕತ್ವವನ್ನೂ, ಬ್ರವೀತಿ - 'ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ' ಎಂಬ ಶ್ರುತಿಯು ಹೇಳುತ್ತಿದೆ. 'ಚ' ಶಬ್ದದಿಂದ 'ಸೃಷ್ಟಿಂ ಚ ಪಾಲನಂ ಚೈವ' ಎಂಬ ಸ್ಮೃತಿಯೂ ಹೇಳುತ್ತಿದೆ— ಆದ್ದರಿಂದ ಎಂದು ಅರ್ಥ.

---

ನೈತಾವದೇನಾಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ ।
ತ್ವಚಂ ಪವಿತ್ರಂ ಕೃಣುತ ಸ್ವಧಾವಾನ್ಯದೀಂ ಸೂರ್ಯಂ ನ ಹರಿತೋ ವಹಂತಿ ॥
(ಋ. ೧೦.೩೧--೬, ೭, ೮)

ಆ ಭಗವಂತನಿಂದಲೇ ಬ್ರಹ್ಮಾದಿ ದೇವತೆಗಳ ಶ್ರೇಷ್ಠವಾದ ಬುದ್ಧಿಯು ಮೊಟ್ಟ ಮೊದಲಿಗೆ ಉಂಟಾಯಿತು. ಪೂರ್ಣನಾದ ಆ ವಿಷ್ಣುವಿನಿಂದಲೇ ಪೂರ್ವದಲ್ಲಿ ದ್ಯಾವಾ ಪೃಥಿವೀಗಳೂ ಉತ್ಪನ್ನವಾದವು. ವಾಯುದೇವರ ಭಾರ್ಯೆಯ ಗರ್ಭದಲ್ಲಿ ಧರಿಸಲ್ಪಟ್ಟ ಎಲ್ಲ ದೇವತೆಗಳೂ ಈ ವಿಷ್ಣುವಿನಿಂದಲೇ ಸಂಭೃತರಾಗುವರು.

ಸೃಷ್ಟಿಯ ಆದಿಯಲ್ಲಿ ಯಾವ ವನವಿತ್ತು ! ಯಾವ ವೃಕ್ಷವಿತ್ತು ! ಈ ಹರಿಯಿಂದಲೇ ದ್ಯಾವಾಪೃಥಿವ್ಯಾದಿ ಲೋಕಗಳೆಲ್ಲವೂ ಸಮುತ್ಪನ್ನವಾದವು. ಅವನಿಂದಲೇ ಈ ಲೋಕಗಳು ಸ್ಥಾಯಿಗಳೂ, ದೃಢಗಳೂ ಆದವು. ಅವನಿಂದಲೇ ಈ ಲೋಕಗಳ ಬಗ್ಗೆ ಜ್ಞಾನಾದಿಗಳೂ ಉಂಟಾದವು. ಹಿಂದಿನ ದಿನಗಳೂ, ಉಷಃಕಾಲಗಳೂ ಜೀರ್ಣವಾದವು.

ಜಗತ್ತಿನ ಸೃಷ್ಟಿ, ಸಂಹಾರಗಳನ್ನು ಮಾತ್ರವೇ ಭಗವಂತನು ಮಾಡುವುದಲ್ಲ-- ಭಕ್ತರ ಅಭಿಲಾಷೆಗಳನ್ನು ಪೂರೈಸುವ ಆ ಪರಮಾತ್ಮನು ದ್ಯಾವಾಪೃಥಿವಿಗಳನ್ನು ಪೋಷಿಸುವ ಕಾರ್ಯವನ್ನೂ ಮಾಡುವನು. ಪೂರ್ಣಸುಖನಾದ ಆ ಭಗವಂತನನ್ನು ಸ್ಮರಿಸಿ ನೀವು ನಿಮ್ಮ ಶರೀರವನ್ನು ಪವಿತ್ರಗೊಳಿಸಿರಿ --ಎಂದು ಅರ್ಥ.

अव्यक्ताधिकरणम्—१४

## ॥ ॐ तदव्यक्तमाह हि ॐ ॥ ३.२.२३

अत्रेशापरोक्ष्यस्य तद्भक्तिजन्यप्रसादैकसाध्यत्वमुच्यते । तदर्थं चतुर्भिः सूत्रैस्तस्याव्यक्तत्वमुच्यते । तद् ब्रह्माव्यक्तम् । कुतः ? हि यस्मात् 'अरूपमक्षरं ब्रह्म सदाऽव्यक्तं च निष्कलम्' इति श्रुतिराहाव्यक्तत्वमत इत्यर्थः । क्लीबोक्तिः श्रुत्यनुसारात् । तदाराधनाद् अव्यक्तस्याप्यापरोक्ष्यमस्तु । किं भक्त्येत्यत आह—

---

ಅವ್ಯಕ್ತಾಧಿಕರಣ--೧೪

## ಓಂ ತದವ್ಯಕ್ತಮಾಹ ಹಿ ಓಂ ೩.೨.೨೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವಂತನ ಭಕ್ತಿಯಿಂದ ಜನಿಸುವ ಭಗವದನುಗ್ರಹದಿಂದ ಮಾತ್ರವೇ ಅವನ ಅಪರೋಕ್ಷಜ್ಞಾನವು ಉಂಟಾಗಲು ಸಾಧ್ಯ ಎಂದು ಹೇಳಲಾಗುವುದು. ಅದಕ್ಕಾಗಿಯೇ, ನಾಲ್ಕು ಸೂತ್ರಗಳಿಂದ ಭಗವಂತನು ಅವ್ಯಕ್ತನೆಂದು ಇಲ್ಲಿ ಹೇಳಲಾಗಿದೆ.

ತದ್ - ಆ ಬ್ರಹ್ಮನು, ಅವ್ಯಕ್ತಂ - ಅವ್ಯಕ್ತನು. ಏಕೆಂದರೆ, ಹಿ - ಯಾವ ಕಾರಣದಿಂದ '[1]ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಮ್' ಎಂಬ ಶ್ರುತಿಯು ಬ್ರಹ್ಮನು ಅವ್ಯಕ್ತನೆಂದು ಹೇಳುವುದೋ ಆದ್ದರಿಂದ— ಎಂದು ಅರ್ಥ. 'ಸದಾಽವ್ಯಕ್ತಂ ಚ ನಿಷ್ಕಲಂ' ಎಂಬ ಶ್ರುತಿಯನ್ನನುಸರಿಸಿ ಸೂತ್ರದಲ್ಲಿ 'ಅವ್ಯಕ್ತಂ' ಎಂದು ನಪುಂಸಕಲಿಂಗ ಪ್ರಯೋಗವಿದೆ.

ಬ್ರಹ್ಮನು ಅವ್ಯಕ್ತನಾಗಿದ್ದರೂ ಅವನನ್ನು ಆರಾಧಿಸುವುದರಿಂದ ಅವನ ಅಪರೋಕ್ಷವಾಗಲಿ, ಭಕ್ತಿಯೇಕೆ ? ಎಂಬ ಶಂಕೆಗೆ ಉತ್ತರ—

---

1. ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಮ್ ।
ಯಜ್ಜ್ಞಾತ್ವಾ ಮುಚ್ಯತೇ ಜಂತುಃ ಅನಂದಶ್ಚಾಕ್ಷಯೋ ಭವೇತ್ ॥
ಎಂಬ ಕೌಂಠರವ್ಯ ಶ್ರುತಿ.

॥ ॐ अपि संराधने प्रत्यक्षानुमानाभ्याम् ॐ ॥ ३.२.२४

तदव्यक्तमित्यस्ति। भक्तिहीनाराधनेऽपि तद् ब्रह्माव्यक्तमेव। न व्यज्यते। कुतः? आराधनेऽप्यव्यक्तत्वस्येत्यन्वेति। तस्य ज्ञानिप्रत्यक्षेण सूक्ष्मत्वहेतुकानुमानेन च सिद्धत्वादिति शेषः। अज्ञापेक्षयानुमानोक्तिः। ज्ञानिप्रत्यक्षमप्यस्तीत्येतच्च 'न तमाराधयित्वाऽपि'

---

ಓಂ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ ಓಂ
೩.೨.೧೪

**ಸೂತ್ರಾರ್ಥ**

'ತದವ್ಯಕ್ತಂ' ಎಂಬ ಪದಗಳು ಅನುವೃತ್ತವಾಗುವುವು. ಭಕ್ತಿಯಿಲ್ಲದೆ ಆರಾಧಿಸಿದರೂ ಆ ಬ್ರಹ್ಮನು ಅವ್ಯಕ್ತನೇ ಆಗಿರುವನು. ಅಭಿವ್ಯಕ್ತನಾಗುವುದಿಲ್ಲ. ಏಕೆಂದರೆ— ಆರಾಧನೇಽಪಿ, ಅವ್ಯಕ್ತತ್ವಸ್ಯ ಎಂಬ ಪದಗಳು ಇಲ್ಲಿ ಅನ್ವಿತವಾಗುವವು —ಭಗವಂತನನ್ನು ಆರಾಧಿಸಿದರೂ ಅವ್ಯಕ್ತನೆಂದು ಜ್ಞಾನಿಗಳ ಪ್ರತ್ಯಕ್ಷದಿಂದಲೂ, 'ಸೂಕ್ಷ್ಮನಾದುದರಿಂದ ಬ್ರಹ್ಮನು ಅವ್ಯಕ್ತನು' ಎಂಬ ಸೂಕ್ಷ್ಮತ್ವಹೇತುಕ ಅನುಮಾನದಿಂದಲೂ ಸಿದ್ಧವಾಗಿದೆ. ಇಲ್ಲಿ 'ಸಿದ್ಧವಾಗಿದೆ' ಎಂಬ ಶೇಷವನ್ನು ಸೇರಿಸಲಾಗಿದೆ. ಅಜ್ಞಾನಿಗಳ ದೃಷ್ಟಿಯಿಂದ ಅವ್ಯಕ್ತತ್ವವನ್ನು ಸಾಧಿಸುವ ಅನುಮಾನವನ್ನು ಹೇಳಲಾಗಿದೆ. ಜ್ಞಾನಿಗಳಿಗೆ ಭಗವಂತನು ಅವ್ಯಕ್ತನೆಂಬ ಪ್ರತ್ಯಕ್ಷವಿರುವುದನ್ನು '[1]ನ ತಮಾರಾಧಯಿತ್ವಾಪಿ' ಎಂಬ ಸ್ಮೃತಿಯಿಂದ ತಿಳಿಯಬೇಕು.

**ಭಗವಂತನು ಅವ್ಯಕ್ತನಾದರೂ ಜ್ಞಾನಿ ಪ್ರತ್ಯಕ್ಷಗೋಚರನು :**

ಭಗವಂತನು ಅವ್ಯಕ್ತನಾಗಿದ್ದರೂ ತನ್ನ ಸಾಮರ್ಥ್ಯದಿಂದಾಗಿ ಜ್ಞಾನಿಗಳಿಗೆ ಪ್ರತ್ಯಕ್ಷನೂ ಆಗುವನೆಂದು ಮುಂದೆ ಹೇಳಲಾಗುವುದರಿಂದ ಭಗವಂತನು ಅವ್ಯಕ್ತನೂ ಪ್ರತ್ಯಕ್ಷಗೋಚರನೂ ಎಂದಲ್ಲಿ ವ್ಯಾಹತಿಯೆಂದು ಶಂಕಿಸಬಾರದು.

---

1. ನ ತಮಾರಾಧಯಿತ್ವಾಽಪಿ ಕಶ್ಚಿದ್ ವ್ಯಕ್ತೀಕರಿಷ್ಯತಿ। ನಿತ್ಯಾವ್ಯಕ್ತೋ ಯತೋ ದೇವಃ ಪರಮಾತ್ಮಾ ಸನಾತನಃ॥ –ಬ್ರಹ್ಮವೈವರ್ತ ವಚನ.

इत्यादिस्मृत्या बोध्यम् । अव्यक्तस्यापीशस्य स्वशक्त्या ज्ञानिनं प्रति प्रत्यक्षत्वस्याग्रे व्यक्तत्वाद् अव्यक्तत्वं प्रत्यक्षमिति व्याहतिरिति न शङ्क्यम् ।

अग्नेर्भूतस्य स्थूलसूक्ष्मरूपेण व्यक्तत्वाव्यक्तत्वद् ईशस्यापि मूलरूपेणाव्यक्तस्य गृहीतरूपैर्व्यक्तताऽस्त्वित्यत आह—

॥ ॐ प्रकाशवच्चावैशेष्यम् ॐ ॥ ३.२.२५

तदव्यक्तमित्यस्ति । चो नञर्थः । तद् ब्रह्म प्रकाशवच्च प्रकाशवन्न, अग्निवत् सूक्ष्मरूपेणाव्यक्तं स्थूलरूपेण व्यक्तमिति न । किन्त्वव्यक्तमेव । कुतः ? अवैशेष्यं तस्य ब्रह्मणः अविशेषत्वं, यत

---

ಪಂಚಭೂತಗಳಲ್ಲೊಂದಾದ ಅಗ್ನಿಯು ಸ್ಥೂಲರೂಪದಿಂದ ವ್ಯಕ್ತನೂ ಸೂಕ್ಷ್ಮ ರೂಪದಿಂದ ಅವ್ಯಕ್ತನೂ ಆಗಿರುವಂತೆ ಭಗವಂತನೂ ಕೂಡ ಮೂಲರೂಪದಿಂದ ಅವ್ಯಕ್ತನಾಗಿದ್ದರೂ, ಅವನು ಪರಿಗ್ರಹಿಸಿರುವ ಇತರ ರೂಪಗಳಿಂದ ವ್ಯಕ್ತನಾಗಿರ ಬಹುದು ಎಂಬ ಆಶಂಕೆಗೆ ಉತ್ತರ—

ಓಂ ಪ್ರಕಾಶವಚ್ಚಾವೈಶೇಷ್ಯಮ್ ಓಂ ೩.೨.೧೫

**ಸೂತ್ರಾರ್ಥ**

'ತತ್ ಅವ್ಯಕ್ತಂ' ಎಂಬ ಪದಗಳು ಅನುವೃತ್ತವಾಗುವುವು. 'ಚ' ಶಬ್ದವು ನಞ್ ಶಬ್ದದಂತೆ ನಿಷೇಧಾರ್ಥಕವಾದುದು. ತದ್ - ಬ್ರಹ್ಮನು, ಪ್ರಕಾಶವಚ್ಚ - ಪ್ರಕಾಶದಂತಲ್ಲ– ಅಗ್ನಿಯಂತೆ ಸೂಕ್ಷ್ಮರೂಪದಿಂದ ಅವ್ಯಕ್ತನೂ ಸ್ಥೂಲರೂಪದಿಂದ ವ್ಯಕ್ತನೂ ಆಗಿರುವನೆನ್ನುವುದು ಸರಿಯಲ್ಲ. ಅವನು ಎಲ್ಲ ರೂಪಗಳಿಂದಲೂ ಅವ್ಯಕ್ತನೇ ಆಗಿರುವನು. ಏಕೆಂದರೆ, ಅವೈಶೇಷ್ಯಂ – ಆ ಬ್ರಹ್ಮನಿಗೆ ಯಾವ ಕಾರಣದಿಂದ ಯಾವ ವಿಶೇಷಗಳೂ ಇಲ್ಲವೋ ಆದುದರಿಂದ— ಇಲ್ಲಿ 'ಯಾವ ಕಾರಣ ದಿಂದ' ಎಂಬ ಪದಗಳನ್ನು ಯೋಜಿಸಲಾಗಿದೆ. ಬ್ರಹ್ಮನಿಗೆ ಸ್ಥೂಲತ್ವ, ಸೂಕ್ಷ್ಮತ್ವ

इति योज्यं, तादृशाविशेषाभावादित्यर्थः । 'नासौ सूक्ष्मो न स्थूलः' इत्यादेः सर्वत्रैकरूपवत्त्वादिति भावः ।

तस्य सर्वथाऽव्यक्तत्वे किं भक्त्यादिनेत्यत आह—

॥ ॐ प्रकाशश्च कर्मण्यभ्यासात् ॐ ॥ ३.२.२६

कर्मणीति कर्मकारकमुच्यते । न क्रिया । तदिति सप्तम्यन्त-तयाऽनुवर्तते । कर्मणि कर्मकारके विषयभूते तस्मिन् ब्रह्मण्यभ्यासात् ।

---

ಮೊದಲಾದ ಯಾವುದೇ ವಿಶೇಷಗಳಿಲ್ಲದಿರುವುದರಿಂದ ಎಂದು ಅರ್ಥ. 'ನಾಸೌ ಸೂಕ್ಷ್ಮೋ ನ ಸ್ಥೂಲಃ[1]' ಇತ್ಯಾದಿ ಶ್ರುತಿಗಳಿಗನುಸಾರವಾಗಿ ಅವನು ಎಲ್ಲ ರೂಪಗಳಲ್ಲೂ ಒಂದೇ ರೀತಿ ಇರುವುದರಿಂದ ಎಂದು ಭಾವ.

ಆ ಬ್ರಹ್ಮನು ಎಲ್ಲ ರೀತಿಯಿಂದಲೂ ಅವ್ಯಕ್ತನೇ ಆಗಿರುವುದಾದಲ್ಲಿ ಭಕ್ತ್ಯಾದಿಗಳಿಂದೇನು ಪ್ರಯೋಜನ ಎಂಬ ಆಶಂಕೆಗೆ ಸಮಾಧಾನ—

ಓಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ ೩.೨.೨೬

**ಸೂತ್ರಾರ್ಥ**

'ಕರ್ಮಣಿ' ಎಂಬ ಪದವು ಕ್ರಿಯಾಕಾರಣವಾದ ಕರ್ಮವನ್ನು ಹೇಳುವುದು ಕ್ರಿಯೆಯನ್ನಲ್ಲ. 'ತತ್' ಶಬ್ದವನ್ನು ಸಪ್ತಮೀ ವಿಭಕ್ತ್ಯಂತವಾಗಿ ಬದಲಾಯಿಸಿ ಅನುವೃತ್ತಿ ಮಾಡಲಾಗುವುದು. ಕರ್ಮಣಿ - ಕರ್ಮಕಾರಕನಾಗಿರುವ ಅಂದರೆ ಜ್ಞಾನಾದಿಗಳಿಗೆ ವಿಷಯನಾಗಿರುವ ಆ ಬ್ರಹ್ಮನನ್ನು ಕುರಿತು, ಅಭ್ಯಾಸಾತ್ - ಶ್ರವಣ ಮೊದಲಾದುವುಗಳ ಅಭ್ಯಾಸದಿಂದ — ಇಲ್ಲಿ ಅನ್ವಯ ಯೋಗ್ಯವಾದ

---

1. 'ನಾಸೌ ಸೂಕ್ಷ್ಮೋ ನ ಸ್ಥೂಲಃ ಪರ ಏವ ಸ ಭವತಿ । ತಸ್ಮಾದಾಹುಃ ಪರಮಃ' --ಮಾಂಡವ್ಯ ಶ್ರುತಿ.

श्रवणादेरिति योग्यतयाऽन्वेति। ब्रह्मविषयकश्रवणादेः पौनःपुन्येन प्रकाशश्च तदपरोक्षज्ञानं च भवतीत्यर्थः। द्रष्टव्यः श्रोतव्य इत्यादेरिति भावः। कर्मणीत्युक्तिरवाच्यस्य शास्त्राविषयत्वात् न श्रवणादीति न शङ्क्यम्। ईक्षतिनये वाच्यत्वोक्त्या विषयत्वसाधनादिति तन्न्याय-स्मारणार्था। स्मारणं चात्राव्यक्तत्वोक्त्या अविषयत्वशङ्कोत्थाना-दित्युक्तं तत्त्वप्रदीपे।

कथमव्यक्तस्य साधनशतेनापि प्रकाश इष्यत आह—

---

'ಶ್ರವಣಾದಿಗಳ' ಎಂಬ ಪದವು ಅನ್ವಿತವಾಗುವುದು— ಬ್ರಹ್ಮನ ಶ್ರವಣ-ಮನನಾದಿಗಳನ್ನು ಪದೇ ಪದೇ ಮಾಡುವುದರಿಂದ, ಪ್ರಕಾಶಶ್ಚ - ಆ ಬ್ರಹ್ಮನ ಅಪರೋಕ್ಷ ಜ್ಞಾನವೂ ಉಂಟಾಗುವುದೆಂದು ಅರ್ಥ. 'ದ್ರಷ್ಟವ್ಯಃ ಶ್ರೋತವ್ಯಃ' (ಬೃ. ೪.೪.೫) ಇತ್ಯಾದಿ ಶ್ರುತಿಗಳಿಂದ ಈ ವಿಷಯವು ಸಿದ್ಧವಾಗಿದೆಯೆಂದು ಭಾವ.

**'ಕರ್ಮಣಿ' ಎಂಬ ಪ್ರಯೋಗದ ಉದ್ದೇಶ**

ಅವಾಚ್ಯನಾದ ಬ್ರಹ್ಮನು ಶಾಸ್ತ್ರವಿಷಯನೇ ಅಗುವುದಿಲ್ಲವಾದ್ದರಿಂದ ಅವನ ಶ್ರವಣಾದಿಗಳೂ ಇಲ್ಲ– ಎಂದು ಶಂಕಿಸತಕ್ಕುದ್ದಲ್ಲ. ಏಕೆಂದರೆ, ಈಕ್ಷತ್ಯಧಿಕರಣದಲ್ಲಿ ಬ್ರಹ್ಮನಿಗೆ ವಾಚ್ಯತ್ವವಿದೆಯೆಂದು ಹೇಳಿ ಶಾಸ್ತ್ರವಿಷಯತ್ವವನ್ನು ಸಾಧಿಸಲಾಗಿದೆ ಎಂಬುದಾಗಿ ಈಕ್ಷತ್ಯಧಿಕರಣದ ನ್ಯಾಯವನ್ನು ಸ್ಮರಣೆಗೆ ತಂದುಕೊಡಲು 'ಕರ್ಮಣಿ' ಎಂಬ ಪದ ಬಳಸಲಾಗಿದೆ. ಈ ಅಧಿಕರಣದಲ್ಲಿ ಭಗವಂತನು ಅವ್ಯಕ್ತನೆಂದು ಹೇಳಿರುವುದರಿಂದ ಅವನು ಶಾಸ್ತ್ರವಿಷಯನಾಗಲಾರನೆಂಬ ಶಂಕೆಯು ಹುಟ್ಟುವುದು. ಆ ಶಂಕೆಯನ್ನು ಪರಿಹರಿಸಲು ಈಕ್ಷತ್ಯಧಿಕರಣದ ನ್ಯಾಯವನ್ನು ಸ್ಮರಣೆಗೆ ತಂದುಕೊಡುವುದು ಅಗತ್ಯವೆಂದು ತತ್ತ್ವಪ್ರದೀಪದಲ್ಲಿ ಹೇಳಿದೆ.

ನೂರು ಸಾಧನಗಳಿರಬಹುದು, ಆದರೂ ಅವ್ಯಕ್ತನು ಪ್ರತ್ಯಕ್ಷ ಗೋಚರನಾಗುವುದೆಂತು ? ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರ——

|| ॐ अतोऽनन्तेन तथा हि लिङ्गम् ॐ || ३.२.२७

प्रकाश इत्यस्ति। अत इति 'आह हि' इति, 'प्रकाशश्च' इत्यत्र चाभिप्रेतश्रुतिद्वयं परामृश्यते। अव्यक्तत्वे प्रत्यक्षत्वे च प्रमाणसत्त्वादित्यर्थः। अनन्तेनापरिच्छिन्नशक्तिकेन ईशेन, तत्प्रसादेनेति यावत्। अतोऽव्यक्तस्यापि प्रकाशो भवतीति ज्ञायत इति योज्यम्। अन्यथा श्रुतिद्वयायोगादिति भावः। बलवद्युक्त्या

---

ಓಂ ಅತೋಽನಂತೇನ ತಥಾ ಹಿ ಲಿಂಗಂ ಓಂ ೩.೨.೨೭

**ಸೂತ್ರಾರ್ಥ**

'ಪ್ರಕಾಶಃ' ಎಂಬ ಪದವು ಅನುವೃತ್ತವಾಗುವುದು. 'ಅತಃ' ಎಂಬ ಪದವು 'ತದವ್ಯಕ್ತಮಾಹ ಹಿ' (ಬ್ರ. ಸೂ. ೩.೨.೨೨) 'ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್' (ಬ್ರ. ಸೂ. ೩.೨.೨೬) ಎಂಬ ಸೂತ್ರಗಳಲ್ಲಿ ಅಭಿಮತವಾಗಿರುವ ಎರಡು ಶ್ರುತಿ[1] ಗಳನ್ನು ಪರಾಮರ್ಶಿಸುವುದು. ಭಗವಂತನು ಅವ್ಯಕ್ತನೆಂಬ ವಿಷಯದಲ್ಲಿ ಹಾಗೂ ಪ್ರತ್ಯಕ್ಷಗೋಚರನೆಂಬ ವಿಷಯದಲ್ಲಿ ಪ್ರಮಾಣವಿರುವುದರಿಂದ ಎಂದು ಅರ್ಥ. ಅನಂತೇನ- ಅಪರಿಮಿತವಾದ ಸಾಮರ್ಥ್ಯವುಳ್ಳ ಭಗವಂತನಿಂದಾಗಿ, ಅವನ ಅನುಗ್ರಹ ದಿಂದಾಗಿ ಎಂದು ಭಾವ. 'ಆದ್ದರಿಂದ ಭಗವಂತನು ಅವ್ಯಕ್ತನಾಗಿದ್ದರೂ ಅವನ ಪ್ರತ್ಯಕ್ಷವುಂಟಾಗುವುದೆಂದು ತಿಳಿಯುವುದು' ಎಂಬ ಪದಗಳನ್ನು ಇಲ್ಲಿ ಯೋಜಿಸಿ ಕೊಳ್ಳಬೇಕು[2]. ಅವ್ಯಕ್ತನಾದ ಭಗವಂತನು ಪ್ರತ್ಯಕ್ಷಗೋಚರನಾಗಲು ಸಾಧ್ಯವಿಲ್ಲ ದಿದ್ದಲ್ಲಿ ಆ ಎರಡು ಶ್ರುತಿಗಳು ಯುಕ್ತವಾಗಲಾರವು ಎಂದು ಭಾವ.

---

1. 'ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಮ್' ಎಂಬ ಶ್ರುತಿ ಮತ್ತು 'ದ್ರಷ್ಟವ್ಯಃ ಶ್ರೋತವ್ಯಃ' ಎಂಬ ಶ್ರುತಿ.

2. ಭಗವಂತನು ಅವ್ಯಕ್ತನೂ, ಅದರೂ ಪ್ರತ್ಯಕ್ಷಗೋಚರನೆಂಬ ವಿಷಯದಲ್ಲಿ ಉದಾಹೃತ ಎರಡು ಶ್ರುತಿಗಳೇ ಪ್ರಮಾಣಗಳಾಗಿವೆ. ಅವ್ಯಕ್ತನಾದರೂ ಬ್ರಹ್ಮನು ತನ್ನ ಅಪರಿಮಿತ ಸಾಮರ್ಥ್ಯದಿಂದಾಗಿ ಪ್ರತ್ಯಕ್ಷನಾಗಬಲ್ಲ ಎಂದು ಒಟ್ಟು ಭಾವ.

चैवमित्युक्तं तथाहि लिङ्गमिति । तथेति समुच्चये । हिर्हेतौ । तस्याभिध्यानात्' इत्यादिश्रुत्युक्तं ईशप्रसादसाध्यबन्धनिवृत्तिरूपं लिङ्गं च प्रसादहेतुप्रकाशज्ञापकं हि यस्मादस्ति तस्मादप्येतत् ज्ञायत इत्यर्थः । प्रकाशस्य प्रसादसाध्यत्वादिति भावः । तेनेति वाच्येऽनन्तेनेत्युक्तिः अव्यक्तस्य प्रसादेनापि कथं प्रकाश इति न शङ्क्यम् । तस्यानन्तशक्तित्वादिति द्योतयितुम् ॥ १४ ॥

---

**"ತಥಾ ಹಿ ಲಿಂಗಂ" ಸೂತ್ರಾಂಶದ ವ್ಯಾಖ್ಯಾನ**

ಅವ್ಯಕ್ತನಾಗಿದ್ದರೂ ಭಗವಂತನು ಪ್ರತ್ಯಕ್ಷಗೋಚರನಾಗಬಲ್ಲನೆಂಬುದು ಪ್ರಬಲವಾದ ಯುಕ್ತಿಯಿಂದಲೂ ಸಿದ್ಧವಾಗುವುದೆಂದು 'ತಥಾ ಹಿ ಲಿಂಗಂ' ಎಂಬ ಸೂತ್ರಾಂಶದಿಂದ ಹೇಳಲಾಗಿದೆ. ಇಲ್ಲಿ 'ತಥಾ' ಶಬ್ದವು ಸಮುಚ್ಚಯವನ್ನು ಹೇಳುವುದು. 'ಹಿ' ಶಬ್ದವು ಹೇತ್ವರ್ಥಕವಾಗಿದೆ. ಹಿ–ಯಾವ ಕಾರಣದಿಂದ 'ತಸ್ಯಾಭಿಧ್ಯಾನಾತ್'[1] (ಶ್ವೇ. ೧.೧೦) ಎಂಬ ಶ್ರುತಿಯಲ್ಲಿ ಹೇಳಿರುವ 'ಭಗವಂತನ ಅನುಗ್ರಹದಿಂದ ಸಂಸಾರಬಂಧ ನಿವೃತ್ತಿಯಾಗುವುದು' ಎಂಬ ಲಿಂಗವೂ ಕೂಡ ಭಗವಂತನ ಅನುಗ್ರಹಕ್ಕೆ ಕಾರಣವಾಗಿರುವ ಭಗವಂತನ ಅಪರೋಕ್ಷವನ್ನು ಸೂಚಿಸುವುದೋ ಆದ್ದರಿಂದಲೇ ಅವ್ಯಕ್ತನಾಗಿದ್ದರೂ ಭಗವಂತನು ಪ್ರತ್ಯಕ್ಷನೂ ಆಗುವನೆಂದು ತಿಳಿಯುವುದೆಂದು ಅರ್ಥ. ಭಗವಂತನ ಅಪರೋಕ್ಷವು ಅವನ ಅನುಗ್ರಹದಿಂದಲೇ ಸಾಧ್ಯವೆಂದು ಭಾವ.

**'ಅನಂತ'ಪದ ಪ್ರಯೋಗದ ಸ್ವಾರಸ್ಯ**

ಆ ಭಗವಂತನಿಂದಾಗಿ ಅವನು ಅವ್ಯಕ್ತನಾಗಿದ್ದರೂ ಪ್ರತ್ಯಕ್ಷನಾಗಬಲ್ಲ ಎಂದು ಹೇಳಲು 'ತೇನ' ಎಂದಿಷ್ಟೇ ಹೇಳಿದ್ದರೂ ಸಾಕಾಗಿತ್ತು. ಆದರೂ—ಅವ್ಯಕ್ತನಾದವನು ಅನುಗ್ರಹ ಮಾತ್ರದಿಂದ ಹೇಗೆ ಪ್ರತ್ಯಕ್ಷನಾಗಬಲ್ಲ ? ಎಂದು ಶಂಕಿಸತಕ್ಕದ್ದಲ್ಲ. ಭಗವಂತನು ಅನಂತ ಶಕ್ತಿಶಾಲಿಯಾದ್ದರಿಂದ ಅವ್ಯಕ್ತನಾಗಿದ್ದರೂ ಪ್ರತ್ಯಕ್ಷನಾಗಬಲ್ಲನೆಂದು ಸೂಚಿಸಲು 'ಅನಂತೇನ' ಎಂದು ಹೇಳಲಾಗಿದೆ.

---

1. "ತಸ್ಯಾಭಿಧ್ಯಾನಾತ್ ಯೋಜನಾತ್ತತ್ತ್ವಭಾವಾತ್ ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ ।" [ಶ್ವೇ. ೧.೧೦] ಶ್ರುತ್ಯರ್ಥವನ್ನು ತದಭಿಧ್ಯಾನಾಧಿಕರಣದಲ್ಲಿ ಹೇಳಲಾಗಿದೆ.

अहिकुण्डलाधिकरणम्— १५

॥ ॐ उभयव्यपदेशात्त्वहिकुण्डलवत् ॐ ॥ ३.२.२८

अत्रेशस्य गुणित्वं गुणत्वं (च) साध्यते। उभयस्य गुणित्वस्य गुणात्मकत्वस्य च 'आनन्दं ब्रह्मणः', 'एष परम आनन्दः' इत्यादौ व्यपदेशात् गुणित्वं गुणत्वं चेत्यर्थः। श्रौतमपि कथमेतत्? क्वाप्यदृष्टेरित्यत उक्तम् — अहीति। अहिश्च कुण्डलं च तयोरिव। अहिकुण्डलयोस्तादात्म्येऽपि विशेषशक्त्या कुण्डलकुण्डलिभावो यथा

---

ಅಹಿಕುಂಡಲಾಧಿಕರಣ--೧೫

ಓಂ ಉಭಯವ್ಯಪದೇಶಾತ್ತ್ವಹಿಕುಂಡಲವತ್ ಓಂ
೩.೨.೨೮

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನು ಗುಣವುಳ್ಳವನೂ, ಗುಣಸ್ವರೂಪನೂ ಆಗಿರುವನೆಂದು ಸಾಧಿಸಲಾಗುವುದು.

ಉಭಯಸ್ಯ – ಭಗವಂತನು ಗುಣಶಾಲಿಯೂ ಗುಣಸ್ವರೂಪನೂ ಆಗಿರುವುದನ್ನು 'ಆನಂದಂ ಬ್ರಹ್ಮಣಃ' (ತೈ. ೨.೪) ಮತ್ತು, 'ಏಷ ಪರಮ ಆನಂದಃ' (ಬೃ. ೬.೩.೩೩) ಇತ್ಯಾದಿ ಶ್ರುತಿಗಳಲ್ಲಿ, ವ್ಯಪದೇಶಾತ್ – ಹೇಳಿರುವುದರಿಂದ, ಭಗವಂತನು ಗುಣಿಸ್ವರೂಪನೂ ಗುಣಾತ್ಮಕನೂ ಆಗಿರುವನು ಎಂದು ಅರ್ಥ.

ಒಂದು ವಸ್ತುವು ಗುಣಿಯೂ ಗುಣವೂ ಆಗಿರುವುದು ಎಲ್ಲೂ ಕಾಣದಿರುವುದರಿಂದ, ಶ್ರುತಿಯಲ್ಲಿ ಬ್ರಹ್ಮನು ಗುಣಿಯೂ ಗುಣಸ್ವರೂಪನೂ ಆಗಿರುವನೆಂದು ಹೇಳಿದ್ದರೂ ಅಂಗೀಕರಿಸುವುದು ಹೇಗೆ? ಎಂಬ ಶಂಕೆಗೆ ಉತ್ತರ— 'ಅಹಿ' ಎಂದು. ಸರ್ಪ ಮತ್ತು ಕುಂಡಲ ಇವುಗಳಿಗೆ ಹೇಗೋ ಹಾಗೆ. ಸರ್ಪ ಮತ್ತು ಅದರ ಕುಂಡಲಗಳಿಗೆ ತಾದಾತ್ಮ್ಯವಿದ್ದರೂ ವಿಶೇಷದ ಬಲದಿಂದಾಗಿ ಕುಂಡಲ – ಕುಂಡಲಿಭಾವ ಹೇಗಿದೆಯೋ ಹಾಗೆಯೇ ಈಶ್ವರನಿಗೂ ಅವನ ಗುಣಗಳಿಗೂ ಗುಣ - ಗುಣಿಭಾವ

तथैवेति । यद्वा कर्मधारयतत्पुरुषौ । अहिरूपकुण्डलम् , अहेः कुण्डलं यथा तथेति । कोऽर्थः ? अह्यात्मकमपि कुण्डलं यथा तद्धर्मस्तथाऽऽनन्दादिधर्मा अपीत्यर्थः । अहिना कुण्डलस्य भेदाभेदवत्त्वेऽपि मन्दानामभेदे बुद्धिमवतारयितुमिदम् । 'यथा पृथिव्यामोषधयः सम्भवन्ति' इतिवदित्युक्तं सुधायाम् । भाष्ये च तुशब्दः श्रुत्येक-

---

ವಿರುವುದು. ಅಥವಾ, ಅಹಿ-ಕುಂಡಲಪದವನ್ನು ಕರ್ಮಧಾರಯ ಮತ್ತು ತತ್ಪುರುಷ ಸಮಾಸವೆಂದೂ ಗ್ರಹಿಸಬಹುದು. ಸರ್ಪಸ್ವರೂಪವಾದ ಕುಂಡಲ, ಸರ್ಪದ ಕುಂಡಲ, ಹೇಗೋ ಹಾಗೆ ಎಂದು. ಏನರ್ಥ ? ಕುಂಡಲವು ಸರ್ಪಾತ್ಮಕವೇ ಆಗಿದ್ದರೂ ಹೇಗೆ ಸರ್ಪದ ಧರ್ಮವೂ ಆಗಿರುವುದೋ ಹಾಗೆ ಆನಂದ ಮೊದಲಾದವೂ ಬ್ರಹ್ಮಾತ್ಮಕವೇ ಆಗಿದ್ದರೂ ಬ್ರಹ್ಮನ ಧರ್ಮಗಳೂ ಆಗಿರುವವು.

### ಅಹಿ-ಕುಂಡಲ ದೃಷ್ಟಾಂತದ ಸಮರ್ಥನೆ

ಅಹಿಯಿಂದ ಅದರ ಕುಂಡಲಕ್ಕೆ ಭೇದಾಭೇದವಿದ್ದರೂ ಮಂದಬುದ್ಧಿಯವರಿಗೆ ಅಭೇದದ ವಿಷಯದಲ್ಲಿ ದೃಷ್ಟಿಯನ್ನು ಸೆಳೆಯಲು, ಬ್ರಹ್ಮನಿಗೆ ಜಗತ್ಕಾರಣತ್ವವನ್ನು ವಿವರಿಸುವಾಗ 'ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ' ಎಂದು ದೃಷ್ಟಾಂತವನ್ನು ಕೊಟ್ಟಿರುವಂತೆ[1] ಈ ದೃಷ್ಟಾಂತವನ್ನು ಕೊಡಲಾಗಿದೆ ಎಂದು ಸುಧಾದಲ್ಲಿ ಹೇಳಿದೆ. ಭಾಷ್ಯದಲ್ಲೂ—ಸೂತ್ರದಲ್ಲಿರುವ 'ತು' ಶಬ್ದವು 'ಬ್ರಹ್ಮನ ಗುಣಗಳಾದ

---

1. ಬ್ರಹ್ಮನ ಜಗತ್ಕಾರಣತ್ವವನ್ನು ವಿವರಿಸುವಾಗ 'ಯಥಾ ಪೃಥಿವ್ಯಾಂ ಓಷಧಯಃ ಸಂಭವಂತಿ' ಎಂದು ದೃಷ್ಟಾಂತವನ್ನು ಕೊಟ್ಟಿದೆ. ನಿಮಿತ್ತಕಾರಣನಾದ ಬ್ರಹ್ಮನಿಗೂ ಕಾರ್ಯವಾದ ಜಗತ್ತಿಗೂ ಅತ್ಯಂತ ಭೇದವಿದ್ದು ಔಷಧಿ-ಪೃಥಿವೀಗಳಿಗೆ ಭೇದಾಭೇದವಿರುವುದರಿಂದ ದೃಷ್ಟಾಂತ-ದಾರ್ಷ್ಟಾಂತಿಕಗಳಿಗೆ ಅತ್ಯಂತ ಸಾಮ್ಯವಿಲ್ಲ. ಆದರೂ ಜಗತ್ತಿಗೂ ಬ್ರಹ್ಮನಿಗೂ ಇರುವ ಭೇದದ ಕಡೆಗೆ ಮಂದರ ದೃಷ್ಟಿಯನ್ನು ಸೆಳೆಯಲು ಭೇದಾಭೇದವಿರುವ ದೃಷ್ಟಾಂತವನ್ನು ಕೊಟ್ಟಿರುವಂತೆ ಪ್ರಕೃತವೂ ಗುಣ-ಗುಣಿಗಳಿಗಿರುವ ಅಭೇದದ ಬಗ್ಗೆ ಗಮನ ಸೆಳೆಯಲು ಭೇದಾಭೇದವಿರುವ ಅಹಿ-ಕುಂಡಲ ದೃಷ್ಟಾಂತವನ್ನು ಕೊಟ್ಟಿದೆಯೆಂದು ಭಾವ.

गम्यत्वरूपविशेषार्थः । तेन नेशो गुणवान् तदात्मकत्वादित्यादियुक्तिविरोधो न शंक्यः ।

दृष्टान्तान्तरेणैतदाह—

॥ ॐ प्रकाशाश्रयवद्वा तेजस्त्वात् ॐ ॥ ३.२.२९

प्रकाशेति भास्वररूपं विवक्ष्यते । प्रकाशाश्रयस्यादित्यस्य यथा प्रकाशत्वं, प्रकाशित्वं तद्वद् गुणात्मकस्येशस्य गुणित्वमित्यर्थः। अन्यद् हित्वाऽऽदित्यदृष्टान्ते को हेतुरित्यत उक्तं—तेजस्त्वादिति । तेजो-

---

ಆನಂದಾದಿಗಳು ಬ್ರಹ್ಮಸ್ವರೂಪವೆನ್ನುವುದು ಶ್ರುತಿಯಿಂದ ಮಾತ್ರವೇ ತಿಳಿಯಲ್ಪಡುವುದು ಎಂಬ ವಿಶೇಷವನ್ನು ಹೇಳುವುದು. ಆದ್ದರಿಂದ, ಭಗವಂತನು ಗುಣಗಳಿಗೆ ಆಶ್ರಯನಲ್ಲ, ಗುಣಗಳಿಂದ ಅಭಿನ್ನನಾದುದರಿಂದ, ಇತ್ಯಾದಿ ಯುಕ್ತಿಗಳ ವಿರೋಧವನ್ನು ಶಂಕಿಸಲಾಗದು' ಎಂದು ಹೇಳಿದೆ.

ಪರಬ್ರಹ್ಮನು ಗುಣಸ್ವರೂಪನೂ ಗುಣಾಶ್ರಯನೂ ಆಗಿರುವುದೆನ್ನುವುದನ್ನು ಮತ್ತೊಂದು ದೃಷ್ಟಾಂತದ ಮೂಲಕ ಹೇಳುವ ಸೂತ್ರ—

## ಓಂ ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ಓಂ ೩.೨.೨೯

**ಸೂತ್ರಾರ್ಥ**

ಪ್ರಕಾಶಪದದಿಂದ ಭಾಸ್ವರರೂಪವು[1] ವಿವಕ್ಷಿತವಾಗಿದೆ. ಪ್ರಕಾಶಾಶ್ರಯಸ್ಯ – ಸೂರ್ಯನಿಗೆ ಹೇಗೆ ಭಾಸ್ವರರೂಪಾತ್ಮಕವೂ ಭಾಸ್ಕರರೂಪಾಶ್ರಯತ್ವವೂ ಇರುವುದೋ ಹಾಗೆಯೇ ಗುಣಸ್ವರೂಪನಾದ ಪರಬ್ರಹ್ಮನಿಗೆ ಗುಣಾಶ್ರಯತ್ವವು ಇರುವು ದೆ ಅರ್ಥ. ಇತರ ದೃಷ್ಟಾಂತಗಳನ್ನು ಬಿಟ್ಟು ಆದಿತ್ಯನ ದೃಷ್ಟಾಂತವನ್ನು ಕೊಡಲು ಕಾರಣವೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ತೇಜಸ್ತ್ವಾತ್' ಎಂದು ಹೇಳಲಾಗಿದೆ. ಸೂರ್ಯನೂ ತೇಜೋರೂಪನಾದ್ದರಿಂದ ಬ್ರಹ್ಮನಿಗೆ ಅಂತರಂಗ ದೃಷ್ಟಾಂತವಾಗುವ ಕಾರಣ ಸೂರ್ಯದೃಷ್ಟಾಂತವನ್ನು ಕೊಡಲಾಗಿದೆ ಎಂದು ಅರ್ಥ.

---

1. ಕಣ್ಣು ಕೋರೈಸುವ ರೂಪ.

रूपत्वेनांतरङ्गत्वादित्यर्थः । आदित्यवदिति वाच्ये एवमुक्तिरभेदेऽपि विशेषशक्त्याऽऽश्रयाश्रयिभावोऽस्तीति सूचनाय । अयं वा दृष्टान्त इति वाशब्दार्थः । एवमग्रेऽपि ।

एतदेव दृष्टान्तान्तरेणाऽऽह—

॥ ॐ पूर्ववद्वा ॐ ॥ ३.२.३०

यथा कालः पूर्वेणाभेदेऽपि पूर्व इति विशिष्यते, तथा गुणात्मकं ब्रह्म गुणीति विशिष्यत इत्यर्थः । दृष्टान्तत्रयमादरार्थं वा स्थूल-

---

**'ಪ್ರಕಾಶಾಶ್ರಯವತ್' ಎಂಬ ಪದಪ್ರಯೋಗದ ಸ್ವಾರಸ್ಯ**

ಅಭೇದವಿದ್ದರೂ ವಿಶೇಷಬಲದಿಂದ ಆಶ್ರಯ-ಆಶ್ರಯಿಭಾವವಿರುವುದು ಎಂದು ಸೂಚಿಸಲು, 'ಆದಿತ್ಯವತ್' ಎಂದು ಹೇಳಬಹುದಾಗಿದ್ದರೂ ಅದರ ಬದಲು ಹೀಗೆ 'ಪ್ರಕಾಶಾಶ್ರಯವತ್' ಎಂದು ಹೇಳಲಾಗಿದೆ. 'ಇದಾದರೂ ದೃಷ್ಟಾಂತವಾಗಬಹುದು' ಎಂದು 'ವಾ' ಶಬ್ದದ ಅರ್ಥ. ಹೀಗೆಯೇ ಮುಂದಿನ ಸೂತ್ರದಲ್ಲೂ 'ವಾ' ಶಬ್ದದ ಅರ್ಥವನ್ನು ತಿಳಿಯಬೇಕು.

ಭಗವಂತನಿಗೆ ಗುಣಿತ್ವ–ಗುಣತ್ವಗಳನ್ನೇ ಇನ್ನೊಂದು ದೃಷ್ಟಾಂತದಿಂದ ಸಮರ್ಥಿಸುವ ಸೂತ್ರ—

**ಓಂ ಪೂರ್ವವದ್ವಾ ಓಂ ೩.೨.೩೦**

**ಸೂತ್ರಾರ್ಥ**

ಹೇಗೆ ಕಾಲವು ಪೂರ್ವಕಾಲದಿಂದ ಅಭಿನ್ನವಾಗಿದ್ದರೂ 'ಪೂರ್ವಃ' ಎಂದು ವಿಶೇಷಣಯುಕ್ತವಾಗಿರುವಂತೆ ಹೇಳಲ್ಪಡುವುದೋ ಹಾಗೆ ಬ್ರಹ್ಮನು ಗುಣಸ್ವರೂಪನಾಗಿದ್ದರೂ 'ಗುಣಿ' ಎಂಬುದಾಗಿ ಗುಣರೂಪವಿಶೇಷಣಯುಕ್ತನಾಗಿರುವಂತೆ ಹೇಳಲ್ಪಡುವನು ಎಂದು ಅರ್ಥ.

**ಮೂರು ದೃಷ್ಟಾಂತಗಳನ್ನು ಕೊಡುವ ಉದ್ದೇಶ**

ಬ್ರಹ್ಮನು ಗುಣಸ್ವರೂಪನೂ ಗುಣಿಸ್ವರೂಪನೂ ಆಗಿರುವನೆಂಬ ವಿಷಯದಲ್ಲಿ

सूक्ष्ममत्यपेक्षया आद्यतृतीये, द्वितीयमन्तरङ्गत्वादिति वा बोध्यम् ।

गुणगुणिनोर्भेद एव किं न स्यादत आह—

॥ ॐ प्रतिषेधाच्च ॐ ॥ ३.२.३१

भेदस्येति शेषः । 'नेह नानाऽस्ति किञ्चन' इत्यादिश्रुतौ किञ्चन गुण्यादि नाना भिन्नं नास्तीति गुणगुण्यादिभेदस्य प्रतिषेधाच्च न भेद इत्यर्थः ॥ १५ ॥

परमताधिकरणम्—१६

॥ ॐ परमतः सेतून्मानसम्बन्धभेदव्यपदेशेभ्यः ॐ ॥
३.२.३१

---

ಆದರವನ್ನು ಸೂಚಿಸಲು ಮೂರು ದೃಷ್ಟಾಂತಗಳನ್ನು ಕೊಡಲಾಗಿದೆ. ಅಥವಾ, ಸ್ಥೂಲ-ಸೂಕ್ಷ್ಮಮತಿಗಳಾದ ಜಿಜ್ಞಾಸುಗಳ ದೃಷ್ಟಿಯಿಂದ ಕ್ರಮವಾಗಿ ಮೊದಲನೆಯ ಮತ್ತು ಮೂರನೆಯ ದೃಷ್ಟಾಂತಗಳನ್ನೂ, ಅಂತರಂಗವಾಗಿರುವುದರ ಕಾರಣ ಎರಡನೆಯ ದೃಷ್ಟಾಂತವನ್ನೂ ಕೊಡಲಾಗಿದೆ ಎಂದು ತಿಳಿಯಬೇಕು.

ಗುಣ-ಗುಣಿಗಳಿಗೆ ಭೇದವನ್ನೇ ಏಕೆ ಹೇಳಬಾರದು ಎಂಬ ಆಶಂಕೆಗೆ ಉತ್ತರ—

ಓಂ ಪ್ರತಿಷೇಧಾಚ್ಚ ಓಂ ೩.೨.೩೧

**ಸೂತ್ರಾರ್ಥ**

'ಭೇದಸ್ಯ' ಎಂಬ ಶೇಷವನ್ನು ಸೇರಿಸಬೇಕು. 'ನೇಹ ನಾನಾಽಸ್ತಿ ಕಿಂಚನ' ಎಂಬ ಶ್ರುತಿಯಲ್ಲಿ 'ಕಿಂಚನ'– ಗುಣಿ-ಗುಣ ಮೊದಲಾದ ಯಾವುದೂ, 'ನಾನಾ'– ಭಿನ್ನವಾದದ್ದು, 'ನಾಸ್ತಿ' – ಇಲ್ಲ ಎಂಬುದಾಗಿ ಗುಣ-ಗುಣಿ ಮೊದಲಾದವುಗಳಿಗೆ ಪರಸ್ಪರ ಭೇದವನ್ನು ನಿಷೇಧಿಸಿರುವುದರಿಂದಲೂ ಗುಣಗುಣ್ಯಾದಿಗಳಿಗೆ ಭೇದವಿಲ್ಲ ಎಂದು ಅರ್ಥ.

ಪರಮತಾಧಿಕರಣ—೧೬

ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ
ಓಂ ೩.೨.೩೨

अत्रेशगुणानाम् अलौकिकत्वमुच्यते । गुणजातमिति प्रकृतमन्वेति । आनन्दादिगुणजातम् अतः लौकिकानन्दादेः परं विलक्षणम् । कुतः ? सेतून्मानेति भावप्रधानम् । व्यपदेशपदं प्रत्येकमन्वेति । 'एष सेतुर्विधृतिर्य एष आनन्दः' इति सेतुत्वव्यपदेशात् , 'यतो वाचो निवर्तन्ते' इत्युन्मानत्वस्य पूर्णत्वस्योक्तेः,

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನ ಗುಣಗಳು ಲೋಕವಿಲಕ್ಷಣವಾದುವೆಂದು ಹೇಳಲಾಗುವುದು.

ಭಗವಂತನ ಗುಣಗಳ ವಿಚಾರವೇ ಪ್ರಸ್ತುತವಾಗಿರುವುದರಿಂದ 'ಗುಣಜಾತಂ' ಎಂಬ ಪದವು ಅನ್ವಿತವಾಗುವುದು. ಗುಣಜಾತಂ - ಭಗವಂತನ ಆನಂದಾದಿ ಗುಣಗಳ ಸಮೂಹವು, ಅತಃ - ಲೌಕಿಕವಾದ ಆನಂದಾದಿ ಗುಣಗಳಿಗಿಂತ, ಪರಂ - ವಿಲಕ್ಷಣವಾದುದು. ಏಕೆಂದರೆ, ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ—ಇಲ್ಲಿ 'ಸೇತೂನ್ಮಾನ' ಎಂಬ ಪದವು ಭಾವಪ್ರಧಾನನಿರ್ದೇಶ[1]ವಾಗಿದೆ. 'ವ್ಯಪದೇಶ' ಪದವು ಸಮಾಸದೊಳಗೆ ಎಲ್ಲ ಪದಗಳೊಂದಿಗೆ ಪ್ರತ್ಯೇಕವಾಗಿ[2] ಅನ್ವಯುವನ್ನು ಹೊಂದುವುದು.

'ಏಷ ಸೇತುರ್ವಿಧೃತಿಃ ಯ ಏಷಃ ಆನಂದಃ ಪರಸ್ಯ'[3] (ಛಾಂ. ೮.೪.೧) ಎಂದು ಪರಬ್ರಹ್ಮನ ಆನಂದಕ್ಕೆ ಸೇತುತ್ವವನ್ನು ಹೇಳಿರುವುದರಿಂದ, 'ಯತೋ ವಾಚೋ ನಿವರ್ತಂತೇ' (ತೈ. ೨.೪) ಎಂದು [4] ಉನ್ಮಾನತ್ವವನ್ನು ಅಂದರೆ

---

1. ಸೇತುತ್ವ, ಉನ್ಮಾನತ್ವ ಎಂಬ ಅರ್ಥದಲ್ಲಿ ಸೇತೂನ್ಮಾನಶಬ್ದವನ್ನು ಗ್ರಹಿಸಬೇಕೆಂದು ಭಾವ.

2. ಸೇತುತ್ವವ್ಯಪದೇಶ, ಉನ್ಮಾನತ್ವವ್ಯಪದೇಶ, ಸಂಬಂಧವ್ಯಪದೇಶ ಮತ್ತು ಭೇದವ್ಯಪದೇಶ- ಹೀಗೆ ಅನ್ವಯುವನ್ನು ಹೊಂದುವುದು.

3. ಪರಮಾತ್ಮನ ಆನಂದವು ಸಮಸ್ತ ಜಗತ್ತನ್ನು ಧಾರಣ ಮಾಡುವ ಸಾಮರ್ಥ್ಯ ಉಳ್ಳದ್ದು ಎಂದು ಶ್ರುತ್ಯರ್ಥ. ಸಮಸ್ತ ಜಗದಾಧಾರತ್ವರೂಪವಾದ ಸೇತುತ್ವವು ಲೋಕವಿಲಕ್ಷಣವಾದುದೆಂದು ಭಾವ.

4. ಉದ್ಗತಂ ಮಾನಂ-ಮರ್ಯಾದಾ ಯಸ್ಮಾತ್ ತತ್ತ್ವಂ ಉನ್ಮಾನತ್ವಂ, ಅಪರಿಮಿತವಾದುದೆಂದು ತಾತ್ಪರ್ಯ.

'एतस्यैवानन्दस्यान्यानि भूतानि मात्रामुपजीवन्ति' इति बिम्बप्रतिबिम्बरूपसम्बन्धोक्तेः । मात्रामित्यस्य प्रतिबिम्बांशमित्यर्थात् । 'अन्यज्ज्ञानं तु जीवानामन्यज्ज्ञानं परस्य च' इति भेदोक्तेरित्यर्थः ।

इतोऽप्येवमित्याह—

---

ಪೂರ್ಣತ್ವವನ್ನು ಹೇಳಿರುವುದರಿಂದ, 'ಏತಸ್ಯೈವ ಆನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ'[1] (ಬೃ. ೬.೩.೩೨) ಎಂದು ಜೀವರ ಆನಂದಕ್ಕೂ ಪರಮಾತ್ಮನ ಆನಂದಕ್ಕೂ ಬಿಂಬ–ಪ್ರತಿಬಿಂಬಭಾವ ರೂಪವಾದ ಸಂಬಂಧವನ್ನು ಹೇಳಿರುವುದರಿಂದ — ಇಲ್ಲಿ ಮಾತ್ರಾಂ ಎಂಬ ಪದಕ್ಕೆ 'ಪ್ರತಿಬಿಂಬರೂಪವಾದ ಅಂಶವನ್ನು' ಎಂಬ ಅರ್ಥ ಅರ್ಥಾತ್[2] ಸಿದ್ಧವಾಗುವದು; ಮತ್ತು 'ಅನ್ಯತ್ ಜ್ಞಾನಂ ತು ಜೀವಾನಾಂ ಅನ್ಯತ್ ಜ್ಞಾನಂ ಪರಸ್ಯ[3] ಚ' ಎಂಬುದಾಗಿ ಜೀವರ ಜ್ಞಾನಕ್ಕಿಂತಲೂ ಪರಮಾತ್ಮನ ಜ್ಞಾನವು ವಿಲಕ್ಷಣವಾದುದೆಂದು ಹೇಳಿರುವುದರಿಂದ ಭಗವಂತನ ಗುಣಗಳು ಅಲೌಕಿಕವಾದುವೆಂದು ಅರ್ಥ.

ಈ ಮುಂದಿನ ಕಾರಣದಿಂದಲೂ ಭಗವಂತನ ಗುಣಗಳು ಲೋಕವಿಲಕ್ಷಣವಾಗಿವೆ ಎಂದು ಹೇಳುವ ಸೂತ್ರ—

---

1. "ಮುಕ್ತರಾದ ಬ್ರಹ್ಮಾದಿ ಜೀವರೂ ಕೂಡ ಆ ಪರಮಾತ್ಮನ ಆನಂದದ ಒಂದು ಅಂಶವನ್ನು ಅನುಭವಿಸುವರು" ಎಂದು ಶ್ರುತಿಯ ಅರ್ಥ.

2. ಮಾತ್ರಾ ಎಂದರೆ ಒಂದು ಅಂಶ. ನಾವು ಅನುಭವಿಸುವ ಆನಂದವೇ ಪರಮಾತ್ಮನ ಆನಂದದ ಒಂದು ಅಂಶವಾಗಲಾರದು. ಆದರೆ ಆದಕ್ಕೆ ಅಧೀನವೂ ಸದೃಶವೂ ಆಗಿರುವುದರಿಂದ ನಮ್ಮ ಆನಂದ ಪರಮಾತ್ಮನ ಆನಂದದ ಪ್ರತಿಬಿಂಬರೂಪವಾದ ಅಂಶವೆಂದು ಅರ್ಥಾತ್ ಸಿದ್ಧವಾಗುವುದು.

3. ಅನ್ಯತ್ ಜ್ಞಾನಂ ತುಂ ಜೀವಾನಾಮನ್ಯತ್ ಜ್ಞಾನಂ ಪರಸ್ಯ ಚ ।
'ನಿತ್ಯಾನಂದಾವ್ಯಯಂ ಪೂರ್ಣಂ ಪರಜ್ಞಾನಂ ವಿಧೀಯತೇ ॥

ಎಂದು ಪ್ರಮಾಣ. ನಿಯಾಮಕವಾದ ಈಶನ ಜ್ಞಾನಕ್ಕಿಂತ ನಿಯಮ್ಯವಾದ ಜೀವರ ಜ್ಞಾನ ವಿಲಕ್ಷಣವಾದುದು. ಭಗವಂತನ ಜ್ಞಾನವು ನಿತ್ಯವಾಗಿ ಆನಂದರೂಪವೂ, ನಾಶರಹಿತವೂ ಆದುದೆಂದು ಶಾಸ್ತ್ರಗಳಲ್ಲಿ ಹೇಳಿದೆ' ಎಂದು ಪ್ರಮಾಣದ ಭಾವ.

## ॥ ॐ दर्शनात् ॐ ॥ ३.२.३२

अत इति प्रकृतानामन्यानन्दादीनामिति विपरिणामेनान्वयः। दर्शनमुपलक्षणम्। मनोवाग्गोचरत्वादन्यानन्दादीनां एतदीयानां तदभावतः परमीशगुणजातमित्यर्थः। तस्यालौकिकत्वे श्रुत्यादावानन्दादिशब्दप्रयोगः कथमित्यत आह—

---

## ಓಂ ದರ್ಶನಾತ್ ಓಂ ೩.೨.೩೨

**ಸೂತ್ರಾರ್ಥ**

ಹಿಂದಿನ ಸೂತ್ರದಲ್ಲಿ 'ಅತಃ' ಎಂಬ ಪದದಿಂದ, ಬ್ರಹ್ಮಾನ್ಯರಾದ ಜೀವರ ಆನಂದಾದಿ ಗುಣಗಳು ಪ್ರಕೃತವಾಗಿವೆ. ಹೀಗೆ ಲಭಿಸುವ 'ಅನ್ಯಾನಂದಾಹಿತಃ' ಎಂಬ ಪದವನ್ನು 'ಅನ್ಯಾನಂದಾದೀನಾಂ' ಎಂದು ಷಷ್ಠ್ಯಂತವಾಗಿ ಬದಲಾಯಿಸಿ ಕೊಂಡು ಇಲ್ಲಿ ಅನ್ವಯಿಸಬೇಕು. ದರ್ಶನಶಬ್ದವು ಭಗವಂತನ ಗುಣಗಳ ದರ್ಶನಾ ಭಾವವನ್ನು ಉಪಲಕ್ಷಣಯಾ ಹೇಳುವುದು.

ದರ್ಶನಾತ್ - ಜೀವರ ಆನಂದಾದಿ ಗುಣಗಳು ಮನೋವಾಕ್ಕುಗಳಿಗೆ ಗೋಚರ ವಾಗಿರುವುದರಿಂದ, ಭಗವಂತನ ಆನಂದಾದಿ ಗುಣಗಳು ಮನೋವಾಗ್ಗೋಚರವಲ್ಲ ದಿರುವುದರಿಂದ, ಭಗವದ್ಗುಣ ಸಮೂಹವು ಅತಃ ಪರಂ - ಲೌಕಿಕ ಆನಂದಾದಿ ಗುಣ ಗಳಿಗಿಂತ ವಿಲಕ್ಷಣವಾದುದೆಂದು ಅರ್ಥ.

ಭಗವಂತನ ಗುಣಗಳು ಅಲೌಕಿಕವಾಗಿದ್ದಲ್ಲಿ ಶ್ರುತಿ ಮೊದಲಾದವುಗಳಲ್ಲಿ ಅವುಗಳ ಬಗ್ಗೆ ಆನಂದಾದಿ ಶಬ್ದಗಳನ್ನು ಪ್ರಯೋಗಿಸಿರುವುದು ಹೇಗೆ ಯುಕ್ತವಾದೀತು ಎಂಬ ಶಂಕೆಗೆ ಉತ್ತರ—

## ॥ ॐ बुद्ध्यर्थः पादवत् ॐ ॥ ३.२.३३

पादवत् पादस्येव। आनंदादिपदप्रयोगः इति शेषः। यथा लोकपादविलक्षणेष्वपि भूतेषु 'पादोऽस्यविश्वा भूतानि' इति पादपदप्रयोगो बुद्ध्यर्थः भूतानामीशांशत्वज्ञानार्थः, ज्ञापनार्थ इति यावत्, यद्वा बुद्धीति ण्यन्तमुपेत्य बोधनार्थ इति व्याख्येयं, तथा अलौकिकेऽप्यानंन्दादिपदप्रयोगो बुद्ध्यर्थः अनुकूलवेद्यत्वा–(अन्योक्ता-वेद्यत्वनिरासा) र्थादिज्ञापनार्थो युक्त इत्यर्थः। बुद्ध्यर्थ इत्युक्ति-

---

## ಓಂ ಬುದ್ಧ್ಯರ್ಥಃ ಪಾದವತ್ ಓಂ ೩.೨.೩೪

**ಸೂತ್ರಾರ್ಥ**

ಪಾದವತ್ – ಪಾದಕ್ಕೆ ಹೇಗೋ ಹಾಗೆ, 'ಆನಂದಾದಿ–ಪದಪ್ರಯೋಗಃ' ಎಂಬ ಶೇಷವನ್ನು ಸೇರಿಸಬೇಕು.

ಹೇಗೆ ಲೋಕಪ್ರಸಿದ್ಧವಾದ ಪಾದಕ್ಕಿಂತ ವಿಲಕ್ಷಣವಾಗಿದ್ದರೂ ಭೂತಗಳನ್ನು ಕುರಿತು 'ಪಾದೋऽಸ್ಯ ವಿಶ್ವಾಭೂತಾನಿ' ಎಂದು ಪಾದಶಬ್ದವನ್ನು ಪ್ರಯೋಗಿಸಿರುವುದು, ಬುದ್ಧ್ಯರ್ಥಃ–ಭೂತಗಳು ಈಶ್ವರನ ಒಂದು ಅಂಶ ಎಂಬ ತಿಳುವಳಿಕೆಗಾಗಿಯೋ ಹಾಗೆಯೇ ಅಲೌಕಿಕವಾದ ಭಗವದ್ಗುಣಗಳನ್ನು ಕುರಿತು, ಆನಂದಾದಿಪದಪ್ರಯೋಗಃ —ಆನಂದಾದಿಪದಗಳನ್ನು ಪ್ರಯೋಗಿಸಿರುವುದು, ಬುದ್ಧ್ಯರ್ಥಃ — ಭಗವಂತನ ಆನಂದಾದಿ ಗುಣಗಳಿಗೆ ಅನುಕೂಲವೇದನೀಯತ್ವ ಮೊದಲಾದವನ್ನು ತಿಳಿಸುವ ಪ್ರಯೋಜನವುಳ್ಳದ್ದು. ಇಲ್ಲಿ ಬುದ್ಧ್ಯರ್ಥಃ ಎಂಬ ಪದಕ್ಕೆ 'ಜ್ಞಾನಕ್ಕೋಸ್ಕರ' ಎಂದರ್ಥವಾಗುವುದಾದರೂ 'ಜ್ಞಾನವನ್ನುಂಟುಮಾಡಲು' ಎಂದು ಅದರ ತಾತ್ಪರ್ಯ. ಅಥವಾ ಬುದ್ಧಿಶಬ್ದವನ್ನು ಣಿಜಂತವೆಂದು ಗ್ರಹಿಸಿ 'ಬೋಧನಕ್ಕೋಸ್ಕರ' ಎಂದು ವ್ಯಾಖ್ಯಾನ ಮಾಡಬಹುದು.

**'ಬುದ್ಧ್ಯರ್ಥಃ' ಎಂಬ ಪದದ ಪ್ರಯೋಜನ—**

ಭಗವಂತನ ಗುಣಗಳನ್ನು ಆನಂದಾದಿ ಪದಗಳಿಂದ ಕರೆಯುವುದರ ಪ್ರಯೋಜನ

रानन्दादिपदप्रयोगे प्रयोजनोक्त्यर्था । साऽपि स्वर्णघटे घटपदस्येव किञ्चित्सादृश्यमात्रेण व्युत्पत्तिर्युक्तेति सूचनार्था ॥ १६ ॥

स्थानविशेषाधिकरणम्—१७

॥ ॐ स्थानविशेषात् प्रकाशादिवत् ॐ ॥ ३.२.३४

अत्र ब्रह्माद्यानन्दादीनाम् ईशानन्दादिप्रतिबिम्बत्वमुच्यते । प्रकाशादिवत् सूर्यादिप्रतिबिम्ब इव । यथा सूर्यादिप्रतिबिम्बे सूर्यकांतादिस्थानविशेषात् स्थानगुणात् अग्निजनकत्वादिवैचित्र्यं तद्वद्

---

ವನ್ನು ಹೇಳುವುದಕ್ಕಾಗಿ 'ಬುದ್ಧ್ಯರ್ಥಃ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಪ್ರಯೋಜನವನ್ನು ಹೇಳಿರುವುದೂ ಕೂಡ—ಅಲ್ಪ ಹೋಲಿಕೆ ಇದ್ದ ಮಾತ್ರದಿಂದ. ಸುವರ್ಣಘಟವೂ ಘಟಪದವಾಚ್ಯವೆಂದು ತಿಳಿದುಬರುವಂತೆ ಲೌಕಿಕ ಆನಂದಾದಿ ಗುಣಗಳಿಗೂ ಭಗವಂತನ ಗುಣಗಳಿಗೂ ಅಲ್ಪ ಹೋಲಿಕೆ ಇದ್ದರೂ ಭಗವದ್ಗುಣಗಳು ಆನಂದಾದಿಪದವಾಚ್ಯವೆಂಬ ತಿಳಿವಳಿಕೆಯು ಯುಕ್ತವಾದದು ಎಂದು ಸೂಚಿಸುವುದಕ್ಕಾಗಿ.

ಸ್ಥಾನವಿಶೇಷಾಧಿಕರಣ—೧೭

ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ ೩.೨.೩೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬ್ರಹ್ಮಾದಿದೇವತೆಗಳ ಆನಂದಾದಿ ಗುಣಗಳು ಭಗವಂತನ ಆನಂದಾದಿ ಗುಣಗಳ ಪ್ರತಿಬಿಂಬಗಳೆಂದು ಹೇಳಲಾಗುವುದು.

ಪ್ರಕಾಶಾದಿವತ್ – ಸೂರ್ಯಾದಿಗಳ ಪ್ರತಿಬಿಂಬಗಳಂತೆ. ಹೇಗೆ ಸೂರ್ಯಾದಿ ಪ್ರತಿಬಿಂಬಗಳಲ್ಲಿ ಸೂರ್ಯಕಾಂತ ಮೊದಲಾದ ಸ್ಥಾನಗಳ ವಿಶೇಷದಿಂದ ಅಂದರೆ ಆ ಸ್ಥಾನಗಳ ಗುಣದಿಂದ ಅಗ್ನಿಜನಕತ್ವವೇ ಮೊದಲಾದ ವೈಚಿತ್ರ್ಯಗಳು ಉಂಟಾಗುವವೋ ಅಂತೆಯೇ ಚತುರ್ಮುಖ ಬ್ರಹ್ಮನೇ ಮೊದಲಾದ ಸ್ಥಾನಗಳಲ್ಲಿರುವ ಭಕ್ತ್ಯಾದಿಗುಣ

ब्रह्मादिस्थानगतानादिभक्त्यादिगुणविशेषात् प्रतिबिम्बवैचित्र्यसम्भवेन ब्रह्माद्यानन्दादिकम् ईशानन्दादिप्रतिबिम्बमिति योज्यम् ।

इतश्चैवमित्याह—

॥ ॐ उपपत्तेश्च ॐ ॥ ३.२.३५

चः समुच्चये । न केवलं स्थानगुणेन, किंतु बिम्बसामर्थ्याच्चेति । वैचित्र्यस्येत्यन्वेति । बिम्बभूतेशसामर्थ्याच्च ब्रह्माद्यानन्दादौ वैचित्र्यस्योपपत्तेस्तत्प्रतिबिम्बम् अन्यानन्दादिकम् । जले सूर्यप्रतिबिम्बादग्नि-

---

ವಿಶೇಷದಿಂದಾಗಿ ಪ್ರತಿಬಿಂಬಗಳಲ್ಲಿ ವೈಚಿತ್ರ್ಯಗಳು ಸಂಭವಿಸುವುದರಿಂದ ಬ್ರಹ್ಮಾದಿ ದೇವತೆಗಳ ಆನಂದಾದಿಗಳು ಭಗವಂತನ ಆನಂದಾದಿಗುಣಗಳ ಪ್ರತಿಬಿಂಬಗಳಾಗಿವೆ. 'ಬ್ರಹ್ಮಾದಿದೇವತೆಗಳ ಆನಂದಾದಿಗಳು ಭಗವಂತನ ಆನಂದಾದಿಗಳ ಪ್ರತಿಬಿಂಬಗಳು' ಎಂಬ ವಾಕ್ಯವನ್ನು ಇಲ್ಲಿ ಯೋಜಿಸಿಕೊಳ್ಳಬೇಕು.

ಈ ಮುಂದಿನ ಕಾರಣದಿಂದಲೂ ಜೀವರ ಆನಂದಾದಿಗಳು ಭಗವಂತನ ಆನಂದಾದಿಗಳ ಪ್ರತಿಬಿಂಬಗಳೆಂದು ಹೇಳುವ ಸೂತ್ರ—

ಓಂ ಉಪಪತ್ತೇಶ್ಚ ಓಂ ೩.೨.೩೬

**ಸೂತ್ರಾರ್ಥ**

'ಚ' ಶಬ್ದವು, 'ಸ್ಥಾನಗುಣದಿಂದ ಮಾತ್ರವೇ ಅಲ್ಲದೆ ಬಿಂಬಸಾಮರ್ಥ್ಯದಿಂದಲೂ ಕೂಡ' ಎಂದು ಸಮುಚ್ಚಯವನ್ನು ಹೇಳುವುದು. 'ವೈಚಿತ್ರ್ಯಸ್ಯ' ಎಂಬ ಪದವು ಅನ್ವಿತವಾಗುವುದು. ಬಿಂಬನಾಗಿರುವ ಭಗವಂತನ ಸಾಮರ್ಥ್ಯದಿಂದಲೂ ಬ್ರಹ್ಮಾದಿಗಳ ಆನಂದಾದಿ ಗುಣಗಳಲ್ಲಿ ವೈಚಿತ್ರ್ಯವಿರುವುದು ಯುಕ್ತವಾಗಿದೆಯಾದ್ದರಿಂದ ಜೀವರ ಆನಂದಾದಿಗಳು ಭಗವಂತನ ಆನಂದಾದಿಗಳ ಪ್ರತಿಬಿಂಬಗಳಾಗಿವೆ.

**जन्मादृष्टेः, सूर्यकांते मुखप्रतिबिम्बात् तददृष्टेः सूत्रद्वयमर्थवत् । अदृष्टानियमादित्यत्र जीवानां विचित्रत्वाद् अविचित्रब्रह्मप्रतिबिम्बत्वं नेति चोद्यं निरस्तम् । अत्र तु प्रतिबिम्ब इव बिम्बेऽपि वैचित्र्यं स्यादिति चोद्यं विशेषयुक्त्या च निरस्यत इति भेदः ॥ १७ ॥**

---

**ಸೂತ್ರದ್ವಯದ ಸಾರ್ಥಕತೆ ಮತ್ತು ಪೌನರುಕ್ತ್ಯಪರಿಹಾರ—**

[1] ನೀರಿನಲ್ಲಿ ಬಿದ್ದಿರುವ ಸೂರ್ಯಪ್ರತಿಬಿಂಬದಿಂದ ಅಗ್ನಿಯ ಉತ್ಪತ್ತಿ ಕಾಣದಿರುವುದರಿಂದ, ಸೂರ್ಯಕಾಂತದಲ್ಲಿ ಬಿದ್ದಿರುವ ಮುಖದ ಪ್ರತಿಬಿಂಬದಿಂದಲೂ ಅಗ್ನಿಯ ಉತ್ಪತ್ತಿ ಕಾಣದಿರುವುದರಿಂದ ಎರಡೂ ಸೂತ್ರಗಳು ಸಾರ್ಥಕವಾಗಿವೆ.

**'ಅದೃಷ್ಟಾನಿಯಮಾತ್'** (ಬ್ರ. ಸೂ. ೨.೩ ೫೦) **ಎಂಬ ಸೂತ್ರದಿಂದ ಪುನರುಕ್ತಿಯಿಲ್ಲ.**

'ಅದೃಷ್ಟಾನಿಯಮಾತ್' ಎಂಬಲ್ಲಿ ಜೀವರಲ್ಲಿ [2]ವೈಚಿತ್ರ್ಯಗಳಿರುವುದರಿಂದ ಅವರು ಯಾವುದೇ ವೈಚಿತ್ರ್ಯವಿಲ್ಲದ ಬ್ರಹ್ಮನ ಪ್ರತಿಬಿಂಬರಾಗಲಾರರು ಎಂಬ ಶಂಕೆಯನ್ನು ಪರಿಹರಿಸಲಾಗಿದೆ. ಇಲ್ಲಾದರೋ, ಪ್ರತಿಬಿಂಬದಲ್ಲಿ ವೈಚಿತ್ರ್ಯಗಳಿರುವಂತೆ ಬಿಂಬನಾದ ಬ್ರಹ್ಮನಲ್ಲೂ ವೈಚಿತ್ರ್ಯಗಳಿರಬೇಕಾದೀತು ಎಂಬ ಶಂಕೆಯನ್ನು ಸ್ಥಾನ ಗುಣದಿಂದಲೂ, ಬಿಂಬನಾದ ಬ್ರಹ್ಮನ ಸಾಮರ್ಥ್ಯಾತಿಶಯವೆಂಬ ಯುಕ್ತಿಯಿಂದಲೂ ಪರಿಹರಿಸಲಾಗಿದೆ ಎಂದು ಭೇದವಿದೆ.

---

1. ಜಲದಲ್ಲಿರುವ ಪ್ರತಿಬಿಂಬ ಸೂರ್ಯನದ್ದೇ ಆದರೂ ಅದಕ್ಕೆ ಅಗ್ನಿಜನಕತ್ವವಿಲ್ಲ. ಸೂರ್ಯಕಾಂತ ಮಣಿಯಲ್ಲಿ ಬಿದ್ದಿರುವ ಸೂರ್ಯಪ್ರತಿಬಿಂಬಕ್ಕೆ ಮಾತ್ರ ಅಗ್ನಿಜನಕತ್ವವಿದೆ. ಹೀಗೆ ಸ್ಥಾನವಿಶೇಷದಿಂದ ಪ್ರತಿಬಿಂಬದಲ್ಲಿ ವೈಚಿತ್ರ್ಯ ಹೇಳಲು 'ಸ್ಥಾನವಿಶೇಷಾತ್' ಇತ್ಯಾದಿ ಮೊದಲನೆ ಸೂತ್ರ. ಸೂರ್ಯಕಾಂತಮಣಿಯಲ್ಲಿ ಬಿದ್ದಿರುವ ಸೂರ್ಯನ ಪ್ರತಿಬಿಂಬ ಮಾತ್ರ ಅಗ್ನಿಜನಕ. ಮುಖದ ಪ್ರತಿಬಿಂಬ ಹಾಗಿಲ್ಲ. ಈ ದೃಷ್ಟಾಂತದಿಂದ ಪ್ರತಿಬಿಂಬದ ಕಾರ್ಯವೈಚಿತ್ರ್ಯಕ್ಕೆ ಬಿಂಬಸಾಮರ್ಥ್ಯವೂ ಕಾರಣವೆಂದು ತಿಳಿಯುವುದು. 'ಉಪಪತ್ತೇಶ್ಚ' ಎಂಬ ಎರಡನೆ ಸೂತ್ರದಲ್ಲಿ ಇದನ್ನು ಹೇಳಲಾಗಿದೆ. ಹೀಗೆ ಎರಡು ಸೂತ್ರಗಳೂ ವಿಭಿನ್ನ ರೀತಿಯಿಂದ ಬ್ರಹ್ಮಾದಿಗಳ ಆನಂದಾದಿಗುಣಗಳು ಈಶ್ವರನ ಆನಂದಾದಿಗಳ ಪ್ರತಿಬಿಂಬವೆಂದು ಸಾಧಿಸುವದೆಂದು ಭಾವ.

2. ಸುಖದುಃಖಾದಿ ವೈಚಿತ್ರ್ಯ.

तथान्यत्वाधिकरणम्—१८

॥ ॐ तथाऽन्यत्प्रतिषेधात् ॐ ॥ ३.२.३६

अत्रेशस्य प्रागुक्ताव्यक्तत्वमेव साध्यते। तदित्यस्ति। ध्यानप्रतीतादिति शेषः। एतदर्थे अत इत्यनुवृत्तिर्वा। तद् ब्रह्म ध्यानप्रतीतात् तथा ब्रह्मानंदादिवत् अन्यत् विलक्षणम्। न तु तदेव। येन व्यक्तं स्यादित्यर्थः। कुतः? प्रतिषेधात् 'यन्मनसा न मनुते', 'तदेव ब्रह्म त्वं विद्धि नेदं यदिदमुपासते' इति ध्याने प्रतीतस्य

---

ತಥಾನ್ಯತ್ವಾಧಿಕರಣ—೧೮

ಓಂ ತಥಾಽನ್ಯತ್ಪ್ರತಿಷೇಧಾತ್ ಓಂ ೩.೨.೩೬

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಹಿಂದೆ ಭಗವಂತನಿಗೆ ಹೇಳಿದ ಅವ್ಯಕ್ತತ್ವವನ್ನೇ ಈ ಅಧಿಕರಣದಲ್ಲಿ ಸಾಧಿಸಲಾಗುವುದು.

'ತತ್' ಎಂಬ ಪದವು ಅಧ್ಯಾಹೃತವಾಗುವುದು. 'ಧ್ಯಾನಪ್ರತೀತಾತ್' ಎಂಬ ಶೇಷವನ್ನು ಸೇರಿಸಬೇಕು. ಅಥವಾ, 'ಪರಮತಃ' (ಬ್ರ. ಸೂ. ೩.೨.೩೨) ಎಂಬ ಸೂತ್ರದಿಂದ 'ಧ್ಯಾನಪ್ರತೀತಾತ್' ಎಂಬ ಅರ್ಥದಲ್ಲಿ 'ಅತಃ' ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕು. ತತ್ - ಆ ಬ್ರಹ್ಮನು, ಧ್ಯಾನಪ್ರತೀತಾತ್ - ಧ್ಯಾನದಲ್ಲಿ ತೋರುವ ವಸ್ತುವಿಗಿಂತ, ತಥಾ - ಜೀವಾನಂದಾದಿಗಳಿಂದ ಬ್ರಹ್ಮಾನಂದಾದಿಗಳು ಹೇಗೆ ವಿಲಕ್ಷಣವಾಗಿವೆಯೋ, ಹಾಗೆಯೇ, ಅನ್ಯತ್ - ವಿಲಕ್ಷಣನಾಗಿದ್ದಾನೇ ಹೊರತು ಧ್ಯಾನದಲ್ಲಿ ತೋರುವ ವಸ್ತುವೇ ಅಲ್ಲ. ಹಾಗಿದ್ದಲ್ಲಿ ಬ್ರಹ್ಮನು ವ್ಯಕ್ತನಾಗುತ್ತಿದ್ದನೆಂದು ಅರ್ಥ. ಏಕೆಂದರೆ, ಪ್ರತಿಷೇಧಾತ್— 'ಯನ್ಮನಸಾ ನ ಮನುತೇ ............ ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ[1]' (ಕೇನ- ೧-೬)

1. 'ಧ್ಯಾನಮಾಡುವ ಪುರುಷನು ಯಾವ ವಸ್ತುವನ್ನು ತನ್ನ ಮನಸ್ಸಿನಿಂದ ಪೂರ್ಣವಾಗಿ ತಿಳಿಯಲಾರನೋ......ಅದನ್ನೇ ಬ್ರಹ್ಮವೆಂದು ತಿಳಿ, ಯಾವ ವಸ್ತುವನ್ನು ಧ್ಯಾನದಲ್ಲಿ ನೋಡುವನೋ ಅದು ಬ್ರಹ್ಮವಲ್ಲ' ಎಂದು ಶ್ರುತ್ಯರ್ಥ.

ब्रह्मत्वप्रतिषेधादित्यर्थः । अन्यदित्येव पूर्तौ तथेत्युक्तिर्यथा जीवानंदादेरल्पत्वादिहेतोस्ततोऽन्यद् ब्रह्मानंदादि तथोपासाकृतस्य दुर्लक्षणत्वादिहेतोस्ततोऽन्यद् ब्रह्मेति प्रागुक्तन्यायसूचनार्था । तदन्वयायैव परमित्यनुवृत्तावपि अन्यदित्युक्तिः ॥ १८ ॥

सर्वगतत्वाधिकरणम्—१९

॥ ॐ अनेन सर्वगतत्वमायामयशब्दादिभ्यः ॐ ॥

३.२.३८

अत्रेशस्यैव जगत्कर्तृत्वं साध्यते। सर्वसृष्ट्यादीति शेषः।

---

**ಸೂತ್ರದ 'ತಥಾ' ಶಬ್ದದ ಸ್ವಾರಸ್ಯ**

'ಅನ್ಯತ್' ಎಂದಿಷ್ಟೇ ಸಾಕಾಗಿದ್ದರೂ 'ತಥಾ' ಎಂದು ಹೇಳಿರುವುದು—ಜೀವನ ಆನಂದಾದಿಗಳು ಅಲ್ಪವಾಗಿರುವ ಕಾರಣದಿಂದಾಗಿ ಬ್ರಹ್ಮನ ಆನಂದಾದಿಗಳು ಹೇಗೆ ಜೀವನ ಆನಂದಾದಿಗಳಿಂದ ಭಿನ್ನವಾಗಿವೆಯೋ ಹಾಗೆಯೇ ಧ್ಯಾನದಲ್ಲಿ ತೋರುವ ವಸ್ತುವು ದುರ್ಲಕ್ಷಣವೇ ಮೊದಲಾದುವುಗಳನ್ನು ಹೊಂದಿರುವ ಕಾರಣ ಬ್ರಹ್ಮನು ಅದರಿಂದ ಭಿನ್ನನಾಗಿದ್ದಾನೆ ಎಂಬ ಹಿಂದೆ ಹೇಳಿದ ಯುಕ್ತಿಯನ್ನು ಸೂಚಿಸಲು. 'ಪರಂ' ಎಂಬ ಶಬ್ದವು ಅನುವೃತ್ತಿಯಿಂದ ಲಭಿಸುವುದಾದರೂ ಈ 'ತಥಾ' ಶಬ್ದದ ಅನ್ವಯಕ್ಕಾಗಿಯೇ 'ಅನ್ಯತ್' ಎಂದು ಸೂತ್ರದಲ್ಲಿ ಹೇಳಿದೆ.

ಸರ್ವಗತತ್ವಾಧಿಕರಣ—೧೯

ಓಂ ಅನೇನ ಸರ್ವಗತತ್ವಮಾಯಾಮಯಶಬ್ದಾದಿಭ್ಯಃ ಓಂ

೩.೨.೩೮

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಹಿಂದೆ ಭಗವಂತನಿಗೆ ಹೇಳಿದ ಅವ್ಯಕ್ತತ್ವವನ್ನೇ ಸಾಧಿಸಲಾಗುವುದು.

'ಸರ್ವಸೃಷ್ಟ್ಯಾದಿ' ಎಂಬ ಶೇಷವನ್ನು ಸೇರಿಸಬೇಕು. 'ಅನೇನ' ಎಂಬ ಪದವು ಅವಧಾರಣ ಅಂದರೆ 'ಏವ' ಕಾರದಿಂದ ಸಹಿತವಾದುದೆಂದು ಭಾವಿಸಬೇಕು.

अनेनेति सावधारणम् । अनेन प्रकृतेशेनैव सर्वसृष्ट्यादि । न देशांतरादावन्येन । कुतः ? सर्वगतत्वात् । 'एष सर्व एष सर्वगतः' इति सर्वगतत्वश्रवणात् । मायामय इति विष्णौ मायामयशब्दं व्याकुर्वच्छ्रुतिर्गृह्यते । 'सर्वत्र सर्वमेतस्मात्' इति मायामयशब्दव्याख्याश्रुतेः । आदिपदस्यान्यत्र प्रमाणाभावादित्यर्थः ॥ १९ ॥

फलाधिकरणम्—२०

॥ ओं फलमत उपपत्तेः ओं ॥ ३.२.३८

---

ಅನೇನ – ಪ್ರಕೃತನಾದ ಭಗವಂತನಿಂದಲೇ, ಸರ್ವಸೃಷ್ಟ್ಯಾದಿ – ಎಲ್ಲ ವಸ್ತುಗಳ ಸೃಷ್ಟಿ ಮೊದಲಾದವುಗಳು ನಡೆಯುವವು—ಹೊರತು ದೇಶಾಂತರ, ಕಾಲಾಂತರಗಳಲ್ಲಿ ಮತ್ತೊಬ್ಬರಿಂದ ನಡೆಯುವುದಿಲ್ಲ. ಏಕೆಂದರೆ, ಸರ್ವಗತತ್ವಮಾಯಾಮಯಶಬ್ದಾದಿಭ್ಯಃ–ಸರ್ವಗತತ್ವಾತ್— 'ಏಷ ಸರ್ವ ಏಷ ಸರ್ವಗತಃ[1]' (ಭಾಲ್ಲವೇಯ ಶ್ರುತಿ) ಎಂದು ಭಗವಂತನಿಗೆ ಸರ್ವಗತತ್ವವು ಶ್ರುತವಾಗಿರುವುದರಿಂದ, —'ಸರ್ವತ್ರ ಸರ್ವಮೇತಸ್ಮಾತ್[2]' (ಚತುರ್ವೇದಶಿಖಾ) ಎಂದು ಮಾಯಾಮಯಶಬ್ದವನ್ನು ವ್ಯಾಖ್ಯಾನ ಮಾಡುವ ಶ್ರುತಿಯಿಂದ— ಈ ಸೂತ್ರದ 'ಮಾಯಾಮಯ' ಶಬ್ದದಿಂದ ವಿಷ್ಣುವಿನಲ್ಲಿ ಮಾಯಾಮಯಶಬ್ದದ ವ್ಯಾಖ್ಯಾನವನ್ನು ಮಾಡುವ ಶ್ರುತಿಯನ್ನು ಗ್ರಹಿಸಲಾಗಿದೆ. 'ಶಬ್ದಾದಿಭ್ಯಃ' ಎಂಬಲ್ಲಿರುವ ಆದಿ ಪದಕ್ಕೆ ದೇಶಾಂತರ-ಕಾಲಾಂತರಗಳಲ್ಲಿ ಮತ್ತೊಬ್ಬರು ಸೃಷ್ಟಿಕರ್ತರೆಂದು ತಿಳಿಸುವ ಪ್ರಮಾಣವಿಲ್ಲದಿರುವುದರಿಂದ ಎಂದು ಅರ್ಥ.

ಫಲಾಧಿಕರಣ—೨೦

ಓಂ ಫಲಮತ ಉಪಪತ್ತೇಃ ಓಂ ೩-೨-೩೮

---

1. 'ಏಷ ಸರ್ವ ಏಷ ಸರ್ವಗತ ಏಷ ಸರ್ವೇಶ್ವರ ಏಷೋಽಚಿಂತ್ಯ ಏಷ ಪರಮಃ' (ಭಾಲ್ಲವೇಯ ಶ್ರುತಿ)

2. 'ಸರ್ವತ್ರ ಸರ್ವಮೇತಸ್ಮಾತ್ ಸರ್ವದಾ ಸರ್ವವಸ್ತುಷು । ಸ್ವರೂಪಭೂತಯಾ ನಿತ್ಯಶಕ್ತ್ಯಾ ಮಾಯಾಖ್ಯಯಾ ಯುತಃ । ಅತೋ ಮಾಯಾಮಯಂ ವಿಷ್ಣುಂ ಪ್ರವದಂತಿ ಸನಾತನಂ ॥'

अत्रेशस्य स्वर्गादिकर्मफलदातृत्वमुच्यते । अतः प्रस्तुतादीशात् फलं, न कर्मतः । कुतः ? उपपत्तेः । ईशस्य चेतनत्वेन फलदानसम्भवात् । कर्मणोऽचेतनत्वेन तदयोगादित्यर्थः ।

न केवलं संभावनामात्रमित्याह—

॥ ॐ श्रुतत्वाच्च ॐ ॥ ३.२.३९

'विज्ञानमानन्दं ब्रह्म रातिर्दातुः' इति फलदातृत्वस्य श्रुतत्वाच्चातः फलमित्यर्थः ।

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನೇ ಸ್ವರ್ಗ ಮೊದಲಾದ ಕರ್ಮಫಲಗಳನ್ನು ಕೊಡುವವನೆಂದು ಹೇಳಲಾಗುವುದು.

ಅತಃ - ಪ್ರಸ್ತುತನಾದ ಭಗವಂತನಿಂದ, ಫಲಂ - ಫಲವು ಲಭಿಸುವುದು ಹೊರತು ಕರ್ಮದಿಂದಲ್ಲ. ಏಕೆಂದರೆ, **ಉಪಪತ್ತೇಃ** – ಭಗವಂತನು ಚೇತನನಾದ್ದರಿಂದ ಫಲವನ್ನು ಕೊಡುವುದು ಸಾಧ್ಯವಿದೆ, ಕರ್ಮಗಳು ಅಚೇತನವಾದ್ದರಿಂದ ಫಲದಾತೃತ್ವವು ಅವುಗಳಿಗೆ ಯುಕ್ತವಲ್ಲವೆಂದು ಅರ್ಥ.

ಭಗವಂತನಿಗೆ ಫಲದಾತೃತ್ವವು ಇರಬಹುದೆಂದು ಊಹೆ ಮಾತ್ರವಲ್ಲವೆಂದು ಹೇಳುವ ಸೂತ್ರ—

**ಓಂ ಶ್ರುತತ್ವಾಚ್ಚ ಓಂ ೩.೨.೩೯**

**ಸೂತ್ರಾರ್ಥ**

'ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್'[1] (ಬೃ.ಉ.೯.೨೮) ಎಂಬ ಶ್ರುತಿಯಲ್ಲಿ ಭಗವಂತನು ಫಲದಾತೃವೆಂದು ಶ್ರುತನಾಗಿರುವುದರಿಂದಲೂ ಭಗವಂತನಿಂದಲೇ ಕರ್ಮಫಲವು ಲಭಿಸುವುದೆಂದು ಅರ್ಥ.

---

1. ಪೂರ್ಣಜ್ಞಾನನೂ ಪೂರ್ಣಾನಂದನೂ ಆದ ಬ್ರಹ್ಮನು ಹವಿಸ್ಸನ್ನು ಕೊಡುವ ಯಜಮಾನನಿಗೆ ಫಲವನ್ನು ಕೊಡುವ ನಿಮಿತ್ತ ಅತ್ಯಂತ ಪ್ರಿಯನು ಎಂದು ಶ್ರುತ್ಯರ್ಥ.

ईशात् फलमित्येतदाक्षिपति—

॥ ॐ धर्मं जैमिनिरत एव ॐ ॥ ३.२.४०

फलमत इत्यस्ति। अत एवेति तन्त्रम्। अत एव 'एष ह्येव साधुकर्म कारयति' इत्यादिश्रुतेरेव, अत एवेशादेव, धर्ममिति कर्ममात्रोपलक्षणं, धर्माधर्माख्यं कर्म कारितं जैमिनिराह। अतः कर्मण एव च फलं भवतीत्याहेत्यर्थः। धर्मादिति वाच्येऽर्थविशेषलाभायैवं विन्यासः। रातिर्दातुरिति श्रुतिः पारम्पर्यपरेति भावः।

---

ಭಗವಂತನಿಂದಲೇ ಫಲವು ಲಭಿಸುವುದೆನ್ನುವುದನ್ನು ಆಕ್ಷೇಪಿಸುವ ಸೂತ್ರ—

ಓಂ ಧರ್ಮಂ ಜೈಮಿನಿರತ ಏವ ಓಂ ३.२.४०

**ಸೂತ್ರಾರ್ಥ**

'ಫಲಂ ಅತಃ' ಎಂಬ ಪದಗಳು ಅನುವೃತ್ತವಾಗುವವು. 'ಅತ ಏವ' ಎಂಬ ಪದಗಳು ಅನೇಕ ರೀತಿಯಿಂದ ಉಪಕಾರಕವಾಗುವಂತೆ ಯೋಜಿಸಲ್ಪಡುವುವು.

ಅತ ಏವ – 'ಏಷ ಹ್ಯೇವ ಸಾಧು ಕರ್ಮ ಕಾರಯತಿ' (ಕೌ. ३.८) ಇತ್ಯಾದಿ ಶ್ರುತಿಯ ಆಧಾರದಿಂದಲೇ, ಅತ ಏವ – ಭಗವಂತನಿಂದಲೇ, ಧರ್ಮಂ — ಸಾಧುಕರ್ಮ, ಅಸಾಧುಕರ್ಮಗಳೆಂಬ ಎಲ್ಲ ಕರ್ಮಗಳೂ ಮಾಡಿಸಲ್ಪಡುವವು ಎಂದು— ಇಲ್ಲಿ ಧರ್ಮಪದವು ಉಪಲಕ್ಷಣಯಾ ಎಲ್ಲ ರೀತಿಯ ಕರ್ಮಗಳನ್ನು ಹೇಳುವುದು—, ಜೈಮಿನಿಃ ಆಹ – ಜೈಮಿನಿ ಋಷಿಗಳು ಹೇಳುವರು. ಅತ ಏವ– ಕರ್ಮದಿಂದಲೇ ಫಲವು ಉಂಟಾಗುವುದೆಂದು ಹೇಳುವುದೆಂದು ಅರ್ಥ.

**'ಧರ್ಮಂ ಜೈಮಿನಿಃ' ಎಂದು ಸೂತ್ರವಿನ್ಯಾಸದ ಉದ್ದೇಶ**

ಕರ್ಮದಿಂದಲೇ ಫಲವು ಲಭಿಸುವುದು ಎಂಬ ಅರ್ಥವು ಉಂಟಾಗುವಂತೆ 'ಧರ್ಮಾತ್' ಎಂದು ಸೂತ್ರವಿನ್ಯಾಸವನ್ನು ಮಾಡಬಹುದಾಗಿದ್ದರೂ ಅರ್ಥವಿಶೇಷ

समाधत्ते—

॥ ॐ पूर्वं तु बादरायणो हेतुव्यपदेशात् ॐ ॥ ३.२.४१

धर्ममित्यस्ति । तुर्विशेषे। हेत्विति भावप्रधानम् । पूर्वोक्तं ब्रह्म धर्मं च फलहेतुं बादरायणो मन्यते । ब्रह्म कर्तृत्वेन धर्मं करणत्वेन, न तु साम्येनेति तोरर्थः । कुतः ? हेतुव्यपदेशात् । पुण्येन पुण्यं लोकं नयति इति ब्रह्मकर्मणोः कर्तृत्वकरणत्वरूपहेतुव्यपदेशादित्यर्थः ।

---

ಲಭಿಸುವುದೆಂಬ ಕಾರಣದಿಂದ [1]'ಧರ್ಮಂ ಜೈಮಿನಿಃ' ಎಂದು ಸೂತ್ರವಿನ್ಯಾಸವನ್ನು ಮಾಡಲಾಗಿದೆ. 'ರಾತಿರ್ದಾತುಃ' ಎಂಬ ಶ್ರುತಿಯು ಪರಂಪರೆಯಿಂದ ಈಶ್ವರನು ಫಲ ಕೊಡುವನೆಂದು ಹೇಳುವುದೆಂದು ಭಾವ.

ಸಮಾಧಾನವನ್ನು ಹೇಳುವ ಸೂತ್ರ—

## ಓಂ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ಓಂ ೩.೨.೪೧

**ಸೂತ್ರಾರ್ಥ**

'ಧರ್ಮಂ' ಎಂಬ ಪದವು ಅನುವೃತ್ತವಾಗುವುದು. 'ತು' ಶಬ್ದವು ವಿಶೇಷಾರ್ಥಕವಾಗಿದೆ. 'ಹೇತು' ಶಬ್ದವು ಭಾವಪ್ರಧಾನನಿರ್ದೇಶವಾಗಿದೆ[2].

ಪೂರ್ವಂ - ಹಿಂದೆ ಉಕ್ತವಾಗಿರುವ ಬ್ರಹ್ಮ ಮತ್ತು ಕರ್ಮಗಳೆರಡನ್ನೂ ಫಲ ಕಾರಣವೆಂದು ಬಾದರಾಯಣರು ತಿಳಿಯುವರು. ಬ್ರಹ್ಮನು ಕರ್ತೃವಾಗಿ ಫಲಕಾರಣ ನೆಂದೂ, ಕರ್ಮವು ಕರಣವಾಗಿ ಫಲಕಾರಣವೆಂದೂ, ಸಮಾನರೀತಿಯಿಂದ ಅಲ್ಲ ವೆಂದೂ 'ತು' ಶಬ್ದದ ಅರ್ಥ. ಏಕೆಂದರೆ, ಹೇತುವ್ಯಪದೇಶಾತ್ – 'ಪುಣ್ಯೇನ

---

1. 'ಧರ್ಮಾತ್ ಜೈಮಿನಿಃ' ಇತ್ಯಾದಿಯಾಗಿ ಸೂತ್ರವನ್ನು ರಚಿಸಿದಲ್ಲಿ ಕರ್ಮದಿಂದಲೇ ಫಲವೆಂಬ ಅರ್ಥವು ಲಭಿಸುವುದೇ ಹೊರತು ಕರ್ಮವು ಸ್ವರ್ಗಾದಿ ಫಲಕ್ಕೆ ಸಾಕ್ಷಾತ್ ಕಾರಣ ವಾಗಿದ್ದು ಈಶ್ವರನು ಪರಂಪರೆಯಿಂದ ಕಾರಣನೆಂಬ ಅರ್ಥವಿಶೇಷವು ಲಭಿಸಲಾರದು. 'ಧರ್ಮಂ' ಇತ್ಯಾದಿ ಸೂತ್ರವಿನ್ಯಾಸದಿಂದ ಈಶ್ವರನು ಧರ್ಮವನ್ನು ಮಾಡಿಸುವವನೆಂದು ಹೇಳಿರುವುದ ರಿಂದ, ಈಶ್ವರನು ಪರಂಪರೆಯಿಂದ ಕಾರಣನೆಂದು ಅರ್ಥವಿಶೇಷವು ಲಭಿಸುವುದೆಂದು ಭಾವ.

2. ಹೇತುತ್ವವೆಂಬ ಅರ್ಥವನ್ನು ಕೊಡುವದೆಂದು ಭಾವ.

पूर्वमित्युक्तिः कर्तृत्वोपयुक्तचेतनत्वज्ञप्त्यै । प्राधान्यसूचनायेति केचित् । सामान्यतः कर्मणः फलहेतुत्वं प्रागुक्तं तदनुमतमेवेति भावः । फलमत इत्युक्त्या कर्मणः फलहेतुत्वं नेति प्राप्तचोद्यनिरासाय तृतीयो योगः । तस्य ब्रह्मवत् प्राधान्यव्युदासायान्त्यः ॥ २० ॥

इति श्रीराघवेन्द्रयतिकृतायां तन्त्रदीपिकायां
तृतीयाध्यायस्य द्वितीयः पादः ॥

---

ಪುಣ್ಯಂ ಲೋಕಂ ನಯತಿ' (ಪ್ರ. ೩.೭) ಎಂದು ಶ್ರುತಿಯಲ್ಲಿ ಬ್ರಹ್ಮ ಮತ್ತು ಕರ್ಮಗಳಿಗೆ ಕ್ರಮವಾಗಿ ಕರ್ತೃತ್ವ ಮತ್ತು ಕರಣತ್ವರೂಪವಾದ ಹೇತುತ್ವವನ್ನು ಹೇಳಿರುವುದರಿಂದ ಎಂದು ಅರ್ಥ.

**"ಪೂರ್ವಂ" ಪದದ ಸ್ವಾರಸ್ಯ ಮತ್ತು ಈ ಅಧಿಕರಣದ ಮೂರು ಮತ್ತು ನಾಲ್ಕನೆ ಸೂತ್ರಗಳ ಸಾರ್ಥಕತೆ—**

ಕರ್ತೃವಾಗಲು ಅಗತ್ಯವಾದ ಚೇತನತ್ವವು ಬ್ರಹ್ಮನಿಗಿದೆ ಎಂದು ತಿಳಿಸುವ ಸಲುವಾಗಿ 'ಪೂರ್ವಂ' ಎಂದು ಹೇಳಲಾಗಿದೆ. ಬ್ರಹ್ಮನಿಗೆ ಪ್ರಾಧಾನ್ಯವನ್ನು ಸೂಚಿಸುವುದಕ್ಕೋಸ್ಕರ 'ಪೂರ್ವಂ' ಎಂದು ಹೇಳಲಾಗಿದೆಯೆಂದೂ ಕೆಲವರು ಹೇಳುವರು. ಕರ್ಮಗಳಿಗೆ ಫಲಕಾರಣತ್ವವಿದೆಯೆಂದಷ್ಟೇ ಸಾಮಾನ್ಯವಾಗಿ ಕರ್ಮಗಳಿಗೆ ಫಲಕಾರಣತ್ವವನ್ನು ಹಿಂದೆ ಹೇಳಲಾಗಿದೆ. ಅದು ಸಮ್ಮತವಾದುದೇ ಎಂದು ಭಾವ.

'ಫಲಮತಃ' ಎಂದು ಹೇಳಿದುದರಿಂದ ಕರ್ಮಗಳಿಗೆ ಫಲಕಾರಣತ್ವವೇ ಇಲ್ಲ ಎಂದು ಉಂಟಾಗುವ ಶಂಕೆಯನ್ನು ನಿವಾರಿಸಲು ಮೂರನೇ ಸೂತ್ರ ಬಂದಿದೆ. ಕರ್ಮಗಳಿಗೂ ಬ್ರಹ್ಮನಂತೆ ಫಲಕಾರಣತ್ವ ವಿಷಯದಲ್ಲಿ ಪ್ರಾಧಾನ್ಯವಿದೆಯೆಂಬ ಶಂಕೆಯ ನಿರಾಕರಣೆಗಾಗಿ ಕೊನೆಯ ಸೂತ್ರ ಬಂದಿದೆ.

ಶ್ರೀ ರಾಘವೇಂದ್ರಯತಿಗಳು ರಚಿಸಿರುವ ತಂತ್ರದೀಪಿಕೆಯಲ್ಲಿ
ಮೂರನೆ ಅಧ್ಯಾಯದ ಎರಡನೆ ಪಾದವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

# तृतीयाध्याये तृतीयः पादः

अत्र पादे ज्ञानहेतुभक्तिसाध्या उपासना उच्यते ।

॥ ॐ सर्ववेदान्तप्रत्ययं चोदनाद्यविशेषात् ॐ ॥ ३.३.१

अत्र नये ध्यानाङ्गसर्वसच्छास्त्रश्रवणमननकर्तव्यता साध्यते । प्राक् पूर्वपदप्रकृतं ब्रह्मान्वेति । अन्तो निर्णयः । उभयोरपि दृष्टोऽन्त इत्यादेः ।

---

# ತೃತೀಯಾಧ್ಯಾಯ ತೃತೀಯಪಾದ

**ಈ ಪಾದದ ವಿಷಯ—**

ಈ ಪಾದದಲ್ಲಿ ಜ್ಞಾನಕ್ಕೆ ಕಾರಣವಾದ ಹಾಗೂ ಭಕ್ತಿಯ ಕಾರ್ಯವಾದ ಉಪಾಸನೆಯು ಕರ್ತವ್ಯವೆಂದು ಹೇಳಲಾಗುವುದು[1].

**ಸರ್ವವೇದಾಧಿಕರಣ—೧**

## ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ ೩.೩.೧

**ಈ ಅಧಿಕರಣದ ವಿಷಯ**

ಈ ಅಧಿಕರಣದಲ್ಲಿ ಧ್ಯಾನಕ್ಕೆ ಅಂಗವಾಗಿರುವ ಸರ್ವಸಚ್ಛಾಸ್ತ್ರಗಳ ಶ್ರವಣ ಮನನಗಳು[2] ಕರ್ತವ್ಯಗಳೆಂದು ಸಮರ್ಥಿಸಲಾಗುವುದು.

---

1. ಈ ವಾಕ್ಯವು ತೃತೀಯಪಾದಕ್ಕೆ ದ್ವಿತೀಯ ಚತುರ್ಥಪಾದಗಳ ಸಂಗತಿಯನ್ನು ಸೂಚಿಸುವುದು.

2. ಉಪಾಸನೆಯು ಎರಡು ವಿಧ. ಒಂದು ಶ್ರವಣ-ಮನನಾತ್ಮಕವಾದ ಶಾಸ್ತ್ರಾಭ್ಯಾಸ. ಎರಡನೆಯದು ಧ್ಯಾನ. ಅಜ್ಞಾನ, ಸಂಶಯ, ವಿಪರ್ಯಯಗಳನ್ನು ದೂರಮಾಡುವ ಮೂಲಕ ಶಾಸ್ತ್ರಾಭ್ಯಾಸರೂಪವಾದ ಶ್ರವಣ-ಮನನಗಳು ಧ್ಯಾನಕ್ಕೆ ಅಂಗವಾಗಿವೆ.

सर्ववेदानामन्तेन सर्ववेदविषयश्रवणमननसाध्यनिर्णयेनोत्पाद्यः प्रत्ययो ज्ञानं यस्य तद् ब्रह्म। यथाशक्ति सर्ववेदान् श्रवणादिना निर्णीय ज्ञातव्यं ब्रह्मेति यावत्। न तु स्वस्वशाखामात्रोक्तरीत्येत्यर्थः। कुतः ? चोदनाद्यविशेषात्। चोदना विधिः। सोऽत्र तद्वच्छाखापरः। चोदनासु तद्युक्तकाण्वादिशाखासु अविशेषात् काण्वैरेवं ज्ञेयं माध्यन्दिनैरेवमिति अधिकारिविशेषाभावात्। स एव कथं ज्ञेय इत्यतोऽपि

---

**ಸೂತ್ರಾರ್ಥ**

ಹಿಂದೆ [1]'ಪೂರ್ವ'ಪದದಿಂದ ಪ್ರಕೃತನಾಗಿರುವ ಬ್ರಹ್ಮನು ಇಲ್ಲಿ ಅನ್ವಯುವನ್ನು ಹೊಂದುವನು. 'ಉಭಯೋರಪಿ ದೃಷ್ಟೋಽಂತಃ' (ಭ.ಗೀ. ೨.೧೬) ಇತ್ಯಾದಿ ವಾಕ್ಯಗಳಲ್ಲಿರುವಂತೆ ಈ ಸೂತ್ರದಲ್ಲಿರುವ 'ಅಂತ' ಪದಕ್ಕೆ ನಿರ್ಣಯವೆಂದರ್ಥ.

'ಸರ್ವವೇದಾನಾಮ್ ಅಂತೇನ ಉತ್ಪಾದ್ಯಃ ಪ್ರತ್ಯಯಃ ಯಸ್ಯ ತತ್' ಎಂಬ ವಿಗ್ರಹವನ್ನನುಸರಿಸಿ 'ಸರ್ವವೇದಾಂತಪ್ರತ್ಯಯ' ಎಂಬ ಪದಕ್ಕೆ ಸಮಸ್ತ ವೇದಗಳ ಶ್ರವಣ-ಮನನಗಳಿಂದ ಜನಿಸುವ ನಿರ್ಣಯಾತ್ಮಕ ಜ್ಞಾನದಿಂದ ಉತ್ಪನ್ನವಾಗುವ ಜ್ಞಾನಕ್ಕೆ ಬ್ರಹ್ಮನು ವಿಷಯನಾದವನೆಂದು ಅರ್ಥ. ಸರ್ವವೇದಗಳನ್ನು ಯಥಾಶಕ್ತಿ ನಿರ್ಣಯಿಸಿ ಬ್ರಹ್ಮನನ್ನು ತಿಳಿಯತಕ್ಕದ್ದೆಂದು ಒಟ್ಟಭಿಪ್ರಾಯ. ಕೇವಲ ತಮ್ಮ ತಮ್ಮ ಶಾಖೆಗಳಲ್ಲಿ ಮಾತ್ರ ಹೇಳಿರುವಂತೆ ಬ್ರಹ್ಮನನ್ನು ತಿಳಿದರೆ ಸಾಲದೆಂದು ಭಾವ. ಏಕೆಂದರೆ ; ಚೋದನಾದ್ಯವಿಶೇಷಾತ್ – ಚೋದನಾ ಎಂದರೆ ವಿಧಿ. ಈ ಸಂದರ್ಭದಲ್ಲಿ, ಚೋದನಾಶಬ್ದವು ವಿಧಿಗಳನ್ನೊಳಗೊಂಡ ವೇದಶಾಖೆಗಳನ್ನು ಹೇಳುವ ತಾತ್ಪರ್ಯವುಳ್ಳದ್ದು. ಚೋದನಾಸು – ವಿಧಿಯುಕ್ತವಾದ ಕಾಣ್ವಶಾಖೆಯೇ ಮೊದಲಾದ ಶಾಖೆಗಳಲ್ಲಿ, ಅವಿಶೇಷಾತ್ - 'ಕಾಣ್ವರು ಈ ರೀತಿ ತಿಳಿಯತಕ್ಕದ್ದು', 'ಮಾಧ್ಯಂದಿನರು ಈ ರೀತಿ ತಿಳಿಯತಕ್ಕದ್ದು' ಎಂದು ಅಧಿಕಾರಿವಿಶೇಷವಿಲ್ಲದಿರುವುದರಿಂದ. ಆಯಾಯಾ ಶಾಖೆಗಳಿಗೆ ಪ್ರತ್ಯೇಕವಾಗಿ ಅಧಿಕಾರಿಗಳಿಲ್ಲವೆನ್ನುವುದನ್ನಾದರೂ

---

1. ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ [ಬ್ರ.ಸೂ. ೩.೨.೪೩]

चोदनाद्यविशेषात् । चोदनानाम् आत्मेत्येवोपासीतेत्यादिविधीनाम् अविशेषात् सर्वाधिकारिसाधारण्यादित्यर्थः । अन्यथा काण्वैरेवमित्यादि-रूपेण विधिसमीपे श्रवणं स्यात् । तदभावाद् ज्ञायत इति भावः । आदिपदाद् युक्तिः । अधिकारिविशेषकल्पकानां ज्ञानविध्यर्थं तत्र तत्रोक्तार्थवादादिरूपयुक्तीनामविशेषादित्यर्थः ।

---

ಹೇಗೆ ತಿಳಿಯುವುದು ಎಂಬ ಶಂಕೆಗೂ 'ಚೋದನಾದ್ಯವಿಶೇಷಾತ್' ಎಂದೇ ಉತ್ತರ. ಚೋದನಾನಾಂ - 'ಆತ್ಮೇತ್ಯೇವೋಪಾಸೀತ' ಇತ್ಯಾದಿ ವಿಧಿಗಳು, ಅವಿಶೇಷಾತ್ – ಎಲ್ಲ ಅಧಿಕಾರಿಗಳಿಗೂ ಸಮಾನವಾಗಿರುವುದರಿಂದ. ಎಲ್ಲ ವೇದಶಾಖೆಗಳೂ ಎಲ್ಲ ಅಧಿಕಾರಿಗಳಿಗೂ ಸಮಾನವಾಗಿರದಿದ್ದಲ್ಲಿ ಆಯಾಯಾ ವಿಧಿವಾಕ್ಯಗಳ ಬಳಿ 'ಕಾಣ್ವ-ರಿಂದ ಹೀಗೆ' ಇತ್ಯಾದಿ ಪದಗಳು ಕೇಳಿಸಬೇಕಾಗಿತ್ತು. ಅಂತಹ ಪದಗಳಿಲ್ಲದಿರು ವುದರಿಂದ ಎಲ್ಲ ವೇದಶಾಖೆಗಳೂ ಎಲ್ಲ ಅಧಿಕಾರಿಗಳಿಗೂ ಸಮಾನವಾಗಿದೆ ಎಂದು ತಿಳಿದುಬರುವುದೆಂದು ಭಾವ.

'ಚೋದನಾದಿ' ಎಂಬಲ್ಲಿರುವ ಆದಿಪದದಿಂದ ಯುಕ್ತಿಯನ್ನು ಗ್ರಹಿಸಬೇಕು. ಜ್ಞಾನವನ್ನು ವಿಧಾನಮಾಡುವ ಸಲುವಾಗಿ ಅಲ್ಲಲ್ಲಿ ಹೇಳಿರುವ, ಅಧಿಕಾರಿವಿಶೇಷವನ್ನೂ ಕಲ್ಪಿಸುವ ಅರ್ಥವಾದವೇ ಮೊದಲಾದ [1]ಯುಕ್ತಿಗಳು ಎಲ್ಲರಿಗೂ ಸಮಾನವಾಗಿರು

---

1. ಕಾಣ್ವಶಾಖೆಗೆ ಸಂಬಂಧಿಸಿದ ಬೃಹದಾರಣ್ಯಕದಲ್ಲಿ ಜ್ಞಾನವನ್ನು ವಿಧಿಸುವ 'ವಿಜ್ಞಾಯ ಪ್ರಜ್ಞಾಂ ಕುರ್ವೀತ' ಎಂಬ ವಾಕ್ಯವಿದೆ. ಕಾಣ್ವಶಾಖೆಗೆ ಸಂಬಂಧಿಸಿದ ಉಪನಿಷತ್ತಿನಲ್ಲಿ ಹೇಳಿರುವುದರಿಂದ ಈ ವಿಧಿಯು ಕಾಣ್ವಶಾಖಿಗಳಿಗೆ ಮಾತ್ರ ಸಂಬಂಧಿಸಿದುದೆಂದು ಹೇಳಬಹುದು. ಆದರೆ ಈ ವಿಧಿಯ ಸಮೀಪದಲ್ಲಿ 'ವಾಚೋ ವಿಗ್ಲಾಪನಂ ಹಿ ತತ್' ಎಂಬ ಅರ್ಥವಾದವಿದೆ. ಬ್ರಹ್ಮಜ್ಞಾನದ ಉದ್ದೇಶವನ್ನು ಬಿಟ್ಟು ಇತರೋದ್ದೇಶದಿಂದ ವೇದಾ-ಧ್ಯಯನ ಮಾಡುವುದು ವಾಕ್ಕಿಗೆ ಕೇವಲ ಶ್ರಮಕರವಾದುದು ಎಂದು ಅದರ ಭಾವ. ಇಲ್ಲಿ ಹೇಳಿರುವ ಯುಕ್ತಿ ಎಲ್ಲ ಶಾಖಿಗಳಿಗೂ ಸಂಬಂಧಿಸಿದುದಾದರಿಂದ-- ಎಂದು ಭಾವ. ಹೀಗೆ ಜ್ಞಾನವಿಧಾನ ಮಾಡುವ ವಾಕ್ಯಗಳ ಬಳಿ ಇರುವ ಅರ್ಥವಾದ ವಾಕ್ಯಗಳಲ್ಲಿ ಹೇಳಿರುವ ಯುಕ್ತಿಗಳು ಎಲ್ಲರಿಗೂ ಸಮಾನವೆಂದು ಭಾವ.

अन्तेत्युक्तिः ब्रह्मज्ञानस्य श्रवणमननसाध्यत्वं वक्तुम्। उक्त-माक्षिप्याह—

॥ ॐ भेदान्नेति चेदेकस्यामपि ॐ ॥ ३.३.२

'विज्ञानमानन्दं ब्रह्म', सत्यं ज्ञानमनन्तं ब्रह्म', इत्यादिना प्रतिशाखं वस्तुभेदान्नैकं ब्रह्म सर्ववेदान्तप्रत्ययम्। किन्तु स्वस्वशाखा-प्रत्ययमेव। एकस्यैव वस्तुनोऽधिकारिणा ज्ञेयत्वादिति चेत्। नेति

---

ವುದರಿಂದ ಎಂದು ಅರ್ಥ. 'ವೇದಾಂತ' ಎಂಬಲ್ಲಿ ಅಂತಶಬ್ದವನ್ನು ಬ್ರಹ್ಮಜ್ಞಾನವು ಶ್ರವಣಮನನಗಳಿಂದ ಜನ್ಯವಾಗುವುದೆಂದು ಸೂಚಿಸಲು ಹೇಳಲಾಗಿದೆ[1].

ಹಿಂದಿನ ಸೂತ್ರದಲ್ಲಿ ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ಭೇದಾನ್ನೇತಿ ಚೇದೇಕಸ್ಯಾಮಪಿ ಓಂ ೩.೩.೨

**ಸೂತ್ರಾರ್ಥ**

'ವಿಜ್ಞಾನಮಾನಂದಂ ಬ್ರಹ್ಮ', 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಒಂದೊಂದು ಶಾಖೆಯಲ್ಲೂ ಪ್ರತಿಪಾದಿಸಲ್ಪಟ್ಟಿರುವ ಬ್ರಹ್ಮನು ಬೇರೆ ಬೇರೆಯಾಗಿರುವುದರಿಂದ ಒಬ್ಬನೇ ಬ್ರಹ್ಮನನ್ನು ಎಲ್ಲ ವೇದಗಳ ಮೂಲಕ ತಿಳಿಯುವುದು ಸಾಧ್ಯವಿಲ್ಲ. ತಮ್ಮ ತಮ್ಮ ಶಾಖೆಯಲ್ಲಿ ಹೇಳಿರುವ ಬ್ರಹ್ಮನನ್ನು ಮಾತ್ರ ಆಯಾ ಶಾಖಿಗಳು ತಿಳಿಯಬಹುದು. ಏಕೆಂದರೆ, ಅಧಿಕಾರಿಯು ಒಬ್ಬ ಬ್ರಹ್ಮನನ್ನು ಮಾತ್ರ ತಿಳಿಯುವ ಆವಶ್ಯಕತೆ ಇದೆ—ಎಂದರೆ ಅದು ಸರಿಯಲ್ಲ.

---

1. 'ಸರ್ವವೇದಾಂತಪ್ರತ್ಯಯಂ' ಎಂಬ ಸೂತ್ರದ ಪದಕ್ಕೆ--ಎಲ್ಲ ವೇದಗಳ ಶ್ರವಣ-ಮನನಗಳಿಂದ ಜನಿಸುವ ಜ್ಞಾನಕ್ಕೆ ಬ್ರಹ್ಮನು ವಿಷಯನಾಗುವನು ಎಂದು ವ್ಯಾಖ್ಯಾನಿಸಲಾಗಿದೆ. ಇದರಿಂದಾಗಿ, ಬ್ರಹ್ಮಜ್ಞಾನಕ್ಕೆ ಶ್ರವಣ-ಮನನಗಳು ಸಾಧನನೆಂದು ತಿಳಿದುಬರುವುದೆಂದು ಭಾವ.

नञ आवृत्तिः । कुतः ? एकस्यामपि । प्रकृतत्वात् शाखायामित्यन्वेति । भेदादित्यनुषङ्गः । 'आत्मेत्येवोपासीत', 'कं ब्रह्म खं ब्रह्म' इत्येकशाखायामप्यर्थभेदोक्तेः एकशाखोक्तमपि न ज्ञेयं स्यादित्यर्थः । तत्र धर्म्यनुवादेन अन्यान्यधर्मविधानाद् अस्त्वैक्यमित्य ीकारे सर्वशाखास्वपि तथा स्यादिति भावः ।

इतश्चैवमित्याह—

॥ ॐ स्वाध्यायस्य तथात्वेन हि समाचारेऽधिकाराच्च ॐ ॥
३.३.३

---

'ಭೇದಾನ್ನೇತಿ' ಎಂಬಲ್ಲಿರುವ ನಞ್ ಪದವನ್ನು ಆವೃತ್ತಿಮಾಡಿಕೊಳ್ಳಲಾಗಿದೆ. ಎಲ್ಲ ಶಾಖೆಗಳಲ್ಲಿ ಹೇಳಿರುವ ಬ್ರಹ್ಮನನ್ನು ತಿಳಿಯಬೇಕಾಗಿಲ್ಲವೆಂಬ ಆಶಂಕೆ ಸಮಂಜಸವಲ್ಲವೇಕೆ ಎಂಬ ಪ್ರಶ್ನೆಗೆ ಉತ್ತರ— 'ಏಕಸ್ಯಾಮಪಿ' ಎಂದು. ಪ್ರಸ್ತುತವಾದುದರಿಂದ 'ಶಾಖಾಯಾಂ' ಎಂಬ ಪದವು ಅನ್ವಿತವಾಗುವುದು. ಸೂತ್ರದ ಆದಿಯಲ್ಲಿರುವ 'ಭೇದಾತ್' ಎಂಬ ಪದವನ್ನು ಉತ್ತರ ನೀಡುವ ಭಾಗಕ್ಕೆ ಅನುವೃತ್ತಿಮಾಡಿಕೊಳ್ಳಬೇಕು. 'ಆತ್ಮೇತ್ಯೇವೋಪಾಸೀತ', 'ಕಂ ಬ್ರಹ್ಮ ಖಂ ಬ್ರಹ್ಮ' ಎಂದು ಒಂದು ಶಾಖೆಯಲ್ಲೂ ಬೇರೆ ಬೇರೆ ವಸ್ತುವನ್ನು ಪ್ರತಿಪಾದಿಸಿರುವುದರಿಂದ ಒಂದು ಶಾಖೆಯಲ್ಲಿ ಹೇಳಿರುವುದನ್ನೂ ಪೂರ್ಣವಾಗಿ ತಿಳಿಯಬೇಕಾಗಿಲ್ಲವೆಂದಾದೀತು ಎಂದು ಅರ್ಥ. ಆ ಶಾಖೆಯಲ್ಲಿ ಒಂದೇ ವಸ್ತುವನ್ನು ಉದ್ದೇಶಿಸಿ ಬೇರೆ ಬೇರೆ ಧರ್ಮಗಳನ್ನು ವಿಧಾನಮಾಡಲಾಗಿರುವುದರಿಂದ ಆ ಶಾಖೆಯಲ್ಲಿ ಸರ್ವತ್ರ ಪ್ರತಿಪಾದಿತನಾಗಿರುವ ಬ್ರಹ್ಮನು ಒಬ್ಬನೇ ಆಗಿದ್ದಾನೆಂದು ಒಪ್ಪಿದಲ್ಲಿ ಎಲ್ಲ ಶಾಖೆಗಳಲ್ಲೂ ಒಬ್ಬನೇ ಬ್ರಹ್ಮನನ್ನು ಉದ್ದೇಶಿಸಿ ಬೇರೆ ಬೇರೆ ಧರ್ಮಗಳನ್ನು ವಿಧಾನಮಾಡಲಾಗಿದೆ ಎಂದಾಗಬಹುದೆಂದು ಭಾವ.

ಈ ಮುಂದಿನ ಕಾರಣದಿಂದಲೂ ಸರ್ವಶಾಖೋಕ್ತನಾದ ಬ್ರಹ್ಮನನ್ನು ತಿಳಿಯ ತಕ್ಕದ್ದೆಂದು ಹೇಳುವ ಸೂತ್ರ—

ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಓಂ ೩.೩.೩

स्वाध्यायस्य तथात्वेनेत्यावर्तते। स्वाध्यायस्य, लक्षणया 'स्वाध्यायोऽध्येतव्यः' इति स्वाध्यायाध्ययनविधेरित्यर्थः। तथात्वेनाविशेषेण सर्वाधिकारिसाधारण्येन सर्ववेदाध्ययनविधायकत्वेन हेतुनेत्यर्थः। स्वाध्यायस्य सर्वशाखासमूहस्य तथात्वेनाविशेषेणैव उक्तेनैवाध्येतव्यत्वेनैव, 'वेदः कृत्स्नोऽधिगन्तव्यः' इति हिशब्दसूचितस्मृतेश्च सर्ववेदान्तप्रत्ययं ब्रह्म। अध्ययनस्य ज्ञानार्थत्वादिति

---

**ಸೂತ್ರಾರ್ಥ**

ಸ್ವಾಧ್ಯಾಯಸ್ಯ, ತಥಾತ್ವೇನ ಎಂಬ ಪದಗಳು ಆವೃತ್ತಿಗೊಳ್ಳುತ್ತವೆ. ಸ್ವಾಧ್ಯಾಯ ಪದವು ಇಲ್ಲಿ ಲಕ್ಷಣಾವೃತ್ತಿಯಿಂದ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವೇದಾಧ್ಯಯನ ವಿಧಿಯನ್ನು ಹೇಳುವುದು. ಸ್ವಾಧ್ಯಾಯಸ್ಯ – 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವೇದಾಧ್ಯಯನ ವಿಧಿಯು, ತಥಾತ್ವೇನ – ವಿಶೇಷರಹಿತವಾಗಿರುವುದರಿಂದ ಅಂದರೆ ಸಮಸ್ತ ವೇದಾಧ್ಯಯನಾಧಿಕಾರಿಗಳಿಗೂ ಸಮಾನವಾಗಿರುವುದರಿಂದ, ಸರ್ವ ವೇದಗಳ ಅಧ್ಯಯನವನ್ನೂ ವಿಧಾನಮಾಡುವ ಕಾರಣದಿಂದ ಎಂದು ಅರ್ಥ. ಸ್ವಾಧ್ಯಾಯಸ್ಯ – ಸರ್ವ ವೇದಶಾಖೆಗಳ ಸಮೂಹವೂ, ತಥಾತ್ವೇನ – ವಿಶೇಷರಹಿತವಾದುದರಿಂದ ಅಂದರೆ ಎಲ್ಲ ಅಧಿಕಾರಿಗಳಿಂದಲೂ ಅಧ್ಯಯನ ಮಾಡಲ್ಪಡತಕ್ಕದ್ದೆಂದು ಹೇಳಿರುವ ಕಾರಣದಿಂದ ಮತ್ತು ಸೂತ್ರದಲ್ಲಿರುವ 'ಹಿ' ಶಬ್ದವು ಸೂಚಿಸುವ 'ವೇದಃ ಕೃತ್ಸ್ನೋಽಧಿಗಂತವ್ಯಃ ಎಂಬ ಸ್ಮೃತಿಯಿಂದಲೂ, ಸರ್ವವೇದಾಂತಪ್ರತ್ಯಯಂ ಬ್ರಹ್ಮ – ಬ್ರಹ್ಮನು ಸರ್ವವೇದಗಳಿಂದಲೂ ಶ್ರವಣಮನನಗಳ ಮೂಲಕ ಜ್ಞೇಯನಾಗಿದ್ದಾನೆ. ಅಧ್ಯಯನದ ಫಲವು ಜ್ಞಾನವೇ ಆಗಿರುವುದರಿಂದ ಎಂದು ಭಾವ[1].

---

1. ಅಧ್ಯಯನದ ಫಲ ಜ್ಞಾನವಾಗಿದೆ. ಆದ್ದರಿಂದ ಎಲ್ಲ ವೇದಗಳ ಅಧ್ಯಯನವನ್ನು ಎಲ್ಲ ಅಧಿಕಾರಿಗಳಿಗೂ ವಿಧಾನಮಾಡುವ ಶ್ರುತಿ ಸ್ಮೃತಿಗಳು ಸರ್ವವೇದಗಳಿಂದ ಶ್ರವಣ-ಮನನಗಳ ಮೂಲಕ ಬ್ರಹ್ಮಜ್ಞಾನವನ್ನು ಪಡೆಯಬೇಕೆಂದು ಸೂಚಿಸುವುದೆಂದು ಭಾವ.

भावः । तथा समाचारेऽधिकाराच्च । अस्याप्यावृत्तिः । 'सर्ववेदोक्त-मार्गेण कर्म कुर्वीत' इति स्मृत्या समाचारे सर्ववेदोक्त-कर्मणः सम्यगनुष्ठाने सर्वेषामधिकाराच्च । समाचारे, चर गतौ, सर्ववेदोक्तब्रह्मज्ञाने सुतरामधिकारात् सर्ववेदान्तप्रत्ययं ब्रह्मेत्यनुवर्त्य योज्यम् । शाखाभेदस्य प्रसिद्धत्वाद् अध्ययनविधिः विशेषनिष्ठो वाच्य इति शङ्कामपनेतुं हीति स्मृतिसूचनम् । शाखाभेदोऽशक्तिहेतुक इति भावः ।

---

ಹಾಗೆಯೇ, 'ಸಮಾಚಾರೇ ಅಧಿಕಾರಾಚ್ಚ' ಎಂಬ ಸೂತ್ರಭಾಗವೂ ಬ್ರಹ್ಮ-ನನ್ನು ಸರ್ವವೇದಾಂತಪ್ರತ್ಯಯನೆಂದು ಸಮರ್ಥಿಸುವುದು. ಈ ಸೂತ್ರಾಂಶವನ್ನೂ ಆವೃತ್ತಿಮಾಡಿಕೊಳ್ಳಬೇಕು. 'ಸರ್ವವೇದೋಕ್ತಮಾರ್ಗೇಣ ಕರ್ಮ ಕುರ್ವೀತ' ಎಂಬ ಸ್ಮೃತಿಯಿರುವುದರಿಂದ. ಸಮಾಚಾರೇ - ಸರ್ವವೇದೋಕ್ತ ಕರ್ಮಗಳನ್ನೂ ಚೆನ್ನಾಗಿ ಅನುಷ್ಠಾನಮಾಡಲು, ಅಧಿಕಾರಾಚ್ಚ - ಎಲ್ಲರಿಗೂ ಅಧಿಕಾರವಿರುವುದರಿಂದ, ಸಮಾಚಾರೇ – ಸಮಸ್ತವೇದಗಳೂ ತಿಳಿಸುವಂತೆ ಬ್ರಹ್ಮನನ್ನು ತಿಳಿಯಲು, ಅಧಿ-ಕಾರಾತ್ – ಸುತರಾಂ ಅಧಿಕಾರವಿರುವುದರಿಂದ ಬ್ರಹ್ಮನು ಸರ್ವವೇದಾಂತಪ್ರತ್ಯಯನೆಂದು ಸಿದ್ಧನಾಗುವನು. 'ಸರ್ವವೇದಾಂತಪ್ರತ್ಯಯಂ' ಎಂಬ ಪದವನ್ನು ಹಿಂದಿನ ಸೂತ್ರ (೩.೩.೧) ದಿಂದ ಅನುವೃತ್ತಿಮಾಡಿಕೊಂಡು ಇಲ್ಲಿ ಯೋಜಿಸತಕ್ಕದ್ದು.

**ಸೂತ್ರದಲ್ಲಿರುವ 'ಹಿ' ಶಬ್ದದ ಪ್ರಯೋಜನ—**

ಋಕ್‌ಶಾಖೆ ಮೊದಲಾದ ವೇದಶಾಖೆಗಳ ಪ್ರಭೇದಗಳು ಪ್ರಸಿದ್ಧವಾಗಿರುವುದರಿಂದ ವೇದಾಧ್ಯಯನವನ್ನು ಮಾಡತಕ್ಕದ್ದೆಂಬ ವಿಧಿಯು ತಮ್ಮ ತಮ್ಮ ಶಾಖಾವಿಶೇಷವನ್ನು ಅಧ್ಯಯನ ಮಾಡತಕ್ಕದ್ದೆಂಬ ಅಭಿಪ್ರಾಯವುಳ್ಳದ್ದು ಎಂಬ ಶಂಕೆಯನ್ನು ಪರಿಹರಿಸುವ ಸಲುವಾಗಿ 'ಹಿ' ಶಬ್ದದಿಂದ ಸ್ಮೃತಿ[1]ಯನ್ನು ಸೂಚಿಸಲಾಗಿದೆ. ಸಮಸ್ತವೇದವನ್ನು ಅಧ್ಯಯನಮಾಡುವ ಶಕ್ತಿ ಇಲ್ಲದವರ ಸಲುವಾಗಿ ಶಾಖಾಭೇದವಿರುವುದೆಂದು ಭಾವ.

---

1. 'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ' ಎಂಬ ಸ್ಮೃತಿ.

सुधायां तु, समाचारे देवानां श्रवणाद्यनुष्ठानेऽधिकाराच्चेत्यर्थः। एकैकशाखाप्रत्ययत्वे ब्रह्मणः तेषां महामतीनामद्यापि तन्न स्यात् । समाचारादित्येव वाच्येऽधिकारादित्युक्तिः देवतानयोक्तन्यायस्मारणायेत्युक्तम् ।

एवं तर्हि मन्दानामध्ययनानधिकारः स्यादित्यत आह—

॥ ॐ सलिलवच्च तन्नियमः ॐ ॥ ३.३.४

---

'ಸಮಾಚಾರೇಽಧಿಕಾರಾಚ್ಚ' ಎಂಬ ಸೂತ್ರಭಾಗಕ್ಕೆ ಸುಧಾರೀತ್ಯಾ ವ್ಯಾಖ್ಯಾನಾಂತರ—

ಸುಧಾದಲ್ಲಾದರೋ, ಸಮಾಚಾರೇ ಅಧಿಕಾರಾಚ್ಚ - ದೇವತೆಗಳಿಗೆ ಸಕಲ ವೇದಗಳ ಶ್ರವಣ ಮೊದಲಾದವುಗಳನ್ನು ಮಾಡಲು ಅಧಿಕಾರವಿರುವುದರಿಂದಲೂ— ಎಂದು ಅರ್ಥ. ಪರಬ್ರಹ್ಮನು ಒಂದೊಂದು ಶಾಖೆಯಿಂದ ಮಾತ್ರವೇ ವೇದ್ಯನಾಗಿದ್ದಲ್ಲಿ, ಚತುರ್ಮುಖನೇ ಮೊದಲಾದ ಮಹಾಪ್ರಾಜ್ಞರು ಅಲ್ಪಕಾಲದಲ್ಲಿಯೇ ಒಂದೊಂದು ಶಾಖೆಯ ಶ್ರವಣಾದಿಗಳನ್ನು ಮುಗಿಸಲು ಸಾಧ್ಯವಿರುವುದರಿಂದ ಈಗಲೂ ಶ್ರವಣಾದಿಗಳನ್ನು ಮಾಡುತ್ತಿರುವುದು ಯುಕ್ತವಾಗಲಾರದು. 'ಸಮಾಚಾರಾತ್' ಎಂದಿಷ್ಟೇ ಸಾಕಾಗಿದ್ದರೂ ದೇವತಾಧಿಕರಣ (೧.೩.೮) ದಲ್ಲಿ ದೇವತೆಗಳಿಗೂ ವೇದಾಧಿಕಾರವಿರುವುದನ್ನು ಸಾಧಿಸಲು ಹೇಳಿದ ಯುಕ್ತಿಯನ್ನು ಸ್ಮರಣೆಗೆ ತಂದುಕೊಡುವ ಸಲುವಾಗಿ 'ಅಧಿಕಾರಾತ್' ಎಂದು ಹೇಳಲಾಗಿದೆ.

ಪರಬ್ರಹ್ಮನು ಸಕಲವೇದಗಳಿಂದಲೂ ಜ್ಞೇಯನೆಂದಾದಲ್ಲಿ ಅಲ್ಪಬುದ್ಧಿಗಳಿಗೆ ಸರ್ವವೇದೋಕ್ತ ವಿಷಯಗಳ ಜ್ಞಾನವು ದುಃಸಾಧ್ಯವಾದುದರಿಂದ ವೇದಾಧ್ಯಯನಕ್ಕೆ ಅಧಿಕಾರವೇ ಇಲ್ಲವೆಂದಾದೀತು ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ನೀಡುವ ಸೂತ್ರ—

ಓಂ ಸಲಿಲವಚ್ಚ ತನ್ನಿಯಮಃ ಓಂ ೩.೩.೪

च एव। स चासौ नियमश्च, सर्ववेदान्तप्रत्ययं ब्रह्मत्येष नियमः, सलिलवत् सलिलानां समुद्रप्राप्तिनियम इवेत्यर्थः। 'सर्वासामपां समुद्र एकायनम्' इत्युक्तो नियमः सत्यां शक्तौ। एवमेव सर्वशाखाप्रत्ययं ब्रह्मत्येषोऽपि तत्तत्पुंशक्तिमपेक्ष्यैवेति भावः। सलिलेत्युक्तिः 'यथा नदीनां सलिलं शक्ये सागरगं' इति श्रुतिसूचनार्था।

इतश्चैवमित्याह—

---

**ಸೂತ್ರಾರ್ಥ**

ಸೂತ್ರದಲ್ಲಿರುವ 'ಚ' ಶಬ್ದಕ್ಕೆ 'ಏವ' ಎಂದು ಅರ್ಥ. ಸ ಚಾಸೌ ನಿಯಮಶ್ಚ ಎಂಬ ವಿಗ್ರಹವನ್ನನುಸರಿಸಿ ತನ್ನಿಯಮಃ– ಎಂದರೆ ಆ ನಿಯಮ - ಅರ್ಥಾತ್ ಬ್ರಹ್ಮನು ಸರ್ವವೇದಗಳಿಂದ ಜ್ಞೇಯನೆಂಬ ನಿಯಮವು, ಸಲಿಲವತ್ – ಜಲಕ್ಕೆ ಸಮುದ್ರಪ್ರಾಪ್ತಿಯ ನಿಯಮದಂತೆ ಎಂದು ಅರ್ಥ. ಎಲ್ಲ ಜಲಕ್ಕೂ ಸಮುದ್ರವೇ ಮುಖ್ಯವಾದ ಆಶ್ರಯವಾಗಿರುವುದು (ಸರ್ವಾಸಾಮಪಾಂ ಸಮುದ್ರ ಏಕಾಯನಮ್) ಎಂಬ ನಿಯಮವು ಜಲಕ್ಕೆ ಸಮುದ್ರವನ್ನು ಸೇರುವ ಸಾಮರ್ಥ್ಯವಿದ್ದರೆ ಮಾತ್ರ ಹೇಗೆ ಅನ್ವಯಿಸುವುದೋ ಹಾಗೆಯೇ ಎಲ್ಲ ವೇದಶಾಖೆಗಳಿಂದ ಬ್ರಹ್ಮನನ್ನು ತಿಳಿಯತಕ್ಕದ್ದು ಎಂಬ ನಿಯಮವೂ ಆಯಾಯಾ ಪುರುಷರ ಶಕ್ತಿಯನ್ನು ಅವಲಂಬಿಸಿಯೇ ಇರುವುದು ಎಂದು ಭಾವ.

**'ಸಲಿಲ' ಶಬ್ದದ ಸ್ವಾರಸ್ಯ—**

'ಯಥಾ ನದೀನಾಂ ಸಲಿಲಂ ಶಕ್ಯೇ ಸಾಗರಗಂ' ಎಂಬ ಶ್ರುತಿಯನ್ನು ಸೂಚಿಸುವ ಸಲುವಾಗಿ ಸೂತ್ರದಲ್ಲಿ ಸಲಿಲ[1] ಶಬ್ದವನ್ನು ಉಪಯೋಗಿಸಲಾಗಿದೆ.

ಈ ಮುಂದಿನ ಕಾರಣದಿಂದಲೂ ಪರಮಾತ್ಮನು ಸರ್ವವೇದಾಂತಪ್ರತ್ಯಯನೆಂದು ಹೇಳುವ **ಸೂತ್ರ**——

---

1. ಜಲಶಬ್ದವನ್ನು ಉಪಯೋಗಿಸಿದ್ದಲ್ಲಿ ಸೂತ್ರವು ಅಲ್ಪಾಕ್ಷರವಾಗುತ್ತಿತ್ತೆಂದು ಶಂಕಿಸುವವನ ಭಾವ. 'ಯಥಾ ನದೀನಾಂ ಸಲಿಲಂ ಶಕ್ಯೇ ಸಾಗರಗಂ ಭವೇತ್ । ಏವಂ ವಾಕ್ಯಾನಿ ಸರ್ವಾಣಿ ಪುಂಶಕ್ತ್ಯಾ ಬ್ರಹ್ಮವಿತ್ತಯೇ ॥' ಎಂಬ ಸಲಿಲಪದದಿಂದ ಕೂಡಿದ ಪ್ರಮಾಣವನ್ನು ಸೂಚಿಸುವುದಕ್ಕಾಗಿ ಸೂತ್ರಕಾರರು ಬಹ್ವಕ್ಷರದ ಸಲಿಲಪದವನ್ನೇ ಉಪಯೋಗಿಸಿದ್ದಾರೆಂದು ಪರಿಹಾರ.

## ॥ ॐ दर्शयति च ॐ ॥ ३.३.५

'सर्वैश्च वेदैः परमो हि देवो जिज्ञास्यः' इति श्रुतिर्दर्शयत्युक्तार्थं, चशब्दात् 'सर्वान् वेदान् सेतिहासान्' इति स्मृतिश्च, यतोऽतः सर्ववेदान्तप्रत्ययं ब्रह्मेत्यर्थः ॥ १ ॥

### उपसंहाराधिकरणम्—२

## ॥ ॐ उपसंहारोऽर्थाभेदाद्विधिशेषवत् समाने च ॐ ॥ ३.३.६

---

## ಓಂ ದರ್ಶಯತಿ ಚ ಓಂ ೩.೩.೫

**ಸೂತ್ರಾರ್ಥ**

'ಸರ್ವೈಶ್ಚ ವೇದೈಃ ಪರಮೋ ಹಿ ದೇವೋ ಜಿಜ್ಞಾಸ್ಯಃ' ಎಂಬ [1]ಶ್ರುತಿಯು ಬ್ರಹ್ಮನು ಸರ್ವವೇದಾಂತಪ್ರತ್ಯಯನೆಂದು ಹಿಂದೆ ಹೇಳಿದ ವಿಷಯವನ್ನು ತಿಳಿಸುವುದು. ಸೂತ್ರದಲ್ಲಿರುವ 'ಚ' ಶಬ್ದವು 'ಸರ್ವಾನ್ ವೇದಾನ್ ಸೇತಿಹಾಸಾನ್' ಎಂಬ [2]ಸ್ಮೃತಿಯೂ ಇದೇ ವಿಷಯವನ್ನು ಹೇಳುವುದೆಂದು ಸೂಚಿಸುವುದು. ಆದ್ದರಿಂದ ಬ್ರಹ್ಮನು ಸರ್ವವೇದಗಳ ಶ್ರವಣಮನನಾದಿಗಳಿಂದ ತಿಳಿಯಲ್ಪಡತಕ್ಕವನು ಎಂದು ಅರ್ಥ.

### ಉಪಸಂಹಾರಾಧಿಕರಣ—೨

## ಓಂ ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ ಸಮಾನೇ ಚ ಓಂ ೩.೩.೬

---

1. 'ಸರ್ವೈಶ್ಚ ವೇದೈಃ ಪರಮೋ ಹಿ ದೇವೋ ಜಿಜ್ಞಾಸ್ಯೋಽಸೌ ನಾಲ್ಪವೇದೈಃ ಪ್ರಸಿಧ್ಯೇತ್ ।
ತಸ್ಮಾದೇನಂ ಸರ್ವವೇದಾನಧೀತ್ಯ ವಿಚಾರ್ಯ ಚ ಜ್ಞಾತುಮಿಚ್ಛೇನ್ಮುಮುಕ್ಷುಃ' ॥
ಎಂಬ ಚತುರ್ವೇದ ಶಿಖಾ ಶ್ರುತಿ.
2. ಸರ್ವಾನ್ ವೇದಾನ್ ಸೇತಿಹಾಸಾನ್ ಸಪುರಾಣಾನ್ ಸಯುಕ್ತಿಕಾನ್ ।
ಸಪಂಚರಾತ್ರಾನ್ ವಿಜ್ಞಾಯ ವಿಷ್ಣುರ್ಜ್ಞೇಯೋ ನ ಚಾನ್ಯಥಾ ॥
—ಬ್ರಹ್ಮತರ್ಕವಚನ.

अत्र सार्वत्रिकगुणोपसंहारेण ईशस्य ध्यानं साध्यते । सर्ववेदेति षष्ठ्यन्ततयाऽनुवर्तते । ब्रह्मेति च । उपसंहारो युगपद् बुद्ध्यारोपणम् । तेन तत्पूर्वकं ध्यानं गृह्यते । सर्ववेदानामर्थाभेदात् सर्ववेदोक्तार्थानाम् आनन्दादिगुणानाम् अपहतपाप्मत्वादिदोषाभावानां चाभेदादविभागेन उपसंहारः कार्यः । अविभागेन तानुपसंहृत्य ब्रह्म ध्येयमित्यर्थः । कुतः ? विधिशेषवत् । शिष्यन्त इति शेषाणि । विधिभिः शिष्टानि विधिशेषाणि कर्माणीवेत्यर्थः । यथा विहितत्वात् सन्ध्यादि कर्म

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಸರ್ವವೇದೋಕ್ತವಾದ ಗುಣಗಳನ್ನು ಭಗವಂತನಲ್ಲಿ ಉಪಸಂಹಾರ ಮಾಡಿ ಧ್ಯಾನವನ್ನು ಮಾಡತಕ್ಕದೆಂದು ಸಾಧಿಸಲಾಗುವುದು.

'ಸರ್ವವೇದಾಂತಪ್ರತ್ಯಯಂ' (ಬ್ರ.ಸೂ. ೩.೩.೧) ಇತ್ಯಾದಿ ಸೂತ್ರದಲ್ಲಿರುವ 'ಸರ್ವವೇದ' ಎಂಬ ಪದಭಾಗವನ್ನು 'ಸರ್ವವೇದಾನಾಂ' ಎಂದು ಷಷ್ಠೀವಿಭಕ್ತ್ಯಂತವಾಗಿ ಬದಲಾಯಿಸಿಕೊಂಡು ಈ ಸೂತ್ರಕ್ಕೆ ಅನುವರ್ತಿಸಿಕೊಳ್ಳಲಾಗುವುದು. 'ಬ್ರಹ್ಮ' ಎಂಬ ಪದವನ್ನು ಅನುವರ್ತಿಸಿಕೊಳ್ಳಲಾಗುವುದು. ಉಪಸಂಹಾರವೆಂದರೆ ಒಮ್ಮೆಗೆ ಬುದ್ಧಿಯಲ್ಲಿ ವಿಷಯವನ್ನು ತಂದುಕೊಳ್ಳುವುದು. ಈ ಸೂತ್ರದಲ್ಲಿ 'ಉಪಸಂಹಾರ' ಪದದಿಂದ ಉಪಸಂಹಾರದಿಂದ ಉಂಟಾಗುವ ಧ್ಯಾನವನ್ನು ಗ್ರಹಿಸಲಾಗಿದೆ. ಸರ್ವವೇದಾನಾಂ – ಎಲ್ಲ ವೇದಗಳಲ್ಲಿ ಹೇಳಿರುವ, ಅರ್ಥಾಭೇದಾತ್ – ಆನಂದಾದಿ ಗುಣಗಳೂ, ಅಪಹತಪಾಪ್ಮತ್ವ ಮೊದಲಾದ ದೋಷಗಳ ಅಭಾವವೂ ಅಭಿನ್ನವಾಗಿರುವುದರಿಂದ ಅವುಗಳನ್ನು ವಿಭಜಿಸದೆ ಉಪಸಂಹಾರ ಮಾಡತಕ್ಕದ್ದು. ಆ ಗುಣಗಳನ್ನು ವಿಭಜಿಸದೆ ಒಮ್ಮೆಗೆ ಬುದ್ಧಿಯಲ್ಲಿ ಗ್ರಹಿಸಿ ಬ್ರಹ್ಮನನ್ನು ಧ್ಯಾನಿಸತಕ್ಕದ್ದು ಎಂಬ ಅರ್ಥ. ಏಕೆಂದರೆ, ವಿಧಿಶೇಷವತ್ – 'ಶಿಷ್ಯಂತ ಇತಿ ಶೇಷಾಣಿ' ಎಂಬ ವ್ಯುತ್ಪತ್ತಿಯಂತೆ ಶೇಷವೆಂದರೆ ಉಪದೇಶಿಸಲ್ಪಟ್ಟವು. ವಿಧಿಶೇಷಾಣಿ ಎಂದರೆ ವಿಧಿವಾಕ್ಯಗಳಿಂದ ಉಪದೇಶಿಸಲ್ಪಟ್ಟ ಕರ್ಮಗಳಂತೆ ಎಂದು ಅರ್ಥ. ಹೇಗೆ ವಿಧಿವಿಹಿತವಾದುದರಿಂದ ಸಂಧ್ಯಾವಂದನಾದಿ ಕರ್ಮಗಳನ್ನು ಅವಶ್ಯ ಮಾಡತಕ್ಕದ್ದೋ ಹಾಗೆಯೇ

कार्यम्, एवम् 'उपास्य एकः परतः परो यो वेदैश्च सर्वैः' इति श्रुतिविहितत्वाद् उक्तरूपं ध्यानं कार्यम्। अन्यथा प्रत्यवायादिति भावः

उक्तस्यापवादः समाने चेति। च एव। समान एव योग्यगुण एव उक्तोपसंहारो बोध्यः। न त्वयोग्यरोदनादिविषय इत्यर्थः। उक्तं च साङ्कर्षणसूत्रे — 'अचेतनासत्यायोग्यान्यनुपास्यान्यफलत्व-

---

'ಉಪಾಸ್ಯ ಏಕಃ ಪರತಃ ಪರೋ ಯೋ ವೇದೈಶ್ಚ ಸರ್ವೈಃ[1]' ಎಂಬ ಶ್ರುತಿಯಿಂದ ವಿಹಿತವಾದುದರಿಂದ ಈಗಾಗಲೆ ಹೇಳಿರುವಂತೆ ಸರ್ವವೇದೋಕ್ತ ಗುಣಗಳನ್ನು ಉಪಸಂಹರಿಸಿ ಭಗವಂತನ ಧ್ಯಾನವನ್ನು ಮಾಡತಕ್ಕದ್ದು. ಹಾಗೆ ಮಾಡದಿದ್ದರೆ ದೋಷ ಉಂಟಾಗುವುದೆಂದು ಭಾವ.

ಸರ್ವವೇದೋಕ್ತ ಗುಣಗಳನ್ನು ಭಗವಂತನಲ್ಲಿ ಉಪಸಂಹರಿಸತಕ್ಕದ್ದೆಂದು ಹೇಳಿದುದಕ್ಕೆ ಅಪವಾದವನ್ನು 'ಸಮಾನೇ ಚ' ಎಂಬ ಸೂತ್ರಾಂಶದಿಂದ ಹೇಳಲಾಗಿದೆ. 'ಚ' ಶಬ್ದಕ್ಕೆ 'ಏವ' ಎಂದು ಅರ್ಥ. ಸಮಾನೇ ಏವ– ಯೋಗ್ಯವಾದ ಗುಣಗಳ ವಿಷಯದಲ್ಲೇ ಉಪಸಂಹಾರವನ್ನು ಹೇಳಿದುದೆಂದು ತಿಳಿಯತಕ್ಕದ್ದು, ಹೊರತು ಉಪಸಂಹಾರಯೋಗ್ಯವಲ್ಲದ ರೋದನ ಮೊದಲಾದವುಗಳ ಬಗ್ಗೆ ಅಲ್ಲವೆಂದು ಅರ್ಥ. ಸಾಂಕರ್ಷಣ ಸೂತ್ರದಲ್ಲಿ ಹೀಗೆ ಹೇಳಲಾಗಿದೆ — 'ಅಚೇತನಾಸತ್ಯಾಯೋಗ್ಯಾನಿ ಅನುಪಾಸ್ಯಾನಿ ಅಫಲತ್ವವಿಪರ್ಯಯಾಭ್ಯಾಮ್' — ಜಡವೂ, ಮಿಥ್ಯಾಭೂತವೂ, ಪೂರ್ಣತ್ವಾದಿ ವಿರುದ್ಧವಾದುದರಿಂದ ಉಪಾಸನೆಗೆ ಯೋಗ್ಯವಲ್ಲದ್ದೂ ಆದ ಧರ್ಮಗಳನ್ನು ಉಪಾಸಿಸತಕ್ಕದ್ದಲ್ಲ. ಏಕೆಂದರೆ ಅಂತಹ ಉಪಾಸನೆಯು ನಿಷ್ಫಲವೂ, ವಿಪರೀತಫಲವನ್ನು ಕೊಡತಕ್ಕದ್ದೂ ಆಗಿದೆ— ಎಂದು.

---

1. ಉಪಾಸ್ಯ ಏಕಃ ಪರತಃ ಪರೋ ಯೋ ವೇದೈಶ್ಚ ಸರ್ವೈಸ್ಸಹ ಚೇತಿಹಾಸೈಃ।
ಸಪಂಚರಾತ್ರೈಸ್ಸಪುರಾಣೈಶ್ಚ ದೇವಃ ಸರ್ವೈರ್ಗುಣೈಸ್ತತ್ರ ತತ್ರ ಪ್ರತೀತ್ಯೈಃ॥
--ಭಾಲ್ಲವೇಯಶ್ರುತಿ.

ಪಂಚರಾತ್ರಗಳು, ಪುರಾಣೇತಿಹಾಸಗಳು ಇವುಗಳಿಂದ ಸಹಿತವಾದ ಸಮಸ್ತ ವೇದಗಳಿಂದ ಪ್ರತಿಪಾದಿತವಾದ ಗುಣಗಳಿಂದ, 'ಈ ಗುಣಗಳನ್ನು ಉಪಸಂಹರಿಸತಕ್ಕದ್ದು, ಇವುಗಳನ್ನಲ್ಲ' ಎಂಬ ಭೇದವಿಲ್ಲದೆ ರಮಾದಿದೇವಶ್ರೇಷ್ಠನಾದ ಆ ಭಗವಂತನು ಉಪಾಸ್ಯನೆಂದು ಶ್ರುತಿಯ ಭಾವ.

विपर्ययाभ्याम्' इति । कर्मवदिति वाच्ये विधिशेषेत्युक्तिर्विहितत्वहेतु-सूचनार्था । विधिशेषाणीति स्मृतिसूचनार्था च ।

तत्त्वप्रदीपे तु – सर्ववेदोपास्यार्थस्य सर्वगुणात्मकस्य विष्णोरभेदादेकत्वादित्यर्थ उक्तः । विधिशेषवदित्यस्य प्रधानविधिशेषभूतानि प्रयाजादीनि यथेति वाऽर्थ इत्यर्थान्तरमप्युक्तम् ।

उक्तमाक्षिप्याह—

॥ ॐ अन्यथात्वं च शब्दादिति चेन्नाविशेषात् ॐ ॥

३.३.७

---

**'ವಿಧಿಶೇಷವತ್' ಎಂಬ ಪದದ ಸ್ವಾರಸ್ಯ**

ಸಂಧ್ಯಾವಂದನಾದಿಗಳು ಹೇಗೆ ವಿಹಿತವೋ ಹಾಗೆ ಸರ್ವವೇದೋಕ್ತ ಗುಣೋಪಸಂಹಾರವೂ ವಿಹಿತವಾದುದರಿಂದ ಅವಶ್ಯವಾಗಿ ಅನುಷ್ಠಿಸಲ್ಪಡತಕ್ಕದ್ದೆಂದು ಸರ್ವ ಗುಣೋಪಸಂಹಾರಕ್ಕೆ ಹೇತುವಾದ ವಿಹಿತತ್ವವನ್ನು ಸೂಚಿಸಲು ಮತ್ತು 'ವಿಧಿಶೇಷಾಣಿ' ಎಂಬ ಸ್ಮೃತಿಯನ್ನು ಸೂಚಿಸಲು 'ಕರ್ಮವತ್' ಎಂದು ಹೇಳಬಹುದಾಗಿದ್ದರೂ 'ವಿಧಿಶೇಷವತ್' ಎಂದೇ ಹೇಳಲಾಗಿದೆ.

**ತತ್ತ್ವಪ್ರದೀಪದ ವ್ಯಾಖ್ಯಾನಾಂತರ**

ತತ್ತ್ವಪ್ರದೀಪದಲ್ಲಾದರೋ — ಅರ್ಥಸ್ಯ - ಸರ್ವವೇದಗಳ ಮೂಲಕ ಉಪಾಸ್ಯವಾದ ಸರ್ವಗುಣಾತ್ಮಕವಾದ ವಿಷ್ಣುರೂಪವಾದ ವಸ್ತುವು, ಅಭೇದಾತ್ – ಒಂದೇ ಆಗಿರುವುದರಿಂದ ಎಂಬ ಅರ್ಥವನ್ನು ಹೇಳಲಾಗಿದೆ. 'ವಿಧಿ ಶೇಷವತ್' ಎಂಬ ಪದಕ್ಕೆ – ಪ್ರಧಾನವಾದ ದರ್ಶಪೂರ್ಣಮಾಸವಿಧಿಗೆ ಶೇಷವಾಗಿರುವ ಅಂದರೆ ಅಂಗವಾಗಿರುವ ಪ್ರಯಾಜಾದಿಗಳು ಹೇಗೋ ಹಾಗೆ ಎಂಬ ಅರ್ಥವೂ ಆಗಬಹುದೆಂದು ಅರ್ಥಾಂತರವನ್ನೂ ಹೇಳಲಾಗಿದೆ.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನವನ್ನು ನೀಡುವ ಸೂತ್ರ—

**ಓಂ ಅನ್ಯಥಾತ್ವಂ ಚ ಶಬ್ದಾದಿತಿ ಚೇನ್ನಾವಿಶೇಷಾತ್ ಓಂ**

೩.೩.೭

शब्दात् 'आत्मेत्येवोपासीत' इति शब्दादन्यथात्वं प्रागुक्तादन्यथात्वम् उपसंहाराकर्तव्यत्वम् । अवधारणेनात्मत्वादन्यगुणाध्यानप्रतीतेरिति चेन्न । अविशेषात् । एते गुणा नोपास्या इति विशेषे मानाभावादित्यर्थः । अवधारणं त्वयोगव्यवच्छेदेनानात्मत्वव्यावृत्तिपरमिति भावः । उपसंहारे तु 'सर्वैर्गुणैरेक एव' इति श्रुतिरस्तीत्याकूतम् ।

---

**ಸೂತ್ರಾರ್ಥ**

ಶಬ್ದಾತ್ – 'ಆತ್ಮೇತ್ಯೇವೋಪಾಸೀತ' ಎಂಬ ಶ್ರುತಿಯು ಬಲದಿಂದ, ಅನ್ಯಥಾತ್ವಂ - ಹಿಂದೆ ಹೇಳಿದುದಕ್ಕಿಂತ ಬೇರೆಯಾಗಿಯೇ ಅಂದರೆ ಸರ್ವಗುಣಗಳನ್ನು ಉಪಸಂಹಾರ ಮಾಡತಕ್ಕದ್ದಲ್ಲವೆಂದು ಸಿದ್ಧವಾಗುವುದು. 'ಆತ್ಮೇತ್ಯೇವ' ಎಂಬುದಾಗಿ ಅವಧಾರಣಾರ್ಥಕವಾದ 'ಏವ'ಕಾರದಿಂದ ಆತ್ಮತ್ವ ಗುಣಕ್ಕಿಂತ ಬೇರೆಯಾದ ಗುಣಗಳ ಧ್ಯಾನಮಾಡತಕ್ಕದ್ದಲ್ಲವೆಂದು ತಿಳಿಯುವುದರಿಂದ - ಎಂದರೆ ಅದು ಸರಿಯಲ್ಲ. ಅವಿಶೇಷಾತ್ - 'ಈ ಗುಣಗಳನ್ನು ಉಪಾಸನೆ ಮಾಡತಕ್ಕದ್ದಲ್ಲ' ಎಂದು ವಿಶೇಷ ಪ್ರಮಾಣವಿಲ್ಲದಿರುವುದರಿಂದ ಎಂದು ಅರ್ಥ. 'ಏವ' ಕಾರವು ಅಯೋಗ ವ್ಯವಚ್ಛೇದವನ್ನು ಮಾಡುವುದು ಅಂದರೆ ಆತ್ಮತ್ವೋಪಾಸನೆಯನ್ನು ಮಾಡದಿರತಕ್ಕದ್ದಲ್ಲವೆಂದು ಹೇಳುವ ಅಭಿಪ್ರಾಯವುಳ್ಳದ್ದೆಂದು ಭಾವ. ಸರ್ವಗುಣಗಳ ಉಪಸಂಹಾರ ಮಾಡಬೇಕೆನ್ನುವ ವಿಷಯದಲ್ಲಿ 'ಸರ್ವೈರ್ಗುಣೈರೇವ ಏಕ[1]' ಎಂಬ ಶ್ರುತಿಯು ಆಧಾರವಾಗಿರುವುದೆಂದು ಅಂತರ್ಯ.

---

1. 'ಸರ್ವೈರ್ಗುಣೈರೇಕ ಏವೇಶಿತಾऽಸಾವುಪಾಸಿತವ್ಯೋ ನ ತು ದೋಷೈಃ ಕದಾಚಿತ್' --ಎಂದು ಶ್ರುತಿ. ಪೂರ್ಣತ್ವಕ್ಕೆ ವಿರೋಧಿಯಲ್ಲದ ಎಲ್ಲ ಧರ್ಮಗಳಿಂದಲೂ ಎಲ್ಲ ವಸ್ತುಗಳಲ್ಲೂ ಒಬ್ಬನೇ ಆಗಿರುವ ಈಶ್ವರನನ್ನು ಉಪಾಸನೆ ಮಾಡತಕ್ಕದ್ದು. ದುಃಖಾದಿದೋಷಗಳನ್ನೆಂದೂ ಉಪಾಸಿಸತಕ್ಕದಲ್ಲ' ಎಂದು ಶ್ರುತಿಯ ಭಾವ.

न सर्वगुणोपसंहारो युक्तः । अशक्यत्वादित्यत आह—

॥ ॐ न वा प्रकरणभेदात् परोवरीयस्त्वादिवत् ॐ ॥
३.३.८

उपसंहार इत्यस्ति। षोडशिग्रहणवद् वाशब्दो व्यवस्थितविकल्पार्थः । न वोपसंहारः कार्यः । कुतः ? प्रकरणभेदात् परोवरीयोवैश्वानरादिप्रकरणभेदात् । अन्यथा तन्न स्यादिति भावः । एकैकप्रकरणेऽपि सर्वगुणोक्तिसम्भवात् तद्भेदेऽपि स्यात् सर्वगुणोपसंहार इत्यतः उक्तं परोवरीयस्त्वादिवदिति । 'स एष परोवरीयानुद्गीथः स एषोऽनन्तः' इत्यादिप्रकरणेषु परोवरीयस्त्वादिकं

---

ಮಾಡಲು ಶಕ್ಯವಲ್ಲದ ಸರ್ವಗುಣೋಪಸಂಹಾರವನ್ನು ಮಾಡುವುದು ಯುಕ್ತವಲ್ಲ ಎಂಬ ಆಕ್ಷೇಪಕ್ಕೆ ಉತ್ತರ—

ಓಂ ನ ವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ಓಂ ೩.೩.೮

**ಸೂತ್ರಾರ್ಥ**

'ಉಪಸಂಹಾರಃ' ಎಂಬ ಪದವು ಅನುವೃತ್ತವಾಗುವುದು. ಷೋಡಶಿಗ್ರಹಣ ಮತ್ತು ಅಗ್ರಹಣಗಳಿಗಿರುವಂತೆ ವ್ಯವಸ್ಥಿತ ವಿಕಲ್ಪವನ್ನು 'ವಾ' ಶಬ್ದವು ಹೇಳುವುದು. ಅಥವಾ, ಸರ್ವಗುಣೋಪಸಂಹಾರವನ್ನು ಮಾಡತಕ್ಕದ್ದಲ್ಲ. ಏಕೆಂದರೆ, ಪ್ರಕರಣಭೇದಾತ್ - ಪರೋವರೀಯಃಪ್ರಕರಣ, ವೈಶ್ವಾನರ ಪ್ರಕರಣ ಮೊದಲಾದ ಪ್ರಕರಣಗಳು ಬೇರೆ ಬೇರೆಯಾಗಿರುವುದರಿಂದ. ಸರ್ವಗುಣೋಪಸಂಹಾರವನ್ನು ಮಾಡಬಹುದಾಗಿದ್ದಲ್ಲಿ ಬೇರೆ ಬೇರೆ ಪ್ರಕರಣಗಳು ಇರಬಾರದಾಗಿದ್ದಿತೆಂದು ಭಾವ.

ಒಂದೊಂದು ಪ್ರಕರಣದಲ್ಲೂ ಸಮಸ್ತ ಗುಣಗಳನ್ನೂ ಹೇಳಿರುವ ಸಾಧ್ಯತೆಯಿರುವುದರಿಂದ, ಬೇರೆ ಬೇರೆ ಪ್ರಕರಣಗಳಿದ್ದರೂ ಸರ್ವಗುಣೋಪಸಂಹಾರವನ್ನು ಮಾಡಬಹುದು ಎಂಬ ಆಶಂಕೆಯನ್ನು ಪರಿಹರಿಸಲು — 'ಪರೋವರೀಯಸ್ತ್ವಾದಿವತ್' ಎಂದು ಹೇಳಲಾಗಿದೆ. 'ಸ ಏಷ ಪರೋವರೀಯಾನ್ ಉದ್ಗೀಥಃ ಸ

यथा तावन्मात्रमुपास्यमुक्तं, तथा तत्तद्विद्योक्तमात्रमुपास्यम् । न तूपसंहृत्येत्यर्थः ।

उक्तमाक्षिप्याह—

॥ ॐ संज्ञातश्चेत् तदुक्तमस्ति तु तदपि ॐ ॥ ३.३.९

संज्ञेति भावप्रधानम् । सर्वविद्यानामिति प्रकृतत्वादन्वेति । [1]'सोऽहं नामविदेव' इति श्रुत्या सर्वविद्यानां संज्ञातः संज्ञात्वतः

---

ಏಷೋಽನಂತಃ' (ಛಾಂ. ೧.೯.೨) ಇತ್ಯಾದಿ ಪ್ರಕರಣಗಳಲ್ಲಿ ಪರೋವರೀಯಸ್ತ್ವ ಮೊದಲಾದ, ಆ ಪ್ರಕರಣದಲ್ಲಿ ಹೇಳಿರುವ ಗುಣಗಳನ್ನಷ್ಟೇ ಉಪಾಸನೆ ಮಾಡಬೇಕೆಂದು ಹೇಗೆ ಹೇಳಲಾಗಿದೆಯೋ ಹಾಗೆ ಆಯಾಯಾ ವಿದ್ಯೆಯಲ್ಲಿ ಹೇಳಿರುವ ಗುಣಗಳನ್ನಷ್ಟೇ ಉಪಾಸನೆ ಮಾಡಬೇಕು ಹೊರತು ಎಲ್ಲ ಗುಣಗಳನ್ನು ಭಗವಂತನಲ್ಲಿ ಉಪಸಂಹರಿಸತಕ್ಕದ್ದಲ್ಲವೆಂದು ಅರ್ಥ.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನವನ್ನು ನೀಡುವ ಸೂತ್ರ—

**ಓಂ ಸಂಜ್ಞಾತಶ್ಚೇತ್ ತದುಕ್ತಮಸ್ತಿ ತು ತದಪಿ ಓಂ**
**೩.೩.೯**

**ಸೂತ್ರಾರ್ಥ**

ಸೂತ್ರದಲ್ಲಿರುವ ಸಂಜ್ಞಾಶಬ್ದವು ಸಂಜ್ಞಾತ್ವವೆಂಬ ಧರ್ಮವನ್ನು ಹೇಳುವುದು. ಪ್ರಕೃತವಾದುದರಿಂದ ಸರ್ವವಿದ್ಯಾನಾಂ ಎಂಬ ಪದವು ಇಲ್ಲಿ ಅನ್ವಿತವಾಗುವುದು.

---

1. ಛಾಂದೋಗ್ಯದ ಏಳನೆ ಅಧ್ಯಾಯದಲ್ಲಿ ಸನತ್ಕುಮಾರರನ್ನು ಕುರಿತು ನಾರದರು 'ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮವೇದಂ ಆಥರ್ವಣಂ ಚತುರ್ಥಂ' ಇತ್ಯಾದಿಯಾಗಿ ತಾವು ಋಗಾದಿ ಸರ್ವವಿದ್ಯೆಗಳನ್ನು ಅಧ್ಯಯನ ಮಾಡಿರುವುದಾಗಿ ಹೇಳಿ 'ಸೋಽಹಂ ನಾಮವಿದೇವ ಅಸ್ಮಿ ನಾತ್ಮವಿತ್' ಎಂದು ತಾವು ಭಗವಂತನ ನಾಮವನ್ನು ಮಾತ್ರ ತಿಳಿದಿರುವುದಾಗಿಯೂ ಭಗವಂತನನ್ನು ತಿಳಿದವರಲ್ಲವೆಂಬೂ ಹೇಳುವರು. ಈ ಶ್ರುತಿಯಿಂದ ಸರ್ವವಿದ್ಯೆಗಳೂ ಭಗವಂತನ ನಾಮವೆಂದು ಸಿದ್ಧವಾಗುವುದೆಂದು ಭಾವ.

ईशनामत्वतः तद्गुणवाचित्वात् तस्य ध्यानार्थत्वात् उपसंहारः कार्य इति चेत् तदुक्तम् । तत् उपसंहारकर्तव्यत्वम् उक्तं अस्माभिः प्रागित्यर्थः । इष्टमेवैतदस्माकमिति भावः । अस्ति तु तदपि । तुरेव । 'नाम वा एता ब्रह्मणः सर्वविद्याः' इति श्रुतिरूपप्रमाणमस्त्येव । न केवलं नामत्वयुक्तिमात्रम् इत्यपेरर्थः । प्रयत्नेनोपसंहारे फलाधिक्यबोधनार्थं

---

'ಸೋಽಹಂ ನಾಮವಿದೇವ' (ಛಾಂ. ೭.೧.೩) ಎಂಬ ಶ್ರುತಿಯಂತೆ, ಸರ್ವ ವಿದ್ಯಾನಾಂ - ಸರ್ವ ವಿದ್ಯೆಗಳೂ, ಸಂಜ್ಞಾತಃ - ಸಂಜ್ಞಾತ್ವತಃ - ಭಗವಂತನ ನಾಮವಾಗಿರುವುದರಿಂದ ಭಗವಂತನ ಗುಣವಾಚಿಗಳಾಗಿವೆ. ಹೀಗೆ ಗುಣಗಳನ್ನು ಹೇಳಿರುವುದು ಧ್ಯಾನಕ್ಕೋಸ್ಕರವಾದ್ದರಿಂದ ಸರ್ವಗುಣೋಪಸಂಹಾರವನ್ನು ಮಾಡತಕ್ಕದ್ದು ಎಂದರೆ, ತದುಕ್ತಂ – ತತ್ ಸರ್ವಗುಣಗಳ ಉಪಸಂಹಾರವನ್ನು ಮಾಡತಕ್ಕದ್ದು ಎಂಬುದು, ಉಕ್ತಂ - ಹಿಂದೆ ನಮ್ಮಿಂದ ಹೇಳಲ್ಪಟ್ಟಿದೆ ಎಂದು ಅರ್ಥ. ಸರ್ವ ಗುಣೋಪಸಂಹಾರವನ್ನು ಮಾಡಬೇಕೆನ್ನುವುದು ನಮಗೆ ಇಷ್ಟವೇ ಆಗಿದೆ ಎಂದು ಭಾವ. ಅಸ್ತಿ ತು ತದಪಿ - ಇಲ್ಲಿ ತುಶಬ್ದಕ್ಕೆ ಏವ ಎಂದು ಅರ್ಥ. ಎಲ್ಲ ವಿದ್ಯೆಗಳೂ ಪರಮಾತ್ಮನ ನಾಮವಾಗಿದ್ದು ಅವನ ಗುಣಗಳನ್ನು ಹೇಳುತ್ತಿರುವುದರಿಂದ ಅವನಲ್ಲಿ ಸಮಸ್ತ ಗುಣಗಳ ಉಪಸಂಹಾರವನ್ನು ಮಾಡಬೇಕು ಎಂಬ ವಿಷಯದಲ್ಲಿ 'ನಾಮ ವಾ ಏತಾಃ ಸರ್ವಾಃ ವಿದ್ಯಾಃ[1]' ಎಂಬ ಶ್ರುತಿಯೂ ಪ್ರಮಾಣವಾಗಿ ಇದ್ದೇ ಇದೆ. ಸರ್ವವಿದ್ಯೆಗಳೂ ಪರಮಾತ್ಮನ ನಾಮವಾಗಿವೆ ಎಂಬ ಯುಕ್ತಿಯಷ್ಟೇ ಅಲ್ಲ, [1]'ನಾಮ ವಾ ಏತಾ ಬ್ರಹ್ಮಣಃ ಸರ್ವವಿದ್ಯಾಃ' ಎಂಬ ಶ್ರುತಿಯೂ ಸರ್ವಗುಣೋಪಸಂಹಾರದ ವಿಷಯದಲ್ಲಿ ಪ್ರಮಾಣವಾಗಿದೆ ಎಂದು ಸೂತ್ರದಲ್ಲಿರುವ ಅಪಿಶಬ್ದದ ಅರ್ಥವಾಗಿದೆ.

---

1. 'ನಾಮ ವಾ ಏತಾಃ ಬ್ರಹ್ಮಣಃ ಸರ್ವವಿದ್ಯಾಃ ತಸ್ಮಾದೇಕಃ ಸರ್ವಗುಣ್ಯೈಃ ವಿಚಿಂತ್ಯಃ' ಎಂಬ ಕೌಂಡಿನ್ಯಶ್ರುತಿ.

बहुप्रमाणग्रहणार्थं च पुनः पुनः उपसंहारोपन्यास इत्युक्तं तत्त्वप्रदीपे ॥ २ ॥

प्राप्त्यधिकरणम्—३

॥ ॐ प्राप्तेश्च समञ्जसम् ॐ ॥ ३.३.१०

अत्र प्रागुक्तोपसंहारानुपसंहारयोः पुरुषभेदेन युक्तत्वं साध्यते। प्रकृतं उपसंहारानुपसंहारकर्तव्यत्वं समञ्जसं, वक्तुं युक्तं च। न केवलं कर्तव्यत्वमिति चार्थः। कुतः ? प्राप्तेः योग्यताविशेषेण तयोः

---

**ಪುನಃ ಪುನಃ ಗುಣೋಪಸಂಹಾರವನ್ನು ಹೇಳುವುದಕ್ಕೆ ತತ್ತ್ವ ಪ್ರದೀಪದ ವಿವರಣೆ**

ಪ್ರಯತ್ನಪಟ್ಟು ಗುಣೋಪಸಂಹಾರವನ್ನು ಮಾಡಿದಲ್ಲಿ ಅಧಿಕ ಫಲವಿರುವುದೆಂದು ತಿಳಿಸಲು ಮತ್ತು ಗುಣೋಪಸಂಹಾರದ ವಿಷಯದಲ್ಲಿ ಅನೇಕ ಪ್ರಮಾಣಗಳನ್ನು ಸಂಗ್ರಹಿಸಲು ಪುನಃ ಪುನಃ ಗುಣೋಪಸಂಹಾರವನ್ನು ಹೇಳಲಾಗಿದೆ ಎಂದು **ತತ್ತ್ವ** ಪ್ರದೀಪದಲ್ಲಿ ಹೇಳಿದೆ.

**ಪ್ರಾಪ್ತ್ಯಧಿಕರಣ—೩**

**ಓಂ ಪ್ರಾಪ್ತೇಶ್ಚ ಸಮಂಜಸಂ ಓಂ ೩.೩.೧೦**

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಹಿಂದೆ ಹೇಳಿದ ಗುಣೋಪಸಂಹಾರ ಮತ್ತು ಅನುಪಸಂಹಾರಗಳು ಅಧಿಕಾರಿಭೇದದಿಂದ ಯುಕ್ತವೆಂದು ಸಮರ್ಥಿಸಲಾಗುವುದು. ಪ್ರಸಕ್ತವಾಗಿರುವ ಗುಣೋಪಸಂಹಾರದ ಮತ್ತು ಅನುಪಸಂಹಾರದ ಕರ್ತವ್ಯತೆಯು ಸಮಂಜಸವಾಗಿದೆ ಮತ್ತು ಹೇಳಲು ಯುಕ್ತವೂ ಆಗಿದೆ. ಅವುಗಳ ಕರ್ತವ್ಯತೆ ಮಾತ್ರವೇ ಯುಕ್ತವೆಂದಲ್ಲವೆಂದು ಚ ಶಬ್ದದ ಅರ್ಥ. ಉಪಸಂಹಾರ – ಅನುಪಸಂಹಾರಗಳೆರಡೂ ಯುಕ್ತವಾಗುವುದು ಹೇಗೆ ಎಂಬ ಶಂಕೆಗೆ ಸಮಾಧಾನ – ಪ್ರಾಪ್ತೇಃ. ಯೋಗ್ಯತಾವಿಶೇಷವನ್ನು ಅನುಸರಿಸಿ ಅವುಗಳು ಪ್ರಾಪ್ತವಾಗುವುದರಿಂದ ಕೆಲವರಿಗೆ

प्राप्तत्वात्, व्यवस्थितत्वादित्यर्थः । योग्यताविशेषश्च यावदित्यत्र वक्ष्यते । ध्यानकाले यस्य यावद् गुणजातं स्पष्टं भाति तेन तावदुपास्यमिति भावः ॥ ३ ॥

सर्वाभेदाधिकरणम्—४

॥ ॐ सर्वाभेदादन्यत्रेमे ॐ ॥ ३.३.११

अत्र बहुगुणोपसंहारस्य फलाधिक्योक्त्या कर्तव्यतैव साध्यते । फल इति शेषः । इमे उपसंहर्तृत्वेन विशिष्य प्रस्तुताः ब्रह्मादयः

---

ಉಪಸಂಹಾರ, ಮತ್ತೆ ಕೆಲವರಿಗೆ ಅನುಪಸಂಹಾರವೆಂದು ವ್ಯವಸ್ಥಿತವಾಗಿರುವುದರಿಂದ ಎಂದು ಅರ್ಥ. ಯೋಗ್ಯತಾವಿಶೇಷವನ್ನು ಯಾವದಧಿಕರಣದಲ್ಲಿ (ಬ್ರ.ಸೂ. ೩.೩.೩೩) ಹೇಳಲಾಗುವುದು. ಯಾವ ಪುರುಷನಿಗೆ ಧ್ಯಾನಕಾಲದಲ್ಲಿ ಎಷ್ಟು ಗುಣಗಳ ಸಮೂಹವು ಸ್ಪಷ್ಟವಾಗಿ ತೋರುವುದೋ ಆ ಪುರುಷನು ಅಷ್ಟು ಗುಣಗಳನ್ನು ಉಪಾಸನೆ ಮಾಡತಕ್ಕದ್ದೆಂದು ಭಾವ.

ಸರ್ವಾಭೇದಾಧಿಕರಣ—೪

ಓಂ ಸರ್ವಾಭೇದಾದನ್ಯತ್ರೇಮೇ ಓಂ ೩.೩.೧೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬಹುಗುಣೋಪಸಂಹಾರಕ್ಕೆ ಅಧಿಕ ಫಲವನ್ನು ಹೇಳುವ ಮೂಲಕ ಅವಶ್ಯ ಕರ್ತವ್ಯತ್ವವನ್ನು ಸಾಧಿಸಲಾಗುವುದು. 'ಫಲೇ' ಎಂಬ ಶೇಷವನ್ನು ಇಲ್ಲಿ ಸೇರಿಸಬೇಕು. ಇಮೇ – ಸರ್ವಗುಣೋಪಸಂಹಾರವನ್ನು ಮಾಡುವವರೆಂದು ವಿಶೇಷತಃ ಪ್ರಸಕ್ತರಾಗಿರುವ ಚತುರ್ಮುಖ ಬ್ರಹ್ಮಾದಿಗಳು, ಅನ್ಯತ್ರ ಫಲೇ- ಸರ್ವಗುಣೋಪಸಂಹಾರವನ್ನು ಮಾಡುವವರಿಗೆ ಲಭಿಸುವ ಫಲಕ್ಕಿಂತ ವಿಲಕ್ಷಣವಾದ ಸಂಪೂರ್ಣ ಆನಂದಾದಿರೂಪವಾದ ಮೋಕ್ಷಫಲದಲ್ಲಿ ಇರುವರು ಅಂದರೆ

अन्यत्र फलेऽनुपसंहर्तृफलविलक्षणे सम्पूर्णानन्दाद्यात्मके मोक्षफले भवन्ति तद्भाजो भवन्ति । कुतः ? सर्वाभेदात्, सर्वगुणानाम् अभेदेनोपासनादित्यर्थः । सर्वगुणयुक्तत्वेनोपासनादिति यावत् । उपसंहारलभ्यफल इति निर्देश्ये अन्यत्रेत्युक्तिः तस्यानुपसंहारालभ्यत्व-सूचनाय । तेन तेनैवालमिति न शङ्क्यम् । 'इमे' इत्युक्तिः तेषां सर्वगुणोपसंहर्तृतया महत्त्वेन महाफलयोग्यतां सूचयितुम् । तेन मानाभावात् तेषां फलातिशयानिर्णय इति न शङ्क्यम् ॥ ४ ॥

ಅಂತಹ ಮೋಕ್ಷಫಲಕ್ಕೆ ಭಾಗಿಗಳಾಗುವರು. ಏಕೆಂದರೆ, ಸರ್ವಾಭೇದಾತ್ - ಸರ್ವ ಗುಣಗಳನ್ನು ವಿಭಾಗವಿಲ್ಲದೆ ಉಪಾಸನೆ ಮಾಡುವುದರಿಂದ ಎಂದು ಅರ್ಥ. ಸರ್ವ ಗುಣಯುಕ್ತನನ್ನಾಗಿ ಭಗವಂತನನ್ನು ಉಪಾಸನೆ ಮಾಡುವುದರಿಂದ ಎಂದು ಭಾವ.

**ಸೂತ್ರದ ಪದಗಳ ಸ್ವಾರಸ್ಯ—**

'ಉಪಸಂಹಾರದಿಂದ ಲಭಿಸುವ ಫಲಕ್ಕೆ ಭಾಗಿಗಳಾಗುವರು' ಎಂಬ ಅರ್ಥವನ್ನು ಕೊಡುವ 'ಉಪಸಂಹಾರಲಭ್ಯೇ ಫಲೇ' ಎಂಬ ಪದಗಳನ್ನು ಸೂತ್ರದಲ್ಲಿ ಪ್ರಯೋಗಿಸ ಬಹುದಾಗಿದ್ದರೂ ಆ ಮೋಕ್ಷ ಫಲವು ಸರ್ವಗುಣೋಪಸಂಹಾರವನ್ನು ಮಾಡದವರಿಗೆ ಲಭಿಸಲಾರದು ಎಂಬ ವಿಷಯವನ್ನು ಸೂಚಿಸುವ ಸಲುವಾಗಿ 'ಉಪಸಂಹಾರವನ್ನು ಮಾಡದವರಿಗೆ ಲಭಿಸುವ ಫಲಕ್ಕಿಂತ ವಿಲಕ್ಷಣವಾದ' ಎಂಬ ಅರ್ಥದ 'ಅನ್ಯತ್ರ' ಎಂಬ ಪದವನ್ನು ಇಲ್ಲಿ ಪ್ರಯೋಗಿಸಲಾಗಿದೆ. ಆದ್ದರಿಂದ, ಕೆಲವೇ ಗುಣಗಳ ಉಪ ಸಂಹಾರವೇ ಸಾಕು ಎಂಬ ಶಂಕೆಗೆ ಅವಕಾಶವಿಲ್ಲ.

ಸರ್ವಗುಣೋಪಸಂಹಾರವನ್ನು ಮಾಡುವ ಕಾರಣ ಮಹತ್ತ್ವವನ್ನು ಪಡೆದಿರು ವುದರಿಂದ ಮಹಾಫಲವನ್ನು ಪಡೆಯುವ ಯೋಗ್ಯತೆ ಇದೆ ಎಂಬುದನ್ನು ಸೂಚಿಸಲು ಚತುರ್ಮುಖಬ್ರಹ್ಮಾದಿಗಳನ್ನು 'ಇಮೇ' ಎಂದು ನಿರ್ದೇಶಿಸಲಾಗಿದೆ. ಆದ್ದರಿಂದ ಪ್ರಮಾಣವಿಲ್ಲದ ಕಾರಣ ಬ್ರಹ್ಮಾದಿಗಳಿಗೆ ಫಲಾತಿಶಯವಿದೆಯೆಂದು ನಿರ್ಣಯ ಮಾಡ ಲಾಗದು ಎಂಬ ಶಂಕೆಗೆ ಅವಕಾಶವಿಲ್ಲ[1].

1. ಸರ್ವಗುಣೋಪಾಸಕರೆಂದು ವಿಶೇಷತಃ ಪ್ರಸ್ತುತರಾಗಿರುವ ಬ್ರಹ್ಮಾದಿಗಳನ್ನು ಹೇಳುವ 'ಇಮೇ' ಎಂಬ ಪದವು ಸರ್ವಗುಣೋಪಸಂಹಾರಪ್ರಯುಕ್ತವಾದ ಮಹತ್ತ್ವವು ಬ್ರಹ್ಮಾದಿಗಳಿಗಿದೆ ಎಂದು ಸೂಚಿಸುವ ಮೂಲಕ ಫಲಾತಿಶಯವಿಲ್ಲದಿದ್ದಲ್ಲಿ ಮಹತ್ತ್ವವು ಉಪಪನ್ನವಾಗಲಾರದೆಂಬ ಅರ್ಥಾಪತ್ತಿಪ್ರಮಾಣದ್ವಾ ಬ್ರಹ್ಮಾದಿಗಳಿಗೆ ಫಲಾತಿಶಯವಿದೆ ಯೆಂದು ನಿರ್ಧರಿಸಲು ಕಾರಣವಾಗಿದೆ ಎಂದು ಭಾವ.

आनन्दाधिकरणम्—५

## ॥ ॐ आनन्दादयः प्रधानस्य ॐ ॥ ३.३.१२

अत्र सर्वमुमुक्षुसाधारणगुणोपासना निर्णीयते। प्रधानस्य मोक्षस्यार्थे आनन्दज्ञाननिर्दोषत्वात्मत्वरूपाः चत्वारो गुणाः ध्येयाः। अन्यथा तन्न स्यादिति भावः। मोक्षस्येति वाच्ये प्रधानस्येत्युक्तिः 'सुखमेव मे स्याद् दुःखं मनागपि मा भूत्' इति निखिलाशास्यत्वेन प्रधाननिर्दोषसुखानुभवरूपत्वात् तस्य तदर्थम् एत एवोपास्याः नान्य

---

ಆನಂದಾಧಿಕರಣ—೫

## ಓಂ ಆನಂದಾದಯಃ ಪ್ರಧಾನಸ್ಯ ಓಂ ೩.೩.೧೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಎಲ್ಲ ಮುಮುಕ್ಷುಗಳಿಗೆ ಸಮಾನವಾದ ಗುಣೋಪಾಸನೆಯನ್ನು ನಿರ್ಣಯಿಸಲಾಗುವುದು. ಪ್ರಧಾನಸ್ಯ – ಪ್ರಧಾನವಾದ ಮೋಕ್ಷದ ಉದ್ದೇಶದಿಂದ, ಆನಂದ, ಜ್ಞಾನ, ನಿರ್ದೋಷತ್ವ ಮತ್ತು ಆತ್ಮತ್ವ[1] ಎಂಬ ನಾಲ್ಕು ಗುಣಗಳನ್ನು ಧ್ಯಾನಿಸಬೇಕು. ಇಲ್ಲದಿದ್ದಲ್ಲಿ ಆ ಮೋಕ್ಷವು ಲಭಿಸಲಾರದೆಂದು ಭಾವ.

**ಸೂತ್ರದಲ್ಲಿ 'ಪ್ರಧಾನ' ಪದ ಪ್ರಯೋಗದ ಉದ್ದೇಶ**

'ಸುಖವೇ ನನಗಿರಲಿ, ದುಃಖ ನನಗೆ ಕಿಂಚಿತ್ತೂ ಬಾರದಿರಲಿ' ಎಂದು ಎಲ್ಲರೂ ಬಯಸುವ ಕಾರಣ ಪ್ರಧಾನವಾದದ್ದು ನಿರ್ದೋಷಸುಖಾನುಭವರೂಪವಾದ ಮೋಕ್ಷ. ಅಂತಹ ಮೋಕ್ಷಕ್ಕಾಗಿ ಈ ಗುಣಗಳನ್ನೇ ಉಪಾಸಿಸಬೇಕು ಹೊರತು ಬೇರೆಯದನ್ನಲ್ಲ ಎಂದು ಈ ಗುಣಗಳ ಉಪಾಸನೆಗೆ ಸಮರ್ಥನೆಯನ್ನು ಸೂಚಿಸಲು ಸೂತ್ರದಲ್ಲಿ 'ಮೋಕ್ಷಸ್ಯ' ಎಂದು ಹೇಳುವ ಬದಲು 'ಪ್ರಧಾನಸ್ಯ' ಎಂದು ಹೇಳ

1. ಆತ್ಮತ್ವವೆಂದರೆ ಸ್ವಾಮಿತ್ವ.

इति तदुपपादकं सूचयितुम् । 'तं यथा यथोपासते' इत्यादेः । स्वामित्वं तु तत्प्रीत्यर्थत्वादुपास्यमिति 'आत्मेति तूपगच्छन्ति' इत्यत्राग्रे व्यक्तम् ॥ ५ ॥

### प्रियशिरस्त्वाधिकरणम्—६

॥ ॐ प्रियशिरस्त्वाद्यप्राप्तिरुपचयापचयौ हि भेदे ॐ ॥ ३.३.१३

अत्र प्रियशिरस्त्वादिगुणानां सर्वोपास्यता नेत्युच्यते । प्रियशिरस्त्वादिशब्दः तदुपास्तिपरः । भेद इति निमित्तसप्तमी । प्रधान-

---

ಲಾಗಿದೆ. 'ತಂ ಯಥಾ ಯಥೋಽಪಾಸತೇ' ಎಂಬ ಶ್ರುತಿ ಈ ವಿಷಯದಲ್ಲಿ ಆಧಾರ ವಾಗಿದೆ.

ಭಗವಂತನಿಗೆ ಪ್ರೀತಿಯನ್ನುಂಟುಮಾಡುವುದರಿಂದ ಸ್ವಾಮಿತ್ವ ಗುಣವನ್ನು ಉಪಾಸನೆ ಮಾಡತಕ್ಕದ್ದೆಂದು 'ಆತ್ಮೇತಿ ತೂಪಗಚ್ಛಂತಿ' (ಬ್ರ.ಸೂ. ೪.೧.೩) ಎಂಬ ಸೂತ್ರದಲ್ಲಿ ಮುಂದೆ ಸ್ಪಷ್ಟವಾಗುವುದು.

### ಪ್ರಿಯಶಿರಸ್ತ್ವಾಧಿಕರಣ—೬

ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ ೩.೩.೧೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಪ್ರಿಯಶಿರಸ್ತ್ವವೇ ಮೊದಲಾದ ಗುಣಗಳು ಎಲ್ಲರ ಉಪಾಸನೆಗೆ ಅರ್ಹವಲ್ಲವೆಂದು ಹೇಳಲಾಗುವುದು. ಸೂತ್ರದಲ್ಲಿರುವ 'ಪ್ರಿಯಶಿರಸ್ತ್ವಾದಿ' ಪದವು ಪ್ರಿಯಶಿರಸ್ತ್ವಾದಿಗಳ ಉಪಾಸನೆ ಎಂಬ ಅರ್ಥವನ್ನು ಹೇಳುವ ಅಭಿಪ್ರಾಯವುಳ್ಳದ್ದು. 'ಭೇದೇ' ಎಂಬ ಪದದಲ್ಲಿರುವ ಸಪ್ತಮಿವಿಭಕ್ತಿಯು ನಿಮಿತ್ತ ಎಂಬ

स्येत्यस्ति। 'तस्य प्रियमेव शिरः' इत्याद्युक्तप्रियशिरस्त्वादिगुणोपास्तिप्राप्तिः न सर्वेषाम्। कुतः? प्रधानस्य मोक्षाख्यफलस्य भेदे भेदार्थं, तारतम्यार्थम्। उपचयापचयौ। प्रस्तावाद् गुणोपासनाया इत्यन्वेति। गुणोपासनाया उपचयापचयौ वृद्धिह्रासौ, तारतम्यमिति यावत्, उपेयावित्यर्थः। हिर्हेतौ। यस्मादेवं तस्मादिति। 'आनन्दस्य मीमांसा भवति' इत्यादिश्रुतिसिद्धफलभेदप्रसिद्धिद्योतको वा। भेद

---

ಅರ್ಥವನ್ನು ಹೇಳುವುದು. ಹಿಂದಿನ ಸೂತ್ರದಿಂದ 'ಪ್ರಧಾನಸ್ಯ' ಎಂಬ ಪದವು ಅನುವೃತ್ತವಾಗುವುದು.

'ತಸ್ಯ ಪ್ರಿಯಮೇವ ಶಿರಃ' (ತೈ.ಉ.) ಇತ್ಯಾದಿ ಶ್ರುತಿಯಲ್ಲಿ ಹೇಳಿರುವ ಪ್ರಿಯಶಿರಸ್ತ್ವಾದಿ ಗುಣಗಳ ಉಪಾಸನೆಯ ಪ್ರಾಪ್ತಿಯು ಎಲ್ಲರಿಗೂ ಇಲ್ಲ. ಏಕೆಂದರೆ, ಪ್ರಧಾನಸ್ಯ – ಮೋಕ್ಷರೂಪವಾದ ಫಲದ, ಭೇದೇ - ಭೇದಕ್ಕೋಸ್ಕರ ಅಂದರೆ ತಾರತಮ್ಯಕ್ಕೋಸ್ಕರ, ಉಪಚಯಾಪಚಯೌ – ಪ್ರಸ್ತುತವಾದುದರಿಂದ 'ಗುಣೋಪಾಸನಾಯಾಃ' ಎಂಬ ಪದವು ಅನ್ವಿತವಾಗುವುದು. ಗುಣೋಪಾಸನಾಯಾಃ ಉಪಚಯಾಪಚಯೌ – ಗುಣೋಪಾಸನೆಯಿಂದ, ವೃದ್ಧಿಹ್ರಾಸಗಳು – ತಾರತಮ್ಯವೆಂದು ಭಾವ - ಹೊಂದಲ್ಪಡುವವು ಎಂಬ ಅರ್ಥ. ಸೂತ್ರದಲ್ಲಿರುವ 'ಹಿ' ಶಬ್ದವು ಹೇತ್ವರ್ಥಕವಾಗಿದೆ — 'ಯಾವ ಕಾರಣದಿಂದ ಹೀಗಿರುವುದೋ ಆದ್ದರಿಂದ[1]' ಎಂದು. ಅಥವಾ, 'ಆನಂದಸ್ಯ ಮೀಮಾಂಸಾ ಭವತಿ' (ತೈ.ಉ.) ಎಂಬ ಶ್ರುತಿಯಿಂದ ಸಿದ್ಧವಾಗಿರುವ ಮೋಕ್ಷರೂಪಫಲದ ತಾರತಮ್ಯದ ಪ್ರಸಿದ್ಧಿಯನ್ನು 'ಹಿ' ಶಬ್ದವು ಸೂಚಿಸುವುದು.

---

1. ಗುಣೋಪಾಸನೆಯ ವ್ಯತ್ಯಾಸದಿಂದ ಮೋಕ್ಷದಲ್ಲಿ ಆನಂದತಾರತಮ್ಯವಿರುವ ಕಾರಣ ಎಲ್ಲ ಗುಣಗಳು ಎಲ್ಲರಿಂದಲೂ ಉಪಾಸ್ಯವಲ್ಲವೆಂದು ಒಟ್ಟು ಭಾವ.

इत्युक्त्या 'नैव सर्वगुणाः सर्वैरुपास्या मुक्तिभेदतः' इति स्मृतिः सूचिता। अप्राप्तिरित्युक्त्या योग्यताऽपि तावतीति सूचितम् ॥ ६ ॥

इतराधिकरणम्—७

॥ ॐ इतरे त्वर्थसामान्यात् ॐ ॥ ३.३.१४

अत्र देवादीनां बहुगुणोपासनं साध्यते। तुरेव। शेषेणान्वेति। इतरे सर्वाभेदादित्युक्तसर्वगुणेभ्यः, आनन्दादय इत्युक्तचतुर्भ्यश्च इतरे

---

**ಸೂತ್ರದ ಪದಗಳ ಸ್ವಾರಸ್ಯ**

'ಭೇದೇ' ಎಂದು ಹೇಳಿದ್ದರಿಂದ 'ನೈವ[1] ಸರ್ವಗುಣಾಃ ಸರ್ವೈರುಪಾಸ್ಯಾ ಮುಕ್ತಿಭೇದತಃ' ಎಂಬ ಸ್ಮೃತಿಯು ಸೂಚಿತವಾಗುವುದು. ಪ್ರಿಯಶಿರಸ್ತ್ವಾದಿ ಗುಣೋಪಾಸನೆಯು ಪ್ರಾಪ್ತಿಯಿಲ್ಲವೆಂದು ಹೇಳಿದ್ದರಿಂದ ಅಂತಹ ಗುಣೋಪಾಸನೆಯನ್ನು ಮಾಡುವಷ್ಟು ಯೋಗ್ಯತೆಯೂ ಇಲ್ಲವೆಂದು ಸೂಚಿತವಾಯಿತು.

ಇತರಾಧಿಕರಣ--೭

ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ ೩.೩.೧೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ದೇವತೆಗಳೇ ಮೊದಲಾದವರಿಗೆ ಬಹುಗುಣೋಪಾಸನೆ ಇರುವುದೆಂದು ಸಾಧಿಸಲಾಗುವುದು. 'ತು' ಶಬ್ದಕ್ಕೆ ಏವ ಎಂದು ಅರ್ಥ. ಈ ಪದವು ಶೇಷಪೂರಣ ಮಾಡಿಕೊಂಡಿರುವ ಪದದೊಂದಿಗೆ ಅನ್ವಯವನ್ನು ಪಡೆಯುವುದು.

ಇತರೇ – 'ಸರ್ವಾಭೇದಾತ್' (ಬ್ರ. ಸೂ. ೩.೩.೧೨) ಎಂಬಲ್ಲಿ ಹೇಳಿರುವ ಸರ್ವಗುಣಗಳಿಂದ ಮತ್ತು 'ಆನಂದಾದಯಃ' (ಬ್ರ. ಸೂ. ೩.೩.೧೩) ಎಂಬಲ್ಲಿ ಹೇಳಿರುವ ನಾಲ್ಕುಗಳಿಂದ ಬೇರೆಯಾದ ಗುಣಗಳು — ಮಧ್ಯಮ ಗುಣಗಳೆಂದು ಅರ್ಥ— ದೇವತೆಗಳೇ ಮೊದಲಾದವರಿಂದ ಉಪಸಂಹರಿಸಲ್ಪಡತಕ್ಕವುಗಳೇ ಆಗಿವೆ.

---

1. ನೈವ ಸರ್ವಗುಣಾಃ ಸರ್ವೈರುಪಾಸ್ಯಾ ಮುಕ್ತಿಭೇದತಃ ।
ವಿರಿಂಚಸ್ಯೈವ ಯನ್ಮುಕ್ತೌ ಆನಂದಸ್ಯ ಸುಪೂರ್ಣತಾ । ಎಂದು ನಾರಾಯಣವಚನ.

गुणाः, मध्यमगुणा इत्यर्थः। देवादिभिरुपसंहार्या एवेति शेषः। नैतच्छक्यं योग्यताऽनिर्णयादित्यत उक्तम् अर्थेति। ल्यब्लोपे पञ्चमी। स्वस्वप्राप्यफलसाम्यमपेक्ष्येत्यर्थः। प्राप्यफलानुरोधेनोपसंहार्यगुणान् प्रति योग्यतानिश्चयोपपत्तेः। भाविफलोत्कर्षज्ञेन सर्वज्ञगुरुणा तदनुसारिगुणनियमोपदेशोपपत्तेरिति भावः। गुरुनियतिः प्रदाननये व्यक्ता। अर्थादित्येव पूर्तौ सामान्यादित्युक्तिः फलोपासनयोः साम्यादिति युक्तिं सूचयितुम् ॥ ७ ॥

## आध्यानाधिकरणम्—८

## ॥ ॐ आध्यानाय प्रयोजनाभावात् ॐ ॥ ३.३.१५

---

ಇಲ್ಲಿ ದೇವಾದಿಗಳಿಂದ 'ಉಪಸಂಹರಿಸಲ್ಪಡತಕ್ಕವುಗಳು' ಎಂಬ ಶೇಷವನ್ನು ಸೇರಿಸಿಕೊಳ್ಳಬೇಕು. ಯಾರಿಗೆ ಎಷ್ಟು ಯೋಗ್ಯತೆ ಎಂಬ ನಿರ್ಣಯವಿಲ್ಲದಿರುವುದರಿಂದ ಈ ರೀತಿಯ ಗುಣೋಪಸಂಹಾರ ಶಕ್ಯವಲ್ಲ ಎಂಬ ಶಂಕೆಗೆ ಉತ್ತರ—'ಅರ್ಥ' ಎಂದು. 'ಅರ್ಥಸಾಮಾನ್ಯಾತ್' ಎಂಬಲ್ಲಿರುವ ಪಂಚಮೀವಿಭಕ್ತಿಯು ಲ್ಯಬ್‌ಲೋಪೇ ಪಂಚಮೀ ವಿಭಕ್ತಿಯಾಗಿದೆ. 'ತಾನು ತಾನು ಪಡೆಯುವ ಫಲದ ಸಮಾನತೆಯನ್ನು ವಿವಕ್ಷಿಸಿ' ಎಂದು ಈ ಪದದ ಅರ್ಥ. 'ತಾನು ಪಡೆಯುವ ಫಲವನ್ನನುಸರಿಸಿ ಉಪಸಂಹರಿಸಬಹುದಾದ ಗುಣಗಳ ಬಗ್ಗೆ ಯೋಗ್ಯತೆಯನ್ನು ನಿಶ್ಚಯಿಸುವುದು ಸಾಧ್ಯವಿರುವುದರಿಂದ' ಎಂದು ಒಟ್ಟು ಅರ್ಥ. ಮುಂದೆ ಒದಗುವ ಫಲದ ಉತ್ಕರ್ಷವನ್ನು ತಿಳಿದ ಸರ್ವಜ್ಞರಾದ ಗುರುಗಳಿಗೆ ಫಲಕ್ಕನುಸಾರವಾಗಿ ಇಷ್ಟೇ ಗುಣಗಳನ್ನು ಉಪಸಂಹರಿಸತಕ್ಕದೆಂಬ ನಿಯಮವನ್ನು ಉಪದೇಶಿಸಲು ಸಾಧ್ಯವಿರುವುದರಿಂದ ಎಂದು ಭಾವ. ಗುರುನಿಯಮವು ಪ್ರದಾನಾಧಿಕರಣದಲ್ಲಿ ಸ್ಪಷ್ಟವಾಗುವುದು.

**'ಸಾಮಾನ್ಯಾತ್' ಎಂಬ ಪದದ ಆವಶ್ಯಕತೆ**

'ಅರ್ಥಾತ್' ಎಂದಿಷ್ಟೇ ಸಾಕಾಗಿದ್ದರೂ ಫಲಕ್ಕೂ ಉಪಾಸನೆಗೂ ಸಾಮ್ಯವಿರುವುದೆಂಬ ಯುಕ್ತಿಯನ್ನು ಸೂಚಿಸಲು 'ಸಾಮಾನ್ಯಾತ್' ಎಂದು ಹೇಳಲಾಗಿದೆ.

## ಆಧ್ಯಾನಾಧಿಕರಣ—೮

## ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ ೩.೩.೧೫

अत्र प्रागुक्तोपसंहारानुपसंहारयोः प्रमाणमुच्यते। संज्ञात इत्यत्र प्रकृत सर्वगुणोक्तिरन्वेति। संज्ञात इत्युक्तन्यायेन सर्ववेदादिष्वीशस्य सर्वगुणोक्तिः आ समन्तात् सर्वगुणोपसंहारपूर्वकध्यानार्था, आ सम्यगनुरूपफलजनकध्यानार्था चेत्यर्थः। कुतः? प्रयोजनाभावात्। उक्तरूपध्यानादन्यप्रयोजनाभावादित्यर्थः। सर्ववेदादेरीशनामत्वेन तद्गुणाभिधायकत्वमेवोपसंहारे मानमित्युक्तं भवति।

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಹಿಂದೆ ಹೇಳಲಾಗಿರುವ ಸರ್ವಗುಣೋಪಸಂಹಾರ ಮತ್ತು ಅಲ್ಪಗುಣೋಪಸಂಹಾರಗಳ ವಿಷಯದಲ್ಲಿ ಪ್ರಮಾಣವನ್ನು ಹೇಳಲಾಗುವುದು.

'ಸಂಜ್ಞಾತಃ' (ಬ್ರ.ಸೂ. ૩.૩.೯) ಎಂಬಲ್ಲಿ ಪ್ರಕೃತವಾಗಿರುವ 'ಸರ್ವಗುಣಗಳ ಹೇಳಿರುವಿಕೆ'ಯು ಇಲ್ಲಿ ಅನ್ವಯವನ್ನು ಪಡೆಯುವುದು. 'ಸಂಜ್ಞಾತಃ' ಎಂಬ ಸೂತ್ರದಲ್ಲಿ ಹೇಳಿರುವ ನ್ಯಾಯದಂತೆ ಸಮಸ್ತ ವೇದಗಳೇ ಮೊದಲಾದವುಗಳಲ್ಲಿ ಭಗವಂತನ ಸರ್ವಗುಣಗಳ ಹೇಳಿರುವಿಕೆಯು, ಆಧ್ಯಾನಾಯ – ಆ – ಎಲ್ಲ ರೀತಿಯಿಂದ, ಧ್ಯಾನಾಯ – ಸಮಸ್ತಗುಣಗಳನ್ನು ಉಪಸಂಹಾರಮಾಡಿ ಧ್ಯಾನಮಾಡುವುದಕ್ಕೋಸ್ಕರ, ಮತ್ತು ಆ– ಚೆನ್ನಾಗಿ, ಧ್ಯಾನಾಯ– ಅನುರೂಪವಾದ ಫಲವನ್ನು ಕೊಡುವ ಧ್ಯಾನಕ್ಕೋಸ್ಕರ ಎಂದು ಅರ್ಥ. ಏಕೆಂದರೆ, ಪ್ರಯೋಜನಾಭಾವಾತ್ – ಈಗ ಹೇಳಲಾದ ಧ್ಯಾನಕ್ಕಿಂತಲೂ ಬೇರೆಯಾದ ಪ್ರಯೋಜನವಿಲ್ಲದ್ದರಿಂದ ಎಂದು ಅರ್ಥ. ಸಕಲ ವೇದವೇ ಮೊದಲಾದವುಗಳು ಭಗವಂತನ ನಾಮವಾಗಿದ್ದು ಅವನ ಗುಣಗಳನ್ನು ಹೇಳುತ್ತಿರುವುದೇ ಸಮಸ್ತಗುಣಗಳನ್ನು ಉಪಸಂಹಾರ ಮಾಡಬೇಕೆಂಬ ವಿಷಯದಲ್ಲಿ ಪ್ರಮಾಣವಾಗಿದೆ ಎಂದು ಹೇಳಿದಂತಾಗುವುದು.

**ಸೂತ್ರದಲ್ಲಿ 'ಪ್ರಯೋಜನ' ಎಂಬ ಪದದ ಸ್ವಾರಸ್ಯ ಮತ್ತು ಸೂತ್ರದ ಸಾರ್ಥಕತೆ :**

'ಫಲ' ಎಂದು ಹೇಳಬಹುದಾಗಿದ್ದರೂ ಸೂತ್ರದಲ್ಲಿ 'ಪ್ರಯೋಜನ' ಎಂಬ ಪದವನ್ನು ಹೇಳಿರುವುದು ವೇದಗಳಲ್ಲಿ ಭಗವಂತನ ಗುಣಗಳನ್ನು ಹೇಳಿರುವುದಕ್ಕೆ ಧ್ಯಾನವು ಪ್ರಯೋಜಕವಾಗಿದೆ ಎಂದು ಸೂಚಿಸಲು.

फलेति वाच्ये प्रयोजनेत्युक्तिः गुणोक्तिं प्रति ध्यानस्य प्रयोजकत्वसूचनाय । विधिशेषवदित्यत्र विहितत्वयुक्तेरुक्तावपि उपसंहारफलस्य मोक्षस्यान्यतः सिद्धेर्नैष्फल्येनाप्रयोजकत्वं तस्या इति शङ्काव्युदासायायं योगः । संज्ञात इति गुणोक्तेरुपसंहारार्थत्वोक्तावपि गुणानां विप्रकीर्णतयोक्तत्वात् न तस्या इदं फलमित्याशङ्क्य तादृशानाम् उपसंहृत्य ध्याने फलातिशयोऽस्तीति आङा सूचयित्वा विप्रकीर्णोक्तेरन्यथासिद्धिं वक्तुं चायमिति ।

---

'ವಿಧಿಶೇಷವತ್' (ಬ್ರ. ಸೂ. ೩.೩.೬) ಎಂಬಲ್ಲಿ ಸರ್ವಗುಣಗಳನ್ನೂ ಉಪಸಂಹರಿಸಿ ಧ್ಯಾನಿಸತಕ್ಕದ್ದು ಎಂಬ ವಿಷಯದಲ್ಲಿ ವಿಹಿತತ್ವ– ವಿಹಿತವಾಗಿರುವಿಕೆ ಎಂಬ ಯುಕ್ತಿಯನ್ನು ಈಗಾಗಲೆ ಹೇಳಿದ್ದರೂ. ಸರ್ವಗುಣೋಪಸಂಹಾರದ ಫಲವಾದ ಮೋಕ್ಷವು ಇತರ ಸಾಧನಗಳಿಂದ ಸಿದ್ಧಿಸುವುದರಿಂದ ಗುಣೋಪಸಂಹಾರವು ನಿಷ್ಫಲವಾದುದು. ಆದ್ದರಿಂದ ವೇದಗಳಲ್ಲಿ ಗುಣಗಳನ್ನು ಹೇಳಿರುವುದು ಅಪ್ರಯೋಜಕವಾದುದು ಎಂಬ ಆಶಂಕೆಯನ್ನು ಪರಿಹರಿಸಲು ಈ ಸೂತ್ರ ಬಂದಿದೆ.

ಅಲ್ಲದೆ, 'ಸಂಜ್ಞಾತಃ' (ಬ್ರ.ಸೂ. ೩.೩.೯) ಎಂಬಲ್ಲಿ ವೇದಗಳಲ್ಲಿ ಭಗವದ್ಗುಣಗಳನ್ನು ಹೇಳಿರುವುದಕ್ಕೆ ಉಪಸಂಹಾರವೇ ಪ್ರಯೋಜನವೆಂದು ಹೇಳಿದ್ದರೂ, ಆ ಗುಣಗಳನ್ನು ಭಿನ್ನ ಭಿನ್ನ ಸ್ಥಳಗಳಲ್ಲಿ ಹೇಳಿರುವುದರಿಂದ ಗುಣಗಳನ್ನು ಹೇಳಿರುವುದಕ್ಕೆ ಉಪಸಂಹಾರಪೂರ್ವಕ ಧ್ಯಾನವು ಫಲವಾಗಲಾರದು[1] ಎಂದು ಶಂಕಿಸಿ, ಹಾಗೆ ವಿಭಿನ್ನ ಸ್ಥಳಗಳಲ್ಲಿ ಹೇಳಿರುವ ಗುಣಗಳನ್ನು ಉಪಸಂಹರಿಸಿ ಧ್ಯಾನಮಾಡಿದಲ್ಲಿ ಫಲಾತಿಶಯವಿರುವುದೆಂದು 'ಆಧ್ಯಾನಾಯ' ಎಂಬಲ್ಲಿರುವ 'ಆಙ್' ಎಂಬ ಉಪಸರ್ಗದಿಂದ ಸೂಚಿಸಿ, ವಿಭಿನ್ನ ಸ್ಥಳಗಳಲ್ಲಿ ಹೇಳಿರುವುದಕ್ಕೆ ಅನ್ಯಥಾಸಿದ್ಧಿಯನ್ನು[2] ಹೇಳಲೂ ಈ ಸೂತ್ರವು ಆವಶ್ಯಕವಾಗಿದೆ.

---

1. ಉಪಸಂಹಾರಪೂರ್ವಕ ಧ್ಯಾನಕ್ಕಾಗಿ ವೇದಗಳಲ್ಲಿ ಭಗವದ್ಗುಣಗಳನ್ನು ಹೇಳಿರುವುದಾದಲ್ಲಿ ಆ ಗುಣಗಳನ್ನು ಉಪಸಂಹಾರ ಮಾಡಲು ಅನುಕೂಲವಾಗುವಂತೆ ಅವುಗಳನ್ನು ಏಕತ್ರ ಹೇಳಬೇಕಾಗಿತ್ತೇ ಹೊರತು ವಿಭಿನ್ನ ಸ್ಥಳಗಳಲ್ಲಲ್ಲ--ಎಂದು ಶಂಕೆಯ ಭಾವ.

2. ವಿಭಿನ್ನ ಸ್ಥಳಗಳಲ್ಲಿ ಹೇಳಿರುವ ಗುಣಗಳನ್ನು ಉಪಸಂಹರಿಸುವುದು ಅತಿಕ್ಲೇಶಕರವಾದರೂ ಹಾಗೆ ಹೇಳಲಾದ ಗುಣಗಳನ್ನು ಉಪಸಂಹಾರಮಾಡಿ ಧ್ಯಾನಿಸಿದರೆ ವಿಶೇಷ ಫಲವಿರುವುದು. ಆದ್ದರಿಂದ, 'ಉಪಸಂಹಾರಪೂರ್ವಕ ಧ್ಯಾನ ಮಾಡತಕ್ಕದ್ದಲ್ಲ'ವೆಂಬ ಪ್ರಕೃತ ಸಾಧ್ಯವನ್ನು ಸಾಧಿಸದೆ ವಿಪ್ರಕೀರ್ಣೋಕ್ತಿಯು ಯುಕ್ತವಾಗಿರುವುದು ಅನ್ಯಥಾಸಿದ್ಧಿ.

उपसंहारे मानमुक्त्वाऽनुपसंहारेऽपि तदाह—

॥ ॐ आत्मशब्दाच्च ॐ ॥ ३.३.१६

आत्मेति भावप्रधानं सावधारणं च। आत्मत्वमात्रोपास्तिविधायकः शब्द आत्मशब्दः 'आत्मेत्येवोपासीत' इति शब्दः। तस्मात् गुणान्तरव्यावृत्तिपूर्वमात्मत्वोपास्तिविधायकशब्दात् अनुपसंहारश्च सिद्ध्यतीति चार्थः। मनोतामन्त्र इत्यादिवदात्मपदयुक्तः शब्दः आत्मशब्द इति वा विग्रहः। अन्यथात्वमित्यत्रायोगव्यावृत्त्य-

---

ಉಪಸಂಹಾರದ ವಿಷಯದಲ್ಲಿ ಪ್ರಮಾಣವನ್ನು ಹೇಳಿದ ನಂತರ ಅನುಪಸಂಹಾರದ ವಿಷಯದಲ್ಲೂ ಪ್ರಮಾಣವನ್ನು ಈ ಮುಂದಿನ ಸೂತ್ರ ಹೇಳುವುದು—

ಓಂ ಆತ್ಮಶಬ್ದಾಚ್ಚ ಓಂ ೩.೩.೧೬

**ಸೂತ್ರಾರ್ಥ**

ಈ ಸೂತ್ರದಲ್ಲಿ ಆತ್ಮಶಬ್ದವು ಆತ್ಮತ್ವ ಎಂಬ ಧರ್ಮವನ್ನು ಹೇಳುವುದು ಮತ್ತು 'ಆತ್ಮತ್ವವನ್ನೇ' ಎಂದು ಅವಧಾರಣಸಹಿತವಾಗಿದೆ. 'ಆತ್ಮತ್ವವನ್ನು ಮಾತ್ರ ಉಪಾಸನೆ ಮಾಡಬೇಕೆಂದು ವಿಧಿಸುವ ಶ್ರುತಿ' ಎಂದು 'ಆತ್ಮಶಬ್ದ' ಎಂಬ ಪದದ ಅರ್ಥ. ಆ ಶ್ರುತಿಯು 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯಾಗಿದೆ. ಭಗವಂತನ ಇತರ ಗುಣಗಳನ್ನು ವ್ಯಾವೃತ್ತಿಮಾಡಿ ಆತ್ಮತ್ವವನ್ನು ಉಪಾಸನೆ ಮಾಡಬೇಕೆಂದು ವಿಧಿಸುವ ಆ ಶ್ರುತಿಯಿಂದ ಸರ್ವಗುಣಗಳ ಅನುಪಸಂಹಾರವೂ ಸಿದ್ಧವಾಗುವುದು. ಸೂತ್ರದಲ್ಲಿರುವ 'ಚ' ಶಬ್ದವು ಅನುಪಸಂಹಾರದ ಸಮುಚ್ಚಯವನ್ನು ಹೇಳುವುದು. 'ಮನೋತಾಮಂತ್ರ' ಎಂಬ ಪದಕ್ಕೆ ಮನೋತಾ ಎಂಬ ಶಬ್ದಯುಕ್ತವಾದ ಮಂತ್ರ ಎಂದರ್ಥವಾಗುವಂತೆ ಸೂತ್ರದಲ್ಲಿರುವ 'ಆತ್ಮಶಬ್ದ' ಎಂಬ ಪದಕ್ಕೆ 'ಆತ್ಮಪದಯುಕ್ತವಾದ ಶಬ್ದ' ಎಂದೂ ವಿಗ್ರಹವನ್ನು ತೋರಿಸಬಹುದು.

र्थत्वेऽभिमतेऽप्यत्र चतुर्गुणोपास्तावप्यशक्तान् प्रति प्राप्तेश्चेत्यत्रोक्तदिशा तत्तद्योग्यतानुसारेण तथा तथा प्रतीतेरविरोधः ॥ ८ ॥

आत्मगृहीत्यधिकरणम्—९

ॐ ॥ आत्मगृहीतिरितरवदुत्तरात् ॐ ॥ ३.३.१७

---

**ಈ ಸೂತ್ರಕ್ಕೆ 'ಅನ್ಯಥಾತ್ವಂ' ಇತ್ಯಾದಿ ಸೂತ್ರದ ವಿರೋಧವಿಲ್ಲ**

'ಅನ್ಯಥಾತ್ವಂ' (ಬ್ರ. ಸೂ. ೩.೩.೭) ಎಂಬ ಸೂತ್ರವಲ್ಲಿ 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯು 'ಏವ' ಶಬ್ದವು 'ಆತ್ಮತ್ವಗುಣವನ್ನು ಉಪಾಸನೆ ಮಾಡದಿರಬಾರದು' ಎಂಬ ಅರ್ಥವು ದೊರಕುವಂತೆ ಅಯೋಗವ್ಯವಚ್ಛೇದವನ್ನು ಹೇಳುವುದು ಎಂದು ಅಭಿಮತವನ್ನು ವ್ಯಕ್ತಪಡಿಸಿದ್ದರೂ ಈ ಸೂತ್ರದಲ್ಲಿ, 'ಪ್ರಾಪ್ತೇಶ್ಚ' (೩.೩.೧೧) ಎಂಬಲ್ಲಿ ಹೇಳಿರುವಂತೆ ನಾಲ್ಕು ಗುಣಗಳನ್ನೂ ಉಪಾಸನೆ ಮಾಡಲು ಸಾಧ್ಯವಿಲ್ಲದವರಿಗೆ ಅವರವರ ಯೋಗ್ಯತೆಗನುಸಾರವಾಗಿ ಅಷ್ಟಷ್ಟೇ ಗುಣಗಳು ಉಪಾಸನಾಕಾಲದಲ್ಲಿ ಪ್ರತೀತವಾಗುವುದು ಎಂದು ಹೇಳುವುದರಿಂದ ಯಾವ ವಿರೋಧವೂ ಇಲ್ಲ[1].

ಆತ್ಮಗೃಹೀತ್ಯಧಿಕರಣ—೯

ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ ೩.೩.೧೭

---

1. ಈ ಸೂತ್ರವು, ಆತ್ಮತ್ವಗುಣವನ್ನು ಮಾತ್ರ ಉಪಾಸನೆ ಮಾಡತಕ್ಕದ್ದೆಂದು 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯು ಅಭಿಪ್ರಾಯವೆಂದು ಹೇಳುವಂತೆ ಭಾಸವಾಗುವುದು. ಆದರೆ 'ಅನ್ಯಥಾತ್ವಂ' ಇತ್ಯಾದಿ ಸೂತ್ರದಲ್ಲಿ 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಗೆ ಆತ್ಮತ್ವಗುಣವನ್ನು ಬಿಟ್ಟು ಬೇರೆ ಯಾವ ಗುಣಗಳನ್ನೂ ಉಪಾಸನೆ ಮಾಡಬಾರದೆಂಬ ಅಭಿಪ್ರಾಯವಲ್ಲವೆಂದೂ, ಭಗವಂತನನ್ನು ಎಂದೂ ಅನಾತ್ಮಾ ಎಂದು ಉಪಾಸಿಸದೆ ಆತ್ಮನೆಂದೇ ಉಪಾಸಿಸಬೇಕೆಂದು ಅಭಿಪ್ರಾಯವಿರುವುದೆಂದು ಸ್ಪಷ್ಟಪಡಿಸಲಾಗಿದೆ. ಆದ್ದರಿಂದ ಈ ಎರಡೂ ಸೂತ್ರಗಳಿಗೆ ಪರಸ್ಪರ ವಿರೋಧವಿರುವಂತೆ ಭಾಸವಾಗುವುದು. ಆದರೆ ಪ್ರಕೃತ ಸೂತ್ರಕ್ಕೆ, ಚತುರ್ಗುಣೋಪಾಸನೆಗೂ ಅರ್ಹತೆ ಇಲ್ಲದವರು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಭಗವದ್ಗುಣಗಳನ್ನು ಉಪಾಸಿಸಬೇಕು. ಆದ್ದರಿಂದ ಆತ್ಮತ್ವಗುಣವನ್ನು ಮಾತ್ರ ಉಪಾಸನೆ ಮಾಡಬಲ್ಲ ಅಧಿಕಾರಿಗಳು ಇತರ ಗುಣಗಳನ್ನು ಉಪಾಸಿಸಬಾರದು ಎಂದು 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯು ಅಭಿಪ್ರಾಯವೆಂದು ಹೇಳುವ ತಾತ್ಪರ್ಯವಿರುವುದರಿಂದ ವಿರೋಧವಿಲ್ಲವೆಂದು ಭಾವ.

अत्र प्रागुक्तचतुर्गुणोपास्तिः साध्यते । आत्मेति शब्दात् परम् आनन्दादीनामिति षष्ठ्यन्तत्वेनान्वेति । आत्मना आत्मशब्देन आनन्दादीनां चतुर्गुणानां गृहीतिः ग्रहणम् उक्तिरस्ति । येन प्रागुक्तदिशाऽऽत्मत्वमेकमेवोपास्यं स्यादित्यर्थः । कथमेकेनानेकग्रहणम् ? इतरवत् । 'सत्यं ज्ञानमनन्तं ब्रह्म' इत्यादिवाक्येनेवानेकसत्यत्वाद्युक्तिस्तथेत्यर्थः । कुतः ? उत्तरात् । 'अत्र ह्येते सर्व एकीभवन्ति, इत्युत्तरवाक्यादित्यर्थः । अत्र 'प्राणन्नेव प्राणो नाम भवति वदन् वाक् पश्यन् चक्षुः शृण्वन् श्रोत्रं मन्वानो मनः' इत्यादिपूर्ववाक्योक्त-

---

**ಈ ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಹಿಂದೆ ಹೇಳಲಾದ ಚತುರ್ಗುಣೋಪಾಸನೆಯನ್ನು ಸಮರ್ಥಿಸಲಾಗುವುದು. 'ಆತ್ಮ' ಎಂಬ ಶಬ್ದದ ಮುಂದೆ 'ಆನಂದಾದೀನಾಂ' ಎಂಬ ಷಷ್ಠೀವಿಭಕ್ತ್ಯಂತ ಪದವು ಅನ್ವಯವನ್ನು ಪಡೆಯುವುದು.

ಯಾವ ಆತ್ಮಶಬ್ದದಿಂದ ಹಿಂದೆ ಹೇಳಿದಂತೆ ಆತ್ಮತ್ವವೊಂದೇ ಉಪಾಸನೆಗೆ ಅರ್ಹವೆಂದಾದೀತೋ ಆ, ಆತ್ಮನಾ– 'ಆತ್ಮೇತ್ಯೇವ ಉಪಾಸೀತ' ಎಂಬಲ್ಲಿರುವ ಆತ್ಮ ಶಬ್ದದಿಂದ, ಆನಂದಾದೀನಾಂ - ಆನಂದವೇ ಮೊದಲಾದ ನಾಲ್ಕು ಗುಣಗಳ, ಗೃಹೀತಿಃ – ಗ್ರಹಣವು ಅಂದರೆ ಹೇಳುವಿಕೆ ಇದೆ. ಒಂದು ಆತ್ಮಶಬ್ದದಿಂದ ಅನೇಕ ಗುಣಗಳನ್ನು ಹೇಳುವುದು ಹೇಗೆ ಸಾಧ್ಯ ಎಂಬ ಪ್ರಶ್ನೆಗೆ ಉತ್ತರ – 'ಇತರವತ್'. 'ಸತ್ಯಂ ಜ್ಞಾನಮನಂತಂ ಬ್ರಹ್ಮ, ಇತ್ಯಾದಿ ವಾಕ್ಯದಿಂದ ಅನೇಕ ಸತ್ಯತ್ವಾದಿಗುಣಗಳನ್ನು ಹೇಳಿರುವುದು ಹೇಗೊ ಹಾಗೆ ಎಂದು ಅರ್ಥ. ಏಕೆ? ಎಂಬ ಪ್ರಶ್ನೆಗೆ ಸಮಾಧಾನ – 'ಉತ್ತರಾತ್' ಎಂದು. 'ಅತ್ರ ಹ್ಯೇತೇ ಸರ್ವೇ ಏಕೀಭವಂತಿ' ಎಂಬ ಮುಂದಿನ ವಾಕ್ಯದಿಂದ ಎಂದು ಅರ್ಥ. ಆ ಮುಂದಿನ ಶ್ರುತಿಯಲ್ಲಿ 'ಪ್ರಾಣನ್ನೇವ ಪ್ರಾಣೋ ನಾಮ ಭವತಿ ವದನ್ ವಾಕ್ ಪಶ್ಯನ್ ಚಕ್ಷುಃ ಶೃಣ್ವನ್ ಶ್ರೋತ್ರಂ ಮನ್ವಾನೋ ಮನಃ 'ಇತ್ಯಾದಿಯಾಗಿ ಹಿಂದೆ ಹೇಳಿದ ಗುಣಗಳನ್ನು

गुणान् 'एते' इति परामृश्यात्रात्मत्वगुणे एकीभवन्ति अन्तर्भवन्तीत्युक्तेः। प्राणशब्दस्य च 'प्रकृष्टानन्दरूपत्वात् प्राणः' इत्युक्त्या प्राणत्वस्य आनन्दत्वात् प्रेति निर्दोषत्वलाभात्, मन इत्यादिना ज्ञानोक्तेरिति भावः। उत्तरादित्यस्य साधुत्वमुक्तं प्राक् ॥ ९ ॥

अन्वयाधिकरणम्—१०

॥ ॐ अन्वयादिति चेत् स्यादवधारणात् ॐ ॥ ३.३.१८

अत्रात्मशब्दादित्युक्तानुपसंहारमानत्वम् आत्मशब्दस्याक्षिप्य समाधीयते। 'आत्मशब्दे' इति सप्तम्यन्तताऽनुवर्तते। 'आप्तव्याप्ते-

---

'ಏತೇ' ಎಂಬ ಪದದಿಂದ ಪರಾಮರ್ಶಿಸಿ, ಆತ್ಮತ್ವಗುಣದಲ್ಲಿ ಏಕೀಭವಂತಿ ಅಂದರೆ ಅಂತರ್ಭಾವವನ್ನು ಪಡೆಯುತ್ತದೆ ಎಂದು ಹೇಳಿರುವುದರಿಂದ. 'ಪ್ರಕೃಷ್ಟಾನಂದರೂಪತ್ವಾತ್ ಪ್ರಾಣಃ' ಎಂದು ಹೇಳಿರುವುದರಿಂದ ಪ್ರಾಣತ್ವವು ಆನಂದತ್ವರೂಪವಾಗಿದೆ. 'ಪ್ರಾಣ' ಎಂಬಲ್ಲಿರುವ 'ಪ್ರ' ಶಬ್ದವು ನಿರ್ದೋಷತ್ವವನ್ನು ಹೇಳುವುದು. ಹೀಗೆ ಪ್ರಾಣಶಬ್ದದಿಂದ ಆನಂದವನ್ನೂ ನಿರ್ದೋಷತ್ವವನ್ನೂ 'ಮನಃ' ಮೊದಲಾದ ಶಬ್ದಗಳಿಂದ ಜ್ಞಾನವನ್ನೂ ಹೇಳಿರುವುದರಿಂದ ಎಂದು ಭಾವ. 'ಉತ್ತರಾತ್' ಎಂಬ ಶಬ್ದದ ಸಾಧುತ್ವವನ್ನು ಹಿಂದೆ ಹೇಳಲಾಗಿದೆ.

ಅನ್ವಯಾಧಿಕರಣ—೧೦

ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ
೩.೩.೧೮

ಅಧಿಕರಣದ ವಿಷಯ ಮತ್ತು ಸೂತ್ರಾರ್ಥ

ಈ ಅಧಿಕರಣದಲ್ಲಿ 'ಆತ್ಮಶಬ್ದಾತ್' (ಬ್ರ.ಸೂ. ೩.೩.೧೬) ಎಂಬಲ್ಲಿ 'ಆತ್ಮೇತ್ಯೇವೋಪಾಸೀತ' ಎಂಬ ಶ್ರುತಿಯು ಅನುಪಸಂಹಾರವಿಷಯದಲ್ಲಿ ಪ್ರಮಾಣವೆಂದು ಹೇಳಿರುವುದನ್ನು ಆಕ್ಷೇಪಿಸಿ ಸಮಾಧಾನ ಹೇಳಲಾಗುವುದು. 'ಆತ್ಮಶಬ್ದಾತ್'

रात्मशब्दः परमस्य’ इत्युक्त्या आत्मशब्दे सर्वगुणानामन्वयात्, तस्य सर्वगुणवाचित्वादिति यावत्, अनुपसंहारमानत्वं तस्यायुक्तमिति चेत् स्यात् सर्वगुणवाचित्वमात्मशब्दस्य स्यात् अङ्गीक्रियत एव। कुतः? अवधारणात् आत्मेत्येवेत्यवधारणादित्यर्थः। अस्य विधेः ब्रह्मादि-सर्वाधिकारिकत्वात् आत्मपदेन सर्वगुणानुक्तौ अवधारणेनान्यव्यावृत्त्युक्त्या ‘गुणैः सर्वैरुपास्योऽसौ ब्रह्मणा’ इत्यादिविरोधः स्यात्।

---

ಎಂಬ ಹಿಂದಿನ ಸೂತ್ರದ ಪದವು ‘ಆತ್ಮಶಬ್ದೇ’ ಎಂದು ಸಪ್ತಮೀವಿಭಕ್ತ್ಯಂತವಾಗಿ ಬದಲಾವಣೆಯೊಂದಿಗೆ ಇಲ್ಲಿ ಅನುವೃತ್ತಿಯನ್ನು ಪಡೆಯುವುದು.

‘ಆಪ್ತವ್ಯಾಪ್ತೇಃ ಆತ್ಮಶಬ್ದಃ ಪರಮಸ್ಯ’[1] ಎಂಬ ಪ್ರಮಾಣವಚನಕ್ಕನುಸಾರವಾಗಿ, ಆತ್ಮಶಬ್ದೇ – ಆತ್ಮಶಬ್ದದಲ್ಲಿ, ಅನ್ವಯಾತ್ - ಎಲ್ಲ ಗುಣಗಳೂ ಅನ್ವಯವನ್ನು ಪಡೆದಿರುವುದರಿಂದ—ಆತ್ಮಶಬ್ದವು ಸರ್ವಗುಣವಾಚಿಯಾದುದರಿಂದ ಎಂದು ಭಾವ — ಸರ್ವಗುಣೋಪಸಂಹಾರವಿಲ್ಲವೆಂಬ ವಿಷಯದಲ್ಲಿ ‘ಆತ್ಮೇತ್ಯೇವ ಉಪಾಸೀತ’ ಎಂಬ ಶ್ರುತಿಯು ಪ್ರಮಾಣವಾಗಲಾರದು. ಏಕೆಂದರೆ, ಅವಧಾರಣಾತ್ - ‘ಆತ್ಮೇತ್ಯೇವ’ ಎಂದು ಅವಧಾರಣವಿರುವುದರಿಂದ ಎಂದು ಅರ್ಥ.

‘ಆತ್ಮೇತ್ಯೇವ ಉಪಾಸೀತ’ ಎಂಬ ವಿಧಿಯು ಚತುರ್ಮುಖ ಬ್ರಹ್ಮನನ್ನೊಳಗೊಂಡು ಎಲ್ಲ ಅಧಿಕಾರಿಗಳಿಗೂ ಸಂಬಂಧಪಟ್ಟಿರುವುದಾಗಿದೆ. ಇಲ್ಲಿ ಆತ್ಮಪದವು ಭಗವಂತನ ಸಮಸ್ತಗುಣಗಳನ್ನು ಹೇಳದಿದ್ದರೆ, ಇತರ ಗುಣಗಳನ್ನು ವ್ಯಾವರ್ತಿಸುವ ಅವಧಾರಣದಿಂದ ಬ್ರಹ್ಮನೂ ಆತ್ಮತ್ವಗುಣವನ್ನು ಬಿಟ್ಟು ಉಳಿದ ಗುಣಗಳನ್ನು ಉಪಾಸಿಸಬಾರದೆಂದು ಅರ್ಥವಾಗುವುದು. ಹಾಗೆ ಒಪ್ಪಿದರೆ ‘ಗುಣೈಃ ಸರ್ವೈರುಪಾಸ್ಯೋಽಸೌ ಬ್ರಹ್ಮಣಾ’ – ಇತ್ಯಾದಿ ವಚನವಿರೋಧ ಉಂಟಾದೀತು. ಆದ್ದರಿಂದ

---

1. ‘ಆಪ್ತವ್ಯಾಪ್ತೇರಾತ್ಮಶಬ್ದಃ ಪರಮಸ್ಯ ಪ್ರಯುಜ್ಯತೇ’--ಆಪ್ತಾ ಪ್ರಾಪ್ತಾ ವ್ಯಾಪ್ತಿಃ ದೇಶಕಾಲಗುಣಾಪರಿಚ್ಛೇದೋ ಯಂ ಸಃ ಆಪ್ತವ್ಯಾಪ್ತಿಃ--ಎಂಬ ವಿಗ್ರಹದಂತೆ ಆಪ್ತವ್ಯಾಪ್ತಿ ಎಂದರೆ ದೇಶ, ಕಾಲ, ಗುಣಗಳಿಂದ ಪರಿಚ್ಛೇದವಿಲ್ಲದವನು ಎಂದರ್ಥ. ಹೀಗೆ ಅಪರಿಚ್ಛಿನ್ನನಾದ, ಪರಮಸ್ಯ ಅಂದರೆ ಪರಮಾತ್ಮನಿಗೆ ಆತ್ಮಶಬ್ದವನ್ನು ಪ್ರಯೋಗಿಸಲಾಗುವುದು ಎಂದು ವಚನದ ಅರ್ಥ. ದೇಶಕಾಲ-ಗುಣಾಪರಿಚ್ಛಿನ್ನನಾದುದರಿಂದಲೇ ಪರಮಾತ್ಮನಿಗೆ ಆತ್ಮಶಬ್ದದ ಪ್ರಯೋಗವೆಂದು ಭಾವ.

अतः सर्वगुणान् ब्रह्मादीन् प्रत्यभिधत्ते । अन्यान् प्रति तु तत्तद्योग्यानेवेति ज्ञायत एवेति युक्तं प्रागुक्तमिति भावः ॥ १० ॥

कार्याख्यानाधिकरणम्—११

॥ ॐ कार्याख्यानादपूर्वम् ॐ ॥ ३.३.१९

अत्र 'परमत' इत्युक्तालौकिकगुणानां ध्येयत्वमुच्यते। गुणजातमित्यन्वेति । 'ध्येयम्' इति च प्रस्तावात् । कार्येऽप्यपूर्वत्वमेर्थादन्वेति । गुणजातम् अपूर्वम् अलौकिकम् उपसंहृत्य ध्येयम् । कुतः ?

---

ಆತ್ಮಶಬ್ದವು ಬ್ರಹ್ಮಾದಿಗಳನ್ನು ಕುರಿತು ಎಲ್ಲ ಗುಣಗಳನ್ನೂ ಹೇಳುವುದೆಂದೂ ಇತರರನ್ನು ಕುರಿತು ಅವರವರಿಗೆ ಯೋಗ್ಯವಾದ ಗುಣಗಳನ್ನು ಮಾತ್ರ ಹೇಳುವುದೆಂದು ತಿಳಿಯುವುದು. ಆದ್ದರಿಂದ 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯು ಸರ್ವಗುಣಾನುಪಸಂಹಾರ ವಿಷಯದಲ್ಲಿ ಪ್ರಮಾಣವೆಂದು ಹಿಂದೆ ಹೇಳಿದುದು ಯುಕ್ತವೆಂದು ಭಾವ.

ಕಾರ್ಯಾಖ್ಯಾನಾಧಿಕರಣ—೧೧

ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ ೩.೩.೧೯

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ 'ಪರಮತಃ' (ಬ್ರ.ಸೂ. ೩.೨.೩೨) ಎಂಬಲ್ಲಿ ಹೇಳಿರುವ ಅಲೌಕಿಕಗುಣಗಳು ಧ್ಯೇಯಗಳೆಂದು ಹೇಳಲಾಗುವುದು. 'ಗುಣಜಾತಂ' ಎಂಬ ಪದವು ಇಲ್ಲಿ ಅನ್ವಿತವಾಗುವುದು. ಧ್ಯಾನದ ಪ್ರಸ್ತಾಪವಿರುವ ಕಾರಣ 'ಧ್ಯೇಯಂ' ಎಂಬ ಪದವೂ ಅನ್ವಿತವಾಗುವುದು. ಅಪೂರ್ವತೆಯು ಕಾರ್ಯದಲ್ಲೂ ಅರ್ಥಾತ್ ಅನ್ವಿತವಾಗುವುದು.

ಗುಣಜಾತಂ ಅಪೂರ್ವಂ – ಅಲೌಕಿಕವಾದ ಗುಣಗಳ ಸಮೂಹವನ್ನು

कार्याख्यानात् मोक्षाख्यापूर्वकार्यस्योक्तेः । 'अलौकिकास्तस्य गुणा ह्युपास्या अलौकिकं मुक्तिकार्यं यतोऽस्य' इति श्रुताविर्त्यर्थः । फलानुसारिध्यानस्यैव कर्तव्यत्वादिति भावः ॥ ११ ॥

समानाधिकरणम्—१२

॥ ॐ समान एवं चाभेदात् ॐ ॥ ३.३.२०

अत्र वाण्याः सर्वगुणोपसंहारेऽपि क्रियाणां न विशिष्य सः, किन्तु सामान्येनेत्युच्यते । चोऽप्यर्थे, अवधारणे च । एवं च एवमपि

ಧ್ಯೇಯಂ – ಉಪಸಂಹರಿಸಿ ಧ್ಯಾನ ಮಾಡತಕ್ಕದ್ದು. ಕಾರ್ಯಾಖ್ಯಾನಾತ್ – ಮೋಕ್ಷವೆಂಬ ಅಲೌಕಿಕ ಫಲವನ್ನು 'ಅಲೌಕಿಕಾಸ್ತಸ್ಯ ಗುಣಾ ಉಪಾಸ್ಯಾ ಅಲೌಕಿಕಂ ಮುಕ್ತಿಕಾರ್ಯಂ ಯತೋಽಸ್ಯ[1]' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ ಎಂದು ಅರ್ಥ. ಫಲಕ್ಕೆ ಅನುಸಾರಿಯಾದ ಧ್ಯಾನವನ್ನೇ ಮಾಡಬೇಕಾಗಿರುವುದರಿಂದ ಎಂದು ಭಾವ.

ಸಮಾನಾಧಿಕರಣ—೧೨

ಓಂ ಸಮಾನ ಏವಂ ಚಾಭೇದಾತ್ ಓಂ ೩.೩.೨೦

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಸರಸ್ವತಿಯು ಭಗವಂತನಲ್ಲಿ ಎಲ್ಲ ಗುಣಗಳನ್ನು ಉಪಸಂಹಾರ ಮಾಡಿದರೂ ಎಲ್ಲ ಕ್ರಿಯೆಗಳನ್ನು ಪ್ರತ್ಯೇಕವಾಗಿ ಉಪಸಂಹಾರ ಮಾಡುವುದಿಲ್ಲ. ಸಾಮಾನ್ಯರೂಪದಿಂದ ಮಾತ್ರ ಕ್ರಿಯೆಗಳನ್ನು ಉಪಸಂಹಾರ ಮಾಡುವಳೆಂದು ಹೇಳಲಾಗುವುದು.

ಸೂತ್ರದಲ್ಲಿರುವ 'ಚ' ಶಬ್ದಕ್ಕೆ ಅಪಿಶಬ್ದದ ಮತ್ತು ಏವಕಾರದ ಅರ್ಥವಿದೆ. ಏವಂ ಚ - ಏವಮಪಿ ಅಂದರೆ ಭಗವಂತನ ಧರ್ಮಗಳು ಅಲೌಕಿಕವಾಗಿದ್ದರೂ,

1. ಭಗವಂತನಲ್ಲಿ ಗುಣಗಳ ಉಪಾಸನೆಗೆ ಮೋಕ್ಷವೆಂಬ ಅಲೌಕಿಕ ಫಲವಿರುವ ಕಾರಣದಿಂದ ಅಲೌಕಿಕವಾದ ಭಗವಂತನ ಗುಣಗಳನ್ನೇ ಉಪಾಸನೆ ಮಾಡತಕ್ಕದ್ದು ಎಂದು ಶ್ರುತಿಯ ಭಾವ.

ईशधर्माणामपूर्वत्वेऽपि, समाने च योग्यविषय एवोपसंहारः कार्यः। न त्वयोग्ये। वाण्याश्च 'यथाशक्ति स्मृतान् धात्रा गुणान् विष्णोः सरस्वती' इत्यादिस्मृत्या सर्वगुणेषु क्रियासामान्येन च योग्यत्वं, न तु विरिञ्चवत् तद्विशेष इति भावः।

तर्हि त्रिविक्रमत्वादिध्यानं न स्यादित्यत उक्तम्— अभेदात्। नित्यविक्रान्त्यादिसामान्यक्रियास्वन्तर्भावादित्यर्थः। समान इत्युक्ति-

ಸಮಾನೇ ಚ - ತನಗೆ ಯೋಗ್ಯವಾದ ವಿಷಯಗಳಲ್ಲೇ ಉಪಸಂಹಾರವನ್ನು ಮಾಡ ತಕ್ಕದ್ದು. ಹೊರತು ತನಗೆ ಯೋಗ್ಯವಲ್ಲದ ವಿಷಯಗಳಲ್ಲಲ್ಲ. ಸರಸ್ವತಿಗೆ 'ಯಥಾ ಶಕ್ತಿ ಸ್ಮೃತಾನ್ ಧಾತ್ರಾ ಗುಣಾನ್ ವಿಷ್ಣೋಃ ಸರಸ್ವತೀ' ಎಂಬ ಸ್ಮೃತಿಯ ಆಧಾರದಿಂದ ಸರ್ವಗುಣಗಳ ವಿಷಯದಲ್ಲಿ ಮತ್ತು ಸಾಮಾನ್ಯರೂಪದಿಂದ ಕ್ರಿಯೆಗಳ ವಿಷಯದಲ್ಲಿ ಉಪಸಂಹಾರ ಮಾಡುವ ಯೋಗ್ಯತೆ ಇರುವುದೇ ಹೊರತು ವಿರಿಂಚ ನಿಗಿರುವಂತೆ ವಿಶೇಷರೂಪದಿಂದ ಕ್ರಿಯೆಗಳನ್ನು ಉಪಸಂಹಾರ ಮಾಡುವ ಯೋಗ್ಯತೆ ಇಲ್ಲವೆಂದು ಭಾವ.

ಹಾಗಾದರೆ, ತ್ರಿವಿಕ್ರಮತ್ವವೇ ಮೊದಲಾದ ಭಗವಂತನ ಕ್ರಿಯಾವಿಶೇಷಗಳ ಧ್ಯಾನ ಸರಸ್ವತಿಗಿಲ್ಲವೆಂದಾದೀತು ಎಂಬ ಶಂಕೆಗೆ ಉತ್ತರ— 'ಅಭೇದಾತ್' ಎಂದು. ನಿತ್ಯವಿಕ್ರಾಂತಿಯೇ[1] ಮೊದಲಾದ ಸಾಮಾನ್ಯಕ್ರಿಯೆಗಳಲ್ಲಿ ತ್ರಿವಿಕ್ರಮತ್ವಾದಿ ಕ್ರಿಯೆ ಗಳ ಅಂತರ್ಭಾವವಾಗುವುದರಿಂದ ಎಂದು ಅರ್ಥ.

### ಸೂತ್ರದಲ್ಲಿ 'ಸಮಾನೇ' ಎಂಬ ಪದದ ಪ್ರಯೋಜನ

ಉಪಸಂಹಾರವು, ಉಪಾಸಕನ ಯೋಗ್ಯತೆ ಮತ್ತು ಉಪಾಸಕನು ಪಡೆಯುವ ಫಲ ಇವುಗಳಿಗೆ ಸಮಾನವಾಗಿರುವುದು ಎಂದು ಸೂಚಿಸಲು ಸೂತ್ರದಲ್ಲಿ 'ಸಮಾನೇ'

1. ವಿಕ್ರಾಂತಿಯೆಂದರೆ ಕ್ರಿಯೆ. ನಿತ್ಯವೂ ಭಗವಂತನ ಅನಂತರೂಪಗಳಲ್ಲಿ ಅನಂತ ಕ್ರಿಯೆಗಳಿವೆ ಎಂದು ಸಾಮಾನ್ಯಾಕಾರದಿಂದ ಸರಸ್ವತಿಯು ಉಪಾಸನೆ ಮಾಡುವ ಕ್ರಿಯೆಗಳಲ್ಲಿ ತ್ರಿವಿಕ್ರಮತ್ವಾದಿ ಕ್ರಿಯೆಗಳು ಅಂತರ್ಭಾವವಾಗುವುದೆಂದು ಭಾವ.

योग्यताफलाभ्यां सामान्यमुपसंहारस्य द्योतयितुम् । तेन वाणीवाणीशयोः स्थानैक्यगुणतारतम्याभ्यां समविषमफलत्वेन तद्धेतूपासनस्यापि गुणेषु द्वयोः साम्यं, क्रियासु सामान्यविशेषाभ्यां विषमत्वं युक्तमिति भावः ।

विरिञ्चस्य त्रिविक्रमत्वादिक्रियाविशेषोपसंहारो न युक्तः । तासामनित्यत्वेन ध्यानकालेऽसत्त्वादित्यत आह—

॥ ॐ सम्बन्धादेवमन्यत्रापि ॐ ॥ ३.३.२१

सम्बन्धस्तादात्म्यम् । अन्यत्रापि त्रिविक्रमत्वादिक्रिया-

---

ಎಂದು ಹೇಳಲಾಗಿದೆ. ಆದ್ದರಿಂದ, ವಾಣೀ ಮತ್ತು ವಾಣೀಶರಿಗೆ ಸತ್ಯಲೋಕವೆಂಬ ಸ್ಥಾನೈಕ್ಯ ಮತ್ತು ಆನಂದಾದಿಗುಣಗಳಲ್ಲಿ ತಾರತಮ್ಯವೆಂಬ ಸಮ ಮತ್ತು ವಿಷಮವಾದ ಫಲಗಳಿರುವುದರಿಂದ ಅದಕ್ಕೆ ಕಾರಣವಾದ ಉಪಾಸನೆಯೂ ಕೂಡ, ಗುಣಗಳ ಉಪಸಂಹಾರದ ವಿಷಯದಲ್ಲಿ ಸಮಾನತೆ ಮತ್ತು ಕ್ರಿಯೆಗಳ ಉಪಸಂಹಾರದ ವಿಷಯದಲ್ಲಿ ಸಾಮಾನ್ಯಾಕಾರದ ಉಪಸಂಹಾರ, ವಿಶೇಷಾಕಾರದ ಉಪಸಂಹಾರ ಎಂಬ ವಿಷಮತೆಯನ್ನು ಪಡೆದಿರುವುದು ಯುಕ್ತವೆಂದು ಭಾವ.

ಭಗವಂತನ ತ್ರಿವಿಕ್ರಮತ್ವ ಮೊದಲಾದ ಕ್ರಿಯೆಗಳು ಅನಿತ್ಯವಾದುದರಿಂದ ವಿರಿಂಚನು ಧ್ಯಾನಮಾಡುವ ಕಾಲದಲ್ಲಿ ಆ ಕ್ರಿಯೆಗಳು ಭಗವಂತನಲ್ಲಿರುವುದಿಲ್ಲ. ಆದ್ದರಿಂದ ವಿರಿಂಚನು ತ್ರಿವಿಕ್ರಮತ್ವವೇ ಮೊದಲಾದ ಕ್ರಿಯಾವಿಶೇಷಗಳನ್ನು ಭಗವಂತನಲ್ಲಿ ಉಪಸಂಹಾರಮಾಡುವನೆಂದು ಹೇಳುವುದು ಯುಕ್ತವಲ್ಲ ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರ.

## ಓಂ ಸಂಬಂಧಾದೇವಮನ್ಯತ್ರಾಪಿ ಓಂ ೩.೩.೨೧

**ಸೂತ್ರಾರ್ಥ**

'ಸಂಬಂಧ' ಎಂದರೆ ಅಭೇದ. ಅನ್ಯತ್ರಾಪಿ – ತ್ರಿವಿಕ್ರಮತ್ವವೇ ಮೊದಲಾದ ಕ್ರಿಯಾವಿಷಯದಲ್ಲೂ, ಏವಮ್–ಹೀಗೆ ಉಪಸಂಹಾರ ಮಾಡುವುದು ಯುಕ್ತವಾಗಿದೆ.

विषयेऽप्येवमुपसंहारः कार्यः। सम्बन्धात् ईशतादात्म्यात् तासां नित्यत्वादिति भावः। नित्यत्वादिति वाच्ये एवमुक्तिस्तत्र युक्ति-सूचनाय। तादात्म्यं च 'गुणक्रियादयो भावाः स्वरूपं नान्यदिष्यते' इत्यादिवचनसिद्धम्। सम्बन्धादित्युक्तिः तादात्म्येऽपि विशेषात् क्रिया तद्वत्त्वं व्यक्त्यात्मना कादाचित्कत्वमित्यादि सूचयितुम् ॥ १२ ॥

नवाधिकरणम्—१३

॥ ॐ न वा विशेषात् ॐ ॥ ३.३.२२

---

ಸಂಬಂಧಾತ್ - ಆ ಕ್ರಿಯೆಗಳಿಗೆ ಭಗವಂತನ ತಾದಾತ್ಮ್ಯವಿರುವ ಕಾರಣ ಅವು ನಿತ್ಯವಾಗಿರುವುದರಿಂದ ಎಂದು ಭಾವ.

**ಸೂತ್ರದಲ್ಲಿ 'ಸಂಬಂಧಾತ್' ಎಂಬ ಪದಪ್ರಯೋಗದ ಉದ್ದೇಶ**

'ನಿತ್ಯತ್ವಾತ್'—'ಭಗವಂತನ ಕ್ರಿಯೆಗಳು ನಿತ್ಯವಾದುದರಿಂದ' ಎಂದು ಹೇಳಬಹುದಾಗಿದ್ದರೂ ಹೀಗೆ ಹೇಳಿರುವುದು ಭಗವಂತನ ಕ್ರಿಯೆಗಳು ನಿತ್ಯವಾಗಿರುವುದರಲ್ಲಿ ಯುಕ್ತಿಯನ್ನು ಸೂಚಿಸಲು. ಭಗವಂತನ ಗುಣಕ್ರಿಯಾದಿಗಳಿಗೆ ಭಗವಂತನ ಅಭೇದವಿರುವುದು 'ಗುಣಕ್ರಿಯಾದಯೋ ಭಾವಾಃ ಸ್ವರೂಪಂ ನಾನ್ಯದಿಷ್ಯತೇ' ಎಂಬ ಪ್ರಮಾಣವಚನದಿಂದ ಸಿದ್ಧವಾಗಿದೆ. 'ತಾದಾತ್ಮ್ಯಾತ್' -'ಭಗವಂತನ ಗುಣಕ್ರಿಯಾದಿಗಳು ಭಗವಂತನಿಂದ ಅಭಿನ್ನವಾಗಿರುವುದರಿಂದ' ಎಂದು ಹೇಳುವ ಬದಲು 'ಸಂಬಂಧಾತ್' ಎಂದು ಹೇಳಿರುವುದು, ಭೇದಪ್ರತಿನಿಧಿಯಾದ ವಿಶೇಷದ ಬಲದಿಂದ ತ್ರಿವಿಕ್ರಮತ್ವಾದಿಗಳು ಕ್ರಿಯೆಗಳಾಗಿರುವುದು, ಭಗವಂತನು ಆ ಕ್ರಿಯೆಗಳನ್ನು ಪಡೆದಿರುವುದು ಮತ್ತು ತ್ರಿವಿಕ್ರಮತ್ವಾದಿಗಳು ಕೆಲವೊಮ್ಮೆ ಮಾತ್ರ ಅಭಿವ್ಯಕ್ತವಾಗುವುದು ಇತ್ಯಾದಿಗಳು ಯುಕ್ತವೆಂದು ಸೂಚಿಸಲು.

ನವಾಧಿಕರಣ—೧೩

**ಓಂ ನ ವಾ ವಿಶೇಷಾತ್ ಓಂ ೩.೩.೨೨**

अत्र 'आत्मशब्दाच्च' इत्युक्तानुपसंहारमानत्वम् आत्मशब्दस्य साध्यते । आत्मगृहीतिरित्यनुवृत्ति । अन्वयादित्यतः सर्वगुणानामिति च । वाशब्दो व्यवस्थितविकल्पार्थः ।

न वा सर्वगुणानामात्मपदेन गृहीतिः । कुतः ? विशेषात् योग्यताविशेषादित्यर्थः । आत्मपदस्य सर्वगुणोक्तिशक्तावपि अधि-

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ 'ಆತ್ಮಶಬ್ದಾಚ್ಚ(ಬ್ರ.ಸೂ. ೩.೩.೧೬) ಎಂಬಲ್ಲಿ ಹೇಳಿರುವ– 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯು ಸರ್ವಗುಣೋಪಸಂಹಾರ ಮಾಡತಕ್ಕದ್ದಲ್ಲ ಎಂಬ ವಿಷಯದಲ್ಲಿ ಪ್ರಮಾಣವಾಗಿದೆ ಎಂಬುದನ್ನು ಸಮರ್ಥಿಸಲಾಗುವುದು. 'ಆತ್ಮಗೃಹೀತಿರಿತರವದುತ್ತರಾತ್' (ಬ್ರ.ಸೂ. ೩.೩.೧೭) ಎಂಬ ಸೂತ್ರದಿಂದ 'ಆತ್ಮಗೃಹೀತಿಃ' ಎಂಬ ಪದವು ಅನುವೃತ್ತವಾಗುವುದು. 'ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್' (ಬ್ರ.ಸೂ. ೩.೩.೧೮) ಎಂಬ ಸೂತ್ರದಿಂದ 'ಸರ್ವಗುಣಾನಾಂ' ಎಂಬ ಪದವೂ ಅನುವೃತ್ತವಾಗುವುದು[1]. 'ವಾ' ಶಬ್ದವು ವ್ಯವಸ್ಥಿತ ವಿಕಲ್ಪವನ್ನು[2] ಹೇಳುವುದು.

---

1. 'ಅನ್ವಯಾತ್' ಇತ್ಯಾದಿ ಸೂತ್ರದಲ್ಲಿ 'ಸರ್ವಗುಣಾನಾಂ' ಎಂಬ ಪದವಿಲ್ಲದಿದ್ದರೂ ಆ ಸೂತ್ರದ ಅರ್ಥವನ್ನು ವಿವರಿಸಲು ಆವಶ್ಯಕವಾಗಿದ್ದು ಅಧ್ಯಾಹಾರಗೊಳ್ಳುವ ಆ ಪದವನ್ನು ಇಲ್ಲಿ ಅನುವೃತ್ತಿಮಾಡಿಕೊಳ್ಳಬೇಕೆಂದು ಭಾವ.

2. ವಿಕಲ್ಪವೆಂದರೆ ವಿರುದ್ಧವಾದ ಪ್ರಕಾರಗಳು. ಒಂದೇ ವಿಷಯದಲ್ಲಿ ವಿರುದ್ಧ ಪ್ರಕಾರಗಳು ಕಾಲಭೇದದಿಂದ ಒದಗುವ ಸಂದರ್ಭವಿದ್ದರೆ ಅದು ಅವ್ಯವಸ್ಥಿತ ವಿಕಲ್ಪ. ಭಿನ್ನ ವಿಷಯಗಳಲ್ಲಿ ವಿರುದ್ಧ ಪ್ರಕಾರಗಳು ವ್ಯವಸ್ಥಿತವಾಗಿದ್ದರೆ ಅದು ವ್ಯವಸ್ಥಿತ ವಿಕಲ್ಪ. ಪ್ರಕೃತ, ಆತ್ಮಪದವು ಭಗವಂತನ ಕೆಲವು ಗುಣಗಳನ್ನು ಮಾತ್ರ ಹೇಳುತ್ತದೆ, ಎಲ್ಲ ಗುಣಗಳನ್ನು ಹೇಳುತ್ತದೆ ಎಂಬುವು ಎರಡು ವಿರುದ್ಧ ಪ್ರಕಾರಗಳು. ಅಲ್ಪಯೋಗ್ಯತೆಯ ಅಧಿಕಾರಿಗಳಿಗೆ ಕೆಲವು ಗುಣಗಳನ್ನೂ, ಅಧಿಕ ಯೋಗ್ಯತೆಯ ಅಧಿಕಾರಿಗಳಿಗೆ ಸರ್ವಗುಣಗಳನ್ನೂ ಆತ್ಮಪದವು ಹೇಳುವುದೆಂದಾಗ ಭಿನ್ನ ವಿಷಯಗಳಲ್ಲಿ ಆತ್ಮಪದಕ್ಕೆ ವಿರುದ್ಧ ಪ್ರಕಾರಗಳನ್ನು ಒಪ್ಪಿದಂತಾಗುವುದರಿಂದ ವ್ಯವಸ್ಥಿತವಿಕಲ್ಪವಾಗಿದೆ.

कारिविशेषानुरोधेन तत्तद्योग्यबोधकत्वात् । तेन यस्य यावन्तो गुणा युगपद् भान्ति तेन तावन्तो ध्येया इति नाव्यवस्थितिरिति भावः ।

इतश्चैवमित्याह—

॥ ॐ दर्शयति च ॐ ॥ ३.३.२३

'सर्वान् गुणान् आत्मशब्दो ब्रवीति ब्रह्मादीनामितरेषां न चैव' इति श्रुतिर्दर्शयति न वा सर्वेषामात्मपदेन गृहीतिरित्यर्थः । न केवलं विशेषादिति युक्त्यैषोऽर्थः सिद्ध इति चार्थः ॥ १३ ॥

---

ನ ವಾ ಸರ್ವಗುಣಾನಾಂ ಆತ್ಮಪದೇನ ಗೃಹೀತಿಃ - ಆತ್ಮಪದದಿಂದ ಭಗವಂತನ ಎಲ್ಲ ಗುಣಗಳ ಗ್ರಹಿಕೆಯಾಗದಿರುವುದೂ ಇದೆ. ಏಕೆಂದರೆ, ವಿಶೇಷಾತ್ - ಯೋಗ್ಯತಾ ವಿಶೇಷದಿಂದಾಗಿ ಎಂದು ಅರ್ಥ. ಆತ್ಮಪದಕ್ಕೆ ಎಲ್ಲ ಗುಣಗಳನ್ನೂ ಹೇಳುವ ಸಾಮರ್ಥ್ಯವಿದ್ದರೂ ಅಧಿಕಾರಿವಿಶೇಷವನ್ನನುಸರಿಸಿ ಆಯಾಯಾ ಅಧಿಕಾರಿಗಳ ಯೋಗ್ಯತಾನುಸಾರವಾಗಿ ಭಗವದ್ಗುಣಗಳನ್ನು ತಿಳಿಸುವುದರಿಂದ ಯಾವ ಅಧಿಕಾರಿಗೆ ಆತ್ಮಪದದಿಂದ ಎಷ್ಟು ಗುಣಗಳು ಏಕಕಾಲಕ್ಕೆ ಭಾಸವಾಗುವವೋ ಆ ಅಧಿಕಾರಿಯು ಅಷ್ಟು ಗುಣಗಳನ್ನು ಧ್ಯಾನ ಮಾಡತಕ್ಕದ್ದು. ಆದ್ದರಿಂದ ಅವ್ಯವಸ್ಥೆಯಿಲ್ಲವೆಂದು ಭಾವ.

ಈ ಮುಂದಿನ ಕಾರಣದಿಂದಲೂ ಆತ್ಮಪದವು ಎಲ್ಲ ಅಧಿಕಾರಿಗಳಿಗೂ ಸರ್ವಗುಣಗಳನ್ನು ತಿಳಿಸುವುದಿಲ್ಲವೆಂದು ಹೇಳುವ ಸೂತ್ರ —

ಓಂ ದರ್ಶಯತಿ ಚ ಓಂ ೩.೩.೨೩

'ಸರ್ವಾನ್ ಗುಣಾನ್ ಆತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಂ ಇತರೇಷಾಂ ನ ಚೈವ' (ಭಾಲ್ಲವೇಯ ಶ್ರುತಿ) ಎಂಬ ಶ್ರುತಿಯು ಎಲ್ಲರಿಗೂ ಆತ್ಮಪದದಿಂದ ಭಗವಂತನ ಸರ್ವಗುಣಗಳ ಜ್ಞಾನವು ಉಂಟಾಗುವುದಿಲ್ಲವೆಂದು ತಿಳಿಸುವುದು ಎಂದು ಅರ್ಥ. 'ವಿಶೇಷಾತ್' ಎಂದು ಪೂರ್ವಸೂತ್ರದಲ್ಲಿ ಹೇಳಿದ ಯುಕ್ತಿಯಿಂದ ಮಾತ್ರವೇ ಪ್ರಕೃತ ವಿಷಯವು ಸಿದ್ಧಿಸುವುದೆಂದಲ್ಲ ಎಂದು 'ಚ' ಶಬ್ದದ ಅರ್ಥ.

## सम्भृत्यधिकरणम्—१४

## ॥ ॐ सम्भृतिद्युव्याप्त्यपि चातः ॐ ॥ ३.३.२४

अत्र सम्भृत्यादिगुणस्य सर्वोपास्यत्वं नेत्युच्यते। अपिः नेत्यनुषङ्गार्थः। च एव। सम्भृतिः सम्यग् भरणम्। द्युव्याप्तिः प्रकाशेन व्याप्तिः। समाहारद्वन्द्वः। 'उक्षा स द्यावापृथिवी बिभर्ति (ऋ. १०.३२-७), 'एष हि सर्वेषु लोकेषु भाति' (छां. ४.१५.४) इत्युक्तसम्भृतिद्युव्याप्ती न सर्वोपास्ये। किन्तु देवाद्युपास्ये। कुतः? अतश्च अत एव। प्रागुक्तयोग्यताविशेषादेवेत्यर्थः। योग्यतैवोपास्ति-नियमे प्रयोजिका न फलापेक्षेति द्योतयितुमेवार्थश्चः। तेन मुक्तौ

---

## ಸಂಭೃತ್ಯಧಿಕರಣ—೧೪

## ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ ೩.೩.೨೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನ ಸಂಭೃತಿ ಮೊದಲಾದ ಗುಣಗಳನ್ನು ಉಪಾಸನೆ ಮಾಡಲು ಎಲ್ಲರಿಗೂ ಯೋಗ್ಯತೆ ಇಲ್ಲವೆಂದು ಹೇಳಲಾಗುವುದು. ಈ ಸೂತ್ರದ ಅಪಿಶಬ್ದವು ಹಿಂದಿನ ಸೂತ್ರದಿಂದ 'ನ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂದು ಸೂಚಿಸುವುದು. ಇಲ್ಲಿರುವ 'ಚ' ಶಬ್ದಕ್ಕೆ ಏವಕಾರದ ಅರ್ಥವಿದೆ.

ಸಂಭೃತಿ ಎಂದರೆ ಸಮ್ಯಗ್ ಭರಣ – ಚೆನ್ನಾಗಿ ಪೋಷಿಸುವುದು. ದ್ಯುವ್ಯಾಪ್ತಿ ಎಂದರೆ ಪ್ರಕಾಶದಿಂದ ವ್ಯಾಪ್ತಿ. 'ಸಂಭೃತಿದ್ಯುವ್ಯಾಪ್ತಿ' ಎಂಬ ಪದವು ಸಮಾಹಾರ ದ್ವಂದ್ವಸಮಾಸವಾಗಿದೆ. 'ಉಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ', (ಋ.೧೦.೩೧.೭) 'ಏಷ ಹಿ ಸರ್ವೇಷು ಲೋಕೇಷು ಭಾತಿ' (ಛಾಂ.೪.೧೫.೪) ಎಂಬಲ್ಲಿ ಹೇಳಿರುವ ಸಂಭೃತಿ ಮತ್ತು ದ್ಯುವ್ಯಾಪ್ತಿಗಳು ಎಲ್ಲರಿಂದಲೂ ಉಪಾಸ್ಯವಲ್ಲ. ಆದರೆ ದೇವಾದಿಗಳಿಂದ ಮಾತ್ರ ಉಪಾಸ್ಯವಾಗಿವೆ. ಏಕೆಂದರೆ, ಅತಶ್ಚ - ಆದ್ದರಿಂದಲೇ, ಹಿಂದೆ ಹೇಳಿದ ಯೋಗ್ಯತಾವಿಶೇಷದಿಂದಲೇ ಎಂದರ್ಥ. ಇಂತಹ ಗುಣಗಳನ್ನೆ ಉಪಾಸನೆ ಮಾಡತಕ್ಕದ್ದೆಂಬ ನಿಯಮಕ್ಕೆ ಉಪಾಸಕನ ಯೋಗ್ಯತೆಯೇ ಪ್ರಯೋಜಕ ಹೊರತು ಉಪಾಸಕನಿಗಿರಬಹುದಾದ ಫಲದ ಅಪೇಕ್ಷೆಯಲ್ಲ ಎಂದು ಸೂಚಿಸಲು ಏವಕಾರಾರ್ಥವಾದ 'ಚ' ಶಬ್ದವನ್ನು ಸೂತ್ರದಲ್ಲಿ ಪ್ರಯೋಗಿಸಲಾಗಿದೆ. ಇದರಿಂದಾಗಿ, ಮೋಕ್ಷ

स्वावरभरणप्रकाशव्याप्त्योः सर्वाशास्यत्वात् सर्वोपास्यत्वं तयोरिति न शङ्क्यम् । तत्त्वप्रदीपे तु अपिः वीर्यौदार्यादिसमुच्चायकः । अत एव द्वित्वमात्रव्यावृत्त्यर्थं सम्भृतिद्युव्याप्त्यपीत्यप्रगृह्य निर्देशः । सम्भृति-व्याप्तिवीर्यैश्वर्यादयो देवोपास्या इत्युक्तम् । तत्पक्षे न समाहारः ॥१४॥

---

ದಲ್ಲಿ ತನಗಿಂತ ಅವರರಾದ ಮುಕ್ತಜೀವರ ಪೋಷಣೆ ಮತ್ತು ತನಗೆ ಪ್ರಕಾಶದಿಂದ ವ್ಯಾಪ್ತಿ ಇವೆರಡನ್ನು ಎಲ್ಲರೂ ಬಯಸುವುದರಿಂದ ಆ ಭಗವಂತನ ಗುಣಗಳು ಸರ್ವೋಪಾಸ್ಯವೆಂದು ಶಂಕಿಸತಕ್ಕದ್ದಲ್ಲ.

### ಅಪಿ ಶಬ್ದಕ್ಕೆ ತತ್ತ್ವಪ್ರದೀಪದ ವ್ಯಾಖ್ಯಾಂತರ

ತತ್ತ್ವಪ್ರದೀಪದಲ್ಲಾದರೋ–ಸೂತ್ರದಲ್ಲಿರುವ ಅಪಿಶಬ್ದವುವೀರ್ಯ, ಔದಾರ್ಯ ಮೊದಲಾದ ಗುಣಗಳ ಸಮುಚ್ಚಯವನ್ನು ಹೇಳುವುದು. ಆದ್ದರಿಂದಲೇ ಸಂಭೃತಿ ಮತ್ತು ದ್ಯುವ್ಯಾಪ್ತಿ ಎಂಬ ಎರಡೇ ಗುಣಗಳು ಇಲ್ಲಿ ವಿವಕ್ಷಿತವಲ್ಲ ಎಂದು ತಿಳಿಸಲು 'ಸಂಭೃತಿದ್ಯುವ್ಯಾಪ್ತ್ಯಪಿ' ಎಂಬುದಾಗಿ 'ಸಂಭೃತಿದ್ಯುವ್ಯಾಪ್ತೀ' ಮತ್ತು 'ಅಪಿ' ಪದಗಳನ್ನು ಪ್ರತ್ಯೇಕಿಸದೆ ಸಂಧಿ ಮಾಡಿ ನಿರ್ದೇಶಿಸಲಾಗಿದೆ. ಸಂಭೃತಿ, ದ್ಯುವ್ಯಾಪ್ತಿ, ವೀರ್ಯ, ಶೌರ್ಯ ಮೊದಲಾದ ಗುಣಗಳು ದೇವತೆಗಳು ಉಪಾಸಿಸಲು ಅರ್ಹವಾಗಿವೆ – ಎಂದು ಹೇಳಲಾಗಿದೆ. ಆ ಪಕ್ಷದಲ್ಲಿ 'ಸಂಭೃತಿದ್ಯುವ್ಯಾಪ್ತಿ' ಎಂದು ಸಮಾಹಾರದ್ವಂದ್ವಸಮಾಸವಿಲ್ಲ[1].

---

1. ಸಂಭೃತಿಶ್ಚ ದ್ಯುವ್ಯಾಪ್ತಿಶ್ಚ ಸಂಭೃತಿದ್ಯುವ್ಯಾಪ್ತೀ ಎಂದು ಇತರೇತರದ್ವಂದ್ವ ಸಮಾಸವನ್ನು ಮಾಡಿದಲ್ಲಿ ಈಕಾರಾಂತ ಮತ್ತು ದ್ವಿವಚನಾಂತವಾದ ಆ ಪದವು ಪ್ರಗೃಹ್ಯಸಂಜ್ಞೆಯನ್ನು ಪಡೆಯುವುದು. ಹಾಗೆ ಪ್ರಗೃಹ್ಯಸಂಜ್ಞೆಯನ್ನು ಪಡೆದ ಶಬ್ದವು ಸಂಧಿಯನ್ನು ಹೊಂದದೆ ಪ್ರತ್ಯೇಕವಾಗಿರತಕ್ಕದ್ದು ಎಂಬ ನಿಯಮಾನುಸಾರ ಸಂಭೃತಿದ್ಯುವ್ಯಾಪ್ತೀ ಅಪಿ ಎಂದಿರಬೇಕು ಹೊರತು 'ಸಂಭೃತಿದ್ಯುವ್ಯಾಪ್ತ್ಯಪಿ' ಎಂದಾಗಲಾರದು. ಆದ್ದರಿಂದ ಸಂಭೃತಿಶ್ಚ ದ್ಯುವ್ಯಾಪ್ತಿಶ್ಚ ಅನಯೋಃ ಸಮಾಹಾರಃ ಸಂಭೃತಿದ್ಯುವ್ಯಾಪ್ತಿ' ಎಂದು ಸಮಾಹಾರದ್ವಂದ್ವ ಸಮಾಸವನ್ನು ಮಾಡಬೇಕು. ಈಗ ಪ್ರಗೃಹ್ಯಸಂಜ್ಞೆ ಇಲ್ಲದಿರುವುದರಿಂದ ಸಂಧಿಯಾಗಿರುವುದು ಯುಕ್ತವೆಂದು ತಂತ್ರದೀಪಿಕೆಯ ಅಭಿಪ್ರಾಯ. ತತ್ತ್ವಪ್ರದೀಪದಲ್ಲಿ 'ಸಂಭೃತಿದ್ಯುವ್ಯಾಪ್ತೀ' ಎಂದು ಇತರೇತರದ್ವಂದ್ವವನ್ನೇ ಅಂಗೀಕರಿಸಲಾಗಿದೆ. ಈ ಶಬ್ದಕ್ಕೆ ಪ್ರಗೃಹ್ಯಸಂಜ್ಞೆ ಇದ್ದ ಕಾರಣ ಸಂಧಿಯಾಗುವುದು ನಿಯಮವಿರುದ್ಧವಾದರೂ ಎರಡೇ ಗುಣಗಳು ಇಲ್ಲಿ ವಿವಕ್ಷಿತವಲ್ಲವೆಂದು ಸೂಚಿಸಲು ಸಂಧಿಯನ್ನು ಮಾಡಲಾಗಿದೆ. 'ಸಂಭೃತಿದ್ಯುವ್ಯಾಪ್ತೀ' ಎಂದು ದ್ವಿವಚನಾಂತ ಪ್ರಯೋಗವಿದ್ದಲ್ಲಿ ಈ ಎರಡೇ ಗುಣಗಳು ಸರ್ವೋಪಾಸ್ಯವಲ್ಲವೆಂಬ ಭ್ರಾಂತಿಗೆ ಅವಕಾಶವಿರುತ್ತಿತ್ತೆಂದು ತತ್ತ್ವಪ್ರದೀಪದ ಅಭಿಪ್ರಾಯ.

पुरुषाधिकरणम्—१५

॥ ॐ पुरुषविद्यायामपि चेतरेषामनाम्नानात् ॐ ॥

३.३.२५

अत्र सर्वतो गुणोपसंहारः कार्य इति साध्यते। सर्वविद्योत्तमायामित्यपेरर्थः। पुरुषविद्यायां पुरुषसूक्ताख्यविद्यायां इतरेषां केषाञ्चिद् गुणानामनाम्नानात्, चशब्दात् केषाञ्चिदाम्नानात् सर्वतो गुणोपसंहारः कार्य इति योज्यम्। किमु विद्यान्तरेण सर्वानाम्नानमिति कैमुत्यसूचनार्थोऽपिशब्दः। एकत्रैव विवक्षितसर्वोक्त्यभावात् सर्वविद्यातः सर्वगुणोपसंहृतिः कार्येति भावः ॥ १५ ॥

---

ಪುರುಷಾಧಿಕರಣ—೧೫

ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್

ಓಂ ೩.೩.೨೫

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಸಮಸ್ತ ವಿದ್ಯೆಗಳಲ್ಲಿ ಹೇಳಿರುವ ಭಗವಂತನ ಗುಣಗಳನ್ನು ಉಪಸಂಹಾರ ಮಾಡತಕ್ಕದ್ದೆಂದು ಸಮರ್ಥಿಸಲಾಗುವುದು.

ಸೂತ್ರದಲ್ಲಿರುವ ಅಪಿಶಬ್ದಕ್ಕೆ ಸರ್ವವಿದ್ಯೆಗಳಲ್ಲಿ ಉತ್ತಮವಾಗಿದ್ದರೂ ಎಂದು ಅರ್ಥ. ಪುರುಷವಿದ್ಯಾಯಾಂ - ಪುರುಷಸೂಕ್ತವೆಂಬ ವಿದ್ಯೆಯಲ್ಲಿ, ಇತರೇಷಾಂ - ಇತರ ಕೆಲವು ಗುಣಗಳ, ಅನಾಮ್ನಾನಾತ್ - ಹೇಳದಿರುವಿಕೆಯಿಂದ—ಚ ಶಬ್ದದಿಂದ ಕೆಲವು ಗುಣಗಳನ್ನು ಹೇಳಿರುವುದರಿಂದ ಎಂಬ ಅರ್ಥವು ದೊರಕುವುದು—ಎಲ್ಲ ವಿದ್ಯೆಗಳಲ್ಲಿ ಹೇಳಿರುವ ಗುಣಗಳನ್ನು ಉಪಸಂಹಾರ ಮಾಡತಕ್ಕದ್ದೆಂದು ಸೂಚಿತವಾಗುವುದು. ಉತ್ತಮವಿದ್ಯೆ ಎಂದೆನಿಸಿದ ಪುರುಷಸೂಕ್ತದಲ್ಲೇ ಎಲ್ಲ ಗುಣಗಳನ್ನು ಹೇಳದಿರುವಾಗ ಬೇರೆ ವಿದ್ಯೆಗಳಲ್ಲಿ ಎಲ್ಲ ಗುಣಗಳನ್ನೂ ಹೇಳಿಲ್ಲವೆಂದು ಹೇಳುವುದೇನು ! ಎಂಬ ಕೈಮುತ್ಯಸೂಚನೆಯೂ ಅಪಿಶಬ್ದದ ಪ್ರಯೋಜನವಾಗಿದೆ. ಒಂದೆಡೆಯಲ್ಲಿ ಹೇಳಬೇಕಾದ ಎಲ್ಲವನ್ನೂ ಹೇಳದಿರುವುದರಿಂದ ಎಲ್ಲ ವಿದ್ಯೆಗಳಿಂದಲೂ ಭಗವಂತನ ಎಲ್ಲ ಗುಣಗಳ ಉಪಸಂಹಾರವನ್ನು ಮಾಡತಕ್ಕದ್ದೆಂದು ಭಾವ.

### वेधाधिकरणम्—१६

## ॥ ॐ वेधाद्यर्थभेदात् ॐ ॥ ३.३.२६

अत्र भेदनादीशगुणस्य यत्याद्युपास्यत्वं नेत्युच्यते। नेत्यस्ति। 'तं प्रत्यञ्चमर्चिषा विध्य मर्मन्', 'अग्ने त्वचं यातुधानस्य भिन्धि', 'परा शृणीहि' इति श्रुतवेधादि न सर्वोपास्यम्। कुतः? अर्थभेदात् फलभेदात्। वेधाद्युपासनस्य दुष्टजनहिंसादिरूपविलक्षणफलकत्वात्। तत्र च यत्यादेरनधिकारादिति भावः ॥ १६ ॥

---

### ವೇಧಾಧಿಕರಣ—೧೬

## ಓಂ ವೇಧಾದ್ಯರ್ಥಭೇದಾತ್ ಓಂ ೩.೩.೨೬

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ದುಷ್ಟರನ್ನು ತುಂಡರಿಸುವುದೇ ಮೊದಲಾದ ಭಗವಂತನ ಗುಣಗಳು ಸಂನ್ಯಾಸಿಗಳೇ ಮೊದಲಾದವರ ಉಪಾಸನೆಗೆ ಅರ್ಹವಲ್ಲವೆಂದು ಹೇಳಲಾಗುವುದು.

'ನ' ಎಂಬ ಪದವು ಅನುವೃತ್ತವಾಗುವುದು. 'ತಂ ಪ್ರತ್ಯಂಚಂ ಅರ್ಚಿಷಾ ವಿಧ್ಯ ಮರ್ಮನ್', 'ಅಗ್ನೇ ತ್ವಚಂ ಯಾತುಧಾನಸ್ಯ ಭಿಂಧಿ', 'ಪರಾ ಶೃಣೀಹಿ'ಎಂಬ ಶ್ರುತಿಗಳಲ್ಲಿ ಶ್ರುತವಾಗಿರುವ, ವೇಧಾದಿ– ದುಷ್ಟರನ್ನು ಚುಚ್ಚುವುದೇ ಮೊದಲಾದ ಭಗವದ್ಗುಣಗಳು ಎಲ್ಲರ ಉಪಾಸನೆಗೆ ಯೋಗ್ಯವಲ್ಲ. ಏಕೆಂದರೆ, ಅರ್ಥಭೇದಾತ್ - ಫಲಭೇದವಿರುವುದರಿಂದ. ಭಗವಂತನ ವೇಧಾದಿಗುಣಗಳ ಉಪಾಸನೆಗೆ ದುಷ್ಟಜನ ಹಿಂಸೆಯೇ ಮೊದಲಾದ ವಿಲಕ್ಷಣಫಲವಿರುವುದರಿಂದ, ಆ ಹಿಂಸಾದಿಗಳಲ್ಲಿ ಸಂನ್ಯಾಸಿಗಳೇ ಮೊದಲಾದವರಿಗೆ ಅಧಿಕಾರವಿಲ್ಲದಿರುವುದರಿಂದ ಎಂದು ಭಾವ.

हान्यधिकरणम्—१७

॥ ॐ हानौ तूपायनशब्दशेषत्वात् कुशाच्छन्दस्तुत्युप-
गानवत् तदुक्तम् ॐ ॥ ३.३.२७

अत्र मुक्तावप्युपास्त्यस्तित्वमुच्यते । तुरेव गानवदेवेत्यन्वेतीति भाष्ये भाति । उपासनमिति प्रस्तावादन्वेति । स्वेच्छयेति च दृष्टान्तबलात् । तेन वा तोरन्वयः ।

हानौ बन्धहानिरूपमुक्तौ उपासनमस्ति मुक्तानाम् । तदपि

---

ಹಾನ್ಯಧಿಕರಣ--೧೭

ಓಂ ಹಾನೌ ತೂಪಾಯನಶಬ್ದಶೇಷತ್ವಾತ್
ಕುಶಾಚ್ಛಂದಸ್ತುತ್ಯುಪಗಾನವತ್ತದುಕ್ತಂ ಓಂ ೩.೩.೨೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣವಲ್ಲಿ ಮೋಕ್ಷದಲ್ಲೂ ಉಪಾಸನೆಯು ಇರುವುದೆಂದು ಹೇಳಲಾಗುವುದು.

ಸೂತ್ರದಲ್ಲಿರುವ 'ತು' ಶಬ್ದಕ್ಕೆ ಏವಕಾರದ ಅರ್ಥವಿದೆ. ಆ ಏವಕಾರವು 'ಗಾನವದೇವ' ಎಂಬ ಸೂತ್ರದಲ್ಲಿರುವ 'ಗಾನವತ್' ಶಬ್ದದೊಂದಿಗೆ ಅನ್ವಿತವಾಗುವುದೆಂದು ಭಾಷ್ಯದಲ್ಲಿ ತೋರುವುದು. ಪ್ರಸ್ತುತವಾದುದರಿಂದ 'ಉಪಾಸನಂ' ಎಂಬ ಪದವು ಅನ್ವಿತವಾಗುವುದು. ಈ ಸೂತ್ರವು ಕೊಡುವ ದೃಷ್ಟಾಂತದ ಬಲದಿಂದ 'ಸ್ವೇಚ್ಛಯಾ' ಎಂಬ ಪದವೂ ಇಲ್ಲಿ ಅನ್ವಯಕ್ಕೆ ಪಡೆಯುವುದು. ಆ ಪದದೊಂದಿಗೆ 'ತು' ಶಬ್ದವು ಅನ್ವಿತವಾಗುವುದೆಂದೂ ಹೇಳಬಹುದು.

**'ಹಾನೌ ತು ಉಪಾಯನಶಬ್ದಶೇಷತ್ವಾತ್ ತದುಕ್ತಂ' ಎಂಬ ಸೂತ್ರ ಭಾಗದ ವಿವರಣೆ**

ಹಾನೌ – ಬಂಧಹಾನಿರೂಪವಾದ ಮೋಕ್ಷದಲ್ಲಿ, ಉಪಾಸನಂ ಅಸ್ತಿ - ಮುಕ್ತ

स्वेच्छया। न विधितः। आद्यं कुतः? तदुक्तम्। तत् उपासनमुक्तम्। 'एतत् साम गायन्नास्ते' इत्यादौ यतोऽस्त इति योज्यम्। स्वेच्छयेति द्वितीयं कुतः? उपायनशब्दशेषत्वात्। उपायनं मोक्षः। मोक्ष-वाक्यशेषत्वात्। उपासनाविधीनामिति शेषः। 'ब्रह्मविदाप्नोति परम्' इति मोक्षवाक्ये ज्ञानान्मोक्ष इत्युक्ते तत्कथं स्यादित्यत उपासनाविधि-प्रवृत्तेः मोक्षसिद्ध्यर्थं प्रकृता विधयो मुक्तिविषयाः कथं स्युरिति

---

ರಿಗೆ ಉಪಾಸನೆ ಇರುವುದು. ಅದೂ ಕೂಡ, ಸ್ವೇಚ್ಛಯಾ – ತಮ್ಮ ಇಚ್ಛೆಗನು ಸಾರವಾದದ್ದೇ ಹೊರತು ವಿಧಿಯಿಂದ ಪ್ರಾಪ್ತವಾದುದಲ್ಲ. [1]ಮೊದಲನೆಯದಕ್ಕೆ ಏನು ಪ್ರಮಾಣ? ತದುಕ್ತಂ - ತತ್ - ಉಪಾಸನೆಯು, ಉಕ್ತಂ -'ಏತತ್ ಸಾಮ ಗಾಯನ್ನಾಸ್ತೇ' ಇತ್ಯಾದಿ ಶ್ರುತಿಗಳಲ್ಲಿ ಯಾವ ಕಾರಣದಿಂದ ಹೇಳಲ್ಪಟ್ಟಿದೆಯೋ ಆದ್ದರಿಂದ, ಎಂಬ ಪದಗಳನ್ನು ಯೋಜಿಸಬೇಕು. ಸ್ವೇಚ್ಛಾನುಸಾರವಾಗಿ ಎಂಬ ಎರಡನೆ ವಿಷಯಕ್ಕೆ ಏನು ಆಧಾರ ಎಂಬ ಶಂಕೆಗೆ ಉತ್ತರ – ಉಪಾಯನಶಬ್ದಶೇಷತ್ವಾತ್ – ಉಪಾಯನವೆಂದರೆ ಮೋಕ್ಷ. ಉಪಾಸನೆಯನ್ನು ವಿಧಿಸುವ ವಾಕ್ಯಗಳು ಮೋಕ್ಷ ವಾಕ್ಯಗಳಿಗೆ ಅಂಗವಾಗಿರುವುದರಿಂದ. ಇಲ್ಲಿ 'ಉಪಾಸನೆಯನ್ನು ವಿಧಿಸುವ ವಾಕ್ಯಗಳು' ಎಂಬ ಶೇಷವನ್ನು ಸೇರಿಸಲಾಗಿದೆ.

'ಬ್ರಹ್ಮವಿದಾಪ್ನೋತಿ ಪರಂ' ಎಂಬ ಮೋಕ್ಷವನ್ನು ಪ್ರತಿಪಾದಿಸುವ ವಾಕ್ಯದಲ್ಲಿ ಜ್ಞಾನದಿಂದ ಮುಕ್ತಿಯು ಲಭಿಸುವುದೆಂದು ಹೇಳಿದೆ. ಆ ಜ್ಞಾನ ಹೇಗೆ ಉಂಟಾದೀತು ಎಂಬ ಪ್ರಶ್ನೆಗೆ ಉತ್ತರವಾಗಿ ಉಪಾಸನೆಯನ್ನು ವಿಧಿಸುವ ವಾಕ್ಯಗಳು ಹೊರಟಿರುವುದರಿಂದ ಉಪಾಸನಾವಿಧಿಗಳು ಮೋಕ್ಷಸಿದ್ಧಿಗಾಗಿ ಪ್ರವೃತ್ತವಾಗಿವೆ ಎಂದು ತಿಳಿದು ಬರುವುದು. ಇಂತಹ ಉಪಾಸನಾವಿಧಿಗಳು ಮುಕ್ತಿಗೆ ಹೇಗೆ ಸಂಬಂಧಪಡುವುವು ಎಂದು ಭಾವ.

---

1. ಮುಕ್ತರಿಗೆ ಉಪಾಸನೆ ಇದೆ ಮತ್ತು ಅದು ಸ್ವೇಚ್ಛಾನುಸಾರವಾದದ್ದು ಎಂಬ ಎರಡು ವಿಷಯಗಳು ಇಲ್ಲಿ ಬಂದಿವೆ. ಅವುಗಳಲ್ಲಿ ಮೊದಲನೆಯದಕ್ಕೆ ಎಂದು ಅರ್ಥ.

भावः । स्वेच्छयोपास्तिः कथम् ? कुशाच्छन्दस्तुत्युपगानवत् । कुशैः कुशग्रहणेनेत्यर्थः । आच्छन्देन स्वेच्छया । स्तुतिः मन्त्र-साध्यक्रियाविशेषः । उपगानं सामसाध्यः । तद्वत् मन्त्रसामाध्य-यनवदित्यर्थः । नियतब्रह्मयज्ञानन्तरमपि द्विजन्मनां स्वेच्छयैव कुशधारणेन मन्त्राध्ययनं यथा तथेति भावः ।

हानावित्युक्तिः सर्वक्लेशबन्धत्यागो मुक्तिरिति तत्स्वरूपोक्त्यर्था । साऽपि स्वेच्छयेत्यस्योपपादनार्था । विवरिष्यते चैतत् । उपायने-त्युक्तिरपि अयनं ज्ञानं तस्य उप समीपे गमनं उपायनमिति मुक्ते-

---

**'ಕುಶಾಚ್ಛಂದಸ್ತುತ್ಯುಪಗಾನವತ್' ಎಂಬ ಸೂತ್ರಭಾಗದ ವಿವರಣೆ :**

ಮುಕ್ತರು ಸ್ವೇಚ್ಛೆಯಿಂದ ಉಪಾಸನೆ ಮಾಡುವರೆನ್ನುವುದು ಹೇಗೆ ಯುಕ್ತ ಎಂಬ ಪ್ರಶ್ನೆಗೆ ಉತ್ತರ—'ಕುಶಾಚ್ಛಂದಸ್ತುತ್ಯುಪಗಾನವತ್' ಎಂದು. ಕುಶೈಃ – ದರ್ಭೆಗಳನ್ನು ಹಿಡಿದುಕೊಂಡು, ಆಚ್ಛಂದೇನ – ಸ್ವೇಚ್ಛೆಯಿಂದ ಮಾಡುವ, ಸ್ತುತ್ಯುಪಗಾನವತ್ – ಸ್ತುತಿಯೆಂದರೆ ಯಜುರಾದಿ ಮಂತ್ರಗಳಿಂದ ಮಾಡುವ ಕ್ರಿಯಾವಿಶೇಷ. ಉಪಗಾನವೆಂದರೆ ಸಾಮದಿಂದ ಮಾಡುವ ಕ್ರಿಯಾವಿಶೇಷ; ಅದರಂತೆ ಅಂದರೆ ಮಂತ್ರ, ಸಾಮಗಳ ಅಧ್ಯಯನದಂತೆ ಎಂದು ಅರ್ಥ. ನಿಯಮಾನು ಗುಣವಾಗಿ ಮಾಡುವ ಬ್ರಹ್ಮಯಜ್ಞದ ಅನಂತರವೂ ಕೂಡ ಕೇವಲ ತಮ್ಮ ಇಚ್ಛೆಯಿಂದ ದರ್ಭೆಯನ್ನು ಧರಿಸಿ ಮಂತ್ರಾಧ್ಯಯನವನ್ನು ಹೇಗೆ ಮಾಡುವರೋ ಹಾಗೆಂದು ಭಾವ.

**ಸೂತ್ರದಲ್ಲಿ 'ಹಾನಿ', 'ಉಪಾಯನ' ಪದ ಪ್ರಯೋಗದ ಸ್ವಾರಸ್ಯ**

ಮುಕ್ತಿಯು ಸರ್ವಕ್ಲೇಶಗಳ, ಬಂಧದ ಪರಿತ್ಯಾಗರೂಪವಾದದ್ದು ಎಂದು ಮೋಕ್ಷದ ಸ್ವರೂಪವನ್ನು ಹೇಳಲು 'ಹಾನೌ' ಎಂದು ಹೇಳಲಾಗಿದೆ. ಮೋಕ್ಷ ಸ್ವರೂಪವನ್ನು ಹೇಳಿರುವುದೂ ಕೂಡ ಮುಕ್ತರು ಸ್ವೇಚ್ಛೆಯಿಂದಲೇ ಉಪಾಸನೆಯನ್ನು ಮಾಡುವರು ಎಂಬುದನ್ನು ಸಮರ್ಥಿಸುವುದಕ್ಕಾಗಿ. ಇದನ್ನು ಮುಂದೆ ವಿವರಿಸಲಾಗು

ज्ञानसाध्यत्वोक्त्यर्था । सा च तच्छेषत्वम् उक्तदिशा व्यक्तीकर्तुम् । सामीप्यादिरूपत्वं वक्तुमेवमुक्तिरित्येके । आबन्धहानेर्विधितः, हानौ तु स्वेच्छयेति विशेषद्योतकस्तुरिति तत्त्वप्रदीपे भाति । तदुक्तमित्यस्य तत् 'स्वेच्छयोपासनं मुक्ता अपि हि कुर्वन्ति' इति स्मृतावुक्तमिति वृत्त्यन्तरं च ध्येयम् ।

मुक्तौ प्राप्तानिष्टनिवृत्त्यर्था अस्तूपास्तिरित्यत आह—

---

ವುದು. 'ಉಪಾಯನ' ಎಂಬ ಪದದಿಂದ ಮೋಕ್ಷವನ್ನು ಹೇಳಿರುವುದೂ ಕೂಡ— ಅಯನ ಎಂದರೆ ಜ್ಞಾನದಿಂದ, ಪರಮಾತ್ಮನ ಉಪ–ಸಮೀಪಕ್ಕೆ, ಅಯನ– ಹೋಗು ವುದು ಎಂಬ ವಿವರಣೆಯಂತೆ ಮೋಕ್ಷವು ಜ್ಞಾನಸಾಧ್ಯವಾದುದು ಎಂದು ಹೇಳಲು. ಮೋಕ್ಷವು ಜ್ಞಾನಸಾಧ್ಯ ಎಂದು ಹೇಳಿರುವುದೂ ಕೂಡ ಹಿಂದೆ ಹೇಳಿದಂತೆ ಉಪಾಸನಾ ವಿಧಿಗಳು ಮುಕ್ತಿಗೆ ಅಂಗಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸಲು. ಕೆಲವರು, ಮೋಕ್ಷವು ಭಗವಂತನ ಸಾಮೀಪ್ಯರೂಪವಾದುದೆಂದು ತಿಳಿಸಲು ಉಪಾಯನ ಶಬ್ದ ವನ್ನು ಪ್ರಯೋಗಿಸಲಾಗಿದೆ ಎಂದು ಹೇಳುವರು.

ಬಂಧನಾಶವಾಗುವವರೆಗೆ ಉಪಾಸನಾವಿಧಿಯನ್ನನುಸರಿಸಿ ಉಪಾಸನೆಯನ್ನು ಮಾಡುವರೆಂದೂ, ಬಂಧನಾಶವಾದನಂತರ ತಮ್ಮ ಇಚ್ಛೆಯಂತೆ ಮುಕ್ತರು ಉಪಾಸನೆ ಯನ್ನು ಮಾಡುವರೆಂದೂ ವಿಶೇಷವನ್ನು 'ತು' ಶಬ್ದವು ಸೂಚಿಸುವುದೆಂದು ತತ್ತ್ವ ಪ್ರದೀಪದಿಂದ ತಿಳಿಯುವುದು.

**'ತದುಕ್ತಂ' ಎಂಬ ಸೂತ್ರದ ಪದಕ್ಕೆ ಇನ್ನೊಂದು ವ್ಯಾಖ್ಯಾನ**

'ತದುಕ್ತಂ' ಎಂಬ ಪದಕ್ಕೆ, ತತ್ – ಮುಕ್ತರು ಸ್ವೇಚ್ಛೆಯಿಂದ ಉಪಾಸನೆ ಯನ್ನು ಮಾಡುವರು ಎಂಬ ವಿಷಯವು, ಉಕ್ತಂ- 'ಸ್ವೇಚ್ಛಯೋಪಾಸನಂ ಮುಕ್ತಾ ಅಪಿ ಹಿ ಕುರ್ವಂತಿ' ಎಂದು ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ ಎಂಬ ವ್ಯಾಖ್ಯಾನಾಂತರ ವನ್ನು ತಿಳಿಯಬೇಕು.

ಮುಕ್ತಿಯಲ್ಲಿ ಒದಗುವ ಅನಿಷ್ಟದ ನಿವೃತ್ತಿಗಾಗಿ ಮುಕ್ತರು ಉಪಾಸನೆ ಮಾಡುವರೆಂದಾಗಲಿ ಎಂಬ ಶಂಕೆಗೆ ಉತ್ತರ—

## ।। ॐ साम्पराये तर्तव्याभावात्तथा ह्यन्ये ॐ ।। ३.३.२८

साम्पराये मोक्षे तर्तव्यस्य निरसनीयस्यानिष्टस्याभावात् । कुतः ? हि यस्मादन्ये शाखिनस्तथा पठन्ति 'तीर्णो हि तदा सर्वान् शोकान् हृदयस्य भवति' इति तस्मादित्यर्थः ।

धात्वन्तराद्वा आगमशासनस्यानित्यत्वाद्वा आर्धधातुकस्येति नेट् । तेन तर्तव्येति साधु ।। १७ ।।

---

## ಓಂ ಸಾಂಪರಾಯೇ ತರ್ತವ್ಯಾಭಾವಾತ್ ತಥಾ ಹ್ಯನ್ಯೇ ಓಂ ೩.೩.೨೮

**ಸೂತ್ರಾರ್ಥ**

ಸಾಂಪರಾಯೇ - ಮೋಕ್ಷದಲ್ಲಿ, ತರ್ತವ್ಯಾಭಾವಾತ್ - ತರ್ತವ್ಯ ಅಂದರೆ ಪರಿಹರಿಸಬೇಕಾದ ಅನಿಷ್ಟವಿಲ್ಲದಿರುವುದರಿಂದ. ಏಕೆ ? ಹಿ - ಯಾವ ಕಾರಣದಿಂದ, ಅನ್ಯೇ - ಬೇರೆ ಶಾಖೆಯವರು, ತಥಾ - ಹಾಗೆ ಪಠಿಸುತ್ತಿದ್ದಾರೋ — **'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್** ಹೃದಯಸ್ಯ ಭವತಿ[1]' (ಬೃ. ೪.೩.೨೨) ಎಂದು ಆದ್ದರಿಂದ ಎಂದು ಅರ್ಥ.

**'ತರ್ತವ್ಯ' ಎಂಬ ಪದದ ಸಾಧುತ್ವ**

[2]ಸೇಟ್ ಅಲ್ಲದ 'ತೃ' ಎಂಬ ಬೇರೆ ಧಾತುವಿನಿಂದಾಗಲಿ, ಆಗಮವಿಧಾಯಕ ಶಾಸ್ತ್ರವು ಅನಿತ್ಯವಾದುದರಿಂದಾಗಲಿ 'ಆರ್ಧಧಾತುಕಸ್ಯ ಇಡ್ ವಲಾದೇಃ' (ಪಾ.ಸೂ. ೭-೨-೩೫) ಎಂಬ ಸೂತ್ರದಿಂದ ಇಡಾಗಮ ಇಲ್ಲಿ ಬಂದಿಲ್ಲ. ಆದ್ದರಿಂದ 'ತರ್ತವ್ಯ' ಎಂಬ ಪದವು ಸಾಧುವಾಗಿದೆ.

---

1. 'ಅಯನಾತ್ ಹೃದಿ ವಿಷ್ಣುಃ ಸ ಹೃದಯಂ ಕೀರ್ತಿತೋ ಬುಧೈಃ' -- ಎಂಬ ಪ್ರಮಾಣಾನುಸಾರ ಎಲ್ಲರ ಹೃದಯದಲ್ಲಿರುವ ಪರಮಾತ್ಮನು ಹೃದಯನೆಂದೆನಿಸುವನು. ಮೋಕ್ಷದಲ್ಲಿ ಎಲ್ಲ ಶೋಕಗಳನ್ನು ಕಳೆದುಕೊಂಡಿರುವ ಪುರುಷನು ಹೃದಯನಾಮಕನಾದ ಭಗವಂತನ ಸಂಬಂಧ ಪಡೆಯುವನು ಎಂದು ಶ್ರುತ್ಯರ್ಥ.

2. 'ತೃ ಪ್ಲವನ ತರಣಯೋಃ' ಎಂಬ ಧಾತು ಸೇಟ್ ಧಾತುವಾಗಿದ್ದು 'ಆರ್ಧಧಾತುಕಸ್ಯ' ಇತ್ಯಾದಿ ಸೂತ್ರದಿಂದ ಇಡಾಗಮ ಬಂದು 'ತರಿತವ್ಯ' ಎಂದಾಗಬೇಕಾಗಿತ್ತು ಎಂಬ ಆಕ್ಷೇಪಕ್ಕೆ ಇಲ್ಲಿ ಸಮಾಧಾನವನ್ನು ಹೇಳಲಾಗಿದೆ.

छन्दाधिकरणम्—१८

## ॥ ॐ छन्दत उभयाविरोधात् ॐ ॥ ३.३.२९

**अत्र मुक्तानां कर्मकृत्यनियमः साध्यते, 'हानौ तु' इत्यस्ति। कर्मकरणमिति शेषः। अविरोधः अभावः।**

**हानौ मुक्तौ तु कर्मकरणं छन्दतः स्वेच्छया। कुर्वन्ति न कुर्वन्ति चेत्यर्थः। कुतः? उभयाविरोधात्। विधिप्रत्यवाययोरभावादित्यर्थः।**

**स एव कुत इत्यत आह—**

---

ಛಂದಾಧಿಕರಣ—೧೮

## ಓಂ ಛಂದತ ಉಭಯಾವಿರೋಧಾತ್ ಓಂ ೩.೩.೨೯

**● ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಕ್ತರಿಗೆ ಕರ್ಮಾನುಷ್ಠಾನದ ನಿಯಮವಿಲ್ಲವೆಂದು ಸಮರ್ಥಿಸಲಾಗುವುದು. 'ಹಾನೌ ತು' ಎಂಬ ಪದಗಳು ಅನುವೃತ್ತಿಗೊಳ್ಳುವವು. 'ಕರ್ಮಕರಣಂ' ಎಂಬ ಶೇಷವನ್ನು ಸೇರಿಸಬೇಕು. ಸೂತ್ರದಲ್ಲಿರುವ 'ಅವಿರೋಧ' ಶಬ್ದಕ್ಕೆ ಅಭಾವ ಎಂದರ್ಥ.

ಹಾನೌ ತು - ಮುಕ್ತಿಯಲ್ಲಾದರೋ, ಕರ್ಮಕರಣಂ – ಕರ್ಮಗಳನ್ನು ಮಾಡುವುದು, ಛಂದತಃ - ಸ್ವೇಚ್ಛೆಯಿಂದ; ಇಚ್ಛೆ ಇದ್ದರೆ ಮಾಡುವರು-ಇಲ್ಲದಿದ್ದರೆ ಇಲ್ಲ ಎಂದರ್ಥ. ಏಕೆಂದರೆ, ಉಭಯಾವಿರೋಧಾತ್-ಮಾಡಬೇಕೆಂಬ ವಿಧಿಯಾಗಲಿ, ಮಾಡದಿದ್ದರೆ ಪ್ರತ್ಯವಾಯವಾಗಲಿ ಇಲ್ಲದಿರುವುದರಿಂದ ಎಂದರ್ಥ.

ವಿಧಿ- ಪ್ರತ್ಯವಾಯಗಳು ಮುಕ್ತರಿಗಿಲ್ಲದಿರುವುದು ಹೇಗೆ ಎಂಬ ಪ್ರಶ್ನೆಗೆ ಉತ್ತರ—

|| ॐ गतेरर्थवत्त्वमुभयथाऽन्यथा हि विरोधः ॐ ||
३.३.३०

उभयाविरोध इत्यस्ति। हिर्हेतौ। हि यस्मात् उभयथा विधिप्रत्यवाययोरभावेनैव गतेः ईशप्राप्तिरूपमुक्तेः अर्थवत्त्वं पुरुषार्थत्वं, तस्मात् विधिप्रत्यवायाभाव इत्यर्थः। अन्यथा तद्वत्त्वे विरोधः मोक्षत्वविरोध इत्यर्थः। संसारसमानधर्मतापत्तेरिति भावः।

---

ಓಂ ಗತೇರರ್ಥವತ್ತ್ವಮುಭಯಥಾऽನ್ಯಥಾ ಹಿ ವಿರೋಧಃ
ಓಂ ೩.೩.೩೦

**ಸೂತ್ರಾರ್ಥ**

ಹಿಂದಿನ ಸೂತ್ರದಿಂದ 'ಉಭಯಾವಿರೋಧ' ಎಂಬ ಪದವು ಅನುವೃತ್ತವಾಗುವುದು. 'ಹಿ' ಶಬ್ದವು ಹೇತುವನ್ನು ಹೇಳುವುದು.

ಹಿ– ಯಾವ ಕಾರಣದಿಂದ, ಉಭಯಥಾ - ಕರ್ಮವಿಧಿಯಾಗಲಿ, ಕರ್ಮಾನುಷ್ಠಾನ ಮಾಡದಿದ್ದಲ್ಲಿ ಪ್ರತ್ಯವಾಯವಾಗಲಿ ಇಲ್ಲದಿರುವುದರಿಂದಲೇ, ಗತೇಃ - ಭಗವತ್ಪ್ರಾಪ್ತಿರೂಪವಾದ ಮುಕ್ತಿಗೆ, ಅರ್ಥವತ್ತ್ವಂ – ಪುರುಷಾರ್ಥತ್ವವಿರುವುದೋ ಆ ಕಾರಣದಿಂದ, ವಿಧಿ–ಪ್ರತ್ಯವಾಯಗಳು ಮುಕ್ತರಿಗಿಲ್ಲವೆಂದರ್ಥ. ಅನ್ಯಥಾ – ಮುಕ್ತರಿಗೂ ವಿಧಿ - ಪ್ರತ್ಯವಾಯಗಳಿರುವುದಾದರೆ, ವಿರೋಧಃ - ಮೋಕ್ಷಕ್ಕೆ ಮೋಕ್ಷತ್ವವು ಕೂಡಲಾರದೆಂದರ್ಥ. ಮೋಕ್ಷವೂ ಸಂಸಾರದಂತೆ ಆದೀತೆಂದು ಭಾವ.

ಅಥವಾ ಸೂತ್ರದ 'ಹಿ' ಶಬ್ದವು 'ಉಭಯಥಾ ಖಲು'— ಮುಕ್ತರಿಗೆ ವಿಧಿ–ಪ್ರತ್ಯವಾಯಗಳಿಲ್ಲದಿರುವುದು ಪ್ರಸಿದ್ಧವಾದುದು ಎಂದು ಪ್ರಸಿದ್ಧ್ಯರ್ಥಕವಾಗಿದೆ. ಮೋಕ್ಷವು ಕೇವಲ ಕ್ಲೇಶನಿವೃತ್ತಿರೂಪವಾದುದಲ್ಲ, ಭಗವತ್ಪ್ರಾಪ್ತಿರೂಪವೂ ಆಗಿದೆ ಎಂಬುದನ್ನು ಸೂಚಿಸಲು 'ಗತೇಃ' ಎಂಬ ಪದವನ್ನು ಪ್ರಯೋಗಿಸಲಾಗಿದೆ.

उभयथा खल्विति प्रसिद्ध्यर्थो वा हिशब्दः। गतेरित्युक्तिः न क्लेशहानिरूपैव मुक्तिः किन्त्वीशगतिरूपा चेति द्योतयितुम्।

उभयाविरोधः कर्मानियमे सम्भावक एव, न तूपपादकः। ध्याने व्यभिचारादित्यत आह—

॥ ॐ उपपन्नस्तल्लक्षणार्थोपलब्धेर्लोकवत् ॐ ॥ ३.३.३१

एवं भाव इति शेषः। कर्म कुर्वन्ति न कुर्वन्तीत्येवं भाव उपपन्नो युक्तः। कुतः? तल्लक्षणस्य तन्निमित्तकस्य कर्मसाध्यस्यार्थस्य

---

ಮುಕ್ತರಿಗೆ ವಿಧಿ-ಪ್ರತ್ಯವಾಯಗಳಿಲ್ಲದಿರುವುದು, ಅವರಿಗೆ ಕರ್ಮನಿಯಮ ವಿಲ್ಲದಿರಬಹುದು ಎಂದು ಸೂಚಿಸುವ ಸಂಭಾವಕಪ್ರಮಾಣವೇ ಹೊರತು ಸಾಧಕ ಪ್ರಮಾಣವಲ್ಲ. ಏಕೆಂದರೆ ಮುಕ್ತಿಯಲ್ಲಿ ಧ್ಯಾನಮಾಡಬೇಕೆಂಬ ವಿಧಿಯಾಗಲಿ, ಮಾಡದಿದ್ದರೆ ಪ್ರತ್ಯವಾಯವನ್ನು ಹೇಳುವ ವಾಕ್ಯವಾಗಲಿ ಇಲ್ಲದಿದ್ದರೂ ಧ್ಯಾನ ನಿಯಮವಿರುವಂತೆ ಕರ್ಮದ ವಿಷಯವಾಗಿ ವಿಧಿ-ಪ್ರತ್ಯವಾಯಗಳಿಲ್ಲದಿದ್ದರೂ ಕರ್ಮ ನಿಯಮವಿರಬಹುದು ಎಂಬ ಆಶಂಕೆಗೆ ಸಮಾಧಾನವನ್ನು ಹೇಳುವ ಸೂತ್ರ—

**ಓಂ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ಓಂ**
**೩.೩.೩೧**

**ಸೂತ್ರಾರ್ಥ**

'ಏವಂ ಭಾವಃ' ಎಂಬ ಶೇಷವನ್ನು ಸೇರಿಸಬೇಕು. ಏವಂ ಭಾವಃ— ಮುಕ್ತರು ಕರ್ಮವನ್ನು ಮಾಡುತ್ತಾರೆ — ಮಾಡುವುದಿಲ್ಲ ಎಂಬ ಸ್ಥಿತಿಯು, ಉಪಪನ್ನಃ – ಯುಕ್ತವಾಗಿದೆ. ಏಕೆಂದರೆ, ತಲ್ಲಕ್ಷಣಸ್ಯ - ತನ್ನಿಮಿತ್ತಕವಾದ ಅಂದರೆ ಕರ್ಮಸಾಧ್ಯವಾದ, ಅರ್ಥಸ್ಯ – ಮೋಕ್ಷರೂಪವಾದ ಫಲದ, ಪ್ರಾಪ್ತೇಃ - ಪ್ರಾಪ್ತಿ

मोक्षाख्यफलस्योपलब्धेः प्राप्तेः । लोकवत् । यथा लोके यागविधि-पूर्तिफलसाधनविष्णुक्रमणादिनियमो न पूर्त्यनन्तरमपि तथेत्यर्थः ।

तदर्थेत्येव पूर्तिविवक्षायां मुक्तौ कर्मणः परम्परया हेतुत्वमिति द्योतनाय । तद्धेतुकेत्यनुक्त्वा लक्षणेत्युक्तिः फलस्य स्वप्राप्त्यनन्तरं पुनः साधनानुष्ठाननियमनिवारकत्वं लक्षणमिति सूचयितुम् । प्राप्तफलत्वेऽपि नियमेनोपासनाकरणं तु मुक्तानां नित्यज्ञानस्वरूपत्वसंस्कारपाटवाख्यविशेषहेतुसत्त्वात्, अत्र तदभावादिति भावः । विष्णुक्रमणं नाम विष्णुमुद्दिश्य क्रियमाणं कर्मेत्याहुः ॥ १८ ॥

---

ಯಾಗಿರುವುದರಿಂದ. ಲೋಕವತ್ - ಹೇಗೆ ಲೋಕದಲ್ಲಿ ಯಾಗವಿಧಿಸಮಾಪ್ತಿಯೆಂಬ ಫಲಕ್ಕೆ ಸಾಧನವಾದ ವಿಷ್ಣುಕ್ರಮಣ ಮೊದಲಾದವುಗಳನ್ನು ಮಾಡಬೇಕೆಂಬ ನಿಯಮವು ಯಾಗವಿಧಿ ಪೂರ್ತಿಯಾದ ನಂತರವೂ ಇಲ್ಲವೋ ಹಾಗೆ ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ—**

'ತದರ್ಥ' ಎಂಬಿಷ್ಟರಿಂದಲೇ ಪೂರ್ತಿಯಾಗುತ್ತಿದ್ದರೂ ಮೋಕ್ಷಕ್ಕೆ ಕರ್ಮವು ಪರಂಪರಯಾ ಸಾಧನವಾಗಿದೆ ಎಂಬುದನ್ನು ಸೂಚಿಸಲು 'ತಲ್ಲಕ್ಷಣಾರ್ಥ' ಎಂದು ಹೇಳಲಾಗಿದೆ. ತನ್ನನ್ನು ಪಡೆದ ನಂತರ ಪುನಃ ತನ್ನ ಸಾಧನವನ್ನು ಅನುಷ್ಠಾನ ಮಾಡಲೇಬೇಕೆಂಬ ನಿಯಮವನ್ನು ನಿವಾರಿಸುವುದು ಫಲದ ಲಕ್ಷಣವಾಗಿದೆ ಎಂಬುದನ್ನು ಸೂಚಿಸಲು 'ತದ್ಧೇತುಕ' ಎಂದು ಹೇಳದೆ 'ತಲ್ಲಕ್ಷಣ' ಎಂದು ಹೇಳಲಾಗಿದೆ.

**ಮುಕ್ತರು ನಿಯಮೇನ ಧ್ಯಾನವನ್ನು ಮಾಡುವುದರ ಕಾರಣ**

ಉಪಾಸನೆಯ ಫಲವಾದ ಮೋಕ್ಷವನ್ನು ಪಡೆದಿದ್ದರೂ, ನಿತ್ಯಜ್ಞಾನಸ್ವರೂಪತ್ವ ಮತ್ತು ಸಂಸ್ಕಾರಪಾಟವ ಎಂಬ ವಿಶೇಷ ಹೇತುಗಳಿರುವುದರಿಂದ ಮುಕ್ತರು ನಿಯಮೇನ ಭಗವದುಪಾಸನೆಯನ್ನು ಮಾಡುವರು. ಆದರೆ ನಿಯಮೇನ ಕರ್ಮಾನುಷ್ಠಾನ ಮಾಡಲು ಮುಕ್ತರಿಗೆ ವಿಶೇಷ ಹೇತುವಿಲ್ಲದಿರುವುದರಿಂದ ನಿಯಮೇನ ಕರ್ಮಾನು-ಷ್ಠಾನವಿಲ್ಲವೆಂದು ಭಾವ.

ವಿಷ್ಣುಕ್ರಮಣವೆಂದರೆ ವಿಷ್ಣುವನ್ನುದ್ದೇಶಿಸಿ ಮಾಡಲಾಗುವ ಒಂದು ಕರ್ಮವೆಂದು ಹೇಳುವರು.

अनियमाधिकरणम्—१९

## ॥ ॐ अनियमः सर्वेषामविरोधाच्छब्दानुमानाभ्याम् ॐ ॥
३.३.३२

अत्र ब्रह्मदर्शिनां मोक्षनैयत्यं साध्यते। गतेरित्यस्ति। सर्वेषां ब्रह्मदर्शिनां गतेर्मुक्तेरनियमः। केषाञ्चिदस्ति, केषाञ्चिन्नेति उपासनावत् मुक्तेर्नियमो व्यवस्था नास्ति। किन्त्वनियम एव। कुतः ?

---

ಅನಿಯಮಾಧಿಕರಣ—೧೯

## ಓಂ ಅನಿಯಮಃ ಸರ್ವೇಷಾಮವಿರೋಧಾಚ್ಛಬ್ದಾನುಮಾನಾಭ್ಯಾಂ ಓಂ ೩.೩.೩೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬ್ರಹ್ಮಾಪರೋಕ್ಷಜ್ಞಾನಿಗಳಿಗೆ ನಿಯಮೇನ ಮುಕ್ತಿಯು ಲಭಿಸುವುದೆಂದು ಸಮರ್ಥಿಸಲಾಗುವುದು.

'ಗತೇಃ' ಎಂಬ ಪದವು ಅನುವೃತ್ತವಾಗುವುದು. ಸರ್ವೇಷಾಂ - ಎಲ್ಲ ಬ್ರಹ್ಮಾಪರೋಕ್ಷಜ್ಞಾನಿಗಳಿಗೆ, ಗತೇಃ - ಮುಕ್ತಿಯು, ಅನಿಯಮಃ - ಕೆಲವರಿಗಿದೆ, ಕೆಲವರಿಗಿಲ್ಲ ಎಂಬುದಾಗಿ ಉಪಾಸನೆಯ ವಿಷಯದಲ್ಲಿ ನಿಯಮ ಅಂದರೆ ವ್ಯವಸ್ಥೆ ಇರುವಂತೆ ಮೋಕ್ಷದ ನಿಯಮವಿಲ್ಲ. ಅದರ ಬದಲು ಅನಿಯಮವೇ[1] ಇದೆ. ಏಕೆಂದರೆ, ಅವಿರೋಧಾತ್ - ಎಲ್ಲರಿಗೂ ಸರ್ವಗುಣೋಪಾಸನೆಯನ್ನು ಒಪ್ಪಿದರೆ

---

1. ಹಿಂದಿನ ವಾಕ್ಯದಲ್ಲಿ ಹೇಳಿದಂತೆ ನಿಯಮವೆಂದರೆ ವ್ಯವಸ್ಥೆ. ಪ್ರಕೃತ, ಅನಿಯಮವೆಂದರೆ ಕೆಲವು ಬ್ರಹ್ಮಜ್ಞಾನಿಗಳಿಗೆ ಮಾತ್ರ ಮುಕ್ತಿ, ಕೆಲವರಿಗಿಲ್ಲವೆಂಬ ವ್ಯವಸ್ಥೆ ಇಲ್ಲದಿರುವುದು.

अविरोधात्। 'सर्वे गुणा ब्रह्मणैव ह्युपास्या नान्यैः' इति तत्र श्रुतिविरोधवदिह तद्विरोधाभावात्। अविरोधेऽप्युक्तार्थे मानं किमित्यत उक्तं—शब्देति। 'न कश्चित् ब्रह्मवित् सृतिमनुभवति मुक्तो ह्येव भवति' इति शब्दात्, 'विमता ज्ञानिनो नियतमोक्षाः ज्ञानित्वात् सम्मतवत्' इत्यनुमानाच्चेत्यर्थः।

---

'ಸರ್ವೇ ಗುಣಾ ಬ್ರಹ್ಮಣೈವ ಹ್ಯುಪಾಸ್ಯಾ ನಾನ್ಯೈಃ' ಎಂಬ ಶ್ರುತಿಯ ವಿರೋಧವಿರುವಂತೆ ಎಲ್ಲ ಬ್ರಹ್ಮಜ್ಞಾನಿಗಳಿಗೆ ಮುಕ್ತಿಯನ್ನೊಪ್ಪಿದರೆ ವಿರೋಧವಿಲ್ಲದಿರುವುದರಿಂದ.

ವಿರೋಧವಿಲ್ಲದಿದ್ದರೂ ಎಲ್ಲ ಬ್ರಹ್ಮಜ್ಞಾನಿಗಳಿಗೆ ಮುಕ್ತಿಯಾಗಿಯೇ ತೀರುವುದು ಎಂಬ ವಿಷಯದಲ್ಲಿ ಪ್ರಮಾಣವೇನು ಎಂಬ ಆಶಂಕೆಗೆ ಸಮಾಧಾನವಾಗಿ 'ಶಬ್ದ' ಎಂದು ಹೇಳಲಾಗಿದೆ. 'ನ ಕಶ್ಚಿದ್ ಬ್ರಹ್ಮವಿತ್ ಸೃತಿಮನುಭವತಿ ಮುಕ್ತೋ ಹ್ಯೇವ ಭವತಿ[1]' ಎಂಬ ಶ್ರುತಿಯಿಂದ ಮತ್ತು 'ಮುಕ್ತಿಯಾಗುವುದೋ ಇಲ್ಲವೋ ಎಂದು ವಿವಾದಕ್ಕೊಳಗಾಗಿರುವ ಬ್ರಹ್ಮಜ್ಞಾನಿಗಳು ನಿಯಮೇನ ಮೋಕ್ಷವನ್ನು ಪಡೆಯುವರು. ಜ್ಞಾನಿಗಳಾಗಿರುವುದರಿಂದ, ಮುಕ್ತಿಯನ್ನು ಪಡೆಯುವರೆಂದು ಸಮ್ಮತರಾದ ಜ್ಞಾನಿಗಳಂತೆ' ಎಂಬ ಅನುಮಾನದಿಂದಲೂ ಎಂದು ಅರ್ಥ.

---

1. 'ನ ಕಶ್ಚಿದ್ ಬ್ರಹ್ಮವಿತ್ ಸೃತಿಮನುಭವತಿ, ಮುಕ್ತೋ ಹ್ಯೇವ ಭವತಿ, ತಸ್ಮಾದಾಹುಃ ಸೃತಿಹಾ' ಎಂದು ಕೌಂಡಿನ್ಯಶ್ರುತಿ. ಯಾವ ಬ್ರಹ್ಮಜ್ಞಾನಿಯೂ ಸರ್ವದಾ ಸಂಸಾರವನ್ನನುಭವಿಸುವುದಿಲ್ಲ. ಅವನು ಮುಕ್ತನಾಗುವನಷ್ಟೆ. ಸರ್ವದಾ ಸಂಸಾರಾನುಭವವಿಲ್ಲದಿರುವುದರಿಂದಲೇ ಜ್ಞಾನಿಯಾದ ಜೀವನನ್ನು ಸೃತಿಹಾ – ಸಂಸಾರ ಪರಿತ್ಯಾಗಿ ಎಂದು ಹೇಳಿದರೆಂದು ಶ್ರುತ್ಯರ್ಥ. ಅಥವಾ, ಸಂಸಾರ ನಿವೃತ್ತಿಗೆ ಕಾರಣವಾದ ಜ್ಞಾನಕ್ಕೆ ಗೋಚರನಾದ ಕಾರಣ ಪರಮಾತ್ಮನನ್ನು ಸೃತಿಹಾ – ಸಂಸಾರಘ್ನನೆಂದು ಕರೆಯುವರು ಎಂದರ್ಥ.

उपसंहारानुमानतौल्यनिरासाय अस्य बाधकशून्यत्वश्रुतिमूले वक्तुं पश्चादुक्तिः । बाधकाभावसाधकयोः द्वयोरप्युक्तिः ज्ञानिनामपि केषाञ्चित् जिज्ञासूनामुपसंहार इवायोग्यत्वं न शङ्क्यं, ताभ्यां तदभावनिश्चयादिति सूचयितुम् । उपसंहारवैषम्यं वक्तुमेवानियम इत्युक्तिः । अन्यथा नियम इत्यवक्ष्यत् ॥ १९ ॥

---

**ಸೂತ್ರವಿನ್ಯಾಸದ ಮತ್ತು ಸೂತ್ರದ ಪದಗಳ ಸ್ವಾರಸ್ಯ**

ಗುಣಗಳ ಉಪಸಂಹಾರಕ್ಕೂ ಮತ್ತು ಎಲ್ಲ ಜ್ಞಾನಿಗಳಿಗೂ ಮೋಕ್ಷವಿದೆ ಎಂದು ಸಾಧಿಸುವ ಅನುಮಾನಕ್ಕೂ ಸಮಬಲತ್ವ[1] ನಿರಾಕರಿಸಲು ಅನುಮಾನಕ್ಕೆ ಯಾವ ಬಾಧಕವೂ ಇಲ್ಲ ಮತ್ತು ಶ್ರುತಿಮೂಲತ್ವವಿದೆ ಎಂಬುದನ್ನು ಹೇಳುವ ಸಲುವಾಗಿ ಸೂತ್ರದಲ್ಲಿ ಅನುಮಾನವನ್ನು ಅನಂತರ ಹೇಳಲಾಗಿದೆ. ಕೆಲ ಜಿಜ್ಞಾಸುಗಳಿಗೆ ಭಗವಂತನ ಸರ್ವಗುಣೋಪಸಂಹಾರ ವಿಷಯದಲ್ಲಿ ಅಯೋಗ್ಯತೆ ಇರುವಂತೆ ಜ್ಞಾನಿಗಳಾಗಿದ್ದರೂ ಕೆಲವರಿಗೆ ಮುಕ್ತಿಯೋಗ್ಯತೆ ಇಲ್ಲವೆಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಬಾಧಕಾಭಾವ ಮತ್ತು ಸಾಧಕಪ್ರಮಾಣಗಳಿಂದ ಜ್ಞಾನಿಗಳಿಗೆ ಮುಕ್ತ್ಯಯೋಗ್ಯತ್ವ ಇಲ್ಲವೆಂದು ನಿಶ್ಚಯವಾಗಿದೆ ಎಂದು ಸೂಚಿಸಲು ಸೂತ್ರದಲ್ಲಿ ಬಾಧಕಾಭಾವ, ಸಾಧಕ ಪ್ರಮಾಣಗಳೆರಡನ್ನೂ ಹೇಳಲಾಗಿದೆ. ಜ್ಞಾನಿಗಳಿಗೆ ಮುಕ್ತಿಯೋಗ್ಯತ್ವವು ಗುಣೋಪಸಂಹಾರದಂತಲ್ಲವೆಂದು ಸೂಚಿಸಲು 'ಅನಿಯಮಃ' ಎಂದು ಹೇಳಲಾಗಿದೆ. ಇಲ್ಲದಿದ್ದಲ್ಲಿ 'ನಿಯಮಃ' ಎಂದೇ ಸೂತ್ರಕಾರರು ಹೇಳುತ್ತಿದ್ದರು[2].

---

1. ಗುಣೋಪಸಂಹಾರವನ್ನು ದೃಷ್ಟಾಂತವಾಗಿಟ್ಟುಕೊಂಡು ಆ ವಿಷಯದಲ್ಲಿ ಎಲ್ಲರಿಗೂ ಯೋಗ್ಯತೆ ಇಲ್ಲದಿರುವಂತೆ ಮುಕ್ತಿಯ ವಿಷಯದಲ್ಲಿ ಎಲ್ಲ ಬ್ರಹ್ಮಜ್ಞಾನಿಗಳಿಗೆ ಯೋಗ್ಯತೆ ಇಲ್ಲವೆಂದು ಶಂಕಿಸಲಾಗಿತ್ತು. ಉಪಸಂಹಾರ ದೃಷ್ಟಾಂತವನ್ನು ಹೊಂದಿರುವ ಮುಕ್ತ್ಯಯೋಗ್ಯತ್ವ ಸಾಧಕಾನುಮಾನಕ್ಕೂ ಪ್ರಕೃತಾನುಮಾನಕ್ಕೂ ತುಲ್ಯಬಲತ್ವವಿಲ್ಲವೆಂದು ತೋರಿಸಲು – ಎಂದು ಭಾವ.

2. ಎಲ್ಲ ಜ್ಞಾನಿಗಳಿಗೂ ಮೋಕ್ಷಪ್ರಾಪ್ತಿ ನಿಯಮವಿದೆ ಎಂದು ಸೂಚಿಸಲು 'ನಿಯಮಃ' ಎಂದು ಹೇಳಬಹುದಾಗಿದ್ದರೂ 'ಅನಿಯಮ' ಎಂಬ ಪದದಿಂದ ಉಪಾಸನೆಯ ವ್ಯವಸ್ಥೆಯಂತೆ ಮುಕ್ತಿಯ ವ್ಯವಸ್ಥೆಯಿಲ್ಲ ಎಂದು ಉಪಸಂಹಾರದ ವೈಷಮ್ಯವನ್ನು ಸೂಚಿಸಲಾಗಿದೆ ಎಂದು ಭಾವ.

## यावदधिकरणम्—२०

॥ ॐ यावदधिकारमवस्थितिराधिकारिकाणाम् ॐ ॥ ३.३.३३

अत्रोपासनायाम् अस्यैतावान् अस्य त्वेतावानित्यधिकारनियमः साध्यते। गतेरिति विपरिणम्य वा, हानाविति वा वर्तते।

आधिकारिकाणाम्—अधिकारो योग्यता, तदनुसार्यनुष्ठाने शीलं येषां ते आधिकारिकाः। शीलमिति सूत्रात् ठक्। तेषां ब्रह्मादीनां

---

## ಯಾವದಧಿಕರಣ—೨೦

### ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ ೩.೩.೩೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಉಪಾಸನೆಯ ವಿಷಯದಲ್ಲಿ 'ಈ ಅಧಿಕಾರಿಗೆ ಇಷ್ಟು ಅಧಿಕಾರ', 'ಇನ್ನೊಬ್ಬ ಅಧಿಕಾರಿಗಾದರೆ ಇಷ್ಟು ಅಧಿಕಾರ' ಎಂದು ಅಧಿಕಾರ ನಿಯಮವನ್ನು ಸಾಧಿಸಲಾಗುವುದು. 'ಗತೇಃ' ಎಂದು ಕೆಲ ಸೂತ್ರಗಳ ಹಿಂದೆ ಬಂದಿರುವ ಪದವನ್ನು 'ಗತೌ' ಎಂದು ಬದಲಾಯಿಸಿಕೊಂಡು ಅನುವೃತ್ತಿ ಮಾಡಿ ಕೊಳ್ಳಬೇಕು ಅಥವಾ ಅದಕ್ಕೂ ಹಿಂದಿನ ಸೂತ್ರದಲ್ಲಿರುವ 'ಹಾನೌ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು.

ಆಧಿಕಾರಿಕಾಣಾಂ – ಅಧಿಕಾರವೆಂದರೆ ಯೋಗ್ಯತೆ, ಅದಕ್ಕನುಸಾರಿಯಾದ ಅನುಷ್ಠಾನದಲ್ಲಿ ಶೀಲ ಅಂದರೆ ಆಸಕ್ತಿಯುಳ್ಳವರು ಆಧಿಕಾರಿಕರು. 'ಅಧಿಕಾರ' ಶಬ್ದಕ್ಕೆ 'ಶೀಲಂ' (ಪಾ.ಸೂ.೪.೪.೬೧) ಎಂಬ ಸೂತ್ರದಿಂದ ಠಕ್ ಪ್ರತ್ಯಯ ಬಂದು 'ಆಧಿಕಾರಿಕ' ಎಂಬ ರೂಪವಾಗಿದೆ. ಆಧಿಕಾರಿಕರಿಗೆ ಅಂದರೆ ಯೋಗ್ಯತಾನುಸಾರ

यावदधिकारं, यावदवधारण इत्यव्ययीभावः, अधिकारानुसारेणैव गतौ मुक्तावस्थितिः तारतम्येनावस्थानम्। न तूपासनाप्रयत्नतारतम्येन। येन प्रागधिकारनियमो न स्यादित्यर्थः। मुक्तौ सुखादितारतम्यस्य प्राक्तनयोग्यतातारतम्यैकनिबन्धनत्वात् तदभावे तन्न स्यात्। प्रयत्नतारतम्यस्यापि तदायत्तत्वात्। 'स्वाधिकाराधिको यत्नः' इत्यादिस्मृतेरिति भावः।

तदेकायत्तत्वं द्योतयितुं समासेन निर्देशः। संसारेऽपि यथाधि-

---

ಅನುಷ್ಠಾನಶೀಲರಾದ ಬ್ರಹ್ಮಾದಿಗಳಿಗೆ, ಯಾವದಧಿಕಾರಂ – ಯಾವದವಧಾರಣೇ (ಪಾ ಸೂ. ೨.೧.೮) ಎಂಬ ಸೂತ್ರದಿಂದ 'ಯಾವತ್' ಎಂಬ ಅವ್ಯಯವು ಅಧಿಕಾರ ಶಬ್ದದೊಡನೆ ಸಮಾಸವನ್ನು ಪಡೆದು ಯಾವದಧಿಕಾರಂ ಎಂದು ಅವ್ಯಯೀಭಾವ ಸಮಾಸವಾಗಿದೆ. ಯಾವದಧಿಕಾರಂ ಅಂದರೆ ಯೋಗ್ಯತಾನುಗುಣವಾಗಿಯೇ, ಗತೌ - ಮುಕ್ತಿಯಲ್ಲಿ, ಅವಸ್ಥಿತಿಃ-ತಾರತಮ್ಯದಿಂದ ಇರುವಿಕೆ ಇದೆ, ಹೊರತು ಉಪಾಸನೆಯ ಪ್ರಯತ್ನದಲ್ಲಿರುವ ತಾರತಮ್ಯದಿಂದ ಮೋಕ್ಷದಲ್ಲಿ ತಾರತಮ್ಯ ಉಂಟಾಗಲಾರದು. ಉಪಾಸನಾ ಪ್ರಯತ್ನದ ತಾರತಮ್ಯದಿಂದಲೇ ಮುಕ್ತಿಯಲ್ಲಿ ತಾರತಮ್ಯ ಉಂಟಾಗುವುದಾದರೆ ಮುಕ್ತಿಗೆ ಮುಂಚೆ 'ಇವನಿಗಿಷ್ಟೇ ಉಪಾಸನೆ ಮಾಡುವ ಯೋಗ್ಯತೆ' ಎಂಬುದಾಗಿ ಅಧಿಕಾರನಿಯಮವೇ ಇಲ್ಲದಂತಾದೀತು ಎಂದು ಅರ್ಥ. ಮುಕ್ತಿಗೆ ಮುಂಚೆಯೇ ಇರುವ ಉಪಾಸನಾಯೋಗ್ಯತೆಯ ತಾರತಮ್ಯವೇ ಮುಕ್ತಿಯಲ್ಲಿರುವ ಆನಂದಾದಿ ತಾರತಮ್ಯಕ್ಕೆ ಪ್ರಧಾನ ಕಾರಣವಾಗಿದೆ. ಆದ್ದರಿಂದ, ಉಪಾಸನಾ ಯೋಗ್ಯತಾ ತಾರತಮ್ಯವಿಲ್ಲದಿದ್ದರೆ ಮುಕ್ತಿಯಲ್ಲಿ ಆನಂದಾದಿ ತಾರತಮ್ಯವೂ ಉಂಟಾಗಲಾರದು. 'ಸ್ವಾಧಿಕಾರಾಧಿಕೋ ಯತ್ನಃ' ಇತ್ಯಾದಿ ಸ್ಮೃತಿಯಂತೆ ಉಪಾಸನಾಪ್ರಯತ್ನದ ತಾರತಮ್ಯವೂ ಉಪಾಸನಾಯೋಗ್ಯತೆಯ ತಾರತಮ್ಯಕ್ಕೆ ಅಧೀನವಾಗಿದೆ ಎಂದು ಭಾವ.

**ಸೂತ್ರದ ಪದಗಳ ಸ್ವಾರಸ್ಯ**

ಮುಕ್ತಿಯ ಆನಂದಾದಿ ತಾರತಮ್ಯವು ಉಪಾಸನಾಯೋಗ್ಯತಾ ತಾರತಮ್ಯಕ್ಕೆ

कारमवस्थितिसत्त्वेपि मुक्तावित्युक्तिः संसारे विक्षेपवशाद् योग्यतानुसारित्वम् अवस्थितेः किञ्चिद्विहन्यते, हानौ तु नेति सूचयितुम्। आधिकारिकाणामित्युक्तिः अधिकाराधिको यत्नो न तेष्विति सूचनाय।

मुक्तौ तारतम्यमेवायुक्तम्। अन्योन्यविरोधापत्तेः। 'दर्शनाच्च' इत्युक्तानन्दतारतम्यश्रुतेः संसारिपरत्वेन मानाभावाच्चेत्यत आह—

---

ಮಾತ್ರ ಅಧೀನವಾಗಿದೆ ಎಂಬುದನ್ನು ಸೂಚಿಸಲು 'ಯಾವದಧಿಕಾರಂ' ಎಂದು ಸಮಾಸದಿಂದ ನಿರ್ದೇಶಿಸಲಾಗಿದೆ. ಯದ್ಯಪಿ ಸಂಸಾರದಲ್ಲೂ ಯೋಗ್ಯತಾನುಗುಣವಾಗಿ ತಾರತಮ್ಯಯುಕ್ತವಾಗಿ ಜೀವರಿರುವರು. ಆದರೂ, ಸಂಸಾರದಲ್ಲಿ ನಾನಾ ಯೋನಿಗಳಲ್ಲಿ ಜೀವರು ಸಂಚರಿಸುವ ಕಾರಣ ಜೀವರ ಇರುವಿಕೆ ಯೋಗ್ಯತಾನುಸಾರಿಯಾಗದೆ ಸ್ವಲ್ಪ ವ್ಯತ್ಯಾಸವಾಗುವುದುಂಟು. ಮೋಕ್ಷದಲ್ಲಿ ಮಾತ್ರ ಹಾಗಿರುವುದಿಲ್ಲವೆಂದು ಸೂಚಿಸಲು 'ಮುಕ್ತಿಯಲ್ಲಿ' ಎಂದು ಹೇಳಲಾಗಿದೆ. ಬ್ರಹ್ಮಾದಿಗಳಲ್ಲಿ ಅವರ ಯೋಗ್ಯತೆಗಿಂತ ಅಧಿಕವಾದ ಪ್ರಯತ್ನವಿಲ್ಲವೆಂದು ಸೂಚಿಸಲು 'ಆಧಿಕಾರಿಕಾಣಾಂ' ಎಂದು ಹೇಳಲಾಗಿದೆ[1].

ಮೋಕ್ಷದಲ್ಲಿ ತಾರತಮ್ಯವಿರುವುದೇ ಯುಕ್ತವಲ್ಲ. ತಾರತಮ್ಯವಿರುವುದಾದರೆ ಮುಕ್ತರಲ್ಲಿ ಪರಸ್ಪರ ವಿರೋಧ ಉಂಟಾದೀತು. 'ದರ್ಶನಾಚ್ಚ' (ಬ್ರ.ಸೂ. ೩.೨ ೨೧) ಎಂಬಲ್ಲಿ ಹೇಳಿರುವ ಆನಂದತಾರತಮ್ಯಶ್ರುತಿಯು ಸಂಸಾರಿಜೀವರ ಆನಂದ ತಾರತಮ್ಯವನ್ನು ಹೇಳುವ ಅಭಿಪ್ರಾಯವುಳ್ಳದ್ದಾದ್ದರಿಂದ ಮುಕ್ತರ ತಾರತಮ್ಯದಲ್ಲಿ ಪ್ರಮಾಣವೂ ಇಲ್ಲ ಎಂಬ ಆಕ್ಷೇಪವನ್ನು ಪರಿಹರಿಸುವ ಸೂತ್ರ—

---

1. ಆಧಿಕಾರಿಕ ಶಬ್ದಕ್ಕೆ ತಮ್ಮ ಯೋಗ್ಯತಾನುಸಾರ ಅನುಷ್ಠಾನಶೀಲರು ಎಂದರ್ಥವಿರುವುದರಿಂದ ಆಧಿಕಾರಿಕವಾದ ಬ್ರಹ್ಮಾದಿಗಳು ತಮ್ಮ ಯೋಗ್ಯತೆಯನ್ನು ಮೀರಿ ಪ್ರಯತ್ನಿಸುವುದಿಲ್ಲವೆಂದು ಭಾವ.

|| ॐ अक्षरधियां त्वविरोधः सामान्यतद्भावाभ्यामौपसद-
वत्तदुक्तम् ॐ || ३.३.३४

तुरप्यर्थे असमत्वेऽपीति समुच्चिनोति । गताविद्याधिकारिकाणामिति चास्ति । अक्षरधियामिति हेतुगर्भविशेषणम् ।

ब्रह्मधियां ब्रह्मादीनां मुक्तानामसमत्वेऽप्यविरोधो विरोधो नास्ति । कुतः ? ब्रह्मधीत्वात् । विषयलम्पटत्वाभावादिति यावत् । सामान्यतद्भावाभ्यां—सामान्यात् मत्सरादिदोषाभावसाम्यत्, तद्भावात् — तदिति तन्त्रं— तेभ्यो मात्सर्यविषयतया प्रसंजितेभ्यः

---

ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯತದ್ಭಾವಾಭ್ಯಾಂ
ಔಪಸದವತ್ತದುಕ್ತಂ ಓಂ ೩.೩.೩೪

**ಸೂತ್ರಾರ್ಥ**

ಸೂತ್ರದಲ್ಲಿರುವ 'ತು' ಶಬ್ದವು 'ಅಪಿ' ಎಂಬ ಅರ್ಥವುಳ್ಳದ್ದಾಗಿ 'ಅಸಮತ್ವೇಽಪಿ' ಎಂದು ಸಮುಚ್ಚಯವನ್ನು ತೀಸುವುದು. 'ಗತೌ' ಮತ್ತು 'ಆಧಿಕಾರಿಕಾಣಾಂ' ಎಂಬ ಪದಗಳು ಅನುವೃತ್ತವಾಗುವುವು. 'ಅಕ್ಷರಧಿಯಾಂ' ಎಂಬ ವಿಶೇಷಣವು ಹೇತುಗರ್ಭವಿಶೇಷಣವಾಗಿದೆ[1].

ಅಕ್ಷರಧಿಯಾಂ- ಬ್ರಹ್ಮಜ್ಞಾನಿಗಳಾದ ಬ್ರಹ್ಮಾದಿ ಮುಕ್ತರಿಗೆ, ಅಸಮತ್ವೇಽಪಿ- ಸಮತೆ ಇಲ್ಲದಿದ್ದರೂ, ಅವಿರೋಧಃ - ವಿರೋಧವಿಲ್ಲ, ಏಕೆಂದರೆ ಬ್ರಹ್ಮಜ್ಞಾನಿಗಳಾದ್ದರಿಂದ. ವಿಷಯಲಂಪಟತೆ – ಇಲ್ಲದಿರುವುದರಿಂದ ಎಂದು ತಾತ್ಪರ್ಯ. ಸಾಮಾನ್ಯತದ್ಭಾವಾಭ್ಯಾಂ— ಸಾಮಾನ್ಯಾತ್ - ಎಲ್ಲ ಮುಕ್ತರಿಗೂ ಮಾತ್ಸರ್ಯಾದಿ ದೋಷಗಳಿಲ್ಲದಿರುವುದು ಸಮಾನವಾಗಿರುವುದರಿಂದ, ತದ್ಭಾವಾತ್ - ತತ್ ಎಂಬ

---

1. 'ಅಕ್ಷರಧಿಯಾಂ ಬ್ರಹ್ಮಾದೀನಾಂ' ಎಂಬುದಾಗಿ ಬ್ರಹ್ಮಾದಿಗಳಿಗೆ 'ಅಕ್ಷರಧೀ' ವಿಶೇಷಣವಾಗಿದೆ. ಬ್ರಹ್ಮಾದಿಗಳು ಅಕ್ಷರಧೀ ಅಂದರೆ ಬ್ರಹ್ಮಜ್ಞಾನಿಗಳಾಗಿರುವುದರಿಂದ ಮಾತ್ಸರ್ಯಾದಿದೋಷರಹಿತರೆಂದು ದೋಷರಾಹಿತ್ಯಕ್ಕೆ ಹೇತುವನ್ನು ಸೂಚಿಸುವ ವಿಶೇಷಣವಾಗಿದೆ ಎಂದು ಭಾವ.

उत्तमेभ्यः तस्य प्रकृतब्रह्मज्ञानादिलक्षणोपकारस्य भावादन्येषामव-राणामित्यर्थः। कथं? औपसद्वत्—सच्छिष्यस्य यथा गुराविरोध-स्तथेति। कुतः? तत्—असमत्वेऽपि दोषाभावादिना विरोधो नेत्येतत्, उक्तं–'नानाविधा जीवसङ्घा विमुक्तौ' इत्यादिश्रुतावित्यर्थः।

अक्षरधियो वैराग्यसाध्यत्वात्तेन विषयलम्पटत्वाभावः सूच्यते। अक्षरेत्युक्तितः 'अक्षयगुणगणधाम्नि परमानन्दरूपे परमाश्चर्यरूपे यथेष्टानन्दभोजके भगवति स्थितधियां कुतोऽसमत्वेन विरोधः?' इति

ಪದವನ್ನು ಅನೇಕ ರೀತಿಯಿಂದ ಉಪಕಾರಕವಾಗುವಂತೆ ಇಲ್ಲಿ ಯೋಜಿಸಲಾಗಿದೆ—ಶೇಭ್ಯಃ - ಮಾತ್ಸರ್ಯಕ್ಕೆ ಗುರಿಯಾದವರಿಂದು ಆಪಾದಿಸಲ್ಪಡುವ ಉತ್ತಮ ಮುಕ್ತರಿಂದ, ತಸ್ಯ - ಪ್ರಕೃತ ಪರಮಾತ್ಮನ ಜ್ಞಾನವೇ ಮೊದಲಾದ ಉಪಕಾರವೂ ಭಾವಾತ್ - ಇತರ ನೀಚ ಮುಕ್ತರಿಗಿರುವುದರಿಂದ ಎಂದು ಅರ್ಥ.

ಮುಕ್ತರಿಗೆ ಪರಸ್ಪರ ವಿರೋಧವಿಲ್ಲದಿರುವುದು ಹೇಗೆ ಎಂಬ ಪ್ರಶ್ನೆಗೆ ಉತ್ತರ—ಔಪಸದವತ್ – ಸಚ್ಛಿಷ್ಯನಿಗೆ ಹೇಗೆ ಗುರುಗಳಲ್ಲಿ ವಿರೋಧವಿಲ್ಲವೋ ಹಾಗೆ ಎಂದು. ಏಕೆಂದರೆ, ತದುಕ್ತಂ – ತತ್ – ಅಸಮತೆ ಇದ್ದರೂ ಮುಕ್ತರಿಗೆ ದೋಷಗಳಿಲ್ಲದಿರುವುದರಿಂದ ಪರಸ್ಪರ ವಿರೋಧವಿಲ್ಲವೆನ್ನುವುದು. ಉಕ್ತಂ - '[1]ನಾನಾವಿಧಾ ಜೀವಸಂಘಾ ವಿಮುಕ್ತೌ' ಇತ್ಯಾದಿ ಶ್ರುತಿಯಲ್ಲಿ ಹೇಳಲಾಗಿದೆ ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

ಅಕ್ಷರಧೀ ಅಂದರೆ ಬ್ರಹ್ಮಜ್ಞಾನವು ವಿಷಯವೈರಾಗ್ಯದಿಂದಲೇ ಉಂಟಾಗುವುದರಿಂದ, ಬ್ರಹ್ಮಜ್ಞಾನಿಗಳಾದುದರಿಂದ ಮುಕ್ತರಿಗೆ ವಿಷಯಲಂಪಟತೆ ಇಲ್ಲವೆಂದು

1. 'ನಾನಾವಿಧಾ ಜೀವಸಂಘಾ ವಿಮುಕ್ತೌ ನ ಚೈವ ತೇಷಾಂ ಬ್ರಹ್ಮಧಿಯಾಂ ವಿರೋಧಃ। ದೋಷಾಭಾವಾದ್ ಗುರುಶಿಷ್ಯಾದಿಭಾವಾತ್ ಲೋಕೇಽಪಿ ನಾಸೌ ಕಿಮು ತೇಷಾಂ ವಿಮುಕ್ತೇಃ॥' ಎಂದು ತುರಶ್ರುತಿ.

तत्त्वप्रदीपोक्त्याऽनेकविशेषणसूचनाय । तुरेवार्थे वा । हेतुभिरन्वेति । तेनान्वयव्यतिरेकाभ्यामेतेषामेवाविरोधव्याप्तत्वं न समत्वस्येति सूचयति। लोके विरोधिष्वसमत्वस्य विषयलम्पटत्वादेश्च दर्शनात् कथमेवमित्यतो दृष्टान्तोक्तिः । सामान्यादित्युक्तिः सर्वेषां दोषाभावं वक्तुम् । पूर्वोक्ता-

---

ಸೂಚಿತವಾಗುವುದು. 'ಅಕ್ಷಯಗುಣಗಣಧಾಮ್ನಿ ಪರಮಾನಂದರೂಪೇ ಪರಮೈಶ್ವರ್ಯರೂಪೇ ಯಥೇಷ್ಟಾನಂದಭೋಜಕೇ ಭಗವತಿ ಸ್ಥಿತಧಿಯಾಂ ಕುತೋಽಸಮತ್ವೇನ ವಿರೋಧಃ' ಎಂದು ತತ್ತ್ವಪ್ರದೀಪದಲ್ಲಿ ಹೇಳಿರುವಂತೆ ಭಗವಂತನ ಅನೇಕ ವಿಶೇಷಣಗಳನ್ನು ಸೂಚಿಸುವುದಕ್ಕೋಸ್ಕರ 'ಅಕ್ಷರ' ಎಂದು ಹೇಳಲಾಗಿದೆ.[1]

ಅಥವಾ ಸೂತ್ರದ 'ತು' ಶಬ್ದಕ್ಕೆ 'ಏವ' ಎಂದರ್ಥ. ಮುಕ್ತರಿಗೆ ಪರಸ್ಪರ ಅವಿರೋಧವನ್ನು ಸಮರ್ಥಿಸಲು ವಿವಕ್ಷಿತವಾಗಿರುವ ವಿಷಯಲಂಪಟತ್ವಾಭಾವ, ಮಾತ್ಸರ್ಯಾದಿ ದೋಷಾಭಾವ ಮತ್ತು ಉಪಕಾರಸದ್ಭಾವ ಎಂಬ ಹೇತುಗಳೊಂದಿಗೆ ಏವಕಾರವು ಅನ್ವಿತವಾಗುವುದು. ಹೀಗೆ 'ಏವ' ಎಂಬ ಅರ್ಥದ ತು ಶಬ್ದವನ್ನು ವಿಷಯಲಂಪಟತ್ವಾಭಾವ ಮೊದಲಾದ ಹೇತುಗಳೊಂದಿಗೆ ಅನ್ವಯಿಸುವುದರಿಂದ, ಆ ಹೇತುಗಳಿದ್ದರೆ ಪರಸ್ಪರ ಅವಿರೋಧ, ಆ ಹೇತುಗಳಿಲ್ಲದಿದ್ದರೆ ಪರಸ್ಪರ ಅವಿರೋಧವಿಲ್ಲ' ಎಂಬ ಅನ್ವಯವ್ಯತಿರೇಕಗಳಿಂದ ವಿಷಯಲಂಪಟತ್ವಾಭಾವಾದಿ ಹೇತುಗಳೇ ಅವಿರೋಧದ ವ್ಯಾಪ್ತಿಯನ್ನು ಪಡೆದಿವೆ ಹೊರತು ಸಾಮ್ಯವಲ್ಲ ಎಂದು ಸೂತ್ರಕಾರರು ಸೂಚಿಸುತ್ತಾರೆ. ಲೋಕದಲ್ಲಿ ಪರಸ್ಪರ ವಿರೋಧಿಗಳಾಗಿರುವವರಲ್ಲಿ ಅಸಮತೆ, ವಿಷಯಲಂಪಟತೆ ಮೊದಲಾದವುಗಳು ಕಂಡಿರುವುದರಿಂದ ಅಸಮತೆ ಇರುವ ಮುಕ್ತರಲ್ಲಿ ಪರಸ್ಪರ ವಿರೋಧವಿಲ್ಲದಿರುವುದು ಹೇಗೆಂಬ ಶಂಕೆಯನ್ನು ನಿವಾರಿಸಲು ಸೂತ್ರದಲ್ಲಿ 'ಔಪಸದವತ್' ಎಂದು ದೃಷ್ಟಾಂತವನ್ನು ಹೇಳಲಾಗಿದೆ. ಎಲ್ಲ ಮುಕ್ತರಿಗೂ ಮಾತ್ಸರ್ಯಾದಿ ದೋಷಾಭಾವ ಸಮಾನವಾಗಿದೆ ಎಂದು ಹೇಳಲು ಸೂತ್ರದಲ್ಲಿ 'ಸಾಮಾನ್ಯಾತ್'

---

1. ಅಕ್ಷಯವಾದ ಗುಣಗಳ ಸಮೂಹಕ್ಕೆ ಆವಾಸಸ್ಥಾನನಾದ ಭಗವಂತನು ಪರಮಾನಂದಸ್ವರೂಪನೂ, ಪರಮೈಶ್ವರ್ಯಸ್ವರೂಪನೂ, ಮುಕ್ತರಿಗೆ ಅವರಿಚ್ಛಿಸುವ ಆನಂದದ ಭೋಗವನ್ನು ಕೊಡುವವನೂ ಆಗಿದ್ದಾನೆ. ಇಂಥ ಭಗವಂತನಲ್ಲೇ ನೆಲೆಯಾಗಿ ನಿಂತ ಮನಸ್ಸುಳ್ಳ ಮುಕ್ತರಿಗೆ ಅಸಮತೆಯಿಂದ ಪರಸ್ಪರ ವಿರೋಧ ಹೇಗೆ ಸಾಧ್ಯ? ಎಂದು ತತ್ತ್ವಪ್ರದೀಪ ವಾಕ್ಯದ ಅರ್ಥ. ಇಲ್ಲಿ ಹೇಳಿರುವ ಭಗವಂತನ ಅನೇಕ ವಿಶೇಷಣಗಳನ್ನು 'ಅಕ್ಷರ' ಶಬ್ದವು ಸೂಚಿಸುವುದೆಂದು ಭಾವ.

नन्दतारतम्यश्रुतेः संसारिपरत्वशङ्कनात् तदुक्तमिति प्रमाणोक्तिः
॥ २० ॥

इयदामननाधिकरणम्--२१

॥ ॐ इयदामननात् ॐ ॥ ३.३.३५

अत्रोपासकानां प्राणावधित्वं साध्यते। आधिकारिकाणामित्यस्ति। इयदिति छन्दोगश्रुतिस्थं प्राणावधित्वं परामृशति।

आधिकारिकाणाम् उपासकानाम् इयत् प्राणावधित्वमेव। न तु प्राणादधिकोऽस्ति। कुतः? 'प्राणो वाव सर्वेभ्यो भूयान् न प्राणाद्भूयान्' इति श्रुतौ तथाऽऽमननादित्यर्थः।

---

ಎಂದು ಹೇಳಲಾಗಿದೆ. ಹಿಂದೆ ಮುಕ್ತರ ಆನಂದ ತಾರತಮ್ಯದಲ್ಲಿ ಪ್ರಮಾಣವೆಂದು ಹೇಳಲಾದ ಶ್ರುತಿಯು ಸಂಸಾರಿಪರವಾಗಿದೆ ಎಂದು ಶಂಕಿಸಿದ ಕಾರಣ 'ತದುಕ್ತಂ' ಎಂದು ತಾರತಮ್ಯೋಪೇತರಾದ ಮುಕ್ತರಲ್ಲಿ ವಿರೋಧವಿಲ್ಲವೆಂದು ಹೇಳುವ ಪ್ರಮಾಣ ವನ್ನು ಹೇಳಲಾಗಿದೆ.

ಇಯದಾಮನನಾಧಿಕರಣ—೨೧

ಓಂ ಇಯದಾಮನನಾತ್ ಓಂ ೩.೩.೩೫

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಉಪಾಸಕರಲ್ಲಿ ಪ್ರಾಣನೇ ಕೊನೆಯುವನೆಂದು ಸಮರ್ಥನ ಲಾಗುವುದು. 'ಆಧಿಕಾರಿಕಾಣಾಂ' ಎಂಬ ಪದವು ಅನುವೃತ್ತವಾಗುವುದು. ಸೂತ್ರ ದಲ್ಲಿರುವ 'ಇಯತ್' ಶಬ್ದವು ಛಾಂದೋಗ್ಯಶ್ರುತಿಯಲ್ಲಿ ಹೇಳುವ 'ಪ್ರಾಣನೇ ಕೊನೆಯುವನು' ಎಂಬ ವಿಷಯವನ್ನು ಹೇಳುವುದು.

ಆಧಿಕಾರಿಕಾಣಾಂ - ಉಪಾಸಕರಿಗೆ, ಇಯತ್ - ಪ್ರಾಣನೇ ಕೊನೆಯುವನಾ ಗಿರುವನು ಹೊರತು ಅವನಿಗಿಂತಲೂ ಉತ್ತಮರಾದ ಉಪಾಸಕರಿಲ್ಲ. ಏಕೆಂದರೆ, ಆಮನನಾತ್ - 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್, ನ ಪ್ರಾಣಾದ್ ಭೂಯಾನ್ (ಛಾಂ. ೭.೧೫.೧) ಎಂಬ ಶ್ರುತಿಯಲ್ಲಿ ಹಾಗೆ ಹೇಳುವುದರಿಂದ ಎಂದು ಅರ್ಥ.

उक्तमाक्षिप्याह—

॥ ॐ अन्तरा भूतग्रामवदिति चेत्तदुक्तम् ॐ ॥ ३.३.३६

दृष्टान्तबलात् प्राणः साधिकः अधिकारित्वादिति साध्यहेतू सम्बद्ध्येते। अक्षरमिति विभागेनान्वेति।

यथा भूतग्रामे नामवाङ्‌मनःसङ्कल्पचित्तध्यानविज्ञानबलान्ना-

---

ಉಕ್ತವಾದ ವಿಷಯವನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ —

**ಓಂ ಅಂತರಾ ಭೂತಗ್ರಾಮವದಿತಿ ಚೇತ್ ತದುಕ್ತಂ ಓಂ**
**೩.೩.೩೬**

**ಸೂತ್ರಾರ್ಥ**

**ಸೂತ್ರ**ದಲ್ಲಿ ಕೊಟ್ಟಿರುವ 'ಭೂತಗ್ರಾಮ' ದೃಷ್ಟಾಂತದ ಬಲದಿಂದ '**ಪ್ರಾಣಃ** ಸಾಧಿಕಃ ಅಧಿಕಾರಿತ್ವಾತ್' - 'ಪ್ರಾಣನು ತನಗಿಂತಲೂ ಉತ್ತಮನಾದ ಅಧಿಕಾರಿಯನ್ನು ಪಡೆದಿದ್ದಾನೆ, ಅಧಿಕಾರಿಯಾದುದರಿಂದ' ಎಂಬುದಾಗಿ ಸಾಧ್ಯಹೇತುಗಳು ಇಲ್ಲಿ ಸಂಬಂಧವನ್ನು ಪಡೆಯುವವು. 'ಅಕ್ಷರಧಿಯಾಂ' ಇತ್ಯಾದಿ ಹಿಂದಿನ **ಸೂತ್ರ**ದಿಂದ 'ಅಕ್ಷರ' ಪದವನ್ನು ವಿಭಜಿಸಿ 'ಅಕ್ಷರಂ' ಎಂಬುದಾಗಿ ಇಲ್ಲಿ ಅನುವೃತ್ತಿ **ಮಾಡಿ**ಕೊಳ್ಳಬೇಕು.

ಭೂತಗ್ರಾಮವತ್ – ಹೇಗೆ ಭೂತಗ್ರಾಮದಲ್ಲಿ ಅಂದರೆ [1]ನಾಮ, **ವಾಕ್**, ಮನಸ್ಸು, ಸಂಕಲ್ಪ, ಚಿತ್ತ, ಧ್ಯಾನ, ವಿಜ್ಞಾನ, ಬಲ, ಅನ್ನ, ಆಪ್, **ತೇಜಸ್ಸು**, ಆಕಾಶ, ಸ್ಮರ, ಆಶಾ ಮತ್ತು ಪ್ರಾಣ ಎಂಬ ಜೀವರ ಸಮೂಹದಲ್ಲಿ ಒಬ್ಬರಿಗಿಂತ ಒಬ್ಬರು ಉತ್ತಮರಾಗಿರುವುದು ಕಂಡುಬರುವುದೋ ಹಾಗೆ ಅಧಿಕಾರಿಯಾದುದರಿಂದ

---

1. ನಾಮಾದಿ ಶಬ್ದಗಳು ಕ್ರಮವಾಗಿ ಉಷಾ, ಸ್ವಾಹಾ, ಪರ್ಜನ್ಯ, **ಮಿತ್ರ**, **ಅಗ್ನಿ**, ವರುಣ, ಚಂದ್ರ, ಪ್ರದ್ಯುಮ್ನ, ಅನಿರುದ್ಧ, ಆಹಂಕಾರಿಕ ಪ್ರಾಣ, ಇಂದ್ರ, ಉಮಾ, **ರುದ್ರ**, **ವಾಣೀ** ಮತ್ತು ಮುಖ್ಯಪ್ರಾಣರನ್ನು ಹೇಳುವವು.

ष्ठेअआकाशस्मराशाप्राणसमूहे एकस्मादेकोऽधिको दृष्टः तथा अधि-कारित्वात् प्राणः अक्षरं ब्रह्म अन्तरा विना साधिकः स्यात्। ईशेन सिद्धसाधनतावारणाय अन्तरा ब्रह्मेत्युक्तम्। इति चेत्, नेत्यग्रेतन-माकृष्यते। कुतः? तदुक्तम्। तदिति तन्त्रम्। तत्र प्राणादधिका-भावे, तत् प्रमाणं 'प्राणो वा' इत्युक्तं यतोऽत इत्यर्थः। तच्छब्द-बाधितमनुमानमिति भावः। न च प्राणादधिकाभावे नामादिभ्योऽपि

ಪ್ರಾಣನೂ, ಅಕ್ಷರಂ ಅಂತರಾ - [1]ಪರಬ್ರಹ್ಮನನ್ನು ಬಿಟ್ಟು, ಸಾಧಿಕಃ - ತನಗಿಂತಲೂ ಉತ್ತಮನನ್ನು ಹೊಂದಿದ್ದಾನೆ. ಇಲ್ಲಿ 'ಪ್ರಾಣನು ತನಗಿಂತಲೂ ಉತ್ತಮರನ್ನು ಹೊಂದಿದ್ದಾನೆ' ಎಂದಿಷ್ಟೇ ಸಮರ್ಥಿಸಿದರೆ, ಪ್ರಾಣನಿಗಿಂತ ಉತ್ತಮನಾದ ಪರಮಾತ್ಮನನ್ನು ಅಂಗೀಕರಿಸಿರುವುದರಿಂದ ಸಿದ್ಧಸಾಧನತಾದೋಷ ಬರುವುದು. ಅದನ್ನು ನಿವಾರಿಸಲು 'ಅಂತರಾ' – '[1]ಪರಮಾತ್ಮನನ್ನು ಬಿಟ್ಟು' ಎಂದು ಹೇಳಲಾಗಿದೆ.

ಇತಿ ಚೇತ್, ನ - ಹೀಗೆ ಆಕ್ಷೇಪಿಸಿದರೆ ಅದು ಸರಿಯಲ್ಲ. ಇಲ್ಲಿ 'ನ' ಎಂಬ ಮುಂದಿನ ಸೂತ್ರದಲ್ಲಿರುವ ಪದವನ್ನು ಈ ಸೂತ್ರಕ್ಕೆ ತೆಗೆದುಕೊಳ್ಳಲಾಗಿದೆ. ಪರಮಾತ್ಮನನ್ನು ಬಿಟ್ಟು ಪ್ರಾಣನಿಗಿಂತ ಉತ್ತಮರು ಯಾರೂ ಇಲ್ಲ ಎಂಬ ವಿಷಯದಲ್ಲಿ ಪ್ರಮಾಣವೇನು ಎಂಬ ಶಂಕೆಗೆ ಉತ್ತರ – 'ತದುಕ್ತಂ' ಎಂದು. ಇಲ್ಲಿ 'ತತ್' ಪದವನ್ನು ಅನೇಕ ರೀತಿಯಿಂದ ಉಪಯೋಗವಾಗುವಂತೆ ಯೋಜಿಸಬೇಕು. ತತ್ - ಪ್ರಾಣನಿಗಿಂತ ಉತ್ತಮರಿಲ್ಲ ಎಂಬ ವಿಷಯದಲ್ಲಿ, ತತ್— ಆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ಪ್ರಮಾಣವು ಉಕ್ತಂ - ಯಾವ ಕಾರಣದಿಂದ ಹೇಳಲಾಗಿದೆಯೋ ಆದ್ದರಿಂದ ಎಂದು ಅರ್ಥ. ಪ್ರಾಣನಿಗಿಂತ ಉತ್ತಮ ಜೀವರಿರುವರು ಎಂದು ಸಾಧಿಸುವ ಅನುಮಾನವು ಆ ಶ್ರುತಿಯಿಂದ ಬಾಧಿತವಾಗುವುದೆಂದು ಭಾವ.

**'ತದುಕ್ತಂ' ಎಂಬ ಪದಕ್ಕೆ ವ್ಯಾಖ್ಯಾನಾಂತರ**

ಪ್ರಾಣನಿಗಿಂತ ಉತ್ತಮರಿಲ್ಲವಾದರೆ ನಾಮಾದಿಗಳಿಗಿಂತ ಉತ್ತಮ ಜೀವರೂ

1. ಪರಮಾತ್ಮ ಮತ್ತು ಲಕ್ಷ್ಮೀ ಇವರಿಬ್ಬರನ್ನು ಬಿಟ್ಟು ಎಂದು ತಾತ್ಪರ್ಯ.

स न स्यादिति वाच्यम् । कुतः ? तत् नामादिभ्यो वागादेरुत्तमत्वं, उक्तं वाग् वाव नाम्नो भूयसी' इत्यादीति वृत्त्यन्तरं तदुक्तमित्यस्य बोध्यम् ।

उक्तमाक्षिप्याह—

॥ ॐ अन्यथा भेदानुपपत्तिरिति चेन्नोपदेशवत् ॐ ॥
३.३.३७

अन्यथा प्राक् पूर्वपक्ष्युक्तादन्यथा प्राणादधिकाभावे अस्यैव सर्वोत्तमत्व इत्यर्थः । भेदानुपपत्तिः । प्रस्तुतब्रह्मणा प्राणस्य भेदः

---

ಇಲ್ಲವೆಂದು ಹೇಳಬಾಗುವುದಿಲ್ಲ. ಏಕೆಂದರೆ, ತತ್ - ನಾಮಾದಿಗಳಿಗಿಂತ ವಾಗಾದಿಗಳು ಉತ್ತಮರೆನ್ನುವುದು, ಉಕ್ತಂ – 'ವಾಗ್ ವಾವ ನಾಮ್ನೋ ಭೂಯಸೀ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟಿದೆ ಎಂಬ ಮತ್ತೊಂದು ರೀತಿಯ ವ್ಯಾಖ್ಯಾನವೂ 'ತದುಕ್ತಂ' ಎಂಬ ಪದಕ್ಕಿರುವುದೆಂದು ತಿಳಿಯಬೇಕು.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ —

ಓಂ ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನ ಉಪದೇಶವತ್
ಓಂ ೩.೩.೩೭

**ಸೂತ್ರಾರ್ಥ**

ಅನ್ಯಥಾ - ಹಿಂದೆ ಪೂರ್ವಪಕ್ಷಿ ಹೇಳಿರುವುದಕ್ಕಿಂತಲೂ ಬೇರೆಯಾಗಿ ಅಂದರೆ ಪ್ರಾಣನಿಗಿಂತ ಉತ್ತಮರಿಲ್ಲವೆಂದಾದರೆ, ಪ್ರಾಣನೇ ಸರ್ವೋತ್ತಮ ಎನ್ನುವುದಾದರೆ ಎಂದು ಅರ್ಥ. ಭೇದಾನುಪಪತ್ತಿಃ - ಪ್ರಸ್ತುತನಾದ ಪರಬ್ರಹ್ಮನಿಂದ ಪ್ರಾಣನಿಗಿರುವ, ಶ್ರುತ್ಯಾದಿಪ್ರಮಾಣಸಿದ್ಧವಾದ ಭೇದವು ಅಯುಕ್ತವಾದೀತು[1]. ಏಕೆಂದರೆ

---

1. 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ಶ್ರುತಿಯಲ್ಲಿ ಪ್ರಾಣನು ಸರ್ವೋತ್ತಮನೆಂದು ಹೇಳಲಾಗಿದೆ. ಪರಮಾತ್ಮನೂ ಪ್ರಾಣನಿಗಿಂತ ಶ್ರೇಷ್ಠನಲ್ಲವೆಂದು ಇದರರ್ಥವಾಗುವುದು- ಹೌದೆಂದು ಒಪ್ಪಿದರೆ ಇಬ್ಬರು ಸರ್ವೋತ್ತಮರನ್ನು ಅಂಗೀಕರಿಸಬೇಕಾಗುವುದು. ಇಬ್ಬರು ಸರ್ವೋತ್ತಮರು ಇರುವುದಂತೂ ಯುಕ್ತವಲ್ಲವಾದ್ದರಿಂದ ಪ್ರಾಣಬ್ರಹ್ಮರಿಗೆ ಅಭೇದವನ್ನೇ ಹೇಳಬೇಕಾಗುವುದು. ಪ್ರಾಣನಿಗಿರುವ ಸರ್ವೋತ್ತಮತ್ವವು ಸಂಕುಚಿತವಾದುದು ಎಂದು ನಿರ್ಧರಿಸಲು ಆಧಾರವಂತೂ ಇಲ್ಲ ಎಂಬು ಶಂಕೆಯ ಸಾರ.

श्रुत्यादिसिद्धः अयुक्तः स्यात् । द्वयोरसङ्कुचितसर्वोत्तमत्वायोगात् । सङ्कोचस्तु इयानित्यनिश्चित इति चेन्न। उपदेशवत् । यथोपदेशं सर्वेभ्यो भूयानिति सर्वशब्दसङ्कोचोपपत्तेरिति योज्यम् । अन्येभ्यः प्राणस्य ततो हरेराधिक्यस्य श्रुतावुक्तत्वादिति भावः । अन्तरेत्युक्ताववपि उक्तदिशा शङ्कोत्तरे युक्ते ॥ २१ ॥

### व्यतिहाराधिकरणम्—२२

॥ ॐ व्यतिहारो विशिंषति हीतरवत् ॐ ॥ ३.३.३८

---

ಪ್ರಾಣ ಮತ್ತು ಬ್ರಹ್ಮ - ಇಬ್ಬರಿಗೂ ಅಸಂಕುಚಿತವಾದ ಸರ್ವೋತ್ತಮತ್ವವು ಯುಕ್ತವಲ್ಲ. ಪ್ರಾಣನಿಗಿರುವ ಉತ್ತಮತ್ವವು ಇಷ್ಟೇ ಎಂದು ಅದರ ಸಂಕೋಚವು ನಿಶ್ಚಿತವಾಗಿಲ್ಲ, ಇತಿ ಚೇನ್ನ – ಹೀಗೆ ಹೇಳುವುದು ಸರಿಯಲ್ಲ. ಉಪದೇಶವತ್ – ಶ್ರುತಿಯಲ್ಲಿರುವ ಉಪದೇಶವನ್ನನುಸರಿಸಿ 'ಸರ್ವೇಭ್ಯೋ ಭೂಯಾನ್' ಎಂಬಲ್ಲಿರುವ ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಲು ಸಾಧ್ಯವಿರುವುದರಿಂದ, ಇಲ್ಲಿ 'ಸರ್ವ ಶಬ್ದಕ್ಕೆ ಸಂಕೋಚವನ್ನು ಮಾಡಲು ಸಾಧ್ಯವಿರುವುದರಿಂದ, ಎಂಬ ಪದಗಳನ್ನು ಯೋಜಿಸಬೇಕು. ಇತರ ಜೀವರಿಗಿಂತ ಪ್ರಾಣನಿಗೆ, ಪ್ರಾಣನಿಂದ ಹರಿಗೆ ಆಧಿಕ್ಯವಿದೆಯೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಎಂದು ಭಾವ.

ಹಿಂದಿನ ಸೂತ್ರದಲ್ಲಿ 'ಅಂತರಾ' ಎಂಬ ಪದದಿಂದ ಹರಿಯನ್ನು ಬಿಟ್ಟು ಉಳಿದವರಿಗಿಂತ ಪ್ರಾಣನು ಶ್ರೇಷ್ಠನೆಂದು ಹೇಳಿದ್ದರೂ ಇಲ್ಲಿ ಹೇಳಿರುವ ರೀತಿಯಿಂದ ಶಂಕಾ ಸಮಾಧಾನಗಳು ಯುಕ್ತವೇ ಆಗಿದೆ.

### ವ್ಯತಿಹಾರಾಧಿಕರಣ—೨೨

ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ ೩.೩.೩೮

अत्र प्राणादीशस्योत्तमत्वं साध्यते। प्रस्तुतं 'प्राणादुत्तमत्वं विष्णोः' इत्यन्वेति।

युक्तं प्राणात् सत्याख्यविष्णोरुत्तमत्वम्। तयोर्मध्ये प्रश्न-प्रतिवचनयोरश्रवणेऽपि व्यतिहारोऽध्याहारः कार्यः। कुतः? हि

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಖ್ಯಪ್ರಾಣನಿಗಿಂತ ಪರಮಾತ್ಮನು ಉತ್ತಮನೆಂದು ಸಾಧಿಸಲಾಗುವುದು. ಪ್ರಸ್ತುತವಾಗಿರುವ 'ಪ್ರಾಣಾತ್ ಉತ್ತಮತ್ವಂ ವಿಷ್ಣೋಃ' ಎಂಬ ಪದಗಳು ಇಲ್ಲಿ ಅನ್ವಿತವಾಗುತ್ತವೆ.

ಪ್ರಾಣಾತ್ ವಿಷ್ಣೋಃ ಉತ್ತಮತ್ವಂ ಯುಕ್ತಂ - ಪ್ರಾಣನಿಗಿಂತ ಸತ್ಯನಾಮಕನಾದ ವಿಷ್ಣುವಿಗೆ ಉತ್ತಮತ್ವವು ಯುಕ್ತವಾಗಿದೆ. [1]ಪ್ರಾಣ ಮತ್ತು ವಿಷ್ಣು ಇವ

---

1. ಛಾಂದೋಗ್ಯದ ಏಳನೆ ಅಧ್ಯಾಯದಲ್ಲಿ ಸನತ್ಕುಮಾರರು ನಾರದರಿಗೆ ನಾಮಾದ್ಯಭಿಮಾನಿ ದೇವತೆಗಳ ಮಹಿಮೆಯನ್ನೂ, ಅವರ ತಾರತಮ್ಯವನ್ನೂ ಉಪದೇಶಿಸಿದ್ದಾರೆ. ನಾಮಾಭಿಮಾನಿಯಾದ ಉಷೆಯನ್ನು ಉಪದೇಶಿಸಿದನಂತರ ನಾರದರು 'ಅಸ್ತಿ ಭಗವೋ ನಾಮ್ನೋ ಭೂಯಃ'--ನಾಮಾಭಿಮಾನಿನಿಗಿಂತ ಶ್ರೇಷ್ಠರಿರುವರೇನು ? ಎಂಬ ಪ್ರಶ್ನೆಯನ್ನೂ ಅದಕ್ಕುತ್ತರವಾಗಿ ಸನತ್ಕುಮಾರರು 'ನಾಮ್ನೋ ವಾವ ಭೂಯೋಽಸ್ತಿ'-- ನಾಮಾಭಿಮಾನಿನಿಗಿಂತ ಶ್ರೇಷ್ಠರಿರುವರೆಂದು ಹೇಳಿ ವಾಗಭಿಮಾನಿನಿಯಾದ ಸ್ವಾಹಾದೇವಿಯ ಮಹಿಮೆಯನ್ನು ಹೇಳುವರು. ಇದೇ ರೀತಿ ಪ್ರತಿಯೊಂದು ಸಲವೂ ನಾರದರ ಪ್ರಶ್ನೆಗೆ ಉತ್ತರವಾಗಿ ಮನಸ್ಸು, ಸಂಕಲ್ಪ, ಚಿತ್ತ, ಧ್ಯಾನ, ವಿಜ್ಞಾನ, ಬಲ, ಅನ್ನ, ಅಪ್, ತೇಜಸ್ಸು, ಆಕಾಶ, ಸ್ಮರ ಮತ್ತು ಇವುಗಳಿಗೆ ಕ್ರಮವಾಗಿ ಅಭಿಮಾನಿಗಳಾದ ಪರ್ಜನ್ಯ, ಮಿತ್ರ, ಅಗ್ನಿ, ವರುಣ, ಚಂದ್ರ, ಪ್ರವಹ, ಅನಿರುದ್ಧ, ಅಹಂಕಾರಿಕ ಪ್ರಾಣ, ಇಂದ್ರ, ಉಮಾ, ರುದ್ರ, ವಾಣೀ-- ಈ ದೇವತೆಗಳ ಮಹಿಮೆಯನ್ನೂ, ಆಧಿಕ್ಯವನ್ನೂ ಹೇಳಿದ್ದಾರೆ. ಇದಾದನಂತರ 'ಅಸ್ತಿ ಭಗವ ಆಶಾಯಾ ಭೂಯಃ ?' ಎಂಬ ಪ್ರಶ್ನೆಗೆ ಉತ್ತರವಾಗಿ ಮುಖ್ಯಪ್ರಾಣನ ಮಹಿಮೆಯನ್ನು ವಿವರಿಸಿದರು. ಮುಖ್ಯಪ್ರಾಣನ ಮಹಿಮೆಯನ್ನು ವಿವರಿಸಿದನಂತರ ಸನತ್ಕುಮಾರರು ನಾರದರಿಗೆ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' -- ಮುಖ್ಯಪ್ರಾಣನಿಗಿಂತ ಶ್ರೇಷ್ಠನಾದ ಸತ್ಯನಾಮಕನಾದ ವಿಷ್ಣುವನ್ನು ಉಪದೇಶಿಸುವವನು ಶ್ರೇಷ್ಠತತ್ತ್ವಬೋಧಕನಾಗಿದ್ದಾನೆ ಎಂದು ಹೇಳುವರು. ಇಲ್ಲಿ ಮುಖ್ಯಪ್ರಾಣನ ಮಹಿಮೆಯನ್ನು ವಿವರಿಸಿದನಂತರ ಮುಖ್ಯಪ್ರಾಣನಿಗಿಂತ ಅಧಿಕರಿರುವರೇನು ? ಎಂಬ ಪ್ರಶ್ನೆಯನ್ನು ಕೇಳಿಲ್ಲವಾದ್ದರಿಂದ 'ಏಷ ತು ವಾ' ಇತ್ಯಾದಿಯಾಗಿ ಮುಖ್ಯ

यस्मात् इतरवत् प्रश्नादिना नामादितो वागादिकमिव। तुशब्देन प्राणात् सत्यं विशिंषति व्यावर्तयंति छन्दोगाः 'एष तु वा अतिवदति यः सत्येनातिवदति' इति प्राणवादिनः सकाशात् सत्यातिवादिनं तुना विशिंषन्ति इत्यावृत्त्या योज्यम्। तेन प्राणात्सत्यान्यत्वज्ञानात् तदन्यथाऽनुपपत्त्या अध्याहारो ज्ञायत इत्यर्थः।

---

ರಿಬ್ಬರ ಮಧ್ಯೆ ಪ್ರಶ್ನೆ-ಉತ್ತರಗಳು ಶ್ರುತವಾಗಿಲ್ಲದಿದ್ದರೂ, ವ್ಯತಿಹಾರಃ – ಅಧ್ಯಾಹಾರವನ್ನು ಮಾಡಿಕೊಳ್ಳಬೇಕು. ಏಕೆಂದರೆ, ಹಿ - ಯಾವ ಕಾರಣದಿಂದ, ಇತರವತ್ – ಪ್ರಶ್ನೆ ಮೊದಲಾದವುಗಳ ಮೂಲಕ ನಾಮಾದಿಗಳಿಂದ ವಾಗಾದಿಗಳನ್ನು ಹೇಗೋ ಹಾಗೆ 'ತು' ಶಬ್ದದ ಮೂಲಕ ಪ್ರಾಣನಿಂದ ಸತ್ಯನನ್ನು ಛಂದೋಗರು, ವಿಶಿಂಷಂತಿ–ಪ್ರತ್ಯೇಕಿಸುತ್ತಾರೆ. 'ಏಷ ತು ವಾ ಅತಿವದತಿ ಯಃ ಸತ್ಯೇನ ಅತಿವದತಿ' ಎಂಬುದಾಗಿ ಪ್ರಾಣನನ್ನು ಉಪದೇಶಿಸುವವನಿಗಿಂತ ಸತ್ಯನಾಮಕ ಭಗವಂತನನ್ನು ಉತ್ತಮನೆಂದು ಉಪದೇಶಿಸುವವನನ್ನು 'ತು' ಶಬ್ದದಿಂದ ಛಂದೋಗರು, ವಿಶಿಂಷಂತಿ –ಪ್ರತ್ಯೇಕಿಸುತ್ತಾರೆ ಎಂದು ವಿಶಿಂಷಂತಿ ಎಂಬ ಪದವನ್ನು ಆವೃತ್ತಿ ಮಾಡಿಕೊಂಡು ಯೋಜಿಸಬೇಕು. ಹೀಗೆ ಪ್ರತ್ಯೇಕಿಸುವುದರಿಂದ ಪ್ರಾಣನಿಂದ ಸತ್ಯನು ಭಿನ್ನನೆಂದು ತಿಳಿದು ಅದು ಅನ್ಯಥಾ ಕೂಡುವುದಿಲ್ಲವಾದ್ದರಿಂದ ಪ್ರಾಣ ಮತ್ತು ವಿಷ್ಣುಗಳ ಮಧ್ಯೆ ಪ್ರಶ್ನೋತ್ತರಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ತಿಳಿಯುವುದು ಎಂದರ್ಥ.

---

ಪ್ರಾಣನ ವಿಷಯವನ್ನೇ ಸನತ್ಕುಮಾರರು ವಿವರಿಸುತ್ತಿರುವರೆಂದು ಶಂಕೆ. ಪ್ರಶ್ನೋತ್ತರವಾಕ್ಯಗಳು ಇಲ್ಲಿ ಅಶ್ರುತವಾಗಿದ್ದರೂ, ಹಿಂದೆ ಬಂದ ಪ್ರಶ್ನೋತ್ತರಗಳು ನಾಮಪ್ರಕರಣ, ವಾಕ್ ಪ್ರಕರಣ ಮೊದಲಾದವುಗಳು ಬೇರೆ ಬೇರೆ ಪ್ರಕರಣಗಳೆಂದು ತಿಳಿಸುವಂತೆ 'ಏಷ ತು ವಾ' ಎಂಬಲ್ಲಿರುವ 'ತು' ಶಬ್ದವು 'ಸತ್ಯ'ನನ್ನು ಹೇಳುವ ಪ್ರಕರಣವು ಮುಖ್ಯಪ್ರಾಣನ ಪ್ರಕರಣಕ್ಕಿಂತ ಭಿನ್ನವೆಂದು ಸೂಚಿಸುವುದು. ಅಂತೆಯೇ 'ತು' ಶಬ್ದವು ಮುಖ್ಯಪ್ರಾಣನಿಗಿಂತ ಸತ್ಯನು ಭಿನ್ನನೆಂದು ಸೂಚಿಸುವ ಮೂಲಕ 'ಮುಖ್ಯಪ್ರಾಣನಿಗಿಂತ ಶ್ರೇಷ್ಠರಿರುವರೇನು ?' ಎಂಬ ಪ್ರಶ್ನೆಯನ್ನೂ ಸತ್ಯನಾಮಕನಾದ ವಿಷ್ಣುವು ಮುಖ್ಯಪ್ರಾಣನಿಗಿಂತ ಶ್ರೇಷ್ಠನೆಂಬ ಉತ್ತರವನ್ನೂ ಅಧ್ಯಾಹಾರ ಮಾಡಿಕೊಳ್ಳಬೇಕೆಂದೂ ಸೂಚಿಸುವುದು. ಆದ್ದರಿಂದ ಮುಖ್ಯಪ್ರಾಣನಿಗಿಂತ ಸತ್ಯನಾಮಕ ಭಗವಂತನು ಅಧಿಕನೆಂದು ಸಿದ್ಧವಾಗುವುದೆಂದು ಒಟ್ಟು ತಾತ್ಪರ್ಯ.

व्यतीत्युक्तिः विशेषेणातिक्रान्तस्य विशिष्यात्राश्रुतस्य हारः पूर्वप्रकरणादाहरणमिति वा, विशिष्यातिशयितार्थकस्य प्राणादधिकार्थकवाक्यस्याहरणमिति वा द्योतयितुमित्याहुः । कथं विशेषणस्य पूर्वप्रकरणभेदकतेत्यतो दृष्टान्तोक्तिः । नामाद्याधिक्यवाचित्वात् प्रश्नादेर्यथा भेदकता तथा तोरप्याधिक्यवाचित्वादिति ॥ २२ ॥

सत्याधिकरणम्—२३

॥ ॐ सैव हि सत्यादयः ॐ ॥ ३.३.३९

---

**'ವ್ಯತಿಹಾರಃ' ಪದಪ್ರಯೋಗದ ಮತ್ತು 'ಇತರವತ್' ಎಂದು ದೃಷ್ಟಾಂತವನ್ನು ಕೊಟ್ಟಿರುವುದರ ಪ್ರಯೋಜನ**

'ವ್ಯತಿ' ಎಂದು ಹೇಳಿರುವುದು ವಿಶೇಷವಾಗಿ ಅತಿಕ್ರಾಂತವಾದ ಅಂದರೆ ಪ್ರತ್ಯೇಕವಾಗಿ ಈ ಭಾಗದಲ್ಲಿ ಅಶ್ರುತವಾಗಿರುವ ಪ್ರಶ್ನೆ ಮತ್ತು ಉತ್ತರಗಳನ್ನು, ಹಾರ ಅಂದರೆ ಹಿಂದಿನ ಪ್ರಕರಣದಿಂದ ತರುವುದು ಎಂದಾಗಲೀ ಅಥವಾ ಪ್ರತ್ಯೇಕವಾಗಿ, ಅತಿಶಯಿತಾರ್ಥಕವಾದ ಅಂದರೆ ಪ್ರಾಣನಿಗಿಂತ ಶ್ರೀಹರಿ ಅಧಿಕನೆಂಬ ಅರ್ಥವನ್ನು ಕೊಡುವ ವಾಕ್ಯವನ್ನು ಈ ಪ್ರಕರಣಕ್ಕೆ ತರುವುದು ಎಂದಾಗಲಿ ಸೂಚಿಸುವುದಕ್ಕೋಸ್ಕರವೆಂದು ಹೇಳುವರು.

'ತು' ಎಂಬ ವಿಶೇಷಣವು ಪೂರ್ವಪ್ರಕರಣಕ್ಕಿಂತ ಈ ಪ್ರಕರಣ ಭಿನ್ನವೆಂದು ಹೇಗೆ ತಿಳಿಸುವುದು ಎಂಬ ಶಂಕೆಗೆ ಉತ್ತರವಾಗಿ 'ಇತರವತ್' ಎಂದು ದೃಷ್ಟಾಂತವನ್ನು ಹೇಳಲಾಗಿದೆ. ನಾಮಾದಿಗಳಿಗಿಂತ ವಾಗಾದಿಗಳಿಗೆ ಆಧಿಕ್ಯವನ್ನು ಹೇಳುವ ಕಾರಣ ಪ್ರಶ್ನೋತ್ತರಗಳು ಹೇಗೆ ಪ್ರಕರಣಭೇದವನ್ನು ತಿಳಿಸುವವೋ ಹಾಗೆ 'ತು' ಶಬ್ದವೂ ಸತ್ಯನಾಮಕ ವಿಷ್ಣುವಿಗೆ ಪ್ರಾಣನಿಗಿಂತ ಆಧಿಕ್ಯವನ್ನು ಹೇಳುವ ಕಾರಣ ಪ್ರಕರಣಭೇದವನ್ನು ಸೂಚಿಸುವುದು.

ಸತ್ಯಾಧಿಕರಣ—೨೩

ಓಂ ಸೈವ ಹಿ ಸತ್ಯಾದಯಃ ಓಂ ೩.೩.೩೯

अत्र प्राणादीशस्यैवोत्तमत्वं साध्यते। हिर्हेतौ। प्राणाद्विष्णो-रेवोत्तमत्वमित्यन्वेति। न तु बहूनाम्। कुतः? हि-यस्मात् सत्यादयः सत्यविज्ञानमतिश्रद्धानिष्ठाकृतिसुखभूमाहमात्मनः प्राणादूर्ध्वमाम्नाताः सैव प्रकृतेशाख्या परदेवतैवात इत्यर्थः।

सेति कृतिनिष्ठाद्यनुरोधेन स्त्रीलिङ्गोक्तिः। स्त्रीलिङ्गानां बहुत्वात्।

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಪ್ರಾಣನಿಗಿಂತ ಭಗವಂತನಿಗೆ ಶ್ರೇಷ್ಠತ್ವವೆಂದು ಸಮರ್ಥಿಸಲಾಗುವುದು. 'ಹಿ' ಎಂಬ ಸೂತ್ರದಲ್ಲಿರುವ ಶಬ್ದವು ಹೇತು ಎಂಬ ಅರ್ಥವನ್ನು ಹೊಂದಿದೆ. 'ಪ್ರಾಣಾದ್ ವಿಷ್ಣೋರೇವ ಉತ್ತಮತ್ವಂ' ಎಂಬ ಪದಗಳು ಇಲ್ಲಿ ಅನ್ವಿತವಾಗುವವು.

ಪ್ರಾಣನಿಗಿಂತ ವಿಷ್ಣುವಿಗೆ ಮಾತ್ರ ಉತ್ತಮತ್ವವಿರುವುದೇ ಹೊರತು ಅನೇಕರಿಗಿಲ್ಲ. ಏಕೆಂದರೆ, ಹಿ– ಯಾವ ಕಾರಣದಿಂದ, ಸತ್ಯಾದಯಃ– ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಸುಖ, ಭೂಮಾ, ಅಹಂ ಮತ್ತು ಆತ್ಮಾ ಎಂಬ ಪ್ರಾಣನಿಗೂ ಮುಂದೆ ಉಪನಿಷತ್ತಿನಲ್ಲಿ ಹೇಳಲಾಗಿರುವವರು, ಸೈವ - ಪ್ರಸ್ತುತನಾಗಿರುವ ಈಶನೆಂಬ ಪರದೇವತೆಯೇ ಹೊರತು ಬೇರೆಯುವರಲ್ಲವೋ ಆದ್ದರಿಂದ ಎಂದು ಅರ್ಥ.

**'ಸಾ' ಎಂದು ಸೂತ್ರದಲ್ಲಿ ಸ್ತ್ರೀಲಿಂಗಪ್ರಯೋಗಕ್ಕೆ ಕಾರಣ**

ಶ್ರುತಿಯುಲ್ಲಿರುವ 'ಕೃತಿ', 'ನಿಷ್ಠಾ' ಮೊದಲಾದ ಪದಗಳನ್ನನುಸರಿಸಿ ಸೂತ್ರದಲ್ಲಿ 'ಸಾ' ಎಂದು ಸ್ತ್ರೀಲಿಂಗವನ್ನೇ ಹೇಳಲಾಗಿದೆ. ಇತರ ಲಿಂಗದ ಪದಗಳಿದ್ದರೂ ಸ್ತ್ರೀಲಿಂಗದ ಪದಗಳೇ ಬಹುವಾಗಿರುವುದರಿಂದ ಸ್ತ್ರೀಲಿಂಗವನ್ನೇ ಪ್ರಯೋಗಿಸಲಾಗಿದೆ. ಇದರಿಂದ, ಪ್ರಕೃತ್ಯಧಿಕರಣ (ಬ್ರ ಸೂ. ೧.೪.೬) ದಲ್ಲಿ ಭಗವಂತನಿಗೆ ಸ್ತ್ರೀತ್ವವೂ ಇರುವುದೆಂದು ಹೇಳಿರುವುದನ್ನು ಜ್ಞಾಪಿಸಿದಂತಾಯಿತೆಂದು ತಿಳಿಯುಬೇಕು.

तेन प्रकृतिनयोक्तस्त्रीत्वं स्मारितं ध्येयम् । नामादिप्राणपर्यन्तादित्यादि स्मृतिप्रसिद्धिद्योतको वा हिशब्दः ॥ २३ ॥

कामाधिकरणम्—२४

॥ ॐ कामादितरत्र तत्र चायतनादिभ्यः ॐ ॥ ३.३.४०

अत्र उपास्तौ श्रियोऽनधिकारः साध्यते । कामादित्यावृत्तिः । एवार्थे समुच्चये वा चः । प्राणविष्णुप्रसङ्गसन्निधापिता श्रीरन्वेति ।

---

[1]ಅಥವಾ, ಪ್ರಾಣನಿಗಿಂತ ವಿಷ್ಣುವಿಗೆ ಉತ್ತಮತ್ವವೆಂಬ ವಿಷಯವು [2]'ನಾಮಾದಿಪ್ರಾಣಪರ್ಯಂತಾತ್' ಇತ್ಯಾದಿ ಸ್ಮೃತಿ ಪ್ರಸಿದ್ಧವಾದುದು ಎಂದು 'ಹಿ' ಶಬ್ದವು ಸೂಚಿಸುವುದು.

ಕಾಮಾಧಿಕರಣ—೨೪

## ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ ೩.೩.೪೦

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಲಕ್ಷ್ಮಿಗೆ ಉಪಾಸನಾಧಿಕಾರವಿಲ್ಲವೆಂದು ಸಮರ್ಥಿಸಲಾಗುವುದು. ಸೂತ್ರದಲ್ಲಿರುವ 'ಕಾಮಾತ್' ಎಂಬ ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. 'ಚ' ಶಬ್ದವು ಏವಕಾರದ ಅರ್ಥವನ್ನು ಅಥವಾ ಸಮುಚ್ಚಯವನ್ನು ಹೇಳುವುದು. ಪ್ರಾಣ-ವಿಷ್ಣು ಇವರ ಪ್ರಸಂಗವಾದುದರಿಂದ ಉಪಸ್ಥಿತವಾಗುವ 'ಶ್ರೀಃ' ಎಂಬ ಪದವು ಅನ್ವಿತವಾಗುವುದು.

---

1. 'ಹಿ' ಶಬ್ದವು ಹೇತ್ವರ್ಥಕವಾಗಿದೆ ಎಂದು ಹಿಂದೆ ಹೇಳಲಾಗಿತ್ತು. ಈಗ ಪ್ರಸಿದ್ಧ್ಯರ್ಥಕವಾದುದು ಎಂದು ಅರ್ಥಾಂತರವನ್ನು ಹೇಳಲಾಗುವುದೆಂದು ಭಾವ.

2. "ನಾಮಾದಿಪ್ರಾಣಪರ್ಯಂತಾತ್ ಯೋ ಹಿ ಸತ್ಯಾದಿರೂಪವಾನ್ ।
ತಸ್ಮೈ ನಮೋ ಭಗವತೇ ವಿಷ್ಣವೇ ಸರ್ವಜಿಷ್ಣವೇ ॥"
ಎಂಬ ಬ್ರಹ್ಮತರ್ಕವಚನ.

कामः इच्छा। कामात् कामाधीनात् कामादेव ईशेच्छानुसारिस्वेच्छयैव, न कर्मतः श्रीः तत्र ईशसमीपे मूलरूपेण स्थिता इतरत्र च भूम्यादौ अवतरतीति शेषः। कुतः? आयतनादिभ्यः। अनेन आयतनादिबोधकश्रुतिर्गृह्यते। 'सर्वायतना सर्वकाला सर्वेच्छा' इति सर्वम् आयतनं यस्या इत्यादिव्युत्पत्त्या सर्वगतत्वादिबोधकश्रुत्यादेरित्यर्थः।

---

ಕಾಮ ಎಂದರೆ ಇಚ್ಛೆ. ಕಾಮಾತ್ - ಇಚ್ಛೆಗೆ ಅಧೀನವಾದ, ಕಾಮಾದೇವ- ಇಚ್ಛೆಯಿಂದಲೇ ಅಂದರೆ ಭಗವದಿಚ್ಛಾನುಸಾರಿಯಾದ ಸ್ವಂತ ಇಚ್ಛೆಯಿಂದಲೇ ಹೊರತು ಕರ್ಮದಿಂದಲ್ಲ, ಶ್ರೀಃ – ಲಕ್ಷ್ಮಿಯು, ತತ್ರ – ಭಗವಂತನ ಸಮೀಪದಲ್ಲಿ ಮೂಲರೂಪದಿಂದಿದ್ದು. ಇತರತ್ರ ಚ - ಭೂಮಿ ಮೊದಲಾದವುಗಳಲ್ಲೂ ಅವತರತಿ - ಅವತರಿಸುವಳು, ಇಲ್ಲಿ 'ಅವತರತಿ' ಎಂಬ ಪದವು ಶೇಷಪೂರಣವಾಗಿದೆ.

ಏಕೆಂದರೆ, ಆಯತನಾದಿಭ್ಯಃ – 'ಆಯತನಾದಿ' ಎಂಬ ಪದದಿಂದ ಆಯತನಾದಿಗಳನ್ನು ಬೋಧಿಸುವ ಶ್ರುತಿಯನ್ನು ಇಲ್ಲಿ ಗ್ರಹಿಸಬೇಕು. '[1]ಸರ್ವಾಯತನಾ ಸರ್ವಕಲಾ ಸರ್ವೇಚ್ಛಾ' ಎಂಬ, ಸರ್ವವೂ ಆಯತನ ಅಂದರೆ ಆಶ್ರಯವಾಗುಳ್ಳವಳು ಎಂಬ ವಿವರಣೆಯಂತೆ ಸರ್ವಗತತ್ವ ಮೊದಲಾದವುಗಳನ್ನು ಬೋಧಿಸುವ ಶ್ರುತಿ ಮೊದಲಾದವುಗಳಿಂದ ಎಂದು ಅರ್ಥ. ಲಕ್ಷ್ಮಿಯು ಅವತರಿಸುವಳೆಂದು ಹೇಳಿರುವ

---

1. 'ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ ಸರ್ವಜ್ಞಾ ನ ಬದ್ಧಾ ಬಂಧಿಕಾ ಸೈಷಾ ಪ್ರಕೃತಿರವಿಕೃತಿಃ' ಎಂದು ವತ್ಸಶ್ರುತಿ. ಸಮಸ್ತಜಗತ್ತನ್ನು ವ್ಯಾಪಿಸಿರುವ, ಸರ್ವಕಾಲದಲ್ಲೂ ಇರುವ ಆ ಲಕ್ಷ್ಮೀದೇವಿಯ ಇಚ್ಛೆಗೆ ಎಲ್ಲವೂ ಅಧೀನವಾಗಿದೆ. ಸರ್ವಜ್ಞಳಾದ ಆ ಚಿತ್ಪ್ರಕೃತಿಯು ಎಂದೂ ಬದ್ಧಳಲ್ಲ, ಆದರೆ ಎಲ್ಲ ಜೀವರಿಗೂ ಬಂಧಕಳು, ಮತ್ತು ವಿಕಾರರಹಿತಳು ಎಂದು ಶ್ರುತಿಯ ಭಾವ.

'ಸರ್ವಕಾಲಾ' ಎಂಬ ಪದದ ನಂತರ 'ಸರ್ವಾವಸ್ಥಾ' ಎಂಬ ಪದವಿರುವ ಪಾಠವೂ ಇದೆ. ಎಲ್ಲ ಜೀವರ ಜಾಗ್ರದಾದ್ಯವಸ್ಥಾಪ್ರೇರಕಳೆಂದು ಆ ಪದದ ಅರ್ಥವಾಗಿದೆ.

अवतारोक्त्या जन्मादेराविर्भावादित्वेन बन्धाहेतुत्वेन अबद्धत्वात् तस्याः नोपासनाधिकारित्वमिति सूचितम्। जन्माद्येव किं नेत्यतः तत्रेत्युक्तिः। तत्र तथास्थितत्वेऽपि इन्द्रादिवत् जन्मैव स्यादित्यतः कामादेवेत्युक्तिः। तर्हि ईशवत् स्वातन्त्र्येण किम्? इत्यतः आद्या कामादित्युक्तिः। इतरत्र चेत्युक्त्यैवावतरतीति लाभात् तस्यापि सार्थक्यम्। तत्र तथास्थितैव अन्यत्रेच्छयाऽवतरतीत्येतत्सर्व-

ರಿಂದ ಅವಳಿಗೆ ಜನ್ಮ ಮೊದಲಾದವು ಆವಿರ್ಭಾವ ಮೊದಲಾದುವೇ ಆಗಿವೆ, ಇಂತಹ ಜನ್ಮಾದಿಗಳು ಸಂಸಾರಬಂಧಕ್ಕೆ ಕಾರಣವಲ್ಲವಾದ್ದರಿಂದ ಅಬದ್ಧಳಾದ ಲಕ್ಷ್ಮಿಗೆ ಉಪಾಸನಾಧಿಕಾರವಿಲ್ಲವೆಂದು ಸೂಚಿತವಾಗುವುದು.

**ಸೂತ್ರದ ಪದಗಳ ಸಾರ್ಥಕತೆ :**

ಲಕ್ಷ್ಮಿಗೆ ಜನನ ಮೊದಲಾದವುಗಳು ಏಕಿಲ್ಲವೆಂಬ ಪ್ರಶ್ನೆಗೆ ಉತ್ತರವಾಗಿ 'ತತ್ರ'[1] ಎಂದು ಹೇಳಲಾಗಿದೆ. ಭಗವಂತನ ಸಮೀಪದಲ್ಲಿ ಮೂಲರೂಪದಿಂದಿದ್ದರೂ, ಮೂಲರೂಪದಿಂದ ಒಂದೆಡೆ ಇರುವ ಇಂದ್ರಾದಿಗಳು ಜನ್ಮಾದಿಗಳನ್ನು ಹೊಂದುವಂತೆ ಲಕ್ಷ್ಮೀದೇವಿಗೂ ಜನನವೇ ಇರಲಿ ಎಂಬ ಶಂಕೆಗೆ ಸಮಾಧಾನವಾಗಿ 'ಕಾಮಾತ್' ಎಂದು ಹೇಳಲಾಗಿದೆ[2]. ಹಾಗಾದರೆ ಭಗವಂತನಂತೆ ಸ್ವಾತಂತ್ರ್ಯವಿರುವ ಕಾರಣ ಜನ್ಮಾದಿಗಳಿಲ್ಲವೆಂದು ಸ್ವಾರಸ್ಯವೇ ಎಂಬ ಸಂದೇಹಕ್ಕೆ ಉತ್ತರವಾಗಿ ಮೊದಲನೆಯ 'ಕಾಮಾತ್' ಎಂಬ ಪದವನ್ನು ಹೇಳಲಾಗಿದೆ. 'ಇತರತ್ರ ಚ' – ಭೂಮಿ ಮೊದಲಾದ ಬೇರೆಡೆಯಲ್ಲಿಯೂ ಇರುವಳು ಎಂದು ಹೇಳುವುದರಿಂದ ಲಕ್ಷ್ಮಿಯು ಅವತರಿಸುವಳೆಂದು ತಿಳಿಯುವುದರಿಂದ 'ಇತರತ್ರ' ಎಂಬ ಪದವೂ ಇಲ್ಲಿ ಸಾರ್ಥಕವಾಗಿದೆ.

1. ಭಗವಂತನ ಸಮೀಪದಲ್ಲಿ ಮೂಲರೂಪದಿಂದ ಸರ್ವದಾ ಇರುವ ಕಾರಣ ಜನನಾದಿಗಳಿಲ್ಲವೆಂದು ಸೂಚಿತವಾಗುವುದೆಂದು ಭಾವ.

2. ಇಂದ್ರಾದಿ ದೇವತೆಗಳು ಕರ್ಮಾಧೀನರಾಗಿ ಜನ್ಮಾದಿಗಳನ್ನು ಪಡೆಯುವರು. ಸ್ವಂತ ಇಚ್ಛಾಧೀನವಾಗಿ ಅವತರಿಸುವ ಲಕ್ಷ್ಮಿಗೆ ಜನ್ಮಾದಿಗಳಿಲ್ಲವೆಂದು ಭಾವ.

गतत्वादिवाचिश्रुतिसिद्धमिति वक्तुम् आयतनेत्याद्यप्यर्थवत् । अवतरतीत्युक्त्या अबद्धत्वस्य कामाधीनकामादेवेति पारतन्त्र्योक्त्या अमोचकत्वस्य च लाभेन प्राणसत्ययोर्मध्ये श्रीतत्त्वानुक्तिगतिरपि सूचिता । नामादयस्तु बद्धत्वादित्यादेः ।

---

'ಭಗವಂತನ ಸಮೀಪದಲ್ಲಿ ಮೂಲರೂಪದಲ್ಲಿ ಇದ್ದಂತೆಯೇ ಬೇರೆಡೆಯಲ್ಲಿ ತನ್ನ ಇಚ್ಛೆಗನುಸಾರವಾಗಿ ಅವತರಿಸುವಳು[1]' ಎಂಬ ಪ್ರಮೇಯವು ಲಕ್ಷ್ಮೀದೇವಿಗೆ ಸರ್ವಗತತ್ವ ಮೊದಲಾದವುಗಳನ್ನು ಹೇಳುವ ಶ್ರುತಿಯಿಂದ ಸಿದ್ಧವಾಗಿದೆ ಎಂದು ಹೇಳುವ ಸಲುವಾಗಿ 'ಆಯತನ' ಇತ್ಯಾದಿ ಪದವೂ ಸೂತ್ರದಲ್ಲಿ ಸಪ್ರಯೋಜನವಾಗಿದೆ. 'ಲಕ್ಷ್ಮಿಯು ಅವತರಿಸುವಳು' ಎಂದು ಹೇಳಿದುದರಿಂದ ಅವಳು ಬಂಧನರಹಿತಳೆಂದೂ ಹೇಳಿದಂತಾಗುವುದರಿಂದ ಅವಳು ಮೋಚಕಳಲ್ಲವೆಂದು ಲಭಿಸುವುದು. ಆದ್ದರಿಂದಲೇ ಶ್ರುತಿಯಲ್ಲಿ ಸತ್ಯ ಮತ್ತು ಪ್ರಾಣರ ಮಧ್ಯೆ ಶ್ರೀತತ್ತ್ವವನ್ನು ಹೇಳದಿರುವುದಕ್ಕೆ ಕಾರಣವು ಸೂಚಿತವಾಗುವುದು. '[2]ನಾಮಾದಯಸ್ತು ಬದ್ಧತ್ವಾತ್' ಇತ್ಯಾದಿ ಪ್ರಮಾಣದಿಂದಲೂ ಈ ಅಂಶವು ಸಿದ್ಧವಾಗಿದೆ.

---

1. ಭಗವಂತನ ಸಮೀಪ ಸರ್ವದಾ ಮೂಲರೂಪದಿಂದಿರುವ ಲಕ್ಷ್ಮಿಯು ಬೇರೆಡೆಯಲ್ಲಿ ಇರುವುದೆಂದರೆ ಅವತರಿಸುವುದೆಂದೇ ಅಭಿಪ್ರಾಯವಾಗುವುದು.

2. ನಾಮಾದಯಸ್ತು ಬದ್ಧತ್ವಾತ್ ಮೋಚಕತ್ವಾತ್ ಪರೇಽಪಿ ಚ ।
ಉಭಯೋರಪ್ಯಭಾವೇನ ಯಥಾಽವ್ಯಕ್ತಂ ನ ಚೋದಿತಮ್ ॥
ಶ್ರುತೌ ತಥಾ ಜೀವಪರಾವುಚ್ಯೇತೇ ಕಿಂಚನೇತರತ್ ।
ನೋಚ್ಯತೇ ಚ ತದಾ ತತ್ತ್ವ ಸ್ವಯಂ ಕಿಂಚನೇತರತ್ ॥'

ಎಂದು ಬ್ರಹ್ಮತರ್ಕವಚನ.

ಲಕ್ಷ್ಮಿಯು ಸಂಸಾರಿಯಲ್ಲವಾದ್ದರಿಂದ ಉಪಾಸನೆಗೆ ಅಧಿಕಾರಿಯಲ್ಲದಿದ್ದರೂ ಛಾಂದೋಗ್ಯೋಪನಿಷತ್ತಿನಲ್ಲಿ ದೇವತಾತಾರತಮ್ಯವನ್ನು ಹೇಳುವಾಗ ನಾಮಾಭಿಮಾನಿ ದೇವತೆಯನ್ನಾರಂಭಿಸಿ ಮುಖ್ಯಪ್ರಾಣನವರೆಗೆ ಮಾತ್ರ ತಾರತಮ್ಯವನ್ನು ಹೇಳಿರುವುದೇಕೆ? ಪ್ರಾಣನಿಗಿಂತ ಉತ್ತಮಳಾದ ಆದರೆ ಸತ್ಯಾದಿನಾಮಕನಾದ ಭಗವಂತನಿಗಿಂತ ಅಧಮಳಾದ ಲಕ್ಷ್ಮಿಯನ್ನು ಪ್ರಾಣನ ಅನಂತರ ಹೇಳಬೇಕಾಗಿತ್ತಲ್ಲವೆ? ಎಂಬ ಪ್ರಶ್ನೆಗೆ ಉತ್ತರವಾಗಿ ಸೂತ್ರದ 'ಚ' ಶಬ್ದವು ಸೂಚಿಸುವ ಮೇಲಿನ ಸ್ಮೃತಿ ವಾಕ್ಯವನ್ನು ಭಾಷ್ಯಕಾರರು ಉದಾಹರಿಸಿದ್ದಾರೆ. ಈ ವಾಕ್ಯದ ಭಾವ ಹೀಗಿದೆ--

कथं तर्हि 'यदर्चितं ब्रह्मभवादिभिः सुरैः श्रिया च' इत्युक्तोपासना तस्या इत्यत आह—

॥ ॐ आदरादलोपः ॐ ॥ ३.३.४१

श्रिय इत्यनुवर्तनीयम्। श्रियो भगवदुपास्तिलोपाभावः आदरात् निरुपाधिकभक्त्यतिशयात्, न तु बद्धत्वादित्यर्थः ।

---

ಲಕ್ಷ್ಮೀದೇವಿಗೆ ಉಪಾಸನಾಧಿಕಾರವಿಲ್ಲದಿದ್ದಲ್ಲಿ 'ಯದರ್ಚಿತಂ ಬ್ರಹ್ಮಭವಾದಿಭಿಃ ಸುರೈಃ ಶ್ರಿಯಾ ಚ[1]' ಎಂಬ ವಚನದಲ್ಲಿ ಅವಳಿಗೂ ಉಪಾಸನೆಯನ್ನು ಹೇಳಿರುವುದು ಹೇಗೆ ಯುಕ್ತವಾಗುವುದು ಎಂಬ ಶಂಕೆಗೆ ಉತ್ತರ —

ಓಂ ಆದರಾದಲೋಪಃ ಓಂ ೩.೩.೪೧

**ಸೂತ್ರಾರ್ಥ**

'ಶ್ರಿಯಃ' ಎಂಬ ಪದವನ್ನು ಇಲ್ಲಿ ಅನುವೃತ್ತಿಮಾಡಿಕೊಳ್ಳಬೇಕು. ಶ್ರಿಯಃ - ಲಕ್ಷ್ಮೀದೇವಿಗೆ, ಅಲೋಪಃ - ಭಗವದುಪಾಸನೆಯು ಲೋಪವಿಲ್ಲದಿರುವುದು,

---

ಛಾಂದೋಗ್ಯದಲ್ಲಿ, ಬದ್ಧರಾದ ಕಾರಣ ನಾವು, ವಾಗಾದ್ಯಭಿಮಾನಿ ದೇವತೆಗಳನ್ನು ಹೇಳಲಾಗಿದೆ. ಮೋಚಕನಾದ ಕಾರಣ ಪರಮಾತ್ಮನನ್ನು ಕೊನೆಗೆ ಹೇಳಲಾಗಿದೆ. ಶ್ರೀತತ್ತ್ವವು ಬದ್ಧ-ಮೋಚಕ ಎರಡೂ ಆಗದಿರುವುದರಿಂದ ದೇವತಾತಾರತಮ್ಯದ ಪಟ್ಟಿಯಲ್ಲಿ ಶ್ರೀತತ್ತ್ವವನ್ನು ಸೇರಿಸಿಲ್ಲ. ಅದರಂತೆ, 'ದ್ವಾಸುಪರ್ಣಾ' ಇತ್ಯಾದಿ ಶ್ರುತಿಯಲ್ಲೂ 'ಸ್ವಾದ್ವತ್ತಿ' ಎಂಬ ಪದಗಳ ಮೂಲಕ ಕರ್ಮಬದ್ಧನಾದ ಜೀವನನ್ನೂ, ಜೀವನಿಗೆ ಮೋಚಕನಾದುದರಿಂದ ಸಖನಾಗಿರುವ ಪರಮಾತ್ಮನನ್ನೂ 'ಅನಶ್ನನ್ ಅನ್ಯಃ' ಎಂಬ ಪದಗಳಿಂದ ಹೇಳಲಾಗಿದೆ. ಬದ್ಧರಾಗಲೀ ಮೋಚಕರಾಗಲೀ ಅಲ್ಲದ ಯಾವನ್ನೂ ಈ ಶ್ರುತಿಯಲ್ಲಿ ಹೇಳಿಲ್ಲ--ಎಂದು.

'ದ್ವಾಸುಪರ್ಣಾ' ಇತ್ಯಾದಿ ಶ್ರುತಿಯಲ್ಲಿ ಜೀವ-ಪರಮಾತ್ಮರನ್ನು ಮಾತ್ರ ಹೇಳಿ ಲಕ್ಷ್ಮಿಯನ್ನು ಬಿಟ್ಟಿರುವುದಕ್ಕೆ ಕಾರಣವನ್ನು ಹೇಳುವ ಈ ಸ್ಮೃತಿವಾಕ್ಯವು ದೃಷ್ಟಾಂತವಾಗಿ ಛಾಂದೋಗ್ಯಶ್ರುತಿಯನ್ನು ಉಲ್ಲೇಖಿಸುವುದರಿಂದ ದೇವತಾತಾರತಮ್ಯವನ್ನು ಹೇಳುವ ಛಾಂದೋಗ್ಯವಾಕ್ಯಗಳಲ್ಲಿ ಲಕ್ಷ್ಮಿಯನ್ನು ಬಿಟ್ಟಿರುವುದಕ್ಕೆ ಕಾರಣ ತಿಳಿದುಬರುವುದೆಂದು ಅಭಿಪ್ರಾಯ.

1. 'ಯದರ್ಚಿತಂ ಬ್ರಹ್ಮಭವಾದಿಭಿಃ ಸುರೈಃ ಶ್ರಿಯಾ ಚ ದೇವ್ಯಾ ಮುನಿಭಿಶ್ಚ ಸಾತ್ವತೈಃ' ಎಂಬ ವಚನದಲ್ಲಿ ಬ್ರಹ್ಮರುದ್ರಾದಿದೇವತೆಗಳು, ಶ್ರೀದೇವಿ ಮತ್ತು ಮುನಿಗಳು ಮಾಡಿದ ಭಗವದರ್ಚನೆಯನ್ನು ಪ್ರಸ್ತಾಪಿಸಲಾಗಿದೆ. ಇಲ್ಲಿ 'ಅರ್ಚಿತ' ಎಂಬ ಪದಕ್ಕೆ 'ಉಪಾಸಿತ ಮತ್ತು ಪೂಜಿತ' ಎಂದು ಅರ್ಥವನ್ನು ಹೇಳಿರುವುದರಿಂದ ಲಕ್ಷ್ಮಿಯೂ ಭಗವದುಪಾಸನೆ ಮಾಡುವಳೆಂದು ತಿಳಿಯುವುದೆಂದು ಭಾವ.

कुतो हेतोस्तस्या नित्यमुक्तत्वमित्यत आह—

॥ ॐ उपस्थितेस्तद्वचनात् ॐ ॥ ३.३.४२

प्रस्तुतेशस्य उप समीपे स्थितेः नित्यं स्थितत्वात्। श्रियो नित्यं तत्सम्बन्धित्वेनातिशयिततत्प्रसादान्नित्यमुक्तत्वमित्यर्थः। नित्यं तदुपस्थितिः कुतः ? तद्वचनात्। 'द्वावेतावनादिनित्यौ अनादियुक्तौ' इति नित्यसम्बन्धित्ववचनादित्यर्थः ॥ २४ ॥

---

ಆದರಾತ್ - ನಿರ್ವ್ಯಾಜವಾದ ಮತ್ತು ಅತಿಶಯವಾದ ಭಕ್ತಿಯಿಂದಾಗಿಯೇ ಹೊರತು ಬದ್ಧಳಾದುದರಿಂದಲ್ಲವೆಂದು ಅರ್ಥ.

ಲಕ್ಷ್ಮೀದೇವಿಯು ನಿತ್ಯಮುಕ್ತಳಾಗಿರಲು ಏನು ಕಾರಣ ಎಂಬ ಪ್ರಶ್ನೆಗೆ ಸಮಾಧಾನವನ್ನು ಹೇಳುವ ಸೂತ್ರ —

ಓಂ ಉಪಸ್ಥಿತೇಃ ತದ್ವಚನಾತ್ ಓಂ ೩.೩.೪೨

**ಸೂತ್ರಾರ್ಥ**

ಪ್ರಸ್ತುತನಾಗಿರುವ ಭಗವಂತನ, ಉಪ-ಸಮೀಪದಲ್ಲಿ, ಸ್ಥಿತೇಃ – ನಿತ್ಯವೂ ಇರುವುದರಿಂದ. ಲಕ್ಷ್ಮಿಯು ನಿತ್ಯವೂ ಭಗವಂತನ ಸಂಬಂಧವನ್ನು ಪಡೆದಿರುವುದರಿಂದ ಅತಿಶಯವಾದ ಭಗವತ್ಪ್ರಸಾದವನ್ನು ಪಡೆದಿದ್ದಾಳೆ. ಆದ್ದರಿಂದ ಅವಳು ನಿತ್ಯಮುಕ್ತಳೆಂದರ್ಥ. ಲಕ್ಷ್ಮಿಯು ನಿತ್ಯವಾಗಿ ಭಗವಂತನ ಸಾಮೀಪ್ಯವನ್ನು ಪಡೆದಿರುವಳೆಂಬುದಕ್ಕೆ ಏನು ಆಧಾರ ? ಎಂಬ ಪ್ರಶ್ನೆಗೆ ಉತ್ತರ—'ತದ್ವಚನಾತ್' ಎಂದು. [1]'ದ್ವಾವೇತಾವನಾದಿನಿತ್ಯೌ ಅನಾದಿಯುಕ್ತೌ' ಎಂದು ಶ್ರೀತತ್ತ್ವ ಮತ್ತು ಭಗವಂತನಿಗೆ ನಿತ್ಯಸಂಬಂಧವನ್ನು ಹೇಳುವ ವಚನದಿಂದ ಎಂದು ಅರ್ಥ.

---

1. "ದ್ವಾವೇತೌ ಅನಾದಿನಿತ್ಯೌ ಅನಾದಿಯುಕ್ತೌ ನಿತ್ಯಮುಕ್ತೌ ಅನಾದಿಕೃತೌ ನಿತ್ಯಕೃತೌ ಯೋಽಯಂ ಪರಮೋ ಯಾ ಚ ಪ್ರಕೃತೀ ರಮತೇ ಹ್ಯಸ್ಯಾಂ ಪರಮೋ ರಮತೇ ಹ್ಯಸ್ಮಿನ್ ಪ್ರಕೃತಿಃ ಸ್ವಸ್ಮಿನ್ ಹಿ ರಮತೇ ಪರಮೋ ನ ಸ್ವಸ್ಮಿನ್ ಪ್ರಕೃತಿಃ ಅತ ಏನಮಾಹುಃ ಪರಮಃ" ಎಂದು ಗೌಪವನಶ್ರುತಿ.

निर्धारणाधिकरणम्—२५

॥ ॐ तन्निर्धारणार्थनियमस्तद्दृष्टेः पृथग्घ्यप्रतिबन्धः फलम् ॐ ॥ ३.३.४३

अत्र श्रवणमननोपास्तीनां तिसृणामपि कर्तव्यत्वं साध्यते। हिः श्रुतिसूचकः। फलमित्यावर्तते। तद्दृष्टेरित्यपि। तन्निर्धारणं—

---

ನಿರ್ಧಾರಣಾಧಿಕರಣ—೨೫

ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ ಹಿ ಅಪ್ರತಿಬಂಧಃ ಫಲಮ್ ಓಂ ೩.೩.೪೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಶ್ರವಣ, ಮನನ ಮತ್ತು ಉಪಾಸನೆ ಇವು ಮೂರೂ ಕರ್ತವ್ಯವೆಂದು ಸಾಧಿಸಲಾಗುವುದು.

ಸೂತ್ರದಲ್ಲಿರುವ 'ಹಿ' ಶಬ್ದವು ಶ್ರುತಿಯನ್ನು ಸೂಚಿಸುವುದು. 'ಫಲಂ' ಎಂಬ ಪದವು ಆವೃತ್ತಿಯನ್ನು ಪಡೆಯುವುದು. 'ತದ್ದೃಷ್ಟೇಃ' ಎಂಬ ಪದವೂ ಆವೃತ್ತವಾಗುವುದು.

ತನ್ನಿರ್ಧಾರಣಂ — ಇಲ್ಲಿ 'ತತ್' ಪದವು ವೇದದಿಂದ ತಿಳಿದುಬರುವ ತತ್ತ್ವ

---

ಪ್ರಕೃತಿ ಮತ್ತು ಪರಮ (ಲಕ್ಷ್ಮೀ ಮತ್ತು ಭಗವಂತ) ಇವರಿಬ್ಬರು ಸ್ವರೂಪದಿಂದ ಮಾತ್ರವಲ್ಲದೆ ದೇಹದಿಂದಲೂ ಅನಾದಿನಿತ್ಯರಾಗಿದ್ದಾರೆ; ಅನಾದಿಕಾಲದಿಂದ ಪರಸ್ಪರ ಸಂಬಂಧ ವನ್ನು ಪಡೆದಿದ್ದಾರೆ; ಅನಾದ್ಯನಂತ ಕಾಲಗಳಲ್ಲಿ ದುಃಖಸಂಬಂಧರಹಿತರಾಗಿದ್ದಾರೆ; ಸರ್ವ ಕಾಲದಲ್ಲೂ ಪೂರ್ಣರಾಗಿದ್ದಾರೆ. ಪರಮನು ಪ್ರಕೃತಿಯಲ್ಲಿ ರಮಿಸುವನು, ಪ್ರಕೃತಿಯು ಪರಮನಲ್ಲಿ ರಮಿಸುವಳು. ಪ್ರಕೃತಿಯಲ್ಲಿ ರಮಿಸುವ ಪರಮನು ಅವಳಲ್ಲಿರುವ ತನ್ನ ರೂಪದಲ್ಲೇ ರಮಿಸುವ ಸ್ವರಮಣನಾಗಿದ್ದಾನೆ. ಪ್ರಕೃತಿ ಸ್ವರಮಣಳಲ್ಲ. ಸ್ವರಮಣನಾಗಿರುವ ಕಾರಣ ಮಾ ಅಂದರೆ ಲಕ್ಷ್ಮಿಗಿಂತಲೂ ಪರ ಅಂದರೆ ಶ್ರೇಷ್ಠನಾಗಿರುವುದರಿಂದ ಭಗವಂತನನ್ನು ಪರಮ ನೆಂದು ಕರೆಯುವರು--ಎಂದು ಶ್ರುತಿಯ ಭಾವ.

तदिति वेदबोध्यतत्त्वपरामर्शः। भावप्रधानं वा। इयदित्यादिना पूर्वप्रकृतपरापरतत्त्वपरामर्शो वा। अयमस्यार्थ इति तत्त्वनिश्चय इत्यर्थः। तेन सहितोऽर्थनियमः अयमेव वेदार्थो नान्य इति निश्चयोऽर्थनियमः श्रवणमननफलरूपं, तद् द्वयमपि, तद्दृष्टेः सेति प्रस्तुतब्रह्मणो दर्शनात् ध्यानसाध्यात् पृथक्। अतः ताभ्यां दृष्टयसिद्धेः दृष्टयर्थं ध्यानं कार्यमिति भावः।

---

ವನ್ನು ಪರಾಮರ್ಶಿಸುವುದು. ಅಥವಾ ಈ 'ತತ್' ಪದವು ಭಾವಪ್ರಧಾನನಿರ್ದೇಶವಾಗಿದೆ. ಅಥವಾ, 'ಇಯದಾಮನನಾತ್' (ಬ್ರ.ಸೂ. ೩.೩.೩೫) ಇತ್ಯಾದಿ ಸೂತ್ರಗಳಿಂದ ಹಿಂದೆ ಪ್ರಸ್ತುತವಾಗಿರುವ ಪರ-ಅಪರತತ್ತ್ವಗಳನ್ನು ಈ 'ತತ್' ಪದವು ಪರಾಮರ್ಶಿಸುವುದು. ತನ್ನಿರ್ಧಾರಣವೆಂದರೆ 'ಇದು ಇದಕ್ಕೆ ಅರ್ಥವಾಗಿದೆ' ಎಂಬ ತತ್ತ್ವನಿಶ್ಚಯ. ಇಂತಹ ತತ್ತ್ವನಿಶ್ಚಯದಿಂದ ಸಹಿತವಾದದ್ದು ಅರ್ಥನಿಯಮ. ಅರ್ಥನಿಯಮವೆಂದರೆ 'ಇದೇ ವೇದಾರ್ಥ, ಬೇರೆಯಲ್ಲ' ಎಂಬ ನಿಶ್ಚಯ. ಶ್ರವಣ-ಮನನಗಳ ಪ್ರಯೋಜನರೂಪವಾದ ಇವೆರಡೂ ಕೂಡ, ತದ್ದೃಷ್ಟೇಃ — 'ಸೈವ ಹಿ ಸತ್ಯಾದಯಃ' (ಬ್ರ.ಸೂ. ೩,೩.೩೯) ಎಂಬಲ್ಲಿ ಪ್ರಸ್ತುತವಾಗಿರುವ ಬ್ರಹ್ಮನ ಧ್ಯಾನದಿಂದ ಉಂಟಾಗುವ ದರ್ಶನಕ್ಕಿಂತ, ಪೃಥಕ್–ವಿಭಿನ್ನವಾಗಿದೆ. ಆದ್ದರಿಂದ, ಆ ತತ್ತ್ವನಿಶ್ಚಯ ಮತ್ತು ಅರ್ಥನಿಯಮಗಳಿಂದ ಭಗವಂತನ ದರ್ಶನವು ಸಿದ್ಧಿಸುವುದಿಲ್ಲವಾದ್ದರಿಂದ ಭಗವದ್ದರ್ಶನಕ್ಕಾಗಿ ಧ್ಯಾನವನ್ನು ಮಾಡತಕ್ಕದ್ದೆಂದು ಭಾವ.

ಮುಕ್ತಿಗೆ ಕಾರಣವಾದ ಭಗವಂತನ ಸಾಕ್ಷಾತ್ಕಾರವು ಧ್ಯಾನದಿಂದಲೇ ಲಭಿಸುವಾಗ ಶ್ರವಣ-ಮನನಗಳಿಂದೇನು ಎಂಬ ಶಂಕೆಗೆ ಉತ್ತರವಾಗಿ 'ಹಿ' ಎಂದು ಹೇಳಲಾಗಿದೆ.[1] 'ಶ್ರೋತವ್ಯಃ' ಎಂಬ ಶ್ರುತಿಯಲ್ಲಿ ಭಗವದ್ದರ್ಶನಕ್ಕಾಗಿ ಶ್ರವಣ, ಮನನ ಮತ್ತು ಧ್ಯಾನ – ಈ ಮೂರೂ ವಿಹಿತವಾಗಿರುವುದರಿಂದ ಎಂದು ಅರ್ಥ.

---

1. 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' [ಬೃ. ೪.೪.೫]

मुक्तिहेतुदृष्टेः ध्यानादेव सिद्धौ किं ताभ्यामित्यत उक्तं हीति। श्रोतव्य इति श्रुतौ दृष्टचर्थं त्रयस्यापि विहितत्वादित्यर्थः। विधानेऽपि कथं युक्तमित्यत उक्तं — अप्रतिबन्धः फलम्। तद्दृष्टेः सन्देह-विपर्ययकृतप्रतिबन्धाभावः फलं श्रवणमननयोरित्यर्थः। साक्षाद् दृष्टिस्वरूपाजननेऽपि तत्प्रतिबन्धनिरासद्वारा तत्र व्याप्रियेते इति युक्तं तादर्थ्यम्। 'श्रुत्वा मत्वा तथा ध्यात्वा' इत्यादेरिति भावः। प्रतिबन्धः प्रतिबन्धक इति संशयादिर्वा।

---

ಶ್ರವಣ ಮೊದಲಾದ ಮೂರನ್ನೂ ಶ್ರುತಿಯು ವಿಧಾನ ಮಾಡಿದ್ದರೂ ಅದು ಹೇಗೆ ಯುಕ್ತ ಎಂಬ ಶಂಕೆಗೆ ಉತ್ತರವಾಗಿ 'ಅಪ್ರತಿಬಂಧಃ ಫಲಂ ಎಂದು ಹೇಳಲಾಗಿದೆ. ಆ ಭಗವದ್ದರ್ಶನಕ್ಕೆ ಸಂದೇಹ, ವಿಪರೀತ ಜ್ಞಾನಗಳಿಂದ ಉಂಟಾಗುವ ಪ್ರತಿಬಂಧವಿಲ್ಲದಿರುವುದು ಶ್ರವಣ-ಮನನಗಳ ಫಲವಾಗಿದೆ ಎಂದು ಅರ್ಥ. ಶ್ರವಣ ಮನನಗಳಿಂದ ನೇರವಾಗಿ ಭಗವತ್ಸಾಕ್ಷಾತ್ಕಾರವೇ ಹುಟ್ಟದಿದ್ದರೂ ಭಗವತ್ಸಾಕ್ಷಾತ್ಕಾರಕ್ಕೆ ಒದಗುವ ಪ್ರತಿಬಂಧವನ್ನು ಕಳೆಯುವ ಮೂಲಕ ಶ್ರವಣ-ಮನನಗಳು ಭಗವದ್ದರ್ಶನಕ್ಕೆ ಸಹಕಾರಿಯಾಗುವ ಕಾರಣ 'ಭಗವದ್ದರ್ಶನಕ್ಕೋಸ್ಕರ ಶ್ರವಣಮನನಗಳು ಆವಶ್ಯಕ' ಎಂದು ಹೇಳುವುದು ಯುಕ್ತವಾಗಿದೆ. 'ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ[1]' ಇತ್ಯಾದಿ ಪ್ರಮಾಣಗಳಿಂದ ಇದು ಸಿದ್ಧವಾಗುವುದು ಎಂದು ಭಾವ. 'ಪ್ರತಿಬಂಧ' ಶಬ್ದಕ್ಕೆ ಪ್ರತಿಬಂಧಕ ಎಂದೂ ಅರ್ಥವಾಗಬಹುದಾದ್ದರಿಂದ ಸಂಶಯ ಮೊದಲಾದ ಪ್ರತಿಬಂಧಕಗಳೆಂದೂ ಅರ್ಥ ಮಾಡಬಹುದು.[2]

---

1. ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನವಿಪರ್ಯಯೌ ।
ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಮ್ ॥ ಎಂಬ ಬ್ರಹ್ಮತರ್ಕವಚನ.

2. ಮುಂಚೆ, 'ಸಂಶಯವಿಪರ್ಯಯಗಳಿಂದಾಗುವ ಅಡ್ಡಿ' ಎಂದು 'ಪ್ರತಿಬಂಧ' ಪದಕ್ಕೆ ಅರ್ಥವನ್ನು ಹೇಳಲಾಗಿತ್ತು, ಈಗ 'ಪ್ರತಿಬಂಧಕವಾದ ಸಂಶಯಾದಿಗಳು' ಎಂದು ಅರ್ಥವನ್ನು ಮಾಡಲಾಗಿದೆ.

तद्दृष्टेरप्रतिबन्धः फलमित्युक्त्यैव दृष्ट्यर्थं ध्यानं अप्रतिबन्धार्थं श्रुतिमती कार्ये इति सिद्धावपि शेषोक्तिः दृष्टिस्तयोः साक्षादेव फलं स्यात्, किं ध्यानेनेति शङ्कां व्युदसितुम्। तर्हि तेनैव दृष्टिसिद्धेः किं ताभ्यामिति शङ्कां व्युदसितुं अप्रतिबन्ध इत्युक्तिः। अप्रतिबन्धस्य फलत्वकल्पकतया हीति दृष्ट्यर्थं विहितत्वाख्यहेतूक्तिः। तदुपपादकत्वेन चाप्रतिबन्धः फलमितीति सर्वमर्थवत्। श्रवणादेर्जनलोकाद्यर्थं कार्यत्वसिद्धावपि दृष्ट्यर्थं त्रितयकार्यत्वमत्रोच्यत इति बोध्यम् ॥ २५ ॥

---

**ಸೂತ್ರದ ಪದಗಳ ಪ್ರಯೋಜನ**

'ತದ್ದೃಷ್ಟೇಃ ಅಪ್ರತಿಬಂಧಃ ಫಲಂ' ಎಂದಿಷ್ಟು ಮಾತ್ರ ಹೇಳುವುದರಿಂದಲೂ 'ಭಗವದ್ದರ್ಶನಕ್ಕಾಗಿ ಧ್ಯಾನವನ್ನೂ, ಪ್ರತಿಬಂಧಕದ ಪರಿಹಾರಕ್ಕಾಗಿ ಶ್ರವಣ-ಮನನಗಳನ್ನು ಮಾಡತಕ್ಕದ್ದು' ಎಂಬ ವಿಷಯ ಸಿದ್ಧಿಸುವುದಾದರೂ, ಶ್ರವಣಮನನಗಳಿಗೆ ಭಗವದ್ದರ್ಶನವು ಸಾಕ್ಷಾತ್ತಾಗಿಯೇ ಫಲವಾಗಲಿ, ಧ್ಯಾನದಿಂದೇನು ? ಎಂಬ ಶಂಕೆಯನ್ನು ನಿರಾಕರಿಸಲು ಉಳಿದ[1] ಅಂಶವನ್ನು ಸೂತ್ರದಲ್ಲಿ ಹೇಳಲಾಗಿದೆ. ಹಾಗಾದರೆ, ಧ್ಯಾನದಿಂದಲೇ ಸಾಕ್ಷಾತ್ಕಾರವು ಲಭಿಸುವಾಗ ಶ್ರವಣಮನನಗಳಿಂದೇನು ? ಎಂಬ ಶಂಕೆಯನ್ನು ನಿರಾಕರಿಸಲು 'ಅಪ್ರತಿಬಂಧಃ' ಎಂದು ಹೇಳಲಾಗಿದೆ. 'ಶ್ರವಣಮನನಗಳಿಗೆ ಪ್ರತಿಬಂಧಪರಿಹಾರವು ಫಲವಾಗಿದೆ' ಎಂದು ಊಹಿಸಲು ಕಾರಣವಾದ 'ಭಗವದ್ದರ್ಶನಕ್ಕೆ ಶ್ರವಣ ಮನನಗಳು ವಿಹಿತವಾಗಿವೆ' ಎಂಬ ಹೇತುವನ್ನು ಸೂಚಿಸಲು 'ಹಿ' ಎಂದು ಹೇಳಲಾಗಿದೆ. ಈ ಅಂಶವನ್ನು ವಿವರಿಸುವ ಸಲುವಾಗಿಯೇ 'ಅಪ್ರತಿಬಂಧಃ ಫಲಂ' ಎಂದು ಹೇಳಲಾಗಿರುವುದರಿಂದ ಸೂತ್ರದ ಎಲ್ಲ ಪದಗಳೂ ಸಪ್ರಯೋಜನವಾಗಿವೆ. ಜನಲೋಕ ಮೊದಲಾದ ಲೋಕಗಳ ಪ್ರಾಪ್ತಿಗಾಗಿ ಶ್ರವಣಾದಿಗಳನ್ನು ಮಾಡಬೇಕೆನ್ನುವುದು ಸಿದ್ಧವಾಗಿದ್ದರೂ ಭಗವತ್ಸಾಕ್ಷಾತ್ಕಾರಕ್ಕಾಗಿ ಮೂರನ್ನೂ ಮಾಡಬೇಕೆಂದು ಈ ಅಧಿಕರಣದಲ್ಲಿ ಹೇಳಲಾಗಿದೆ ಎಂದು ತಿಳಿಯಬೇಕು.

---

1. 'ತನ್ನಿರ್ಧಾರಣಾರ್ಥನಿಯಮಃ' ಇತ್ಯಾದಿ ಉಳಿದ ಅಂಶಗಳು.

प्रदानाधिकरणम्— २६

॥ ॐ प्रदानवदेव हि तदुक्तम् ॐ ॥ ३.३.४४

अत्रोपास्तौ प्रीतिपूर्वकगुरूपदेशाख्याङ्गमुच्यते । तदित्यावृत्तिः । तत् श्रवणादित्रयं प्रदानवदेव । दानमुपदेशः प्रीतिपूर्वकत्वरूपप्रकृष्टदानयुतमेव दृष्ट्याख्यफलवदिति योज्यम् । न श्रवणादिमात्रमित्यर्थः । कुतः ? तत् ज्ञानस्य प्र (दाना) सादाधीनत्वम् उक्तम् 'आचार्यवान् पुरुषो वेद' इति श्रुतावत इत्यर्थः । एवेत्युक्तिः दृष्टेः

---

ಪ್ರದಾನಾಧಿಕರಣ—೨೬

ಓಂ ಪ್ರದಾನವದೇವ ಹಿ ತದುಕ್ತಂ ಓಂ ೩.೩.೪೪

ಈ ಅಧಿಕರಣದಲ್ಲಿ ಉಪಾಸನೆಗೆ ಪ್ರೀತಿಪೂರ್ವಕ ಗುರೂಪದೇಶವೆಂಬ ಅಂಗವನ್ನು ಹೇಳಲಾಗುವುದು. ಸೂತ್ರದಲ್ಲಿರುವ ' ತತ್' ಪದವನ್ನು ಆವೃತ್ತಿಮಾಡಿಕೊಳ್ಳಬೇಕು.

ತತ್-ಶ್ರವಣ ಮೊದಲಾದ ಮೂರು, ಪ್ರದಾನವದೇವ ದಾನವೆಂದರೆ ಉಪದೇಶ; ಪ್ರೀತಿಪೂರ್ವಕತೆ ಎಂಬ ಪ್ರಕರ್ಷವನ್ನು ಪಡೆದ ಉಪದೇಶಯುತವಾಗಿದ್ದರೆ ಮಾತ್ರ, ದೃಷ್ಟ್ಯಾಖ್ಯಫಲವತ್ - ಭಗವದ್ದರ್ಶನವೆಂಬ ಫಲವುಳ್ಳದ್ದಾಗುವುದು. ಇಲ್ಲಿ 'ದೃಷ್ಟ್ಯಾಖ್ಯಫಲವತ್' ಎಂಬ ಪದಗಳನ್ನು ಯೋಜಿಸಬೇಕು. ಕೇವಲ ಶ್ರವಣಾದಿಗಳು ಭಗವತ್ಸಾಕ್ಷಾತ್ಕಾರಸಾಧನವಲ್ಲವೆಂದರ್ಥ. ಏಕೆಂದರೆ, ತತ್ - ಭಗವಂತನ ಜ್ಞಾನವು ಗುರುಪ್ರಸಾದಕ್ಕೆ ಅಧೀನವಾದುದೆಂಬ ವಿಷಯವು, ಉಕ್ತಂ –'ಆಚಾರ್ಯವಾನ್ ಪುರುಷೋ ವೇದ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿರುವುದರಿಂದ ಎಂದು ಅರ್ಥ.

**ಸೂತ್ರದಲ್ಲಿ 'ಏವ' ಶಬ್ದದ ಪ್ರಯೋಜನ**

ಸೂತ್ರದಲ್ಲಿ 'ಏವ' ಎಂದು ಹೇಳಿರುವುದು, ಭಗವದ್ದರ್ಶನವು ಗುರುಪ್ರೀತಿಗೆ

**वायोः अग्नेः हंसजलवायसस्वरूपब्रह्मवरुणाभ्यां च श्रुतविद्येनापि सत्यकामेन 'भगवांस्त्वेव मे कामे ब्रूयात्' इति कृतगुरुप्रार्थना एकं लिङ्गम्; 'अत्र ह न कश्चन वीयाय' इति गुरुकृतानुज्ञा च अपरं लिङ्गं, तथा उपकोसलेनाग्निभ्यः श्रुतविद्येनापि कृतगुरुप्रार्थना तद्गुरुकृतविद्योक्ति-**

---

ವಾಯಸ (ನೀರುಕಾಗೆ) ಗಳ ರೂಪ ಧರಿಸಿದ ಬ್ರಹ್ಮವರುಣರಿಂದ ವಿದ್ಯೆಯನ್ನು ಶ್ರವಣ ಮಾಡಿದರೂ ಸತ್ಯಕಾಮನು 'ಭಗವಾಂಸ್ತ್ವೇವ ಮೇ ಕಾಮೇ ಬ್ರೂಯಾತ್'- 'ಪೂಜ್ಯರಾದ ಆಚಾರ್ಯರೇ ನನ್ನ ಶುಭಕ್ಕೋಸ್ಕರ ಉಪದೇಶಿಸಬೇಕು' ಎಂದು ಮಾಡಿರುವ ಗುರುಪ್ರಾರ್ಥನೆ ಒಂದು ಲಿಂಗವಾಗಿದೆ. 'ಅತ್ರ ಹ ನ ಕಿಂಚನ ವೀಯಾಯ'-ವಾಯು ಮೊದಲಾದ ದೇವತೆಗಳಿಂದ ನೀನು ಉಪದೇಶ ಹೊಂದಿರುವುದ ರಲ್ಲಿ ಯಾವ ಅಪರಾಧವೂ ಇಲ್ಲ' ಎಂಬ ಗುರುಗಳ ಅನುಮತಿ ಮತ್ತೊಂದು ಲಿಂಗ ವಾಗಿದೆ. ಹಾಗೆಯೇ ಅಗ್ನಿಗಳಿಂದ ವಿದ್ಯೆಯನ್ನು ಶ್ರವಣ ಮಾಡಿದ್ದರೂ ಉಪಕೋಸ

---

ಬ್ರಹ್ಮವಿದ್ಯೆಯನ್ನು ಉಪದೇಶಿಸುವರು. ಅನಂತರ ತನ್ನ ಬಳಿಗೆ ಬಂದ ಸತ್ಯಕಾಮನನ್ನು ಗೌತಮರು 'ಬ್ರಹ್ಮಜ್ಞಾನಿಯಂತೆ ನೀನು ಕಾಣುತ್ತಿದ್ದೀಯ, ನಿನಗೆ ಉಪದೇಶವಿತ್ತವರು ಯಾರು ? ದೇವತೆಗಳೋ ಮನುಷ್ಯರೋ' ಎಂದು ಕೇಳುವರು, 'ಮನುಷ್ಯರಲ್ಲ ದೇವತೆಗಳೇ ನನಗೆ ಉಪದೇಶಿಸಿದವರು' ಎಂದುತ್ತರಿಸಿದ ಸತ್ಯಕಾಮನು 'ಭಗವಾನರೇ ನನ್ನ ಶುಭಕ್ಕಾಗಿ ವಿದ್ಯೆಯನ್ನುಪದೇಶಿಸಬೇಕು. ತಮ್ಮಂತಹ ಆಚಾರ್ಯರಿಂದ ತಿಳಿದ ವಿದ್ಯೆಯೇ ಸ್ಥಿರತೆಯನ್ನು ಪಡೆಯುವುದು' ಎಂದು ವಿಜ್ಞಾಪಿಸಿಕೊಳ್ಳುವನು. ಸತ್ಯಕಾಮನು ಮಾಡಿದ ಈ ಗುರುಪ್ರಾರ್ಥನೆ ಗುರುಪ್ರಸಾದವು ಜ್ಞಾನಸಾಧನಗಳಲ್ಲಿ ಅತ್ಯಂತ ಪ್ರಬಲವಾದದ್ದೆಂದು ತಿಳಿಸುವ ಒಂದು ಅಂಗ ವಾಗಿದೆ.

ಸತ್ಯಕಾಮನ ವಿಜ್ಞಾಪನೆಗೆ ಪ್ರತಿಯಾಗಿ ಗೌತಮರು ದೇವತೆಗಳಿಂದ ಅವನು ಉಪದೇಶ ಪಡೆದಿರುವುದರಲ್ಲಿ ತಪ್ಪೇನೂ ಇಲ್ಲವೆಂದು ತಮ್ಮ ಅನುಮತಿಯನ್ನು ಸೂಚಿಸುವುದು ಗುರು ಪ್ರಸಾದವು ಇತರ ಜ್ಞಾನಸಾಧನಗಳಿಗಿಂತ ಪ್ರಬಲವಾದದ್ದು ಎನ್ನುವುದರಲ್ಲಿ ಮತ್ತೊಂದು ಲಿಂಗ ವಾಗಿದೆ. ಹಾಗೆ ಪ್ರಾಬಲ್ಯವಿಲ್ಲದಿದ್ದಲ್ಲಿ ಗೌತಮರು ತಮ್ಮ ಅನುಜ್ಞೆಯನ್ನು ಕೊಡುವುದೇ ವ್ಯರ್ಥವೆಂದು ಭಾವ.

श्चेत्यादिलिङ्गबाहुल्यादित्यर्थः । किं तर्हि श्रवणादिनेत्यत उक्तं— तदपि । श्रवणाद्यपि कार्यमित्यर्थः ।

अत्र श्रोतव्य इत्यादिश्रुतिसूचको हिशब्दः । लिङ्गबाहुल्यादिति वाच्ये प्रकर्षोक्तिः श्रवणादित्रितयादधिकलिङ्गसूचनाय । तच्च

---

ಲನು ಉಪದೇಶಕ್ಕಾಗಿ ಗುರುಗಳಲ್ಲಿ ಮಾಡಿದ ಪ್ರಾರ್ಥನೆ[1] ಮತ್ತು ಆ ಗುರುಗಳು ಮಾಡಿದ ವಿದ್ಯೋಪದೇಶ ಇವೇ ಮೊದಲಾದ ಬಹು ಲಿಂಗಗಳಿಂದ ಎಂದು ಅರ್ಥ. ಹಾಗಾದರೆ ಶ್ರವಣಾದಿಗಳೇಕೆ ಎಂಬ ಶಂಕೆಗೆ ಉತ್ತರ – 'ತದಪಿ' ಶ್ರವಣಾದಿಗಳನ್ನೂ ಮಾಡತಕ್ಕದ್ದು ಎಂದು ಅರ್ಥ. ಈ ವಿಷಯದಲ್ಲಿ ಆಧಾರವಾಗಿ 'ಶ್ರೋತವ್ಯೋ ಮಂತವ್ಯ' ಇತ್ಯಾದಿ ಶ್ರುತಿಯನ್ನು 'ಹಿ' ಶಬ್ದವು ಸೂಚಿಸುವುದು.

---

1. ಛಾಂದೋಗ್ಯದ ನಾಲ್ಕನೆ ಅಧ್ಯಾಯದಲ್ಲೇ ಬರುವ ಮತ್ತೊಂದು ಆಖ್ಯಾಯಿಕೆ ಹೀಗಿದೆ--

ಉಪಕೋಸಲನೆಂಬ ಋಷಿಗೆ ಸತ್ಯಕಾಮನು ಗುರು. ಉಪಕೋಸಲನಿಗೆ ವಿದ್ಯೆಯನ್ನು ಉಪದೇಶಿಸಬೇಕೆಂದು ತನ್ನ ಪತ್ನಿ ಹೇಳಿದರೂ ಕೇಳದ ಸತ್ಯಕಾಮನು ಅಗ್ನಿಗಳ ಪರಿಚರ್ಯೆ ಮಾಡಿಕೊಂಡಿರುವಂತೆ ಸತ್ಯಕಾಮನಿಗೆ ಆದೇಶಿಸುವನು. ಗುರುಗಳ ಆದೇಶವನ್ನು ಶಿರಸಾ ವಹಿಸಿದ ಉಪಕೋಸಲನು ಅನೇಕ ವರ್ಷಗಳ ಕಾಲ ಗಾರ್ಹಪತ್ಯವೇ ಮೊದಲಾದ ಅಗ್ನಿಗಳ ಸೇವೆಯನ್ನು ಮಾಡುವನು. ಅವನ ಸೇವೆಗೆ ಸಂತುಷ್ಟರಾದ ಅಗ್ನಿಗಳು ಒಟ್ಟಿಗೆ ಮತ್ತು ಪ್ರತ್ಯೇಕವಾಗಿ ಅವನಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿ 'ನಿನ್ನ ಗುರುಗಳೇ ನಿನಗೆ ಜ್ಞಾನ ವನ್ನು ಅನುಗ್ರಹಿಸುವರು' ಎಂದು ಹೇಳುವರು. ಅದರಂತೆ ಪ್ರಾರ್ಥಿಸಿದ ಉಪಕೋಸಲನಿಗೆ ಗುರುಗಳಾದ ಸತ್ಯಕಾಮರು ಬ್ರಹ್ಮವಿದ್ಯೆಯನ್ನು ಅನುಗ್ರಹಿಸುವರು. ಶ್ರವಣಾದಿಗಳೇ ಮುಖ್ಯ ವಾದ ಜ್ಞಾನಸಾಧನವಾಗಿದ್ದಲ್ಲಿ ಅಗ್ನಿಗಳ ಬಳಿಯಲ್ಲಿ ವಿದ್ಯಾಶ್ರವಣಮಾಡಿದ ಉಪಕೋಸಲನು ಸತ್ಯಕಾಮರನ್ನು ಪ್ರಾರ್ಥಿಸುವುದು, ಅವರು ಪುನಃ ಉಪದೇಶಿಸುವುದು ಅವಶ್ಯಕವಾಗುತ್ತಿರ-ಲಿಲ್ಲ. ಆದ್ದರಿಂದ, ಉಪಕೋಸಲನ ಪ್ರಾರ್ಥನೆ ಮತ್ತು ಗುರುಗಳು ಅವನಿಗೆ ಮಾಡಿದ ಉಪದೇಶ ಜ್ಞಾನಸಾಧನಗಳಲ್ಲಿ ಗುರುಪ್ರಸಾದವು ಅತ್ಯಂತ ಪ್ರಬಲವಾದುದೆಂದು ತಿಳಿಸುವ ಮತ್ತೊಂದು ಲಿಂಗವಾಗಿದೆಯೆಂದು ಅಭಿಪ್ರಾಯ.

तत्त्वप्रदीपे दर्शितम् । बलवदिति वाच्ये बलीय इति प्रकर्षोक्तिः न श्रवणादितो दुर्बलं नापि तद्वद्बलवत्, किन्तु बलीय इति दौर्बल्य-तत्साम्ये व्युदसितुमिति ॥ २७ ॥

विकल्पाधिकरणम्—२८

॥ ॐ पूर्वविकल्पः प्रकरणात् स्यात् क्रियामानसवत् ॐ ॥ ३.३.४६

---

**ಸೂತ್ರದಲ್ಲಿ 'ಭೂಯಸ್ತ್ವಾತ್' ಮತ್ತು 'ಬಲೀಯಃ' ಎಂಬ ಪದಗಳ ವೈಶಿಷ್ಟ್ಯ.**

'ಲಿಂಗಬಾಹುಲ್ಯಾತ್' ಎಂದು ಹೇಳಬಹುದಾಗಿದ್ದರೂ, ಶ್ರವಣ ಮೊದಲಾದ ಮೂರಕ್ಕಿಂತ ಅಧಿಕವಾದ ಲಿಂಗಗಳಿವೆ ಎಂದು ಸೂಚಿಸಲು 'ಭೂಯಸ್ತ್ವಾತ್' ಎಂಬ ಬಾಹುಲ್ಯ ಪ್ರಕರ್ಷಸೂಚಕವಾದ ಪದವನ್ನು ಪ್ರಯೋಗಿಸಲಾಗಿದೆ. (ಲಿಂಗಗಳ ಆ ಆಧಿಕ್ಯವನ್ನು ತತ್ತ್ವಪ್ರದೀಪದಲ್ಲಿ ತೋರಿಸಲಾಗಿದೆ.) 'ಬಲವತ್' ಎಂದು ಹೇಳುವ ಬದಲು 'ಬಲೀಯಃ' ಎಂದು ಗುರುಪ್ರಸಾದದ ಬಲದಲ್ಲಿರುವ ಪ್ರಕರ್ಷವನ್ನು ಹೇಳಿರುವುದು - ಗುರುಪ್ರಸಾದವು ಶ್ರವಣಾದಿಗಳಿಗಿಂತ ದುರ್ಬಲವೂ ಅಲ್ಲ, ಅದಕ್ಕೆ ಸಮವಾದ ಬಲವುಳ್ಳದ್ದೂ ಅಲ್ಲ, ಆದರೆ ಅದರ ಬದಲು ಅವೆಲ್ಲಕ್ಕಿಂತ ಪ್ರಬಲವಾದದ್ದು ಎಂದು ಗುರುಪ್ರಸಾದಕ್ಕೆ ಶ್ರವಣಾದಿಗಳಿಗಿಂತ ದೌರ್ಬಲ್ಯ ಮತ್ತು ಅವುಗಳ ಸಾಮ್ಯವನ್ನು ನಿರಾಕರಿಸಲು.

ವಿಕಲ್ಪಾಧಿಕರಣ--೨೮

## ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ ೩.೩.೪೬

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮೊದಲಿದ್ದ ಗುರುಗಳಿಗಿಂತ ಬೇರೆ ಗುರುಗಳನ್ನೂ ಸ್ವೀಕರಿಸಬಹುದು ಎಂದು ಹೇಳಲಾಗುವುದು.

अत्र पूर्वप्राप्तादन्योऽपि गुरुः स्वीकार्य इत्युच्यते। गुरुः प्रकृतः पूर्वेण पूर्वगृहीतेन गुरुणा पश्चात् प्राप्तगुरोर्विकल्पः। संग्राह्यो न वेति विविधकल्पः स्यात् पूर्वं त्यक्त्वा परः स्वीकार्यो न वेति। न तु ग्राह्य एवेति विधिः। कुतो ग्राह्यः? प्रकरणात्। अनुग्रहः प्रकृतः। अनुग्रहस्य प्रकर्षेण करणाद्धेतोः। क्रियामानसवत्। मानसं च सा क्रिया च, तद्वत् ध्यानवत्। कडाराः कर्मधारय इति परनिपातः। यथा फलतः समयोर्ध्यानयोः विकल्पस्तथेति।

---

ಗುರುಗಳು ಇಲ್ಲಿ ಪ್ರಸ್ತುತರಾಗಿದ್ದಾರೆ. ಪೂರ್ವವಿಕಲ್ಪಃ ಸ್ಯಾತ್— ಪೂರ್ವೇಣ- ಹಿಂದೆ ಸ್ವೀಕರಿಸಿದ ಗುರುಗಳಿಂದ ಅನಂತರ ಒದಗುವ ಗುರುಗಳಿಗೆ, ವಿಕಲ್ಪಃ ಸ್ಯಾತ್- ಹಿಂದಿನವರನ್ನು ಬಿಟ್ಟು ಮುಂದೆ ಪ್ರಾಪ್ತರಾಗುವ ಗುರುಗಳನ್ನು ಸ್ವೀಕರಿಸಬಹುದು ಅಥವಾ ಬಿಡಬಹುದು ಎಂಬ ವಿವಿಧ ಪ್ರಕಾರಗಳಿರುವ ಸಾಧ್ಯತೆ ಇದೆ. ಅನಂತರ ಪ್ರಾಪ್ತರಾಗುವ ಗುರುಗಳನ್ನು ಸ್ವೀಕರಿಸಲೇಬೇಕೆಂಬ ನಿಯಮವಿಲ್ಲ. ಅನಂತರ ಪ್ರಾಪ್ತರಾಗುವ ಗುರುಗಳನ್ನು ಸ್ವೀಕರಿಸಲು ಕಾರಣವೇನು ಎಂಬ ಪ್ರಶ್ನೆಗೆ ಉತ್ತರ- ಪ್ರಕರಣಾತ್- ಗುರುಗಳ ಅನುಗ್ರಹವು ಇಲ್ಲಿ ಪ್ರಸ್ತುತವಾಗಿದೆ - ಅನುಗ್ರಹವನ್ನು ಅತಿಶಯವಾಗಿ ಮಾಡುವ ಕಾರಣದಿಂದ, ಕ್ರಿಯಾಮಾನಸವತ್ - ಮಾನಸಂ ಚ ಸಾ ಕ್ರಿಯಾ ಚ ಎಂಬ ವಿಗ್ರಹಕ್ಕನುಸಾರವಾಗಿ ಕ್ರಿಯಾಮಾನಸ ಎಂದರೆ ಧ್ಯಾನ, ಅದರಂತೆ. 'ಕಡಾರಾಃ ಕರ್ಮಧಾರಯೇ' (ಪಾ.ಸೂ. ೨-೨-೩೮) ಎಂಬ ಸೂತ್ರದ ಪ್ರಕಾರ'ಕ್ರಿಯಾಮಾನಸ' ಎಂಬ ಸಮಾಸಪದದಲ್ಲಿ ಮಾನಸಪದವು ಪರನಿಪಾತವನ್ನು[1] ಪಡೆದಿದೆ — ಸಮಾನ ಫಲವಿರುವ ಎರಡು ಧ್ಯಾನಗಳ ಮಧ್ಯೆ ಯಾವುದನ್ನು ಬೇಕಾದರೂ ಸ್ವೀಕರಿಸಬಹುದು ಎಂಬ ವಿಕಲ್ಪ ಹೇಗೋ ಹಾಗೆ ಎಂದು ಅರ್ಥ.

---

1. 'ಮಾನಸಂ ಚ ಸಾ ಕ್ರಿಯಾ ಚ' ಎಂಬ ವಿಗ್ರಹ ವಿವಕ್ಷಿತವಾಗಿರುವುದಾದಲ್ಲಿ ವಿಶೇಷಣವಾದ ಮಾನಸಪದವು ಸಮಾಸದಲ್ಲಿ ಪೂರ್ವನಿಪಾತವನ್ನು ಪಡೆದು 'ಮಾನಸಕ್ರಿಯಾ' ಎಂಬ ಸಮಾಸವಾಗಬೇಕಾಗಿತ್ತೆಂದು ಆಶಂಕೆ. ಕರ್ಮಧಾರಯ ಸಮಾಸದಲ್ಲಿ ಕಡಾರಾದಿಗಣದ ಪದಗಳು ವಿಕಲ್ಪವಾಗಿ ಪೂರ್ವನಿಪಾತವನ್ನು ಪಡೆಯುತ್ತವೆ ಎಂದು 'ಕಡಾರಾಃ ಕರ್ಮಧಾರಯೇ' ಎಂಬ ಸೂತ್ರ ಹೇಳುವ ಕಾರಣ ಕಡಾರಾದಿಗಣದಲ್ಲಿ ಸೇರಿರುವ 'ಕ್ರಿಯಾ' ಎಂಬ ಶಬ್ದವು ಇಲ್ಲಿ ಪೂರ್ವನಿಪಾತವನ್ನು ಪಡೆದು 'ಕ್ರಿಯಾಮಾನಸ' ಎಂಬ ಸಮಾಸವಾಗಿದೆ ಎಂದು ಸಮಾಧಾನ.

विकल्पेत्युक्त्या 'विकल्पः समयोर्भवेत्' इति, 'विकल्पः कामतो भवेत्' इति च स्मृतिः सूचिता । तेन पूर्वस्मादुत्तमश्चेत् परः सद्ग्राह्य एव । न विकल्पः । समोऽपि पूर्वानुज्ञयैव । अधमश्चेन्न ग्राह्य एवेति सांप्रतम् । प्रकृष्टानुग्रहकर्तृत्व एव नान्यथेति वक्तुम् । तेन पूर्वत्यागे हेतुर्नेति निरस्तम् । पूर्णानुग्रहार्थत्वादिति । एतेन 'गुरुमन्त्र-परित्यागी रौरवं नरकं व्रजेत्' इत्यादिवचनम् अधमविषयं व्यर्थविष-

---

**ಸೂತ್ರದ ಪದಗಳ ಸ್ವಾರಸ್ಯ**

'ವಿಕಲ್ಪ' ಎಂದು ಹೇಳಿರುವುದರಿಂದ '[1]ವಿಕಲ್ಪಃ ಸಮಯೋಃ ಭವೇತ್' ಎಂಬ ಮತ್ತು [2]'ವಿಕಲ್ಪಃ ಕಾಮತೋ ಭವೇತ್' ಎಂಬ ಸ್ಮೃತಿಯು ಸೂಚಿತವಾಗುವುದು. ಆದುದರಿಂದ, ಹಿಂದಿನ ಗುರುಗಳಿಗಿಂತ ಮುಂದಿನವರು ಉತ್ತಮರಾಗಿದ್ದರೆ ಅವರನ್ನು ಸ್ವೀಕರಿಸಲೇಬೇಕು. ಸ್ವೀಕರಿಸಬಹುದು ಅಥವಾ ಬಿಡಬಹುದು ಎಂಬ ವಿವಿಧ ಪ್ರಕಾರಗಳಿಲ್ಲ. ಅನಂತರ ಪ್ರಾಪ್ತವಾದ ಗುರುಗಳು ಹಿಂದಿನ ಗುರುಗಳಿಗೆ ಸಮರಾಗಿದ್ದರೆ ಹಿಂದಿನವರ ಅನುಮತಿಯಿಂದಲೇ ಅವರನ್ನು ಸ್ವೀಕರಿಸತಕ್ಕದ್ದು. ಅನಂತರ ಲಭಿಸಿದ ಗುರುಗಳು ಮೊದಲಿನವರಿಗಿಂತ ಅಧಮರಾಗಿದ್ದರೆ

---

1. ಪೂರ್ವಸ್ಮಾದುತ್ತಮೋ ಲಬ್ಧಃ ಸ್ವಯಮೇವ ಗುರುರ್ಯದಿ ।
ಗೃಹ್ಣೀಯಾದವಿಚಾರೇಣ ವಿಕಲ್ಪಃ ಸಮಯೋರ್ಭವೇತ್ ॥ [ಬೃಹತ್ತಂತ್ರ]
ಹಿಂದಿನ ಗುರುಗಳಿಗಿಂತ ಉತ್ತಮರಾದವರು ಲಭಿಸಿದರೆ, ಸಂಶಯವಿಲ್ಲದೆ, ಪೂರ್ವ ಗುರುಗಳ ಅನುಮತಿಯನ್ನು ಪಡೆಯದೆ ಆ ಉತ್ತಮಗುರುಗಳನ್ನು ಸ್ವೀಕರಿಸಬಹುದು. ಇಬ್ಬರೂ ಜ್ಞಾನಾದಿಗಳಲ್ಲಿ ಸಮವಾಗಿದ್ದರೆ ವಿಕಲ್ಪವೆಂದು ಭಾವ.

2. ಧ್ಯಾನಯೋಃ ಸಮಯೋರ್ಯದ್ವತ್ ವಿಕಲ್ಪಃ ಕಾಮತೋ ಭವೇತ್ ।
ಏವಂ ಗುರೋರ್ದ್ವಿತೀಯಸ್ಯ ವಿಕಲ್ಪೋ ಗ್ರಹಣೇಽಪಿ ಚ ॥ [ಮಹಾಸಂಹಿತಾ]
ಸಮಫಲವಾಗಿರುವ ಎರಡು ಭಗವದ್ಧ್ಯಾನಗಳಲ್ಲಿ ಒಂದನ್ನು ತನ್ನ ಇಚ್ಛೆಗನುಸಾರವಾಗಿ ಆರಿಸುವಂತೆ ಹಿಂದಿನ ಗುರುಗಳಿಗೆ ಸಮರಾದ ಇನ್ನೊಬ್ಬರನ್ನು ತನ್ನ ಇಚ್ಛೆಗನುಗುಣವಾಗಿ ಹಿಂದಿನ ಗುರುಗಳ ಅನುಜ್ಞೆಯನ್ನು ಪಡೆದು ಸ್ವೀಕರಿಸಬಹುದು ಎಂದು ಭಾವ.

यकं वेत्युक्तं भवति। ध्यानेति वाच्ये क्रियामानसेत्युक्तिः तत्स्वरूपोक्त्यर्था। केचित्तु पूर्वविकल्पश्च पूर्वसमश्चेदन्यस्तदा विकल्प इति द्योतनायैवमुक्तिरित्याहुः।

इतश्च समोत्तमौ ग्राह्यावित्याह—

॥ ॐ अतिदेशाच्च ॐ ॥ ३.३.४७

---

ಸ್ವೀಕರಿಸಲೇಬಾರದು ಎಂದು ಸೂಚಿತವಾಗುವುದು. ಮತ್ತೊಬ್ಬ ಗುರುಗಳನ್ನು ಸ್ವೀಕರಿಸುವುದಿದ್ದರೂ ಅವರು ಅತಿಶಯವಾದ ಅನುಗ್ರಹವನ್ನು ಮಾಡುವುದಿದ್ದರೆ ಮಾತ್ರ, ಇಲ್ಲದಿದ್ದರೆ ಇಲ್ಲ ಎಂದು ತಿಳಿಸಲು 'ಪ್ರಕರಣಾತ್' ಎಂದು ಹೇಳಲಾಗಿದೆ. ಆದ್ದರಿಂದ, ಹಿಂದಿನ ಗುರುಗಳನ್ನು ತ್ಯಜಿಸಲು ಕಾರಣವಿಲ್ಲ ಎಂಬ ಆಕ್ಷೇಪವು ಪರಿಹೃತವಾಗುವುದು. ಪೂರ್ಣಾನುಗ್ರಹಕ್ಕೋಸ್ಕರ ಮತ್ತೊಬ್ಬ ಗುರುಗಳನ್ನು ಸ್ವೀಕರಿಸುವುದರಿಂದ ಆ ಆಕ್ಷೇಪವಿಲ್ಲವೆಂದು ಭಾವ. ಇದರಿಂದ,[1] 'ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್'– ಗುರುಗಳನ್ನೂ, ಉಪದಿಷ್ಟವಾಗಿರುವ ಮಂತ್ರಗಳನ್ನೂ ಪರಿತ್ಯಜಿಸುವವನು ರೌರವ ನರಕಕ್ಕೆ ಹೋಗುವನು' ಇತ್ಯಾದಿ ವಚನಗಳು ಅಧಮ ಗುರುವನ್ನುಕುರಿತದ್ದು ಅಥವಾ ವಿಶೇಷಾನುಗ್ರಹ ಮಾಡದ ಗುರುಗಳನ್ನು ಕುರಿತದ್ದು ಎಂದು ಹೇಳಿದಂತಾಗುವುದು.

ಧ್ಯಾನದ ಸ್ವರೂಪವನ್ನು ಹೇಳುವ ಸಲುವಾಗಿ 'ಧ್ಯಾನ' ಎಂದು ಹೇಳುವ ಬದಲು 'ಕ್ರಿಯಾಮಾನಸ' ಎಂದು ಹೇಳಲಾಗಿದೆ. ಕೆಲವರು ಮತ್ತೊಬ್ಬ ಗುರುಗಳು ಪೂರ್ವಗುರುವಿಗೆ ಸಮಾನವಾಗಿದ್ದರೆ ಮಾತ್ರ ವಿಕಲ್ಪ ಎಂದು ಸೂಚಿಸಲು 'ಪೂರ್ವ ವಿಕಲ್ಪ' ಎಂದು ಹೇಳಲಾಗಿದೆ ಎನ್ನುವರು.

ಈ ಮುಂದಿನ ಕಾರಣದಿಂದಲೂ ಪೂರ್ವಗುರುಗಳಿಗೆ ಸಮರಾದ ಅಥವಾ ಅವರಿಗೂ ಉತ್ತಮರಾದ ಗುರುಗಳು ಸ್ವೀಕಾರ್ಯರೆಂದು ಹೇಳುವ ಸೂತ್ರ—

ಓಂ ಅತಿದೇಶಾಚ್ಚ ಓಂ ೩.೩.೪೭

---

1. ಗುರುತ್ಯಾಗೇ ಭವೇನ್ಮೃತ್ಯುಃ ಮಂತ್ರತ್ಯಾಗೇ ದರಿದ್ರತಾ।
ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್॥

'ब्रह्मोपास्व' इति श्रुतौ पूर्वगुरुणा समोत्तमगुरुस्वीकारायातिदेशाच्च समोत्तमौ ग्राह्यावित्यर्थः ॥ २८ ॥

विद्याधिकरणम्—२९

॥ ॐ विद्यैव तु निर्धारणात् ॐ ॥ ३.३.४८

अत्र ज्ञानमेव मुक्तिहेतुरित्युच्यते । मुक्तिसाधनमिति प्रकरणा-

---

**ಸೂತ್ರಾರ್ಥ**

'[1]ಬ್ರಹ್ಮೋಪಾಸ್ವ' ಎಂಬ ಶ್ರುತಿಯಲ್ಲಿ ಪೂರ್ವಗುರುಗಳಿಗೆ ಸಮರಾದ ಅಥವಾ ಅವರಿಂದ ಉತ್ತಮರಾದ ಗುರುಗಳನ್ನು ಸ್ವೀಕರಿಸಬೇಕೆಂದು ಉಪದೇಶ ಮಾಡಿರುವುದರಿಂದಲೂ ಇನ್ನೊಬ್ಬ ಸಮರಾದ ಅಥವಾ ಉತ್ತಮರಾದ ಗುರುಗಳು ಸ್ವೀಕಾರ್ಯರೆಂದರ್ಥ.

**ವಿದ್ಯಾಧಿಕರಣ—೨೯**

## ಓಂ ವಿದ್ಯೈವ ತು ನಿರ್ಧಾರಣಾತ್ ಓಂ ೩.೩.೪೮

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜ್ಞಾನವೇ ಮೋಕ್ಷಹೇತುವೆಂದು ಹೇಳಲಾಗುವುದು. ಸಾಧನಪ್ರಕರಣವಾದುದರಿಂದ 'ಮುಕ್ತಿಸಾಧನಂ' ಎಂಬ ಪದವು ಅನ್ವಿತವಾಗುವುದು.

---

1. 'ಬ್ರಹ್ಮೋಪಾಸ್ವ ಬ್ರಹ್ಮೋಪಚರಸ್ವ ತಚ್ಛೃಣುಹಿ ತತ್ತ್ವಾಮವತು । ಯಥಾ ಬ್ರಹ್ಮೋಪಚರೇರ್ಯಥಾ ಮಾಮುಪಚರೇಃ ಯೇ ಚಾನ್ಯೇಽಸ್ಮದ್ವಿಧಾಃ ಶ್ರೇಯಸಶ್ಚ ತಾನುಪಾಸ್ವ ತಾನುಪಚರಸ್ವ ತೇಭ್ಯಃ ಶೃಣುಹಿ ತೇ ತ್ವಾಮವಂತು' । [ಕೌಷಾಯಣಶ್ರುತಿ]

ಭಗವಂತನ ಧ್ಯಾನಾದಿಗಳನ್ನು ಮಾಡು. ಅವನನ್ನು ಪೂಜಿಸು. ಭಗವದ್ವಿಷಯವಾದ ಶ್ರವಣವನ್ನು ಮಾಡು. ಆ ಭಗವಂತನು ನಿನ್ನನ್ನು ರಕ್ಷಿಸಲಿ. ಹೇಗೆ ಭಗವಂತನನ್ನು ಧ್ಯಾನಿಸುವೆಯೋ ಹಾಗೆ ನನ್ನನ್ನೂ ಧ್ಯಾನಿಸು, ನನ್ನನ್ನೂ ಪೂಜಿಸು. ನನ್ನಂತೆ, ನನಗೆ ಸಮನಾದ ಮತ್ತು ನನ್ನಿಂದ ಉತ್ತಮರಾದವರನ್ನು ಧ್ಯಾನಿಸು, ಪೂಜಿಸು. ಅವರಿಂದ ಭಗವಂತನನ್ನು ಶ್ರವಣಮಾಡು. ಅವರು ನಿನ್ನನ್ನು ರಕ್ಷಿಸಲಿ ಎಂದು ಶ್ರುತ್ಯರ್ಥ.

दन्वेति । ब्रह्मज्ञानमेव मुक्तिसाधनं, न कर्म । कुतः ? निर्धारणात् । 'नान्यः पन्था अयनाय विद्यते' इत्यन्यनिरासेन ज्ञानस्यैव मुक्तिहेतुत्व-निर्धारणादित्यर्थः । 'कर्मणैव हि संसिद्धिम्' इत्यतोऽपि 'नान्यः पन्था' इत्यस्य प्राबल्यसूचकस्तु शब्दः ।

विद्यैवेत्युक्तिः विद्या कर्म वा इत्यनिर्णय इति न शङ्क्यमिति द्योतयितुम् । तेन भाक्तं वेत्युक्तावपि कर್मणैवेत्युक्त्या प्राप्तविशेषशङ्का-

ಬ್ರಹ್ಮಜ್ಞಾನವೇ ಮುಕ್ತಿಸಾಧನವಾಗಿದೆ ಹೊರತು ಕರ್ಮವಲ್ಲ. ಏಕೆಂದರೆ, ನಿರ್ಧಾರಣಾತ್ - 'ನಾನ್ಯಃ ಪಂಥಾ ಅಯನಾಯ ವಿದ್ಯತೇ' – 'ಮೋಕ್ಷಕ್ಕೆ ಬೇರೆ ಯಾವ ಮಾರ್ಗವೂ ಇಲ್ಲ' ಎಂದು ಇತರ ಸಾಧನಗಳನ್ನು ನಿರಾಕರಿಸಿ, ಜ್ಞಾನವೇ ಮೋಕ್ಷಹೇತುವೆಂದು ನಿರ್ಧರಿಸಿರುವುದರಿಂದ ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

ಸೂತ್ರದಲ್ಲಿರುವ 'ತು' ಶಬ್ದವು 'ಕರ್ಮಣೈವ ಹಿ ಸಂಸಿದ್ಧಿಂ' ಎಂಬ ಪ್ರಮಾಣಕ್ಕಿಂತಲೂ 'ನಾನ್ಯಃ ಪಂಥಾ' ಎಂಬ ಪ್ರಮಾಣಕ್ಕಿರುವ ಪ್ರಾಬಲ್ಯವನ್ನು ಸೂಚಿಸುವುದು. ಮೋಕ್ಷಸಾಧನವಾದದ್ದು ಜ್ಞಾನ ಅಥವಾ ಕರ್ಮ ಎಂಬ ನಿರ್ಧಾರವಿಲ್ಲ ಎಂದು ಶಂಕಿಸತಕ್ಕದ್ದಲ್ಲ ಎಂದು ಸೂಚಿಸಲು 'ವಿದ್ಯೈವ' ಎಂದು ಹೇಳಲಾಗಿದೆ. ಆದ್ದರಿಂದ,[1] 'ಭಾಕ್ತಂ ವಾ'(ಬ್ರ.ಸೂ.೩.೧.೭) ಇತ್ಯಾದಿ ಸೂತ್ರದಲ್ಲಿ ಬ್ರಹ್ಮಜ್ಞಾನದಿಂದಲೇ ಮೋಕ್ಷವಾಗುವುದೆಂದು ಹೇಳಿದ್ದರೂ 'ಕರ್ಮಣೈವ ಹಿ' ಎಂಬ ಪ್ರಮಾಣಕ್ಕನುಸಾರವಾಗಿ ಪ್ರಾಪ್ತವಾದ ವಿಶೇಷ ಸಂದೇಹವನ್ನು ಪರಿಹರಿಸುವುದಕ್ಕೋಸ್ಕರ ಈ ಸೂತ್ರ ಆವಶ್ಯಕವಾದುದರಿಂದ ಪುನರುಕ್ತಿಯಿಲ್ಲವೆಂದು ತಿಳಿಯಬೇಕು. ಸೂತ್ರದಲ್ಲಿ 'ಏವ' ಎಂಬ ಶಬ್ದದಿಂದಲೇ ಇತರ ವಾದಿಗಳು ಹೇಳುವ ಎಲ್ಲ ಮೋಕ್ಷಹೇತುಗಳು ನಿರಾಕರಣೆಯಾಗು

1. ಓಂ ಭಾಕ್ತಂ ವಾ ಅನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ ಓಂ (ಬ್ರ. ಸೂ. ೩.೧.೭) ಎಂಬ ಸೂತ್ರದಲ್ಲಿ ಕರ್ಮದಿಂದ ಲಭಿಸುವ ಅಮೃತತ್ವವು ಭಾಕ್ತ-- ಅಲ್ಪಕಾಲೀನವಾದದ್ದರಿಂದ ಅಮುಖ್ಯವಾದದ್ದು, ಆತ್ಮಜ್ಞಾನದಿಂದಲೇ ಮುಖ್ಯವಾದ ಅಮೃತತ್ವವು ದೊರಕುವುದೆಂದು ಹೇಳಿರುವುದರಿಂದ ಪುನರುಕ್ತಿಶಂಕೆಯ ಉದ್ಭವಿಸುವುದು. ಪರಿಹಾರ ಸ್ಪಷ್ಟವಾಗಿದೆ.

निरासार्थत्वादस्यापौनरुक्त्यं ध्येयम् । एवेत्युक्त्यैव वाद्यन्तरोक्तसर्व-मुक्तिहेतूनां व्युदासो बोध्यः । स च विस्तृतोऽनुव्याख्याने ।

तर्हि श्रवणेनैव मुक्तिहेतुविद्योपपत्तौ किं ध्यानेनेत्यत आह —

॥ ॐ दर्शनाच्च ॐ ॥ ३.३.४९

तन्त्रमिदम् । ब्रह्मसाक्षात्कारादपि मुक्तिः न विद्यामात्रात् । येन ध्यानवैयर्थ्यमित्यर्थः । 'विद्वानमृतः' इत्युक्तेः कथमेवमिति चेत्, दर्शनाच्च दृष्ट्वैव तं मुच्यत इति श्रुतेरित्यर्थः । विशेषश्रुत्या 'विद्वान्' इत्यपि श्रुतिरेतदर्थेति भावः ॥ २९ ॥

---

ವುದೆಂದು ತಿಳಿಯಬೇಕು. ಆ ನಿರಾಕರಣೆಯನ್ನು ಅನುವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಹೇಳಲಾಗಿದೆ.

ಹಾಗಾದರೆ, ಶ್ರವಣದಿಂದಲೇ ಮೋಕ್ಷಸಾಧನವಾದ ಜ್ಞಾನವು ಲಭಿಸುವಾಗ ಧ್ಯಾನದಿಂದೇನು ಎಂಬ ಶಂಕೆಗೆ ಸಮಾಧಾನವನ್ನು ಹೇಳುವ ಸೂತ್ರ—

ಓಂ ದರ್ಶನಾಚ್ಚ ಓಂ ೩.೩.೪೯

ಈ ಸೂತ್ರವು ಅನೇಕ ರೀತಿಯಿಂದ ಉಪಕಾರಕವಾಗಿದೆ[1]. ಬ್ರಹ್ಮಸಾಕ್ಷಾತ್ಕಾರದಿಂದಲೂ ಮೋಕ್ಷವಾಗುವುದು ಹೊರತು ಕೇವಲ ಜ್ಞಾನದಿಂದಲ್ಲ. ಕೇವಲ ಜ್ಞಾನದಿಂದಲೇ ಮೋಕ್ಷವಾಗುವುದಿದ್ದಲ್ಲಿ ಧ್ಯಾನವು ವ್ಯರ್ಥವಾಗುತ್ತಿತ್ತೆಂದು ಅರ್ಥ. 'ವಿದ್ವಾನ್ ಅಮೃತಃ' - 'ಜ್ಞಾನಿಯು ಮುಕ್ತನಾಗುವನು' ಎಂದು ಜ್ಞಾನವೇ ಮೋಕ್ಷಸಾಧನವೆಂದು ತಿಳಿಯುವುದರಿಂದ 'ಬ್ರಹ್ಮಸಾಕ್ಷಾತ್ಕಾರದಿಂದಲೂ' ಎಂದು ಹೇಳುವುದು ಹೇಗೆ ಎಂಬ ಶಂಕೆಗೆ ಉತ್ತರ – ದರ್ಶನಾಚ್ಚ – 'ದೃಷ್ಟ್ವೈವ ತಂ ಮುಚ್ಯತೇ' ಎಂದು ಶ್ರುತಿಯಿರುವುದರಿಂದ ಎಂದು ಅರ್ಥ. ಬ್ರಹ್ಮಸಾಕ್ಷಾತ್ಕಾರ ಮೋಕ್ಷಸಾಧನವೆಂದು ಹೇಳುವ ವಿಶೇಷಶ್ರುತಿ ಇರುವುದರಿಂದ 'ವಿದ್ವಾನ್ ಅಮೃತಃ' ಎಂಬ ಶ್ರುತಿಯು ಅದೇ ಅರ್ಥವುಳ್ಳದ್ದೆಂದು ಭಾವ.

---

1. 'ದರ್ಶನ' ಶಬ್ದಕ್ಕೆ ಸಾಕ್ಷಾತ್ಕಾರವೆಂದೂ, ಶ್ರುತಿಯೆಂದೂ ವ್ಯಾಖ್ಯಾನ ಮಾಡಿರುವುದರಿಂದ ಅನೇಕ ರೀತಿಯಿಂದ ಈ ಶಬ್ದವು ಉಪಕಾರಕವಾಗಿದೆ.

श्रुत्यधिकरणम्—३०

॥ ॐ श्रुत्यादिबलीयस्त्वाच्च न बाधः ॐ ॥ ३.३.५०

प्रागुक्तमेवात्राक्षिप्य साध्यते । ज्ञानस्यैव मुक्तिहेतुत्वेऽपि कर्मणैवेति स्मृतिबाधो नास्ति । कुतः ? श्रुत्यादिबलीयस्त्वात् । तमेवमिति श्रुतिः आदिपदात् 'इन्द्रोऽश्वमेधान् शतमिष्ट्वा' इति श्रुत्युक्तं बहुकर्मकृतोऽ-

---

ಶ್ರುತ್ಯಧಿಕರಣ—೩೦

ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ ೩.೩.೫೦

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಜ್ಞಾನವೇ ಮೋಕ್ಷಸಾಧನವೆಂದು ಹಿಂದೆ ಹೇಳಿದುದನ್ನು ಆಕ್ಷೇಪಿಸಿ ಇಲ್ಲಿ ಸಮರ್ಥಿಸಲಾಗುವುದು.

ಜ್ಞಾನವೇ ಮೋಕ್ಷಸಾಧನವಾದರೂ 'ಕರ್ಮಣೈವ ಹಿ ಸಂಸಿದ್ಧಿಂ' ಎಂಬ ಸ್ಮೃತಿಯಿಂದ ಬಾಧವಿಲ್ಲ. ಏಕೆಂದರೆ, ಶ್ರುತ್ಯಾದಿಬಲೀಯಸ್ತ್ವಾತ್ - 'ತಮೇವಂ ವಿದ್ವಾನ್' ಎಂಬ ಶ್ರುತಿ,ಆದಿಪದದಿಂದ '[1]ಇಂದ್ರೋಽಶ್ವಮೇಧಾನ್ ಶತಮಿಷ್ಟ್ವಾ' ಎಂಬ ಶ್ರುತಿಯಲ್ಲಿ ಹೇಳಿರುವ 'ಇಂದ್ರನು ಬಹುಕರ್ಮಗಳನ್ನು ಮಾಡಿದ್ದರೂ ದುಃಖಮಿಶ್ರಿತವಲ್ಲದ ಸುಖರೂಪವಾದ ಮೋಕ್ಷಕ್ಕಾಗಿ ಮಾಡಿದ ತತ್ತ್ವಜ್ಞಾನಪ್ರಾರ್ಥನೆ' ಎಂಬ

---

1. "ಇಂದ್ರೋಽಶ್ವಮೇಧಾನ್ ಶತಮಿಷ್ಟ್ವಾಽಪಿ ರಾಜಾ ಬ್ರಹ್ಮಾಣಮಾಡ್ಯಂ ಸಮುವಾಚೋಪಸನ್ನಃ ।
ನ ಕರ್ಮಭಿರ್ನ ಧನೈರ್ನೈವ ಚಾನ್ಯೈಃ ಪಶ್ಯೇತ್ ಸುಖಂ ತೇನ ತತ್ತ್ವಂ ಬ್ರವೀಹಿ ॥"

ನೂರು ಅಶ್ವಮೇಧಗಳನ್ನು ಮಾಡಿಯೂ ಕೂಡ ಸ್ವರ್ಗಾಧಿಪನಾದ ಇಂದ್ರನು ಪೂಜ್ಯನಾದ ಚತುರ್ಮುಖನ ಬಳಿಗೆ ಬಂದು ಪ್ರಾರ್ಥಿಸಿದನು--'ಕರ್ಮಗಳಿಂದಾಗಲಿ, ಧನದಿಂದಾಗಲಿ ಇತರ ಸಾಧನಗಳಿಂದಾಗಲಿ ನಾನು ನಿತ್ಯಸುಖವನ್ನು ಹೊಂದಲಾರೆ. ಆದ್ದರಿಂದ ನೀನು ತತ್ತ್ವವನ್ನು ಉಪದೇಶಿಸು'- ಎಂದು (ದ್ರೋಣರನ್ನು ಕುರಿತ ಭೀಮಸೇನನ ಮಾತಿದೆಂದು ಹೇಳಲಾಗಿದೆ).

पीन्द्रस्य दुःखामिश्रसुखरूपमोक्षार्थं तत्त्वज्ञानप्रार्थनरूपलिङ्गं, 'नास्त्यकृतः कृतेन' इत्युक्त्या आद्यन्तवत्फलत्वेनावधृतकर्मणा नित्यपुमर्थो नेति युक्तिः, 'कर्मणा बध्यते जन्तुर्विद्यया च विमुच्यते। तस्मात् कर्म न कुर्वन्ति' इति स्मृतिश्च गृह्यते । श्रुतेरनवकाशावधारणवत्त्वेन, युक्तेः श्रौतत्वादिना, स्मृतेरीशवाक्यत्वेन, युक्त्युपेतत्वेन च बलीयस्त्वादित्यर्थः ।

---

ಲಿಂಗ[1], 'ನಾಸ್ತ್ಯಕೃತಃ ಕೃತೇನ' ಎಂಬ ಶ್ರುತಿಯಿಂದ ಉತ್ಪತ್ತಿ - ನಾಶಗಳುಳ್ಳ ಫಲಕ್ಕೆ ಕಾರಣವೆಂದು ನಿಶ್ಚಿತವಾಗಿರುವ ಕರ್ಮದಿಂದ ನಿತ್ಯಪುರುಷಾರ್ಥರೂಪವಾದ ಮೋಕ್ಷವಿಲ್ಲವೆಂಬ ಯುಕ್ತಿ ಮತ್ತು 'ಕರ್ಮಣಾ ಬಧ್ಯತೇ ಜಂತುಃ, ವಿದ್ಯಯಾ ಚ ವಿಮುಚ್ಯತೇ । ತಸ್ಮಾತ್ ಕರ್ಮ ನ ಕುರ್ವಂತಿ' ಎಂಬ ಸ್ಮೃತಿಯನ್ನೂ ಗ್ರಹಿಸಲಾಗುವುದು - 'ತಮೇವಂ' ಎಂಬ ಶ್ರುತಿಯು [2]ಬೇರೆ ಅವಕಾಶವಿಲ್ಲದ ಅವಧಾರಣವನ್ನು ಹೊಂದಿರುವುದರಿಂದ, ಅನಿತ್ಯಫಲಕವಾದ ಕರ್ಮಕ್ಕೆ ನಿತ್ಯಪುರುಷಾರ್ಥಹೇತುತ್ವವಿಲ್ಲವೆಂಬ ಯುಕ್ತಿಯು ಶ್ರುತಿಸಿದ್ಧವಾದುದರಿಂದ, 'ಕರ್ಮಣಾ ಬಧ್ಯತೇ' ಇತ್ಯಾದಿ ಗೀತಾ ಸ್ಮೃತಿಯು ಭಗವಂತನ ವಾಕ್ಯವಾದುದರಿಂದ ಮತ್ತು ಯುಕ್ತಿಸಹಿತವಾದ[3] ಕಾರಣ ಅತ್ಯಂತ ಪ್ರಬಲವಾಗಿರುವುದರಿಂದ ಎಂದು ಅರ್ಥ.

---

1. ಲಿಂಗವೆಂದರೆ ಜ್ಞಾಪಕ. ಇಂದ್ರನು ಮಾಡಿದ ಪ್ರಾರ್ಥನೆ ಮೋಕ್ಷಕ್ಕೆ ತತ್ತ್ವಜ್ಞಾನವೇ ಸಾಧನವೆಂದು ತಿಳಿಸುವುದರಿಂದ ಲಿಂಗವಾಗಿದೆ.

2. 'ತಮೇವಂ ವಿದ್ವಾನ್ ಅಮೃತತ್ವಮೇತಿ । ನಾನ್ಯಃ ಪಂಥಾ ವಿದ್ಯತೇ ಅಯನಾಯ' ಎಂಬ ಶ್ರುತಿಯಲ್ಲಿ, ಜ್ಞಾನಿಯು ಮುಕ್ತಿಯನ್ನು ಹೊಂದುವನು. ಮುಕ್ತಿಗೆ ಜ್ಞಾನವನ್ನು ಬಿಟ್ಟು ಬೇರೆ ದಾರಿಯಿಲ್ಲ- ಎಂದು ಹೇಳಿರುವುದರಿಂದ ಜ್ಞಾನವೇ ಮೋಕ್ಷಸಾಧನವೆಂಬ ಅವಧಾರಣ ಲಭಿಸುವುದು. ಇದಕ್ಕೆ ಅರ್ಥಾಂತರ ಮಾಡಲು ಸಾಧ್ಯವಿಲ್ಲದಿರುವುದರಿಂದ ನಿರವಕಾಶವಾಗಿದೆ ಎಂದು ಭಾವ.

3. 'ಕರ್ಮವು ಬಂಧಕವಾಗಿದೆ' ಮತ್ತು 'ಮುಮುಕ್ಷುಗಳು ಕರ್ಮವನ್ನು ಮಾಡುವುದಿಲ್ಲ' ಎಂಬ ಯುಕ್ತಿಗಳಿಂದ ಸಹಿತವಾದದ್ದು ಎಂದು ಭಾವ.

कर्मणैवेत्युक्तिरमानं किमित्यतश्चेत्युक्तिः। आस्थिता एवेत्यन्वय इति भावः। बाध इत्युक्तिः कर्मणैवेति स्मृतेरेवकारात् ईशवाक्यत्वाच्च प्राबल्यमिति शङ्कां द्योतयितुम्। बलीयस्त्वादिति प्रकर्षोक्तिः 'तमेवं' इत्यादेः सावधारणादित्वेऽपि न कर्मणैवेति बलवत्स्मृतिसाम्यं निरवकाशत्वादिना ततोऽप्यतिशयितत्वमिति सूचयितुम्। चस्तु स्मृतिगतिसूचकः ॥ ३० ॥

---

**ಸೂತ್ರದ ಪದಗಳ ಸ್ವಾರಸ್ಯ**

ಜ್ಞಾನವೇ ಮುಕ್ತಿಸಾಧನವಾಗಿರುವುದಾದರೆ 'ಕರ್ಮಣೈವ' ಎಂಬ ಭಗವದ್ವಚನವು ಅಪ್ರಮಾಣವೇನು ? ಎಂಬ ಶಂಕೆಗೆ ಉತ್ತರವಾಗಿ ಸೂತ್ರದಲ್ಲಿ 'ಚ' ಎಂದು ಹೇಳಲಾಗಿದೆ. 'ಕರ್ಮಣೈವ' ಎಂಬಲ್ಲಿರುವ ಏವಕಾರವು 'ಆಸ್ಥಿತಾ ಏವ' ಎಂದು ಅನ್ವಯುವನ್ನು ಪಡೆಯುವುದು ಎಂದು ಭಾವ[1]. 'ಕರ್ಮಣೈವ' ಎಂಬ ಸ್ಮೃತಿಯು ಏವಕಾರಯುಕ್ತವಾದುದರಿಂದ ಮತ್ತು ಭಗವಂತನ ವಾಕ್ಯವಾದುದರಿಂದ ಪ್ರಬಲವಾಗಿದೆ ಎಂಬ ಪೂರ್ವಪಕ್ಷಿಯ ಶಂಕೆಯನ್ನು ಸೂಚಿಸಲು 'ಬಾಧಃ' ಎಂದು ಹೇಳಲಾಗಿದೆ. 'ತಮೇವಂ' ಎಂಬ ಶ್ರುತಿಯು ಅವಧಾರಣಸಹಿತವಾಗಿದ್ದರೂ 'ಕರ್ಮಣೈವ' ಎಂಬ ಪ್ರಬಲಸ್ಮೃತಿಗೆ ಸಮಾನ ಬಲವಾಗಿದೆ ಎಂದು ಹೇಳತಕ್ಕದ್ದಲ್ಲ. ನಿರವಕಾಶವಾಗಿರುವುದೇ ಮೊದಲಾದ ಕಾರಣಗಳಿಂದ 'ತಮೇವಂ' ಎಂಬ ಶ್ರುತಿಯು 'ಕರ್ಮಣೈವ' ಎಂಬ ಸ್ಮೃತಿಗಿಂತ ಅತಿಶಯವನ್ನು ಪಡೆದಿದೆ ಎಂದು ಸೂಚಿಸಲು 'ಬಲೀಯಸ್ತ್ವಾತ್' ಎಂಬಲ್ಲಿ 'ತಮೇವಂ' ಎಂಬ ಶ್ರುತಿಗಿರುವ ಬಲದ ಪ್ರಕರ್ಷವನ್ನು ಹೇಳಲಾಗಿದೆ. ಸೂತ್ರದಲ್ಲಿರುವ 'ಚ' ಶಬ್ದವು 'ಕರ್ಮಣೈವ' ಎಂಬ ಸ್ಮೃತಿಗೆ ಅರ್ಥಾಂತರ ಮಾಡಬೇಕೆಂಬ ಗತಿಯನ್ನು ಸೂಚಿಸುವುದು.

---

1. 'ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾ ಜನಕಾದಯಃ' ಎಂಬ ಗೀತಾವಾಕ್ಯವು ಕರ್ಮದಿಂದಲೇ ಜನಕಾದಿಗಳು ಮುಕ್ತಿಯನ್ನು ಪಡೆದಿರುವುದೆಂದು ಹೇಳುವುದೆಂದು ಭಾವಿಸಿ ಪೂರ್ವಪಕ್ಷ ಹೊರಟಿದೆ. ಆದರೆ 'ಕರ್ಮಣೈವ' ಎಂಬಲ್ಲಿರುವ 'ಏವ' ಕಾರವನ್ನು 'ಆಸ್ಥಿತಾ ಏವ' ಎಂದು ಅನ್ವಯಿಸಿದರೆ ಈ ಪೂರ್ವಪಕ್ಷಕ್ಕೆ ಅವಕಾಶವಿರುವುದಿಲ್ಲವೆಂದು ಸೂತ್ರದ 'ಚ' ಶಬ್ದವು ಸೂಚಿಸುವುದೆಂದು ಭಾವ. ಇದೇ ಅಭಿಪ್ರಾಯವನ್ನು 'ಚಸ್ತು ಸ್ಮೃತಿಗತಿಸೂಚಕಃ' ಎಂದು ಮುಂದೆ ವ್ಯಕ್ತಪಡಿಸಲಾಗಿದೆ.

अनुबन्धाधिकरणम्—३१

॥ ॐ अनुबन्धादिभ्यः ॐ ॥ ३.३.५१

अत्र प्रस्तुतदर्शनस्य भक्तिसाध्यत्वं साध्यते । दर्शनमित्यस्ति । अनुबन्धो भक्तिः । 'अनुबन्धस्तु भक्तिः स्यात्' इत्युक्तेः । शमदमादिः आदिपदार्थः । श्रवणादिजन्यमपि ब्रह्मदर्शनं अनुबन्धादिभ्यो हरिगुरुभक्त्यादिभ्यो भवति न द्वेषादिनेत्यर्थः ।

---

ಅನುಬಂಧಾಧಿಕರಣ—೩೧

ಓಂ ಅನುಬಂಧಾದಿಭ್ಯಃ ಓಂ ೩.೩.೫೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಪ್ರಸ್ತುತವಾಗಿರುವ ಬ್ರಹ್ಮಜ್ಞಾನವು ಭಕ್ತಿಜನ್ಯವೆಂದು ಸಮರ್ಥಿಸಲಾಗುವುದು. 'ದರ್ಶನಂ' ಎಂಬ ಪದವು ಅನುವೃತ್ತವಾಗುವುದು.

'ಅನುಬಂಧಸ್ತು ಭಕ್ತಿಃ ಸ್ಯಾತ್' ಎಂಬ ವಚನದಂತೆ ಅನುಬಂಧವೆಂದರೆ ಭಕ್ತಿ. 'ಅನುಬಂಧಾದಿ' ಎಂಬಲ್ಲಿರುವ 'ಆದಿ' ಪದಕ್ಕೆ ಶಮದಮಾದಿಗಳು ಅರ್ಥವಾಗಿವೆ. ಬ್ರಹ್ಮಸಾಕ್ಷಾತ್ಕಾರವು ಶ್ರವಣ ಮೊದಲಾದವುಗಳಿಂದ ಹುಟ್ಟುವುದಾದರೂ, ಅನುಬಂಧಾದಿಭ್ಯಃ - ಹರಿ, ಗುರುಗಳಲ್ಲಿ ಭಕ್ತಿ ಮೊದಲಾದವುಗಳಿಂದ ಉಂಟಾಗುವುದೇ ಹೊರತು ದ್ವೇಷಾದಿಗಳಿಂದಲ್ಲ ಎಂದು ಅರ್ಥ.

**'ಅನುಬಂಧ' ಪದದ ಸ್ವಾರಸ್ಯ ಮತ್ತು ಪುನರುಕ್ತಿಯ ಪರಿಹಾರ**

'ಭಕ್ತಿ' ಎಂದೇ ಹೇಳಬಹುದಾಗಿದ್ದರೂ 'ಅನುಬಂಧ' ಎಂದು ಹೇಳಿರುವುದು, 'ಸ್ವಾನುಸಾರೇಣ ಬಧ್ನಾತಿ ಆರ್ಜಯತಿ ಹರಿಗುರ್ವಾದಿಪ್ರಸಾದಾದಿಕಂ' – 'ತನ್ನನ್ನು ಅನುಸರಿಸಿ ಹರಿ-ಗುರು ಮೊದಲಾದವರ ಅನುಗ್ರಹಾದಿಗಳನ್ನು ಸಂಪಾದಿಸಿಕೊಡು

भवतीति वाच्ये अनुबन्धेत्युक्तिः स्वानुसारेण बध्नाति आर्जयति हरिगुर्वादिप्रसादादिकमित्येवंरूपा भक्तिरेव न द्वेषादिरिति ज्ञापयितुम्। तेन 'द्वेषाच्चैद्यादयः' इत्युक्तिः स्वभावभक्तविषयेति सूचितम्। अत्र दृष्टेः भक्तिसाध्यत्वमुक्तम्। अम्बुवदित्यत्र मोक्षस्य भक्तिसाध्यत्वमिति भेदः। तत्त्वप्रदीपे तु प्रधानसाधनत्वज्ञापनार्थः, साधनान्तरोपसङ्ग्रहार्थश्च पुनरारम्भ इत्युक्तम् ॥ ३१ ॥

---

ವುದು' ಎಂಬ ಸ್ವರೂಪವುಳ್ಳದ್ದು ಭಕ್ತಿಯೇ ಹೊರತು ದ್ವೇಷಾದಿಗಳಲ್ಲ ಎಂದು ತಿಳಿಸಲು. ಆದ್ದರಿಂದ 'ದ್ವೇಷಾತ್ ಚೈದ್ಯಾದಯೋ' ಎಂಬ ಮಾತು[1] ಸ್ವಭಾವದಿಂದ ಭಕ್ತರಾದವರನ್ನು ಕುರಿತದ್ದು ಎಂದು ಸೂಚಿತವಾಗುವುದು.

ಈ ಅಧಿಕರಣದಲ್ಲಿ ಬ್ರಹ್ಮದರ್ಶನವು ಭಕ್ತಿಜನ್ಯವೆಂದು ಹೇಳಲಾಗಿದೆ. 'ಅಂಬುವತ್' (ಬ್ರ.ಸೂ. ೩.೨.೧೯) ಎಂಬಲ್ಲಿ ಮೋಕ್ಷವು ಭಕ್ತಿಸಾಧ್ಯವೆಂದು ಹೇಳಿದೆ ಎಂದು ಎರಡು ಅಧಿಕರಣಗಳಿಗೆ ಭೇದವಿದೆ. ತತ್ತ್ವಪ್ರದೀಪದಲ್ಲಾದರೋ – ಮೋಕ್ಷಸಾಧನಗಳಲ್ಲಿ ಭಕ್ತಿಯು ಪ್ರಧಾನಸಾಧನವಾಗಿದೆ ಎಂಬುದನ್ನು ತಿಳಿಸಲು ಮತ್ತು ಶಮ, ದಮ ಮೊದಲಾದ ಇತರ ಸಾಧನಗಳನ್ನು ಸಂಗ್ರಹಿಸುವ ಸಲುವಾಗಿ ಪುನಃ ಈ ಅಧಿಕರಣವನ್ನು ಆರಂಭಿಸಲಾಗಿದೆ ಎಂದು ಹೇಳಲಾಗಿದೆ.

---

1. 'ದ್ವೇಷಾತ್ ಚೈದ್ಯಾದಯೋ ನೃಪಾಃ' ಎಂಬ ಭಾಗವತ ಶ್ಲೋಕದಲ್ಲಿ ಶಿಶುಪಾಲ ಮೊದಲಾದವರು ದ್ವೇಷದಿಂದ ಮುಕ್ತಿ ಹೊಂದಿದರೆಂದು ಹೇಳಿದಂತೆ ತೋರುವುದು. ಆದರೆ ಸ್ವಭಾವತಃ ಭಕ್ತರಾದವರು ಯಾವುದೋ ನಿಮಿತ್ತದಿಂದ ದ್ವೇಷಮಾಡಿದರೂ ಮುಕ್ತರಾಗುವರೆಂದೂ ಸ್ವಭಾವತಃ ದ್ವೇಷಿಗಳಾದವರು ಎಂದೂ ಮುಕ್ತಿಯನ್ನು ಪಡೆಯುವುದಿಲ್ಲವೆಂದೂ ಶ್ಲೋಕದ ಭಾವವೆಂದು ಗ್ರಹಿಸಬೇಕೆಂದು ಇಲ್ಲಿ ಹೇಳಲಾಗಿದೆ.

प्रज्ञान्तराधिकरणम्—३२

॥ ॐ प्रज्ञान्तरपृथक्त्ववद्दृष्टिश्च तदुक्तम् ॐ ॥ ३.३.५२

अत्र ब्रह्मदर्शनस्य तारतम्यं साध्यते। प्रज्ञान्तरं प्रज्ञाविशेषः, अविच्छिन्नपरोक्षज्ञानसन्तानरूपं ध्यानम्। तस्य पृथक्त्ववत् तारतम्यवत् दृष्टिश्च पृथक् नानाविधेत्यर्थः। तदुक्तं तद् दृष्टितारतम्यम् उक्तम् 'अन्तर्दृष्टयो बहिर्दृष्टयोऽवतारदृष्टयः' इत्यादिश्रुतावित्यर्थः। तथा

---

ಪ್ರಜ್ಞಾಂತರಾಧಿಕರಣ—೩೨

ಓಂ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಂ ಓಂ
೩.೩.೫೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನದ ತಾರತಮ್ಯವನ್ನು ಸಾಧಿಸಲಾಗುವುದು. ಪ್ರಜ್ಞಾಂತರವೆಂದರೆ ಪ್ರಜ್ಞಾವಿಶೇಷ, ವಿಚ್ಛೇದವಿಲ್ಲದೆ ಉಂಟಾಗುವ ಪರೋಕ್ಷಜ್ಞಾನಗಳ ಪ್ರವಾಹರೂಪವಾದ ಧ್ಯಾನ. ಇಂತಹ ಜ್ಞಾನದ, ಪೃಥಕ್ತ್ವವತ್ – ತಾರತಮ್ಯದಂತೆ, ದೃಷ್ಟಿಶ್ಚ – ಬ್ರಹ್ಮಜ್ಞಾನವೂ, ಪೃಥಕ್ - ನಾನಾವಿಧವಾದದ್ದು ಎಂದು ಅರ್ಥ. ತದುಕ್ತಂ - ತತ್ ಜ್ಞಾನದ ಆ ತಾರತಮ್ಯವು, ಉಕ್ತಂ - '[1]ಅಂತರ್ದೃಷ್ಟಯೋ ಬಹಿರ್ದೃಷ್ಟಯೋಽವತಾರದೃಷ್ಟಯಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ

---

1. "ಅಂತರ್ದೃಷ್ಟಯೋ ಬಹಿರ್ದೃಷ್ಟಯೋಽವತಾರದೃಷ್ಟಯಸ್ಸರ್ವದೃಷ್ಟಯ ಇತಿ। ದೇವಾ ವಾವ ಸರ್ವದೃಷ್ಟಯಃ ತೇಷು ಚ ಉತ್ತರೋತ್ತರಮಾಬ್ರಹ್ಮಣೋಽನ್ಯೇಷು ಯಥಾಯೋಗಂ ಯಥಾ ಹ್ಯಾಚಾರ್ಯಾ ಆಚಕ್ಷತೇ" -ಕಮಠಶ್ರುತಿ.

ಕೆಲವರು ತಮ್ಮ ಶರೀರದೊಳಗೆ ಬ್ರಹ್ಮನನ್ನು ಉಪಾಸಿಸಿ ಅಲ್ಲೇ ಬ್ರಹ್ಮದರ್ಶನವನ್ನು ಪಡೆಯುವರು. ಕೆಲವರು ಶರೀರದ ಹೊರಗೆ ಅಗ್ನ್ಯಾದಿ ಅಧಿಷ್ಠಾನಗಳಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಿ ಆ ಅಧಿಷ್ಠಾನಗಳಲ್ಲೇ ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆಯುವರು. ಮತ್ತೆ

दृष्टिपृथक्त्वेऽपि सर्वज्ञानिनां मुक्तिरित्येतत् 'दृष्ट्यैव ह्यवताराणाम्' इति स्मृतावुक्तमित्यर्थः । तेन 'दृष्ट्वैव तं' इति सम्पूर्णदृष्टावेव मोक्षः श्रुत इति न शङ्क्यम् । यथायोगं तदुपपत्तेः ।

---

ಎಂದು ಅರ್ಥ. ಹಾಗೆಯೇ ಜ್ಞಾನತಾರತಮ್ಯವಿದ್ದರೂ ಎಲ್ಲ ಜ್ಞಾನಿಗಳಿಗೂ ಮುಕ್ತಿಯಾಗುವುದೆಂಬುದು[1] 'ದೃಷ್ಟ್ಯೈವ ಹ್ಯವತಾರಾಣಾಂ ಎಂಬ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ ಎಂದು ಅರ್ಥ. ಆದ್ದರಿಂದ 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯಲ್ಲಿ ಭಗವಂತನ ಸಂಪೂರ್ಣದರ್ಶನದ ನಂತರವೇ ಮೋಕ್ಷವೆಂದು ಹೇಳಲಾಗಿದೆ ಎಂದು ಶಂಕಿಸತಕ್ಕದ್ದಲ್ಲ. ಅವರವರ ಯೋಗ್ಯತಾನುಗುಣವಾದ ಜ್ಞಾನದಿಂದಲೇ ಮುಕ್ತಿಯಾಗುವುದೆಂದು ಭಾವ.

---

ಕೆಲವರು ಅವತಾರೋಪಾಸಕರಾಗಿ ರಾಮಕೃಷ್ಣಾದಿ ಅವತಾರರೂಪಗಳನ್ನು ದಿವ್ಯದೃಷ್ಟಿಯಿಂದ ಸಾಕ್ಷಾತ್ಕರಿಸುವವರು. ಕೆಲವರು ವ್ಯಾಪ್ತ್ಯುಪಾಸಕರಾಗಿ 'ಸರ್ವದೃಷ್ಟಿ'ಗಳು ಅಂದರೆ ವ್ಯಾಪ್ತನಾದ ಪರಮಾತ್ಮನ ದರ್ಶನವನ್ನು ಪಡೆಯುವವರು. ಹೀಗೆ ಬ್ರಹ್ಮದರ್ಶನವನ್ನು ಪಡೆಯುವವರಲ್ಲಿ ದೇವತೆಗಳು ವ್ಯಾಪ್ತದರ್ಶಿಗಳಾಗಿರುವರು. ದೇವತೆಗಳಲ್ಲೂ ಚತುರ್ಮುಖನವರೆಗೆ ಅಧಿಕಾಧಿಕ ವ್ಯಾಪ್ತದರ್ಶನವಿರುವುದು. ಅವತಾರರೂಪವೇ ಮೊದಲಾದವನ್ನು ಸಾಕ್ಷಾತ್ಕರಿಸಿಕೊಳ್ಳುವವರಲ್ಲಿ ಅವರವರ ಯೋಗ್ಯತೆಯನ್ನನುಸರಿಸಿ ಯಾರು ಯಾವ ದರ್ಶನವನ್ನು ಪಡೆಯುವರೆಂದು ನಿರ್ಣಯಿಸಬಹುದು. ಯಾರಿಗೆ ಯಾವ ಭಗವದ್ರೂಪದ ದರ್ಶನವಾಗುವುದೆನ್ನುವುದನ್ನು ಅವನ ಸ್ವರೂಪಗುರುಗಳೇ ಉಪದೇಶಿಸುವರು- ಎಂದು ಶ್ರುತ್ಯರ್ಥ.

1. ದೃಷ್ಟ್ಯೈವ ಹ್ಯವತಾರಾಣಾಂ ಮುಚ್ಯಂತೇ ಕೇಚಿದಂಜಸಾ |
ದರ್ಶನೇನಾಂತರೇಣಾನ್ಯೇ ದೇವಾಃ ಸರ್ವತ್ರ ದರ್ಶನಾತ್ |
ತೇಷಾಂ ವಿಶೇಷಮಾಚಾರ್ಯೋ ವೇತ್ತಿ ಸರ್ವಜ್ಞತಾಂ ಗತಃ ||

ಅಧ್ಯಾತ್ಮ ವಚನ

ಜ್ಞಾನದಲ್ಲಿ ತಾರತಮ್ಯವಿರುವುದಾದರೆ ಎಲ್ಲರಿಗೂ ಮುಕ್ತಿಯಾಗಲಾರದು. 'ತಮೇವಂ ವಿದ್ವಾನ್' ಇತ್ಯಾದಿ ಶ್ರುತಿಗಳಲ್ಲಿ ಭಗವಂತನ ಸಂಪೂರ್ಣ ಜ್ಞಾನದಿಂದಲೇ ಮುಕ್ತಿಯಾಗುವುದೆಂದು ಹೇಳಲಾಗಿದೆಯಷ್ಟೆ ಎಂಬ ಶಂಕೆಯನ್ನು ಪರಿಹರಿಸಲು 'ತದುಕ್ತಂ' ಎಂಬ ಪದದಿಂದ ಸೂತ್ರಕಾರರು ಈ ಸ್ಮೃತಿಯನ್ನು ಸೂಚಿಸುತ್ತಿದ್ದಾರೆ--

दृष्टान्तोक्तिः दृष्टिहेतुध्यानस्य भेदादिति हेतुसूचनाय । ध्यानवदिति वाच्ये एवमुक्तिः तत्स्वरूपोक्त्यर्था । तेन ज्ञानान्यमानसक्रिया ध्यानमिति वादो निरस्तः। कर्षकाणामिव साधनभेदेऽपि कदाचित्

---

**ಸೂತ್ರದಲ್ಲಿ ದೃಷ್ಟಾಂತವನ್ನು ಕೊಟ್ಟಿರುವುದರ ಪ್ರಯೋಜನ ಮತ್ತು ಪದಗಳ ಸ್ವಾರಸ್ಯ**

ಬ್ರಹ್ಮಜ್ಞಾನಕ್ಕೆ ಕಾರಣವಾದ ಧ್ಯಾನವು ಭಿನ್ನವಾದುದರಿಂದ ಅದರಿಂದ ಉಂಟಾಗುವ ಬ್ರಹ್ಮಜ್ಞಾನವೂ ಭಿನ್ನವಾಗಿದೆ ಎಂದು ಬ್ರಹ್ಮಜ್ಞಾನದ ತಾರತಮ್ಯಕ್ಕೆ ಹೇತುವನ್ನು ಸೂಚಿಸಲು 'ಪ್ರಜ್ಞಾಂತರಪೃಥಕ್ತ್ವವತ್' ಎಂದು ದೃಷ್ಟಾಂತವನ್ನು ಕೊಡಲಾಗಿದೆ, 'ಧ್ಯಾನವತ್' – 'ಧ್ಯಾನದಂತೆ' ಎಂದು ಹೇಳಬಹುದಾಗಿದ್ದರೂ ಧ್ಯಾನದ ಸ್ವರೂಪವನ್ನು ತಿಳಿಸಲು 'ಪ್ರಜ್ಞಾಂತರ' ಎಂಬ ಪದದಿಂದ ಧ್ಯಾನವನ್ನು ಹೇಳಲಾಗಿದೆ. ಇದರಿಂದ, ಧ್ಯಾನವೆಂದರೆ 'ಜ್ಞಾನವಲ್ಲದ ಒಂದು ಮಾನಸಕ್ರಿಯೆ' ಎಂಬ ವಾದವು ನಿರಾಕೃತವಾಗುವುದು. ಕೃಷಿಕರಿಗೆ ಕೃಷಿಸಾಧನಗಳು ವಿಭಿನ್ನವಾಗಿದ್ದರೂ ಕೂಡ ಕೆಲವೊಮ್ಮೆ ಸಮಾನವಾದ ಫಲ ದೊರೆಯುವಂತೆ ಧ್ಯಾನತಾರತಮ್ಯವಿದ್ದರೂ ಸಮಾನವಾದ ಬ್ರಹ್ಮಜ್ಞಾನ ದೊರೆಯಬಹುದು ಎಂಬ ಶಂಕೆಯನ್ನು ಪರಿಹರಿಸಲು 'ತದುಕ್ತಂ' ಎಂದು ಹೇಳಲಾಗಿದೆ. ಅನುವೃತ್ತಿಯ ಮೂಲಕ 'ದರ್ಶನ' ಎಂಬ ಪದವನ್ನು ಗ್ರಹಿಸಲು ಸಾಧ್ಯವಿದ್ದರೂ 'ದೃಷ್ಟಿ' ಎಂಬ ಪದವನ್ನು ಸೂತ್ರದಲ್ಲಿ ಉಪಯೋಗಿಸಿರುವುದು ಸ್ಪಷ್ಟತೆಗೋಸ್ಕರವಾಗಿ. ಅಥವಾ 'ತಾರತಮ್ಯವಿದೆ' ಎಂಬ ಸಾಧ್ಯವನ್ನು ಕೊಡುವ 'ಚ' ಶಬ್ದದ ಅನ್ವಯಕ್ಕೋಸ್ಕರವಾಗಿ

---

ಕೆಲವು ಮನುಷ್ಯರು ರಾಮಕೃಷ್ಣಾದಿ ಅವತಾರ ರೂಪಗಳ ದಿವ್ಯ ದರ್ಶನದಿಂದ ಮುಕ್ತರಾಗುವರು. ಕೆಲ ಋಷಿಗಳು ತಮ್ಮ ಹೃದಯದೊಳಗೆ ಭಗವದ್ದರ್ಶನದಿಂದ ಮುಕ್ತಿಯನ್ನು ಪಡೆಯುವರು. ದೇವತೆಗಳು ಸರ್ವತ್ರ ಸ್ಥಿತನಾದ ಬ್ರಹ್ಮನ ದರ್ಶನದಿಂದ ಮುಕ್ತರಾಗುವರು. ಅಧಿಕಾರಿಗಳ ಯೋಗ್ಯತೆಯನ್ನು ಸರ್ವಜ್ಞರಾದ ಗುರುಗಳು ತಿಳಿದಿರುವರು--ಎಂದು ಸ್ಮೃತಿಯ ಭಾವ. ನಾನಾವಿಧವಾದ ಜ್ಞಾನದಿಂದಲೂ ಮುಕ್ತಿಯಾಗುವುದೆಂದು ಈ ಸ್ಮೃತಿಯಲ್ಲಿ ಹೇಳಿರುವುದರಿಂದ ಜ್ಞಾನತಾರತಮ್ಯವಿದ್ದರೆ ಎಲ್ಲರಿಗೂ ಮುಕ್ತಿಯಾಗಲಾರದೆಂಬ ಶಂಕೆಗೆ ಅವಕಾಶವಿಲ್ಲವೆಂದು ಭಾವ.

साध्यसाम्यं स्यादित्यतः 'तदुक्तम्' इत्युक्तिः। दर्शनग्रहणे वर्तमाने दृष्टिरित्युक्तिः स्पष्टार्थत्वाय वा, साध्यार्पकचशब्दान्वयाय वा। 'अन्तर्दृष्टयः इति श्रुतिविशेषसूचनाय वा इत्येके ॥ ३२ ॥

न सामान्याधिकरणम्—३३

॥ ॐ न सामान्यादप्युपलब्धेर्मृत्युवन्नहि लोकापत्तिः ॐ ॥
३.३.५३

अत्र बिम्बज्ञानस्य मुक्तिहेतुत्वं साध्यते। दृष्टिप्रसङ्गसन्निधा-

---

'ದೃಷ್ಟಿ' ಪದವನ್ನು ಪ್ರಯೋಗಿಸಲಾಗಿದೆ. ಕೆಲವರು 'ಅಂತರ್ದೃಷ್ಟಯಃ' ಎಂಬ ಶ್ರುತಿವಿಶೇಷವನ್ನು ಸೂಚಿಸಲು 'ದೃಷ್ಟಿ' ಪದವನ್ನು ಇಲ್ಲಿ ಪ್ರಯೋಗಿಸಲಾಗಿದೆ ಎಂದು ಹೇಳುವರು[1].

ಸಾಮಾನ್ಯಾಧಿಕರಣ—೩೩

ಓಂ ನ ಸಾಮಾನ್ಯಾದಪ್ಯುಪಲಬ್ಧೇಃ ಮೃತ್ಯುವನ್ನ ಹಿ
ಲೋಕಾಪತ್ತಿಃ ಓಂ ೩.೩.೫೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬಿಂಬಜ್ಞಾನವು ಮುಕ್ತಿಹೇತುವೆಂದು ಸಮರ್ಥಿಸಲಾಗುವುದು. ಬ್ರಹ್ಮದರ್ಶನದ ಪ್ರಸಂಗವಾದುದರಿಂದ ಬುದ್ಧಿಸ್ಥವಾಗುವ 'ಮುಕ್ತಿ' ಮತ್ತು 'ಬ್ರಹ್ಮಸ್ವರೂಪ' ಎಂಬ ಪದಗಳು ಇಲ್ಲಿ ಅನ್ವಿತವಾಗುವವು. ಸೂತ್ರದಲ್ಲಿರುವ 'ಸಾಮಾನ್ಯಾತ್' ಎಂಬ ಪದವು ಆವೃತ್ತಿಯನ್ನು ಪಡೆಯುವುದು.

---

1. ಶಬ್ದಸಾಮ್ಯದ ಮೂಲಕ ಸೂತ್ರದ 'ದೃಷ್ಟಿ' ಪದವು 'ಅಂತರ್ದೃಷ್ಟಯಃ' ಇತ್ಯಾದಿ ಶ್ರುತಿಯನ್ನು ಸೂಚಿಸುವುದು. ಈ ಪ್ರಯೋಜನದ ವಿವಕ್ಷೆಯಿಂದಲೇ ಸೂತ್ರದಲ್ಲಿ ದೃಷ್ಟಿಪದವನ್ನು ಪ್ರಯೋಗಿಸಲಾಗಿದೆ ಎಂದು ಭಾವ.

पिता मुक्तिः ब्रह्मस्वरूपं चान्वेति । सामान्यादित्यावृत्तिः । ब्रह्मरूपाणां सामान्यात् समानत्वात् उपलब्धेः सामान्यात् साधारण्यात् किञ्चिद्रूप-दृष्ट्यापि मुक्तिर्भवतीति न । किन्तु स्वबिम्बरूपदृष्ट्यैव । मृत्युवत् । यथा मृतिसामान्यात् न मुक्तिः, किन्तु मृतिविशेषादनन्तरं तथेति । रूपान्तरदृष्टेः वैफल्यायोगात् तस्याः यत्फलं सैव मुक्तिरित्यत उक्तं न हीति । रूपान्तरदृष्टिफलभूता महरादिलोकप्राप्तिः मुक्तिर्न भवतीत्यर्थः ।

तत्फलमिति वाच्ये लोकापत्तिरित्युक्तिः तत्फलमिदमिति

---

ಬ್ರಹ್ಮರೂಪಾಣಾಂ ಸಾಮಾನ್ಯಾತ್ - ಪರಮಾತ್ಮನ ಎಲ್ಲ ರೂಪಗಳೂ ಸಮಾನವಾದುದರಿಂದ, ಉಪಲಬ್ಧೇಃ ಸಾಮಾನ್ಯಾತ್ - ಬ್ರಹ್ಮಜ್ಞಾನಗಳೂ ಸಮಾನವಾದುದರಿಂದ, ಯಾವುದಾದರೂ ಒಂದು ಭಗವದ್ರೂಪದ ದರ್ಶನದಿಂದಲೂ ಮುಕ್ತಿಯಾಗುವುದು ಎನ್ನುವುದು ಸರಿಯಲ್ಲ. ತನ್ನ ಬಿಂಬರೂಪದ ದರ್ಶನದಿಂದಲೇ ಮುಕ್ತಿಯಾಗುವುದು. ಮೃತ್ಯುವತ್ - ಹೇಗೆ ಎಲ್ಲ ಮರಣದ ಅನಂತರ ಮುಕ್ತಿಯಾಗುವುದಿಲ್ಲವೋ, ಆದರೆ ಮರಣವಿಶೇಷದ ಅನಂತರವೇ ಮುಕ್ತಿಯಾಗುವುದೋ ಹಾಗೆ. ಭಗವಂತನ ಮತ್ತೊಂದು ರೂಪದ ದರ್ಶನವು ವಿಫಲವಾಗಲು ಸಾಧ್ಯವಿಲ್ಲವಾದುದರಿಂದ ಆ ದರ್ಶನಕ್ಕೆ ಯಾವುದು ಫಲವೋ ಅದೇ ಮುಕ್ತಿಯಾಗಿದೆ ಎಂಬ ಆಶಂಕೆಗೆ ಉತ್ತರವಾಗಿ – 'ನ ಹಿ' ಎಂದು ಹೇಳಲಾಗಿದೆ. ಮತ್ತೊಂದು ಭಗವದ್ರೂಪದ ದರ್ಶನಕ್ಕೆ ಫಲವಾದ ಲೋಕಾಪತ್ತಿಃ – ಮಹರ್ಲೋಕ ಮೊದಲಾದ ಲೋಕಗಳ ಪ್ರಾಪ್ತಿಯು ಮುಕ್ತಿಯಾಗುವದಿಲ್ಲವೆಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ—**

'ನ ಹಿ ತತ್ ಫಲಂ' – 'ರೂಪಾಂತರದರ್ಶನದ ಫಲವು ಮೋಕ್ಷವಲ್ಲ' ಎಂದು ಹೇಳಬಹುದಾಗಿದ್ದರೂ ರೂಪಾಂತರದರ್ಶನದ ಫಲ ಇಂತಹುದೆಂದು ಸೂಚಿಸಲು 'ಲೋಕಾಪತ್ತಿಃ' ಎಂದು ಹೇಳಲಾಗಿದೆ. 'ದೃಷ್ಟಿ' ಎಂಬ ಪದ ಪ್ರಸ್ತುತವಾಗಿದ್ದರೂ

सूचनाय। दृष्टिपदे प्रकृतेऽप्युपलब्धेरित्युक्तिः उप समीपे योग्यतया स्थितस्य रूपस्योपलब्धिरिति स्वयोग्यदृष्टेः मुक्तिरित्यपि सूचनायेत्येके। न सामान्यादुपलब्धेरित्यनेन स्वयोग्यदृष्टेरित्यपि लभ्यत इत्यन्ये ॥ ३३ ॥

परेणाधिकरणम्—३४

॥ ॐ परेण च शब्दस्य ताद्विध्यं भूयस्त्वात्त्वनुबन्धः ॐ ॥
३.३.५४

अत्र भक्तेः स्वातन्त्र्येण दृष्टिहेतुत्वं नेत्युच्यते। च एव। तुरावर्तते। प्रस्तावात् दृष्ट्यादिकमित्यन्वेति।

---

ಅದನ್ನು ಬಿಟ್ಟು 'ಉಪಲಬ್ಧೇಃ' ಎಂದು ಹೇಳಿರುವುದು ಉಪ-ಸಮೀಪದಲ್ಲಿ ತನಗೆ ಮುಕ್ತಿಕೊಡಲು ಯೋಗ್ಯವಾಗಿರುವ ರೂಪದ ಜ್ಞಾನ ಎಂದು ಸ್ವಯೋಗ್ಯವಾದ ಭಗವದ್ರೂಪದ ದರ್ಶನದಿಂದಲೇ ಮುಕ್ತಿ ಎಂಬುದನ್ನೂ ಸೂಚಿಸುವುದಕ್ಕಾಗಿ ಎಂದು ಕೆಲವರು ಹೇಳುವರು. ಮತ್ತೆ ಕೆಲವರು 'ನ ಸಾಮಾನ್ಯಾದುಪಲಬ್ಧೇಃ' ಎಂಬ ಪದಗಳಿಂದ 'ಸ್ವಯೋಗ್ಯ ಭಗವದ್ರೂಪದ ಜ್ಞಾನದಿಂದ' ಎಂಬ ಅರ್ಥವೂ ಲಭಿಸುವುದೆಂದು ಹೇಳುವರು.

ಪರೇಣಾಧಿಕರಣ--೩೪

## ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ ೩.೩.೫೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವದ್ದರ್ಶನಕ್ಕೆ ಭಕ್ತಿಯು ಸ್ವತಂತ್ರವಾಗಿ ಕಾರಣವಲ್ಲವೆಂದು ಹೇಳಲಾಗುವುದು. ಸೂತ್ರದಲ್ಲಿರುವ 'ಚ' ಶಬ್ದವು ಏವಕಾರದ ಅರ್ಥವನ್ನು ಹೇಳುವುದು. 'ತು' ಶಬ್ದವು ಆವೃತ್ತಿಯನ್ನು ಪಡೆಯುವುದು, ಪ್ರಸ್ತುತವಾಗಿರುವುದರಿಂದ 'ದೃಷ್ಟ್ಯಾದಿಕಂ' ಎಂಬ ಪದವು ಅನ್ವಿತವಾಗುವುದು.

परेण च परमात्मनैव दृष्ट्यादिकं, न भक्त्या स्वतन्त्रया। कुतः? 'एतैरुपायैर्यतते यस्तु विद्वांस्तस्यैष आत्मा विशते ब्रह्मधाम' इति श्रुतेरिति भावः। कथं तर्हि 'भक्तिरेवैनं' इति श्रुतिरत उक्तं शब्दस्येति। 'भक्तिरेव' इति शब्दस्य ताद्विध्यं तु भक्तेः स्वातन्त्र्येण दृष्ट्यादिहेतुत्ववाचित्वं तु तस्याः कारणत्वात् युक्तमिति शेषः। 'हन्ता रामशरः' इतिवदुपचार इति भावः। सत्स्वन्येषु भक्तेर्विशिष्योक्तिः

---

ಪರೇಣ ಚ – ಪರಮಾತ್ಮನಿಂದಲೇ, ದೃಷ್ಟ್ಯಾದಿಕಂ - ಭಗವದ್ದರ್ಶನ ಮೊದಲಾದವು ಉಂಟಾಗುವುದು ಹೊರತು ಸ್ವತಂತ್ರವಾದ ಭಕ್ತಿಯಿಂದ ಉಂಟಾಗಲಾರದು. ಏಕೆಂದರೆ, '[1]ಏತೈರುಪಾಯೈಃ ಯತತೇ ಯಸ್ತು ವಿದ್ವಾನ್ ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ' (ಮು. ೩.೨.೩) ಎಂಬ ಶ್ರುತಿಯಿಂದ ಎಂದು ಭಾವ. ಹಾಗಾದರೆ, 'ಭಕ್ತಿರೇವೈನಂ' ಎಂಬ ಶ್ರುತಿ ಹೇಗೆ ಯುಕ್ತವಾಗುವುದು ಎಂಬ ಶಂಕೆಗೆ ಉತ್ತರ—'ಶಬ್ದಸ್ಯ' ಎಂದು. ಭಕ್ತಿರೇವ ಎಂಬ ಶ್ರುತಿಗೆ, ತಾದ್ವಿಧ್ಯಂ ತು– 'ಭಕ್ತಿಯು ಸ್ವತಂತ್ರವಾಗಿ ಭಗವದ್ದರ್ಶನಾದಿಗಳಿಗೆ ಕಾರಣವಾಗಿದೆ' ಎಂಬ ವಿಷಯದ ಪ್ರತಿಪಾದಕತ್ವವು ಭಕ್ತಿಯು ಭಗವದ್ದರ್ಶನಕ್ಕೆ ಕಾರಣವಾಗಿರುವುದರಿಂದ ಯುಕ್ತವಾಗಿದೆ. ಇಲ್ಲಿ 'ಭಕ್ತಿಯು ಭಗವದ್ದರ್ಶನಕ್ಕೆ ಕಾರಣವಾಗಿರುವುದರಿಂದ ಯುಕ್ತವಾಗಿದೆ' ಎಂಬ ಭಾಗವು ಶೇಷಪೂರಣವಾಗಿದೆ. 'ಹಂತಾ ರಾಮಶರಃ' - 'ರಾಮನ ಬಾಣ ಕೊಂದಿತು' ಎಂಬ ವಾಕ್ಯದಂತೆ 'ಭಕ್ತಿಯೇ ಭಗವದ್ದರ್ಶನಕ್ಕೆ ಕಾರಣ' ಎಂಬ

---

1. ಭಕ್ತಿಪ್ರಧಾನವಾದ ಪ್ರವಚನಾದ್ಯುಪಾಯಗಳಿಂದ ಯಾರು ಬ್ರಹ್ಮದರ್ಶನಕ್ಕಾಗಿ ಪ್ರಯತ್ನಿಸುವರೋ ಆ ಅಧಿಕಾರಿಗೆ ಪ್ರಸನ್ನನಾದ ಪರಮಾತ್ಮನು ತನ್ನ ಅಧಿಷ್ಠಾನವಾದ ವಾಯುವಿನಲ್ಲಿ ಪ್ರಕಟನಾಗುವನೆಂದು ಶ್ರುತಿಯ ಭಾವ. 'ಪ್ರಧಾನಂ ಧಾಮ ವಿಷ್ಣೋಸ್ತು ಪ್ರಾಣ ಏವ ಪ್ರಕೀರ್ತಿತಃ' ಎಂಬ ಪ್ರಮಾಣಾನುಸಾರ ಬ್ರಹ್ಮಧಾಮನೆಂದರೆ ವಾಯು.

2. 'ಭಕ್ತಿರೇವೈನಂ ನಯತಿ ಭಕ್ತಿರೇವೈನಂ ದರ್ಶಯತಿ ಭಕ್ತಿವಶಃ ಪುರುಷೋ ಭಕ್ತಿರೇವ ಭೂಯಸೀ' ಎಂಬ ಮಾಠರ ಶ್ರುತಿ.

कुतः ? भूयस्त्वात्त्वनुबन्धः । अनुबन्धस्तु भक्तिस्तु भूयस्त्वात् करणेषु प्रधानत्वादुक्त इत्यर्थः ।

यद्वा परेणैव वाच्येन निमित्तेन शब्दस्य भक्तिरेवेति शब्दस्य ताद्विध्यं युक्तमिति वृत्त्यन्तरम् एतदंशस्य बोध्यम् । सर्वशब्दानां ब्रह्मणि वृत्तेः प्रथमे सिद्धत्वात् तत्परेयं श्रुतिरिति भावः । केचित्तु

---

ವಾಕ್ಯ ಔಪಚಾರಿಕವೆಂದು ಭಾವ. ವೈರಾಗ್ಯ, ಶಮಾದಿಗಳು ಮೊದಲಾದ ಇತರ ಸಾಧನಗಳಿರುವಾಗ ಭಕ್ತಿಯನ್ನೇ ಪ್ರತ್ಯೇಕವಾಗಿ ಇಲ್ಲಿ ಸ್ವತಂತ್ರಕಾರಣವಲ್ಲವೆಂದು ಹೇಳಿದ್ದೇಕೆ ? ಎಂಬ ಶಂಕೆಗೆ ಉತ್ತರ—'ಭೂಯಸ್ತ್ವಾತ್ತ್ವ ಅನುಬಂಧಃ' ಎಂದು. ಅನುಬಂಧಸ್ತು–ಭಕ್ತಿಯಾದರೋ, ಭೂಯಸ್ತ್ವಾತ್–ಭಗವದ್ದರ್ಶನದ ಅಸಾಧಾರಣ ಕಾರಣಗಳಲ್ಲಿ ಪ್ರಧಾನವಾದುದರಿಂದ ಹೇಳಲ್ಪಟ್ಟಿದೆ ಎಂದು ಅರ್ಥ.

**'ಪರೇಣ ಚ ಶಬ್ದಸ್ಯ ತಾದ್ವಿಧ್ಯಂ' ಎಂಬ ಸೂತ್ರಭಾಗಕ್ಕೆ ವ್ಯಾಖ್ಯಾನಾಂತರ—**

ಅಥವಾ, ಪರೇಣೈವ - ಪರಮಾತ್ಮನೇ ವಾಚ್ಯನಾಗಿರುವ ಕಾರಣ, ಶಬ್ದಸ್ಯ - 'ಭಕ್ತಿರೇವ' ಎಂಬ ಶ್ರುತಿಗೆ, ತಾದ್ವಿಧ್ಯಂ - 'ಪರಮಾತ್ಮನಿಂದಲೇ ದರ್ಶನಾದಿಗಳು ಉಂಟಾಗುವವು' ಎಂಬ ವಿಷಯದ ಪ್ರತಿಪಾದಕತ್ವವು ಯುಕ್ತವಾಗಿದೆ ಎಂದು 'ಪರೇಣ ಚ ಶಬ್ದಸ್ಯ ತಾದ್ವಿಧ್ಯಂ' ಎಂಬ ಸೂತ್ರದ ಅಂಶಕ್ಕೆ ವ್ಯಾಖ್ಯಾನಾಂತರವನ್ನು ತಿಳಿಯಬೇಕು. ಸಮಸ್ತ ಶಬ್ದಗಳಿಗೂ ಪರಬ್ರಹ್ಮನೇ ವಾಚ್ಯನಾಗಿರುವನೆಂದು ಪ್ರಥಮಾಧ್ಯಾಯದಲ್ಲಿ ಸಿದ್ಧವಾಗಿರುವುದರಿಂದ 'ಭಕ್ತಿರೇವ' ಎಂಬ ಶ್ರುತಿಯೂ ಭಗವತ್ಪರವೇ ಎಂದು ಭಾವ. ಕೆಲವರು, ಶಬ್ದಸ್ಯ— 'ಏತೈರುಪಾಯೈ' ಎಂಬ ಶ್ರುತಿಗೆ, ತಾದ್ವಿಧ್ಯಂ–'ಪರಮಾತ್ಮನಿಂದಲೇ ದರ್ಶನಾದಿಗಳು ಉಂಟಾಗುವವು' ಎಂಬ ಅರ್ಥಪ್ರತಿಪಾದಕತ್ವವಿದೆಯಾದ್ದರಿಂದ, ಪರೇಣೈವ ದೃಷ್ಟ್ಯಾದಿಕಂ– ಪರಮಾತ್ಮನಿಂದಲೇ ದರ್ಶನಾದಿಗಳು ಉಂಟಾಗುವವು ಎಂದೂ ಸೂತ್ರದ ಪದಗಳ ಯೋಜನೆಯನ್ನು ಮಾಡುವರು.

शब्दस्य एतैरिति शब्दस्य ताद्विध्यं परेणैव दृष्ट्यादिकं भवतीत्येतदर्थ-वाचित्वमस्ति यतोऽतः परेणैव दृष्ट्यादिकमित्यपि योजयन्ति।

भक्तिरिति वाच्ये अनुबन्ध इत्युक्तिरस्य प्राधान्यघटनाय।
श्रुतौ विशिष्योक्तेर्गतिसूचकस्तुशब्दः ॥ ३४ ॥

एकाधिकरणम्—३५

॥ ॐ एक आत्मनः शरीरे भावात् ॐ ॥ ३.३.५५

अत्र योग्यतानादित्वाय अंशांशिनोरैक्यमुच्यते। चेत्यस्ति।

---

**ಸೂತ್ರದಲ್ಲಿ 'ಅನುಬಂಧ' ಪದಪ್ರಯೋಗಕ್ಕೆ ಕಾರಣ**

'ಭಕ್ತಿ' ಎಂದೇ ಸೂತ್ರದಲ್ಲಿ ಹೇಳಬಹುದಾಗಿದ್ದರೂ ಸಾಧನಗಳಲ್ಲಿ ಭಕ್ತಿಗೇ ಪ್ರಾಧಾನ್ಯವೆಂದು ಸೂತ್ರದಲ್ಲಿ ಹೇಳಿರುವುದನ್ನು ಸಮರ್ಥಿಸಲು 'ಅನುಬಂಧ' ಎಂದು ಹೇಳಲಾಗಿದೆ[1]. 'ಭಕ್ತಿರೇವ' ಎಂಬ ಶ್ರುತಿಯಲ್ಲಿ ಭಕ್ತಿಯನ್ನೇ ಪ್ರತ್ಯೇಕವಾಗಿ ಹೇಳಿರುವುದಕ್ಕೆ ಗತಿಯನ್ನು 'ತು' ಶಬ್ದವು ಸೂಚಿಸುವುದು.

ಏಕಾಧಿಕರಣ—೩೫

**ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ ೩.೩.೫೫**

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಯೋಗ್ಯತೆಯು ಅನಾದಿಯೆಂದು ಸಮರ್ಥಿಸುವ ಸಲುವಾಗಿ, ಈ ಅಧಿಕರಣದಲ್ಲಿ

---

1. ಅನು-ಸ್ವಾನುಸಾರೇಣ, ಬಧ್ನಾತಿ ಆರ್ಜಯತಿ ಹರಿಗುರ್ವಾದಿಪ್ರಸಾದಾದಿಕಂ ಎಂಬ ವ್ಯುತ್ಪತ್ತಿಯ ಪ್ರಕಾರ ಹರಿಗುರುಗಳ ಪ್ರಸಾದಕ್ಕೆ ಮುಖ್ಯಕಾರಣವಾದದ್ದು ಭಕ್ತಿ ಎಂದು ತಿಳಿಯುವುದರಿಂದ ಸಾಧನಗಳಲ್ಲಿ ಭಕ್ತಿಗೇ ಪ್ರಾಧಾನ್ಯಯುಕ್ತವೆಂದು ಅನುಬಂಧ ಶಬ್ದದಿಂದ ಸೂಚಿತವಾಗುವುದೆಂದು ಭಾವ.

अंशी अंश इत्येकः। च एव। न भिन्नः। येनांशस्योत्पत्त्या योग्यतानादित्वं न स्यादिति भावः। कुतः? आत्मनोऽशिनः सम्बन्धिनि शरीरे अंशिकर्मार्जितशरीरे भावात्। अंशस्येति शेषो वा। एतदर्थे आत्मन इत्यावृत्तिर्वा। अर्जुनाद्यंशस्य सत्त्वादित्यर्थः। इन्द्राद्यंशिकर्मार्जिते देहे सत्त्वं ततो भेदे न युक्तमिति भावः।

ज्ञानादिभेदादंशांशिनोः भेद एव स्यादित्यत आह—

---

ಅಂಶ–ಅಂಶಿಗಳಿಗೆ ಅಭೇದವನ್ನು ಹೇಳಲಾಗುವುದು. 'ಚ' ಶಬ್ದವು ಅನುವೃತ್ತ ವಾಗುವುದು.

'ಅಂಶ' ಮತ್ತು 'ಅಂಶೀ' ಎಂಬುವು ಒಂದೇ ಆಗಿವೆ — 'ಚ' ಶಬ್ದವು ಏವ ಕಾರದ ಅರ್ಥವನ್ನು ಹೇಳುವುದು—ಭಿನ್ನವಲ್ಲ. ಭಿನ್ನವಾಗಿದ್ದಲ್ಲಿ ಅಂಶಕ್ಕೆ ಉತ್ಪತ್ತಿ ಇರುವುದರಿಂದ ಅಂಶದ ಯೋಗ್ಯತೆ ಅನಾದಿಯಾಗದಿರುವ ಪ್ರಸಂಗ ಬರುತ್ತಿದ್ದಿತೆಂದು ಭಾವ. ಅಂಶಾಂಶಿಗಳಿಗೆ ಅಭೇದವೇಕೆ ? ಎಂದರೆ—ಆತ್ಮನಃ-ಅಂಶಿಯಾದ ಚೇತನ ನಿಗೆ ಸಂಬಂಧಿಸಿದ, ಶರೀರೇ–ಶರೀರದಲ್ಲಿ– ಅಂಶಿಯಾದ ಚೇತನನು ತನ್ನ ಕರ್ಮದಿಂದ ಸಂಪಾದಿಸಿದ ಶರೀರದಲ್ಲಿ, ಭಾವಾತ್–ಅರ್ಜುನ ಮೊದಲಾದ ಅಂಶಚೇತನರು ಇರು ವುದರಿಂದ ಎಂದು ಅರ್ಥ. ಇಲ್ಲಿ 'ಅಂಶಚೇತನರು' ಎಂಬುದು ಶೇಷಪೂರಣವಾಗಿದೆ. ಅಥವಾ, 'ಅಂಶಚೇತನರು' ಎಂಬುದು ಲಭಿಸುವುದಕ್ಕಾಗಿ ಸೂತ್ರದಲ್ಲಿರುವ 'ಆತ್ಮನಃ' ಎಂಬ ಪದವನ್ನು ಆವೃತ್ತಿಮಾಡಿಕೊಳ್ಳಬೇಕು. ಇಂದ್ರ ಮೊದಲಾದ ಅಂಶಿಚೇತನರ ಕರ್ಮದಿಂದ ಸಂಪಾದಿತವಾದ ದೇಹದಲ್ಲಿ ಅಂಶಚೇತನರಿರುವುದು ಅಂಶಾಂಶಿಗಳಿಗೆ ಭೇದವಿದ್ದರೆ ಯುಕ್ತವಲ್ಲವೆಂದು ಭಾವ.

ಅಂಶಾಂಶಿಗಳ ಜ್ಞಾನ ಮೊದಲಾದವುಗಳು ಭಿನ್ನವಾಗಿರುವುದರಿಂದ ಅವರಿಗೆ ಭೇದವಿರುವುದೇ ಯುಕ್ತವೆಂಬ ಶಂಕೆಗೆ ಉತ್ತರ—

॥ ॐ व्यतिरेकस्तद्भावभावित्वात् न तूपलब्धिवत् ॐ ॥
३.३.५६

तुरेव। उपलब्धीत्युपलक्षणम्। ज्ञानसुखादौ व्यतिरेक इवांशांशिनोर्व्यतिरेकस्तु भेद एवेति न। कुतः? तद्भावभावित्वात्। तस्यांशिनो भावेन उपासनादिना भावित्वात् अंशस्य तत्फलानुसन्धातृत्वात् अल्पे ज्ञानादावनुसन्धानाभावेऽप्यंशिगतोपासनादिफलानु-

---

ಓಂ ವ್ಯತಿರೇಕಃ ತದ್ಭಾವಭಾವಿತ್ವಾತ್ ನ ತೂಪಲಬ್ಧಿವತ್ ಓಂ
೩.೩.೫೬

**ಸೂತ್ರಾರ್ಥ**

'ತು' ಶಬ್ದವು ಏವಕಾರದ ಅರ್ಥವನ್ನು ಹೇಳುವುದು - 'ಉಪಲಬ್ಧಿ' ಪದವು ಉಪಲಕ್ಷಣವಾಗಿದೆ[1].

ಉಪಲಬ್ಧಿವತ್ – ಅಂಶ ಮತ್ತು ಅಂಶಿಗಳ ಜ್ಞಾನ, ಸುಖ ಮೊದಲಾದವುಗಳಲ್ಲಿ ಭೇದವಿರುವಂತೆ ಅಂಶಾಂಶಿಗಳಲ್ಲಿ–ವ್ಯತಿರೇಕಸ್ತು, ನ, ಭೇದವೇ ಎಂದಿಲ್ಲ. ಏಕೆಂದರೆ, ತದ್ಭಾವಭಾವಿತ್ವಾತ್ – ತಸ್ಯ - ಆ ಅಂಶಿಯ, ಭಾವೇನ - ಉಪಾಸನಾದಿಗಳಿಂದ, ಭಾವಿತ್ವಾತ್ – ಅಂಶಕ್ಕೆ ಆ ಉಪಾಸನಾದಿಗಳ ಫಲದ ಅನುಸಂಧಾನವಿರುವುದರಿಂದ, ಅಲ್ಪವಾದ ಜ್ಞಾನಾದಿಗಳಲ್ಲಿ ಅಂಶಾಂಶಿಗಳಿಗೆ ಪರಸ್ಪರ ಅನುಸಂಧಾನವಿಲ್ಲದಿದ್ದರೂ - ಅಂಶಿಯು ಮಾಡುವ ಉಪಾಸನಾದಿಗಳ ಫಲದ ಅನುಸಂಧಾನ ಅಂಶಕ್ಕಿರುವುದರಿಂದ

---

1. ಉಪಲಬ್ಧಿಪದವು ಜ್ಞಾನ ಮಾತ್ರವನ್ನಲ್ಲದೆ ಸುಖ ಮೊದಲಾದ ಅರ್ಥವನ್ನೂ ಲಕ್ಷಣಾವೃತ್ತಿಯಿಂದ ಹೇಳುವುದೆಂದು ಭಾವ.

सन्धानादित्यर्थः । तथा तद्भावस्यांशगतज्ञानादेः धर्मस्य भावित्वादंशिनोऽनुसन्धातृत्वादित्यर्थः ॥ ३५ ॥

अङ्गावबद्धाधिकरणम्—३६

॥ ॐ अङ्गावबद्धास्तु न शाखासु हि प्रतिवेदम् ॐ ॥
३.३.५७

अत्र ब्रह्मादिपरिवारदेवतोपास्तिः कार्येति साध्यते । तुर्विशेषे ।

---

ಎಂದು ಅಥವಾ, ತದ್ಭಾವಸ್ಯ - ಅಂಶದಲ್ಲಿರುವ ಜ್ಞಾನ ಮೊದಲಾದ ಧರ್ಮಗಳ, ಭಾವಿತ್ವಾತ್ – ಅನುಸಂಧಾನವು ಅಂಶಿಗೆ ಇರುವುದರಿಂದ ಎಂದು ಅರ್ಥ.[1]

ಅಂಗಾವಬದ್ಧಾಧಿಕರಣ—೩೬

ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ ಓಂ
೩.೩.೫೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಚತುರ್ಮುಖ ಬ್ರಹ್ಮನೇ ಮೊದಲಾದ ಪರಿವಾರದೇವತೆಗಳ ಉಪಾಸನೆಯನ್ನು ಮಾಡತಕ್ಕದ್ದೆಂದು ಸಮರ್ಥಿಸಲಾಗುವುದು. ಸೂತ್ರದಲ್ಲಿರುವ 'ತು' ಶಬ್ದವು ವಿಶೇಷ ಎಂಬ ಅರ್ಥವುಳ್ಳದ್ದು.

---

1. ಅಂಶ – ಅಂಶಿಗಳ ವೃತ್ತಿರೂಪವಾದ ಜ್ಞಾನ, ಸುಖ ಮೊದಲಾದ ಧರ್ಮಗಳು ಭಿನ್ನಗಳಾಗಿವೆ. ಆದರಂತೆ ಅಂಶ-ಅಂಶಿಗಳೂ ಪರಸ್ಪರ ಸಂಪೂರ್ಣವಾಗಿ ಭಿನ್ನರಾಗಿದ್ದಾರೆ ಎಂದು ಹೇಳುವುದು ಯುಕ್ತವಲ್ಲ. ಅಲ್ಪವಾದ ವೃತ್ತಿಜ್ಞಾನ ಮೊದಲಾದವುಗಳಲ್ಲಿ ಅಂಶಾಂಶಿಗಳಿಗೆ ಯದ್ಯಪಿ ಭೇದವಿದೆ. ಆದರೆ ಅಂಶಿ ಚೇತನವು ಮಾಡುವ ಉಪಾಸನಾದಿಗಳ ಫಲದ ಅನುಸಂಧಾನ ಅಂಶಚೇತನಕ್ಕೂ ಆಗುವುದು. ಅಲ್ಲದೆ, ಅಂಶಿಯು ಜ್ಞಾನಾದಿಗಳ ಅನುಸಂಧಾನ ಅಂಶಕ್ಕಾಗದಿದ್ದರೂ ಅಂಶದಲ್ಲಿರುವ ಜ್ಞಾನಸುಖಾದಿಗಳ ಅನುಸಂಧಾನ ಅಂಶಿಚೇತನಕ್ಕಾಗುವುದರಿಂದ ಅಂಶಾಂಶಿಗಳು ಭಿನ್ನರಲ್ಲ ಎಂದು ಒಟ್ಟು ಸಾರಾಂಶ.

**अङ्गावबद्धाः ईशस्याङ्गतया अवबद्धाः स्थिताः ब्रह्माद्याः उपास्या इति शेषः । कुतः ? वेदेषु तेषामुक्तेः फलान्तराभावेन तदनुपपत्तेरेव । आध्यानायेत्युक्तत्वादिति । तर्हि देवत्ववैष्णवत्वादिधर्माणां सर्वदेवेष्विव ब्रह्माद्यसाधारणधर्माणां रुद्रादिषु रुद्रत्वादिगुणानां च ब्रह्मादिषु उपसंहार्यता स्यादित्यत उक्तं—त्विति । उपसंहारे तु अस्ति विशेष इत्यर्थः । स कः ? प्रतिवेदं याः शाखास्तासु उक्तं ब्रह्मादिगुणजातं**

---

ಅಂಗಾವಬದ್ಧಾಃ – ಭಗವಂತನಿಗೆ ಅಂಗವಾಗಿ ಇರತಕ್ಕ ಬ್ರಹ್ಮಾದಿಗಳು ಉಪಾಸ್ಯರು - ಇಲ್ಲಿ 'ಉಪಾಸ್ಯರು' ಎಂಬ ಪದವು ಶೇಷಪೂರಣವಾಗಿದೆ — ಏಕೆಂದರೆ, 'ಆಧ್ಯಾನಾಯ'[1] (ಬ್ರ.ಸೂ. ೩.೩.೧೫) ಎಂಬಲ್ಲಿ ಹೇಳಿರುವಂತೆ ವೇದಗಳಲ್ಲಿ ಆ ಬ್ರಹ್ಮಾದಿ ದೇವತೆಗಳನ್ನು ಹೇಳಿರುವುದಕ್ಕೆ ಬೇರೆ ಪ್ರಯೋಜನವಿಲ್ಲದ್ದರಿಂದ, ಬ್ರಹ್ಮಾದಿಗಳು ಉಪಾಸ್ಯರೆಂದು ಸಿದ್ಧವಾಗುವುದು. ಅವರು ಉಪಾಸ್ಯರಲ್ಲವಾದರೆ ವೇದಗಳಲ್ಲಿ ಬ್ರಹ್ಮಾದಿಗಳನ್ನು ಹೇಳಿರುವುದೇ ಅನುಪಪನ್ನವಾಗುವುದು.

ಹಾಗಾದರೆ, ದೇವತ್ವ, ವೈಷ್ಣವತ್ವ ಮೊದಲಾದ ಧರ್ಮಗಳನ್ನು ಎಲ್ಲ ದೇವತೆಗಳಲ್ಲಿ ಉಪಸಂಹಾರ ಮಾಡುವಂತೆ ಬ್ರಹ್ಮನೇ ಮೊದಲಾದ ದೇವತೆಗಳ ಅಸಾಧಾರಣ ಧರ್ಮಗಳನ್ನು ರುದ್ರಾದಿಗಳಲ್ಲಿ, ಅಂತೆಯೇ ರುದ್ರಾದಿಗಳ ಅಸಾಧಾರಣ ಧರ್ಮಗಳಾದ ರುದ್ರತ್ವಾದಿಗಳನ್ನು ಬ್ರಹ್ಮಾದಿಗಳಲ್ಲೂ ಉಪಸಂಹಾರ ಮಾಡಬಹುದು ಎಂದಾಗಲಿ ಎಂಬ ಆಶಂಕೆಗೆ ಸಮಾಧಾನವಾಗಿ 'ತು' ಎಂದು ಸೂತ್ರದಲ್ಲಿ ಹೇಳಲಾಗಿದೆ. ಉಪ

---

1. 'ಆಧ್ಯಾನಾಯ ಪ್ರಯೋಜನಾಭಾವಾತ್' [ಬ್ರ. ಸೂ. ೩.೩.೧೫] ಎಂಬ ಸೂತ್ರದಲ್ಲಿ, ಸಮಸ್ತವೇದಾದಿಗಳಲ್ಲಿ ಭಗವಂತನ ಅಸಂಖ್ಯಾತ ಗುಣಗಳನ್ನು ಹೇಳಿರುವುದು ಆ ಗುಣಗಳನ್ನು ಭಗವಂತನಲ್ಲಿ ಉಪಸಂಹಾರಮಾಡಿ ಧ್ಯಾನಿಸುವುದಕ್ಕೋಸ್ಕರ. ಸರ್ವಗುಣಗಳನ್ನು ಹೇಳಿರುವುದಕ್ಕೆ ಇದಲ್ಲದೆ ಬೇರೆ ಪ್ರಯೋಜನವಿಲ್ಲವೆಂದು ಹೇಳಿದೆ. ಅದೇ ನ್ಯಾಯದಿಂದ ಸಮಸ್ತವೇದಗಳಲ್ಲಿ ಬ್ರಹ್ಮಾದಿ ದೇವತೆಗಳನ್ನು ಹೇಳಿರುವುದು ಅವರ ಉಪಾಸನೆ ಮಾಡಬೇಕೆಂಬ ಉದ್ದೇಶದಿಂದಲೇ ಹೊರತು ಅದಕ್ಕೆ ಬೇರಾವ ಪ್ರಯೋಜನವೂ ಇಲ್ಲವೆಂದು ಭಾವ.

रुद्रादौ नोपसंहार्यम्। उत्तमानां गुणा अवरेषु समेषु अन्योन्यस्मिन् न ध्येया इत्यर्थः। कुत एतदित्यतो हीत्युक्तम्। समत्वाद्वोत्तमत्वाद्वेति स्मृतेरित्यर्थः।

ब्रह्माद्या इति वाच्ये अङ्गेत्याद्युक्तिः तेषामुपास्तिर्न प्राधान्येन, किन्तु अङ्गत्वेनेति सूचनाय। तेन 'तमेवैकं' इति श्रुतिविरोधो नास्ति। तत्र प्राधान्येन ज्ञेयत्वनिरासादिति फलितम्। अङ्गदेवा इति

---

ಸಂಹಾರದಲ್ಲಿ ವಿಶೇಷವಿದೆ ಎಂದು ಅರ್ಥ. ಆ ವಿಶೇಷವೇನು? ಎಂಬ ಪ್ರಶ್ನೆಗೆ ಉತ್ತರವಾಗಿ 'ಪ್ರತಿವೇದಂ' ಇತ್ಯಾದಿ ಹೇಳಲಾಗಿದೆ. ಪ್ರತಿವೇದಂ ಶಾಖಾಸು ನ – ಪ್ರತಿಯೊಂದು ವೇದಕ್ಕೆ ಯಾವ ಶಾಖೆಗಳಿವೆಯೋ ಅವುಗಳಲ್ಲಿ ಹೇಳಿರುವ ಬ್ರಹ್ಮಾದಿಗಳ ಗುಣಸಮೂಹವನ್ನು ರುದ್ರಾದಿಗಳಲ್ಲಿ ಉಪಸಂಹಾರ ಮಾಡತಕ್ಕದ್ದಲ್ಲ. ಉತ್ತಮರ ಗುಣಗಳನ್ನು ಅವರರಲ್ಲೂ, ಸಮಾನರಲ್ಲೂ ಕೂಡ ಒಬ್ಬರ ಗುಣಗಳನ್ನು ಮತ್ತೊಬ್ಬರಲ್ಲಿ ಧ್ಯಾನಿಸತಕ್ಕದಲ್ಲ ಎಂದು ಅರ್ಥ. ಈ ವಿಷಯದಲ್ಲಿ ಪ್ರಮಾಣವೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಸೂತ್ರದಲ್ಲಿ 'ಹಿ' ಎಂದು ಹೇಳಲಾಗಿದೆ. '[1]ಸಮತ್ವಾದ್ವೋತ್ತಮತ್ವಾದ್ವಾ' ಎಂಬ ಸ್ಮೃತಿಯಿಂದ ಈ ಪ್ರಮೇಯವು ತಿಳಿದುಬರುವುದೆಂದು ಅರ್ಥ.

---

1. ಸಮತ್ವಾದ್ವಾ ಉತ್ತಮತ್ವಾದ್ವಾ ನಾಂಗದೇವಾದ್ಯುಪಾಸನಮ್ ।
ಉಪಸಂಹಾರ್ಯಮಿತ್ಯಾಹುಃ ವೇದಸಿದ್ಧಾಂತವೇದಿನಃ ॥ (ಬ್ರಹ್ಮತರ್ಕ)

ಮುಮುಕ್ಷುಗಳು ಅಂಗದೇವತೆಗಳಾದ ಬ್ರಹ್ಮಾದಿಗಳ ಉಪಾಸನೆಯನ್ನು ಮಾಡತಕ್ಕದ್ದು. ಆದರೆ, ಉತ್ತಮರ ಗುಣಗಳನ್ನು ಅಧಮರಲ್ಲಿ ಉಪಸಂಹಾರ ಮಾಡತಕ್ಕದ್ದಲ್ಲ. ಏಕೆಂದರೆ, ಒಬ್ಬ ದೇವತೆಯ ಗುಣಗಳನ್ನು ಮತ್ತೊಬ್ಬ ದೇವತೆಯಲ್ಲಿ ಉಪಸಂಹಾರ ಮಾಡಬಹುದಾಗಿದ್ದರೆ ಎಲ್ಲ ದೇವತೆಗಳು ಸಮಾನರಾಗಿಯೇ ಇರಬೇಕಾಗಿತ್ತು. ಆದರೆ ಕೆಲವು ದೇವತೆಗಳು ಸಮಾನರು, ಮತ್ತಿತರರು ಉತ್ತಮರಾಗಿರುವುದರಿಂದ ಸರ್ವದೇವತೆಗಳಲ್ಲಿ ಸಾಮ್ಯವಿಲ್ಲ. ಆದ್ದರಿಂದ ಉತ್ತಮದೇವತೆಗಳ ಗುಣಗಳನ್ನು ಅಧಮದೇವತೆಗಳಲ್ಲಿ ಉಪಸಂಹಾರ ಮಾಡಬಾರದೆಂದು ಸಿದ್ಧಿಸುವುದು. ವೇದಸಿದ್ಧಾಂತವನ್ನು ಬಲ್ಲವರು ಹೀಗೆ ಹೇಳುವರೆಂದು ಬ್ರಹ್ಮತರ್ಕ ವಚನದ ಭಾವ.

वाच्ये अवबद्धा इत्युक्तिः अवमत्वाद् बद्धत्वादङ्गत्वमित्यङ्गत्वोपपादनायेत्येके। अन्ये तु — ईशाङ्गेष्ववबद्धाः स्थिता इत्येव तेषामङ्गदेवतात्वं न तु तदङ्गत्वेनैव। 'विष्णोरङ्गसमुद्भूतेः विष्णोरङ्गानि देवताः' इत्युक्तेः। यतो जनिस्तत्रैव स्थितेः अङ्गत्वमेव कुतो नेत्यतोऽवबद्धत्वादिति वक्तुमित्याहुः। वस्तुतस्तु अङ्गावबद्धा इत्यस्य नायमर्थः। भाष्यादिविरोधात्। किन्तु, अङ्गैः अङ्गदेवैरवबद्धाः

---

**ಸೂತ್ರದ ಪದಗಳ ಸ್ವಾರಸ್ಯ**

ಬ್ರಹ್ಮಾದಿ ದೇವತೆಗಳ ಉಪಾಸನೆಯನ್ನು ಅಂಗತ್ವೇನ ಮಾಡತಕ್ಕದ್ದೇ ಹೊರತು ಪ್ರಧಾನತಯಾ ಮಾಡತಕ್ಕದ್ದಲ್ಲ ಎಂದು ಸೂಚಿಸಲು ಸೂತ್ರದಲ್ಲಿ 'ಬ್ರಹ್ಮಾದ್ಯಾಃ' ಎಂದು ಹೇಳುವ ಬದಲಾಗಿ 'ಅಂಗಾವಬದ್ಧಾಃ' ಎಂದು ಹೇಳಲಾಗಿದೆ. ಇದರಿಂದಾಗಿ, 'ತಮೇವೈಕಂ ಜಾನಥ' ಎಂಬ ಶ್ರುತಿಯಲ್ಲಿ ಭಗವದಿತರರನ್ನು ಪ್ರಧಾನವಾಗಿ ತಿಳಿಯತಕ್ಕದ್ದಲ್ಲ ಎಂದು ನಿರಾಕರಿಸಿರುವುದರಿಂದ ಬ್ರಹ್ಮಾದಿದೇವತೆಗಳ ಉಪಾಸನಾದಿಗಳನ್ನು ಮಾಡಬೇಕೆಂದು ಹೇಳುವ ಪ್ರಕೃತಸೂತ್ರಕ್ಕೆ 'ತಮೇವೈಕಂ ಜಾನಥ' ಎಂಬ ಶ್ರುತಿಯು ವಿರೋಧವಿಲ್ಲವೆಂದು ಸಿದ್ಧವಾಗುವುದು.

'ಅಂಗದೇವಾಃ' ಎಂದು ಹೇಳುವ ಬದಲು 'ಅವಬದ್ಧಾಃ' ಎಂದು ಸೂತ್ರದಲ್ಲಿ ಹೇಳಿರುವುದು. ಬ್ರಹ್ಮಾದಿದೇವತೆಗಳು ವಿಷ್ಣುವಿನ ದೃಷ್ಟಿಯಿಂದ ಅವಮ ಎಂದರೆ ಅಧಮರಾದ್ದರಿಂದ ಮತ್ತು ಬದ್ಧರಾದ್ದರಿಂದ ಅಂಗರೆಂದೆನಿಸುವರು ಎಂದು ಬ್ರಹ್ಮಾದಿದೇವತೆಗಳಿಗೆ ಅಂಗತ್ವವನ್ನು ವಿವರಿಸುವ ಸಲುವಾಗಿ ಎಂದು ಕೆಲವರು ಹೇಳುವರು. ಮತ್ತೆ ಕೆಲವರು ಬ್ರಹ್ಮಾದಿದೇವತೆಗಳು ವಿಷ್ಣುವಿನ ಅಂಗದೇವತೆಗಳಾಗಿರುವುದು ಅವನ ಅಂಗಗಳಲ್ಲಿ ಅವಬದ್ಧರು, ಅಂದರೆ ಸ್ಥಿತರಾಗಿರುವರು ಎಂಬ ಕಾರಣದಿಂದಲೇ ಹೊರತು ಭಗವಂತನ ಅಂಗಗಳೇ ಆಗಿರುವುದರಿಂದಲ್ಲ. 'ವಿಷ್ಣೋಃ ಅಂಗಸಮುದ್ಭೂತೇಃ ವಿಷ್ಣೋರಂಗಾನಿ ದೈವತಾಃ' ಎಂಬ ವಚನವೂ ಇದನ್ನೇ ಹೇಳುವುದು. ಎಲ್ಲಿ ಹುಟ್ಟುವರೋ ಅಲ್ಲೇ ಇರುವುದರಿಂದ ವಿಷ್ಣುವಿನ

सम्बद्धास्तद्विषयाः उपास्तिपरिचर्यादयः कार्या इत्येवार्थः । शाखासु इत्येव पूर्तौ प्रतिवेदमित्युक्तिः अविभक्तवेदस्यापि सत्त्वादित्युक्तं तत्त्वप्रदीपे ।

अधमस्थानामुत्तमेषूपसंहारेऽपि न दोष इत्याह —

॥ ॐ मन्त्रादिवद्वाऽविरोधः ॐ ॥ ३.३.५८

---

ಅಂಗಗಳಲ್ಲಿ ಹುಟ್ಟಿದ ಬ್ರಹ್ಮಾದಿದೇವತೆಗಳು ವಿಷ್ಣುವಿನ ಅಂಗಗಳೇ ಆಗಿರುವರೆಂದೇಕೆ ಹೇಳಬಾರದು ಎಂಬ ಶಂಕೆಗೆ ಸಮಾಧಾನವಾಗಿ 'ವಿಷ್ಣುವಿನ ಅಂಗಗಳಲ್ಲಿ ಅವಬದ್ಧರಾಗಿರುವುದರಿಂದ ಅಂದರೆ ಸ್ಥಿತರಾಗಿರುವುದರಿಂದ ಎಂದು ಹೇಳಲು 'ಅಂಗಾವಬದ್ಧಾಃ' ಎಂದು ಹೇಳಲಾಗಿದೆ ಎಂದು ಹೇಳುವರು.

ವಾಸ್ತವಿಕವಾಗಿ, ಭಾಷ್ಯಾದಿ ಗ್ರಂಥಗಳ ವಿರೋಧ ಉಂಟಾಗುವುದರಿಂದ 'ಅಂಗಾವಬದ್ಧಾಃ' ಎಂಬ ಅಂಶಕ್ಕೆ ಮೇಲಿನ ಅರ್ಥ ಸರಿಯಲ್ಲ. ಅದರ ಬದಲು— ಅಂಗೈಃ - ಅಂಗದೇವತೆಗಳಿಂದ, ಅವಬದ್ಧಾಃ - ಸಂಬಂಧ ಪಡೆದಿರುವ ಅವರ ಉಪಾಸನೆ, ಪರಿಚರ್ಯೆ ಮೊದಲಾದವುಗಳು ಮಾಡಲ್ಪಡತಕ್ಕವು ಎಂದು ಆ ಪದದ ಅರ್ಥವಾಗಿದೆ.

'ಶಾಖೆಗಳಲ್ಲಿ' ಎಂದೇ ಸಾಕಾಗಿದ್ದರೂ 'ಪ್ರತಿವೇದಂ' ಎಂದು ಹೇಳಿರುವುದು ವಿಭಾಗವನ್ನು ಪಡೆಯದ ವೇದವೂ ಇರುವುದರಿಂದ ಎಂದು ತತ್ತ್ವಪ್ರದೀಪದಲ್ಲಿ ಹೇಳಿದೆ.

ಅಧಮರಲ್ಲಿರುವ ಗುಣಗಳನ್ನು ಉತ್ತಮರಲ್ಲಿ ಉಪಸಂಹಾರ ಮಾಡಿದರೂ ದೋಷವಿಲ್ಲ ಎಂದು ಹೇಳುವ ಸೂತ್ರ—

ಓಂ ಮಂತ್ರಾದಿವದ್ವಾಽವಿರೋಧಃ ಓಂ ೩.೩.೫೮

वाशब्दो व्यवस्थितविकल्पार्थः । अवरगुणानामुत्तमेषूपसंहारेऽपि अविरोधः । मन्त्रादिवत् । यथा मन्त्रविद्यादेरधमपरस्य उत्तमविषयत्वेनाध्ययनं तथेत्यर्थः । 'पूर्वप्रसिद्धवर्जं तु शक्राद्या देवता मताः' इति ऋग्भाष्योक्तेः ॥ ३६ ॥

---

**ಸೂತ್ರಾರ್ಥ**

'ವಾ' ಶಬ್ದವು ವ್ಯವಸ್ಥಿತ ವಿಕಲ್ಪವನ್ನು[1] ಹೇಳುವುದು. ಅಧಮರ ಗುಣಗಳನ್ನು ಉತ್ತಮರಲ್ಲಿ ಉಪಸಂಹಾರ ಮಾಡಿದರೂ ವಿರೋಧವಿಲ್ಲ. ಮಂತ್ರಾದಿವತ್- ('ಪೂರ್ವ[2] ಪ್ರಸಿದ್ಧವರ್ಜಂ ತು ಶಕ್ರಾದ್ಯಾ ದೇವತಾ ಮತಾಃ' ಎಂದು ಋಗ್ಭಾಷ್ಯದಲ್ಲಿ ಹೇಳಿರುವಂತೆ) ಅಧಮ ದೇವತೆಗಳಲ್ಲಿ ತಾತ್ಪರ್ಯವಿರುವ ಮಂತ್ರ, ವಿದ್ಯೆ ಮೊದಲಾದವುಗಳನ್ನು ಉತ್ತಮ ದೇವತೆಗಳ ಪರವಾಗಿ ಅಧ್ಯಯನ ಮಾಡಿದರೆ ಹೇಗೆ ವಿರೋಧವಿಲ್ಲವೋ ಹಾಗೆ ಎಂದು ಅರ್ಥ.

---

1, ಒಬ್ಬ ದೇವತೆಯ ಗುಣಗಳನ್ನು ಮತ್ತೊಬ್ಬರಲ್ಲಿ ಉಪಸಂಹಾರ ಮಾಡಬಾರದೆನ್ನುವುದು ಉತ್ತಮದೇವತೆಗಳ ಗುಣಗಳಿಗೆ ಸಂಬಂಧಪಟ್ಟದ್ದು. ಉಪಸಂಹಾರ ಮಾಡಬಹುದೆನ್ನುವುದು ಅಧಮರ ಗುಣಗಳಿಗೆ ಸಂಬಂಧಪಟ್ಟದ್ದು ಎಂದು ಉಪಸಂಹಾರ - ಅನುಪಸಂಹಾರಗಳ ವಿಕಲ್ಪವು ವ್ಯವಸ್ಥಿತವಾದುದೆಂದು ಭಾವ.

2. 'ಬ್ರಹ್ಮವಾಯೂ ಗಿರೌ ವೀಂದ್ರಶೇಷರುದ್ರಾಶ್ಚ ತತ್ಸ್ತ್ರಿಯಃ ।
ಶಕ್ರಕಾಮೌ ಕಾಮಪುತ್ರಮನುದಕ್ಷಾಂಗಿರಸ್ಸುತಾಃ ।

ಇತ್ಯಾದಿ ಋಗ್ಭಾಷ್ಯದಲ್ಲಿ ಉದಾಹರಿಸಿರುವ ಪ್ರಮಾಣದಲ್ಲಿ ಹೇಳಲಾಗಿರುವ ದೇವತೆಗಳಲ್ಲಿ, ಮೊದಲು ಹೇಳಲ್ಪಟ್ಟಿರುವ ದೇವತೆಗಳಿಗೆ ಸಂಬಂಧಿಸಿದ್ದೆಂದು ಪ್ರಸಿದ್ಧವಾಗಿರುವ ವಿದ್ಯೆಗಳನ್ನು ಬಿಟ್ಟು ಉಳಿದ ವಿದ್ಯೆಗಳಿಗೆ ಇಂದ್ರ ಮೊದಲಾದವರು ದೇವತೆಗಳಾಗಿರುವರೆಂದು ಭಾವ. ಇದರಿಂದ ಅವಮದೇವತೆಗಳಲ್ಲಿ ಪ್ರಸಿದ್ಧವಾಗಿರುವ ವಿದ್ಯೆಗಳು ಉತ್ತಮದೇವತೆಯನ್ನು ಪ್ರತಿಪಾದಿಸಬಹುದೆಂದೂ, ಅವಮದೇವತೆಗಳಲ್ಲಿ ಪ್ರಸಿದ್ಧವಾಗಿರುವ ಗುಣಗಳನ್ನು ಉತ್ತಮದೇವತೆಯಲ್ಲಿ ಉಪಸಂಹಾರ ಮಾಡಬಹುದೆಂದೂ ಸೂಚಿತವಾಗುವುದು.

भूमाधिकरणम्—३७

॥ ॐ भूम्नः क्रतुवज्ज्यायस्त्वं तथाच दर्शयति ३.३.५९ ॐ॥

अत्र भूमगुणस्य सर्वोपास्यत्वमुच्यते। भूमेत्यत्र भावभवित्रो-रैक्येन धर्मिपरत्वोक्तावपि इह निरतिशयपूर्णत्वरूपधर्मपरो भावप्रधानो वा भूमशब्दः। उपास्य इत्यस्ति।

भूमगुणः सर्वैरुपास्यः। कुतः? भूम्नो भूमगुणस्य ज्यायस्त्वं

---

ಭೂಮಾಧಿಕರಣ—೩೭

ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾಚ ದರ್ಶಯತಿ ಓಂ ೩.೩.೫೯

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭೂಮಗುಣವು ಎಲ್ಲರಿಂದಲೂ ಉಪಾಸಿಸಲು ಅರ್ಹವೆಂದು ಹೇಳಲಾಗುವುದು. 'ಭೂಮಾ ಸಂಪ್ರಸಾದಾತ್ ಅಧ್ಯುಪದೇಶಾತ್' (ಬ್ರ.ಸೂ. ) ಎಂಬ ಸೂತ್ರದಲ್ಲಿ ಧರ್ಮ-ಧರ್ಮಿಗಳಿಗೆ ಅಭೇದವಿರುವುದರಿಂದ ಭೂಮಶಬ್ದವು ನಿರತಿಶಯಪೂರ್ಣತ್ವವೆಂಬ ಧರ್ಮಯುಕ್ತವಾದ ವಿಷ್ಣುವೆಂಬ ಧರ್ಮಿ ವನ್ನು ಹೇಳಿದರೂ ಪ್ರಕೃತಸೂತ್ರದಲ್ಲಿ ಆ ಶಬ್ದವು 'ನಿರತಿಶಯಪೂರ್ಣತ್ವ'ವೆಂಬ ಧರ್ಮವನ್ನು ಹೇಳುವ ತಾತ್ಪರ್ಯವುಳ್ಳದ್ದು. ಅಥವಾ, ಇಲ್ಲಿ ಭೂಮಶಬ್ದವು [1]ಭಾವಪ್ರಧಾನನಿರ್ದೇಶವಾಗಿದೆ. 'ಉಪಾಸ್ಯಃ' ಎಂಬ ಪದವು ಅಧ್ಯಾಹಾರವನ್ನು ಹೊಂದುವುದು.

ಭೂಮಗುಣವು ಎಲ್ಲರಿಂದಲೂ ಉಪಾಸ್ಯವಾಗಿದೆ. ಏಕೆಂದರೆ, ಭೂಮ್ನಃ –

---

1. ಭಾವವೆಂದರೆ ಧರ್ಮ. ಪ್ರಕೃತ, ನಿರತಿಶಯಪೂರ್ಣತ್ವವೆಂಬ ಧರ್ಮ. ಅದನ್ನೇ ಭೂಮಶಬ್ದವು ಇಲ್ಲಿ ಪ್ರಧಾನವಾಗಿ ಹೇಳುವುದೆಂದು ಭಾವ.

सर्वगुणेषु प्राधान्यं यतोऽस्त इति । ज्यायस्त्वं कुतः ? क्रतुवत् । अनेन सर्वगुणेष्वनुस्यूतत्वेन आनन्दादिगुणोपास्तिफलहेतुत्वादिति हेतुर्लभ्यते । यथा दीक्षाप्रायणीयोदयनीयसवनत्रयावभृथात्मकः क्रतुर्विश्वजिदादि-सर्वयागेष्वनुवृत्तत्वेन तत्तद्योग्यानुष्ठानफलहेतुरिति तस्य ज्यायस्त्वं तथेत्यर्थः । इतरगुणापेक्षयाऽस्य प्रशस्ततरत्वद्योतनाय प्रकर्षप्रत्ययः । सर्वानुस्यूतत्वेनास्यैव फलहेतुत्वं कुतः ? — तथा दर्शयति च ।

---

ಭೂಮಗುಣಕ್ಕೆ, ಜ್ಯಾಯಸ್ತ್ವಂ - ಯಾವ ಕಾರಣದಿಂದ ಎಲ್ಲ ಗುಣಗಳಲ್ಲೂ ಪ್ರಾಧಾನ್ಯವಿದೆಯೋ ಆದ್ದರಿಂದ ಎಂದು ಅರ್ಥ. ಭೂಮಗುಣಕ್ಕೆ ಪ್ರಾಧಾನ್ಯವೇಕೆ? ಎಂಬ ಪ್ರಶ್ನೆಗೆ ಉತ್ತರ - ಕ್ರತುವತ್ - ಇದರಿಂದ, 'ಎಲ್ಲ ಗುಣಗಳಲ್ಲೂ ಸೇರ್ಪಡೆಯನ್ನು ಹೊಂದಿ ಆನಂದಾದಿ ಗುಣಗಳ ಉಪಾಸನೆಯು ಫಲವನ್ನು ಕೊಡಲು ಕಾರಣವಾದ್ದರಿಂದ' ಎಂಬ ಭೂಮಗುಣಕ್ಕೆ ಪ್ರಾಧಾನ್ಯವನ್ನು ಸಮರ್ಥಿಸುವ ಹೇತುವು ಲಭಿಸುವುದು. ಹೇಗೆ, ದೀಕ್ಷಾ, ಪ್ರಾಯಣೀಯ ಮತ್ತು ಉದಯನೀಯ ಎಂಬ ಮೂರು ಸವನಗಳಿಂದ ಕೂಡಿದ ಅವಭೃಥ ಎಂದೆನಿಸುವ ಕ್ರತುವು ವಿಶ್ವಜಿತ್ ಮೊದಲಾದ ಎಲ್ಲ ಯಾಗಗಳಲ್ಲೂ ಸೇರಿದ್ದು ಆಯಾಯಾ ಯಾಗಗಳನ್ನು ಅನುಷ್ಠಾನ ಮಾಡಿದಾಗ ದೊರಕುವ ಫಲಕ್ಕೆ ಕಾರಣವಾಗಿದ್ದು ಪ್ರಾಧಾನ್ಯವನ್ನು ಪಡೆದಿರುವುದೋ ಹಾಗೆ ಎಂದು ಅರ್ಥ.[2] ಇತರ ಗುಣಗಳಿಗಿಂತ ಭೂಮಗುಣವು ಪ್ರಶಸ್ತವಾದುದು ಎಂಬು

---

2. ಕ್ರತುಶಬ್ದಕ್ಕೆ ಸಾಮಾನ್ಯವಾಗಿ ಸಾಂಗವಾದ ಯಾಗಾದಿಕ್ರಿಯೆ ಎಂದರ್ಥವಾಗುವುದು. ಆದರೆ ಪ್ರಕೃತಸೂತ್ರದಲ್ಲಿ ದೀಕ್ಷಾ ಮೊದಲಾದ ಅಂಗಗಳನ್ನು ಆ ಶಬ್ದವು ಹೇಳುವುದು. ಜ್ಯೋತಿಷ್ಟೋಮ ಯಾಗದಲ್ಲಿ ಯಜಮಾನನಾದ ವ್ಯಕ್ತಿಯ ಸಂಸ್ಕಾರ ರೂಪವಾದ ಕರ್ಮವನ್ನು ದೀಕ್ಷಾ ಎಂದು ಹೇಳುವರು. ಅದರ ಮುಂಚೆ ಮತ್ತು ಅನಂತರ ಮಾಡಬೇಕಾದ ಎರಡು ಇಷ್ಟಿಗಳಿಗೆ ಪ್ರಾಯಣೀಯ ಮತ್ತು ಉದಯನೀಯ ಎಂದು ಹೆಸರು. ಈ ಮೂರು ಕರ್ಮಗಳನ್ನು ಪ್ರಾತಃಸವನ, ಮಾಧ್ಯಂದಿನ ಸವನ ಮತ್ತು ತೃತೀಯಸವನವೆಂದು ಕರೆಯುವರು. ಅವಭೃಥವೆನ್ನುವುದೂ ಇಷ್ಟಿವಿಶೇಷ. ಈ ಅಂಗಕಲಾಪವು 'ಸರ್ವತ್ರಕರ್ತುಂ ಯೋಗ್ಯತ್ವಾತ್' ಎಲ್ಲ ಯಾಗಗಳಲ್ಲೂ ಮಾಡಲ್ಪಡಬೇಕಾದ ಕಾರಣದಿಂದ ಕ್ರತು ಎಂದೆನಿಸುವುದು.

क्रतुशब्दो दीक्षाद्यङ्गकलापविशिष्टज्योतिष्टोमवाच्यपि अत्र तदङ्गकलापपर इति गुरुपादाः । तेन कस्यचिदत्र मीमांसाविरोधप्रलापोऽपोढः । तत्त्वप्रदीपे तु—यथा सवनत्रयात्मकः क्रतुः अहीनादिषु प्रत्यहं सम्बध्यमानो विशिष्टो भवति तमन्तरेण एकस्याप्यह्नोऽननुष्ठेयत्वेन 'ध्रुवाः सत्राणाम् अहीनाः' इति सत्राणि प्रकृत्य

---

ದನ್ನು ಸೂಚಿಸಲು 'ಜ್ಯಾಯಸ್ತ್ವಂ' ಎಂಬ ಪದದಲ್ಲಿ ಪ್ರಕರ್ಷವನ್ನು ಹೇಳುವ 'ಈಯಸ್' ಪ್ರತ್ಯಯುವನ್ನು ಪ್ರಯೋಗಿಸಲಾಗಿದೆ.

ಸರ್ವಗುಣಗಳಲ್ಲೂ ಪ್ರವಿಷ್ಟವಾಗಿ ಭೂಮಗುಣವೇ ಆಯಾಯಾ ಗುಣಗಳ ಉಪಾಸನೆಯಿಂದ ಲಭಿಸುವ ಫಲಕ್ಕೆ ಕಾರಣವಾಗಿವೆ ಎಂಬುದಕ್ಕೆ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ - 'ತಥಾ ದರ್ಶಯತಿ ಚ' ಎಂದು.[1]

**'ಕ್ರತು' ಶಬ್ದದ ಅರ್ಥ ವಿವರಣೆ**

ಕ್ರತು ಶಬ್ದವು ದೀಕ್ಷಾ ಮೊದಲಾದ ಅಂಗಕಲಾಪಗಳಿಂದ ಕೂಡಿದ ಜ್ಯೋತಿಷ್ಟೋಮ ಯಾಗವನ್ನು ಹೇಳುವುದಾದರೂ ಪ್ರಕೃತ ಆ ಅಂಗಕಲಾಪವನ್ನು ಮಾತ್ರ

---

1. 'ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯೋ ನೈವಾಭೂಮಾ ಫಲಮೇಷಾಂ ವಿಧತ್ತೇ ।
ತಸ್ಮಾದ್ ಭೂಮಾ ಗುಣತೋ ವೈ ವಿಶಿಷ್ಟೋ ಯಥಾ ಕ್ರತುಃ ಕರ್ಮಮಧ್ಯೇ ವಿಶಿಷ್ಟಃ ॥

ಎಂಬ ಗೌಪವನಶ್ರುತಿಯು ಭೂಮಗುಣದ ವೈಶಿಷ್ಟ್ಯವನ್ನು ತಿಳಿಸುವುದೆಂದು ಭಾವ. ಸರ್ವೋತ್ತಮನಾದ ನಾರಾಯಣನು ಗುಣಪೂರ್ಣನೆಂದೇ ಎಲ್ಲರಿಂದಲೂ ಉಪಾಸ್ಯನಾಗಿದ್ದಾನೆ ಹೊರತು ಅಪೂರ್ಣನೆಂದಲ್ಲ. ಏಕೆಂದರೆ, ಎಲ್ಲ ಕರ್ಮಗಳ ಮಧ್ಯೆ ದೀಕ್ಷಾದಿ ಅಂಗಕಲಾಪರೂಪವಾದ ಕ್ರತುವು ಹೇಗೆ ವಿಶಿಷ್ಟವಾದುದೋ ಹಾಗೆ ಪರಮಾತ್ಮನ ಎಲ್ಲ ಗುಣಗಳ ಮಧ್ಯೆ ಭೂಮಗುಣವು ವಿಶಿಷ್ಟವಾಗಿದೆ. ಸರ್ವಗುಣಗಳಲ್ಲಿ ಸೇರಿರುವಂತೆ ಭೂಮಗುಣದ ಉಪಾಸನೆಯು ಅಧಿಕಾರಿಗಳಿಗೆ ಫಲವನ್ನು ಕೊಡುವುದೇ ಹೊರತು ಅಪೂರ್ಣತ್ವೇನ ಉಪಾಸಿಸಲ್ಪಟ್ಟ ಗುಣವು ಫಲವನ್ನು ಕೊಡಲಾರದು ಎಂದು ಶ್ರುತಿಯ ಭಾವ.

याज्ञिकोक्तिरेवम् इहापीत्युक्तम् । क्वचिद् भाष्ये तथाचेति पाठः । अत्र 'तथाहि दर्शयति' इति पाठान्तरं केचन पठन्ति ॥ ३७ ॥

---

ಹೇಳುವ ತಾತ್ಪರ್ಯವುಳ್ಳದ್ದು ಎಂದು ಗುರುಪಾದರು[1] ಹೇಳಿರುವರು. ಆದ್ದರಿಂದ, 'ಇಲ್ಲಿ ಮೀಮಾಂಸಾ ವಿರೋಧವಿದೆ[2]' ಎಂಬ ಒಬ್ಬನ ಪ್ರಲಾಪವು ನಿರಸ್ತವಾಗುವುದು.

**ತತ್ತ್ವಪ್ರದೀಪರೀತ್ಯಾ 'ಕ್ರತುವತ್' ಶಬ್ದಕ್ಕೆ ವ್ಯಾಖ್ಯಾನಾಂತರ**

ತತ್ತ್ವಪ್ರದೀಪದಲ್ಲಾದರೋ, ಪ್ರಾತಃಸವನ, ಮಾಧ್ಯಂದಿನ ಸವನ ಮತ್ತು ಸಾಯಂಸವನ ಎಂಬ ಸವನತ್ರಯ ರೂಪವಾದ ಕ್ರತುವು [3]ಅಹೀನ ಮೊದಲಾದ ಕರ್ಮಗಳಲ್ಲಿ ಪ್ರತಿಯೊಂದು ಅಹಸ್ಸಿನಲ್ಲೂ ಸಂಬಂಧವನ್ನು ಪಡೆದು ವಿಶಿಷ್ಟವಾಗಿದೆ. ಆ ಸವನತ್ರಯವಿಲ್ಲದೆ ಯಾವ ಅಹಸ್ಸನ್ನೂ ಅನುಷ್ಠಾನ ಮಾಡುವಂತಿಲ್ಲವಾದ್ದರಿಂದಲೇ 'ಧ್ರುವಾಃ ಸತ್ರಾಣಾಂ ಅಹೀನಾಃ' ಸತ್ರಗಳನ್ನುದ್ದೇಶಿಸಿ ಎಂಬ ಯಾಜ್ಞಿಕರ ಉಕ್ತಿಯಿದೆ. ಅದರಂತೆ, ಇಲ್ಲೂ ಕೂಡ ಭೂಮಗುಣದ ಸಂಬಂಧವಿಲ್ಲದೆ ಯಾವ ಗುಣವನ್ನೂ ಉಪಾಸನೆ ಮಾಡುವಂತಿಲ್ಲವಾದ್ದರಿಂದ ಭೂಮಗುಣವು ಎಲ್ಲ ಗುಣಗಳಲ್ಲೂ ವಿಶಿಷ್ಟವಾಗಿದೆ— ಎಂದು ಹೇಳಲಾಗಿದೆ.

**ಸೂತ್ರದ ಪಾಠಾಂತರ**

ಕೆಲವು ಹಸ್ತಪ್ರತಿಗಳಲ್ಲಿ ಭಾಷ್ಯದಲ್ಲಿ 'ತಥಾಚ' ಎಂಬ ಪಾಠವಿದೆ. ಕೆಲವರು ಇಲ್ಲಿ 'ತಥಾಹಿ ದರ್ಶಯತಿ' ಎಂಬ ಪಾಠಾಂತರವನ್ನು ಪಠಿಸುತ್ತಾರೆ.

---

1. ಪರಮಗುರುಗಳಾದ ಶ್ರೀ ವಿಜಯೀಂದ್ರ ಸ್ವಾಮಿಗಳು

2. ಅಂಗಕಲಾಪಸಹಿತವಾದ ಯಾಗವು ಕ್ರತುಶಬ್ದದ ಅರ್ಥವಾದ್ದರಿಂದ, ಅಂತಹ ಕ್ರತುವಿಗೆ ಎಲ್ಲ ಯಾಗಗಳಲ್ಲಿ ಪ್ರವೇಶವು ಮೀಮಾಂಸಾಶಾಸ್ತ್ರಕ್ಕೆ ವಿರುದ್ಧವಾದುದು ಎಂದು ಆಕ್ಷೇಪ. ಅಂಗಕಲಾಪಯುಕ್ತವಾದ ಜ್ಯೋತಿಷ್ಟೋಮಯಾಗವು ಕ್ರತುಶಬ್ದದ ಮುಖ್ಯಾರ್ಥವಾದರೂ ಪ್ರಕೃತ ಅಂಗರೂಪವನ್ನು ಮಾತ್ರ ಲಕ್ಷಣಯಾ ಕ್ರತುಶಬ್ದವು ತಿಳಿಸುವುದೆಂದು ಹೇಳುವುದರಿಂದ ಮೀಮಾಂಸಾಶಾಸ್ತ್ರವಿರೋಧಕ್ಕೆ ಅವಕಾಶವಿಲ್ಲವೆಂದು ಸಮಾಧಾನ.

3. ಒಂದು ದಿನದಲ್ಲಿ ಸಮಾಪ್ತವಾಗುವ ಯಾಗವಿಶೇಷಕ್ಕೆ ಏಕಾಹವೆಂದೂ, ಹಾಗೆಯೇ ಎರಡು, ಮೂರು ಇತ್ಯಾದಿ ದಿನಗಳಲ್ಲಿ ಸಮಾಪ್ತವಾಗುವ ಯಾಗವಿಶೇಷಗಳಿಗೆ ದ್ವ್ಯಹ, ತ್ರ್ಯಹ ಇತ್ಯಾದಿ ಹೆಸರುಗಳಿವೆ. ಈ ಅಹಸ್ಸು ಅಥವಾ ಯಾಗವಿಶೇಷಗಳಿಗೆ ಅಹೀನವೆಂದೂ ಸತ್ರವೆಂದೂ ಕರೆಯುವರು. ಹನ್ನೆರಡಕ್ಕೂ ಹೆಚ್ಚಿನ ಅಹಸ್ಸುಗಳಿರುವ ಯಾಗವನ್ನು ಸತ್ರವೆಂದು ಕರೆಯುವರು.

## नानाशब्दाधिकरणम्—३८

॥ ॐ नाना शब्दादिभेदात् ॐ ॥ ३.३.६०

अत्र भूमगुणस्य तारतम्येनैव सर्वोपास्यत्वमुच्यते। भूमोपास्य इत्यस्ति। सर्वगुणेषु अनुस्यूतो भूमगुणो नाना सर्वैर्यथाऽधिकारं नानाप्रकारेणोपास्यः। न तु ऐकरूप्येण। येन फलभेदो न स्यात्। कुतः? शब्दादिभेदात् शब्दानुमानप्रत्यक्षैर्भेदात्। भूमगुणप्रतीतेः

---

## ನಾನಾಶಬ್ದಾಧಿಕರಣ--೩೮

ಓಂ ನಾನಾ ಶಬ್ದಾದಿಭೇದಾತ್ ಓಂ ೩.೩.೬೦

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಭೂಮಗುಣವು ತಾರತಮ್ಯದಿಂದಲೇ ಎಲ್ಲರಿಂದಲೂ ಉಪಾಸ್ಯವಾಗಿದೆ ಎಂದು ಈ ಅಧಿಕರಣದಲ್ಲಿ ಹೇಳಲಾಗುವುದು. 'ಭೂಮಾ', 'ಉಪಾಸ್ಯಃ', ಎಂಬ ಪದಗಳು ಅಧ್ಯಾಹಾರಗೊಳ್ಳುವವು.

ಭೂಮಾ - ಎಲ್ಲ ಗುಣಗಳಲ್ಲಿ ಪ್ರವೇಶವನ್ನು ಪಡೆದಿರುವ ಭೂಮಗುಣವು, ನಾನಾ ಉಪಾಸ್ಯಃ - ಎಲ್ಲರಿಂದಲೂ ಅವರವರ ಯೋಗ್ಯತೆಗನುಗುಣವಾಗಿ ನಾನಾ ರೀತಿಯಿಂದ ಉಪಾಸಿಸಲ್ಪಡುವುದು ಹೊರತು ಏಕರೂಪದಿಂದಲ್ಲ. ಏಕರೂಪದಿಂದ ಉಪಾಸ್ಯವಾಗಿದ್ದಲ್ಲಿ ಫಲದಲ್ಲಿ ವ್ಯತ್ಯಾಸವಿಲ್ಲದಿರಬೇಕಾಗಿತ್ತು. ಭೂಮಗುಣವು ನಾನಾ ಪ್ರಕಾರವಾಗಿ ಉಪಾಸ್ಯವಾಗಿದೆ ಎಂಬ ವಿಷಯದಲ್ಲಿ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ - ಶಬ್ದಾದಿಭೇದಾತ್ - ಆಗಮ, ಅನುಮಾನ ಮತ್ತು ಪ್ರತ್ಯಕ್ಷಗಳಿಂದ ಉಂಟಾಗುವ ಭೂಮಗುಣದ ಜ್ಞಾನವು ನಾನಾ ಪ್ರಕಾರವಾದ್ದರಿಂದ. ಶಬ್ದಾದಿ ಪ್ರಮಾಣಗಳಿಂದಲೇ ಭೂಮಗುಣದ ಜ್ಞಾನವನ್ನು ಪಡೆಯಬೇಕಾಗಿದೆ.

नानाप्रकारत्वात् शब्दादिनैव तत्प्रतीतेरेष्टव्यत्वात्, तैश्च यथाऽधिकारं तारतम्येन पूर्णत्वप्रतीतेः क्षणदिनपक्षमासाद्यानन्त्यतारतम्यवत् पूर्णत्वेऽपि तदुपपत्तेश्चेति भावः ।

प्रत्यक्षादीति वाच्ये व्युत्क्रमोक्तिः श्रवणादिक्रममपेक्ष्येति ध्येयम् । त्रितयोक्तिः नैकेनाप्येकरूपा धीः सर्वस्य जायत इति सूचयितुमित्येके ॥ ३८ ॥

---

ಆ ಪ್ರಮಾಣಗಳಿಂದ ಜನಿಸುವ ಪೂರ್ಣತ್ವಗುಣದ ಜ್ಞಾನವೂ ಅವರವರ ಯೋಗ್ಯತಾನುಗುಣವಾಗಿ ತಾರತಮ್ಯದಿಂದಲೇ ಉಂಟಾಗುವುದು. ಕ್ಷಣ, ದಿನ, ಪಕ್ಷ, ಮಾಸ ಮೊದಲಾದವುಗಳ ಅನಂತತೆಯಲ್ಲಿ ತಾರತಮ್ಯವಿರುವಂತೆ ಅಧಿಕಾರಿಗಳ ಯೋಗ್ಯತಾ ತಾರತಮ್ಯಕ್ಕನುಗುಣವಾಗಿ ತೋರುವ ಪೂರ್ಣತ್ವದಲ್ಲೂ ತಾರತಮ್ಯವು ಯುಕ್ತವೇ ಆಗಿದೆ. ಆದ್ದರಿಂದ ಯೋಗ್ಯತಾನುಸಾರ ನಾನಾಪ್ರಕಾರವಾಗಿ ಭೂಮಗುಣವು ಉಪಾಸ್ಯವೆಂದು ಭಾವ.

**ಸೂತ್ರದ ಪದಗಳ ಸ್ವಾರಸ್ಯ**

'ಪ್ರತ್ಯಕ್ಷಾದಿ' ಎಂದು ಹೇಳಬೇಕಾಗಿದ್ದರೂ ವಿಪರೀತಕ್ರಮದಿಂದ 'ಶಬ್ದಾದಿ' ಎಂದು ಹೇಳಿರುವುದು [1]ಶ್ರವಣ ಮೊದಲಾದವುಗಳು ಉಂಟಾಗುವ ಕ್ರಮವನ್ನನುಸರಿಸಿ ಎಂದು ತಿಳಿಯತಕ್ಕದ್ದು. ಶಬ್ದ, ಅನುಮಾನ ಮತ್ತು ಪ್ರತ್ಯಕ್ಷ - ಈ ಮೂರು ಪ್ರಮಾಣಗಳಲ್ಲಿ ಯಾವುದೇ ಒಂದು ಪ್ರಮಾಣದಿಂದಲೂ, ಎಲ್ಲರಿಗೂ ಏಕರೂಪವಾದ ಪೂರ್ಣತ್ವದ ಪ್ರತೀತಿಯುಂಟಾಗಲಾರದು ಎಂದು ಸೂಚಿಸಲು ಶಬ್ದ ಮೊದಲಾದ ಮೂರು ಪ್ರಮಾಣಗಳನ್ನೂ ಸೂತ್ರದಲ್ಲಿ ಹೇಳಲಾಗಿದೆ ಎಂದು ಕೆಲವರು ಹೇಳುವರು.

---

1. ಮೊದಲು ಶ್ರವಣರೂಪವಾದ ತತ್ತ್ವನಿರ್ಣಯ. ಅನಂತರ ಅನುಮಾನರೂಪವಾದ ಮನನ. ಕೊನೆಗೆ ಅಪರೋಕ್ಷಜ್ಞಾನ - ಈ ಕ್ರಮದಿಂದಲೇ ಶ್ರವಣಾದಿಗಳು ಉಂಟಾಗುವುದರಿಂದ ಅದನ್ನನುಸರಿಸಿ ಸೂತ್ರದಲ್ಲಿ ಶ್ರವಣಕ್ಕೆ ಕಾರಣವಾದ ಶಬ್ದಪ್ರಮಾಣವನ್ನು ಮೊದಲು ಹೇಳಿ ಅನಂತರ 'ಆದಿ' ಪದದಿಂದ ಅನುಮಾನ - ಪ್ರತ್ಯಕ್ಷಗಳನ್ನು ನಿರ್ದೇಶಿಸಲಾಗಿದೆ ಎಂದು ಭಾವ.

विकल्पाधिकरणम्—३९

॥ ॐ विकल्पो विशिष्टफलत्वात् ॐ ॥ ३.३.६१

अत्र बिम्बान्योपास्तेः विकल्पेन कर्तव्यत्वमुच्यते। सामान्योपासनस्येति शेषः। बिम्बान्यनृसिंहोपासनस्य विकल्पो विविधकल्पः, कर्तव्यं न वेति। न तु न कार्यमेवेति नियमः। कुतः? विशिष्टफलत्वात् दुरितनिवृत्तिरूपफलविशेषहेतुत्वादित्यर्थः। यस्य तदपेक्षा तेन कार्यम्, अन्येन तु नेति षोडशिग्रहणाग्रहणवद् व्यवस्थितो विकल्पः ॥ ३९ ॥

---

ವಿಕಲ್ಪಾಧಿಕರಣ--೩೯

ಓಂ ವಿಕಲ್ಪೋ ವಿಶಿಷ್ಟಫಲತ್ವಾತ್ ಓಂ ೩.೩.೬೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬಿಂಬರೂಪವಲ್ಲದ ಭಗವದ್ರೂಪದ ಉಪಾಸನೆಯನ್ನು ಮಾಡಬಹುದು ಅಥವಾ ಮಾಡದಿರಬಹುದು ಎಂದು ವಿಕಲ್ಪವನ್ನು ಹೇಳಲಾಗುವುದು, 'ಸಾಮಾನ್ಯೋಪಾಸನಸ್ಯ' ಎಂಬ ಶೇಷವನ್ನು ಸೇರಿಸಬೇಕು. ಸಾಮಾನ್ಯೋಪಾಸನಸ್ಯ - ಬಿಂಬವಲ್ಲದ ನೃಸಿಂಹರೂಪದ ಉಪಾಸನೆಗೆ, ವಿಕಲ್ಪಃ - ಮಾಡಬಹುದು ಅಥವಾ ಮಾಡದಿರಬಹುದು ಎಂಬ ವಿವಿಧ ಪ್ರಕಾರಗಳಿವೆ. ಮಾಡಲೇಬೇಕೆಂಬ ನಿಯಮವಿಲ್ಲ ಏಕೆಂದರೆ, ವಿಶಿಷ್ಟಫಲತ್ವಾತ್ - ದುರಿತನಿವೃತ್ತಿ ಎಂಬ ಫಲವಿಶೇಷಕ್ಕೆ ಕಾರಣವಾದ್ದರಿಂದ ಎಂದು ಅರ್ಥ. ಯಾರಿಗೆ ದುರಿತನಿವೃತ್ತಿಯ ಅಪೇಕ್ಷೆ ಇದೆಯೋ ಅವರು ಮಾಡತಕ್ಕದ್ದು ಹೊರತು ಇತರರು ಮಾಡಬೇಕಾಗಿಲ್ಲವೆಂದು [1]ಷೋಡಶಿಗ್ರಹಣದ ವಿಷಯದಲ್ಲಿ ಹೇಗೋ ಹಾಗೆ ಇಲ್ಲಿ ವಿಕಲ್ಪವು ವ್ಯವಸ್ಥಿತವಾಗಿದೆ.

---

1. 'ಅತಿರಾತ್ರೇ ಷೋಡಶಿನಂ ಗೃಹ್ಣಾತಿ, ನಾತಿರಾತ್ರೇ ಷೋಡಶಿನಂ ಗೃಹ್ಣಾತಿ' ಎಂಬ ಶ್ರುತಿಯು ಷೋಡಶಿಗ್ರಹಣ ಮಾಡಿದಲ್ಲಿ ಫಲಬಾಹುಳ್ಯವಿರುವುದರಿಂದ ಫಲಬಾಹುಳ್ಯದ ಅಪೇಕ್ಷೆ ಇದ್ದವರು ಷೋಡಶಿಗ್ರಹಣ ಮಾಡತಕ್ಕದ್ದು. ಅದಿಲ್ಲದವರು ಷೋಡಶಿಗ್ರಹಣ ಮಾಡಬೇಕಾಗಿಲ್ಲ ಎಂದು ಷೋಡಶಿಗ್ರಹಣದ ವ್ಯವಸ್ಥಿತ ವಿಕಲ್ಪವನ್ನು ಹೇಳುವುದು.

कामाधिकरणम् — ४०

॥ ॐ काम्यास्तु यथाकामं समुच्चीयेरन्न वा पूर्वहेत्वभावात् ॐ ॥ ३.३.६२

अत्र मोक्षान्यकाम्यविद्योक्तभगवद्रूपतद्गुणोपास्तौ विशेष उच्यते। तुः प्राचीनाद्विशेषे। काम्यास्तु मोक्षान्यकाम्यसाधनेशगुणास्तु यथाकामं वित्तादिकामानुसारेण समुच्चीयेरन् न वा उपसंहार्या न वा। अमुमुक्षुभिरुपसंहार्याः, मुमुक्षुभिर्नेति पुंभेदेन व्यवस्थित-

---

ಕಾಮಾಧಿಕರಣ—೪೦

ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನ ವಾ ಪೂರ್ವಹೇತ್ವಭಾವಾತ್ ಓಂ ೩.೩.೬೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮೋಕ್ಷಭಿನ್ನವಾದ ಕಾಮ್ಯಫಲಕ್ಕೆ ಸಾಧನವಾದ ವಿದ್ಯೆಯಲ್ಲಿ ಹೇಳಿರುವ ಭಗವಂತನ ರೂಪ ಮತ್ತು ಗುಣಗಳ ಉಪಾಸನೆಯ ವಿಷಯದಲ್ಲಿ ವಿಶೇಷ ವನ್ನು ಹೇಳಲಾಗುವುದು. ಸೂತ್ರದಲ್ಲಿರುವ 'ತು' ಶಬ್ದವು ಹಿಂದೆ ಹೇಳಿರುವ ಉಪಾಸನೆಗಿಂತಲೂ ಇಲ್ಲಿ ಪ್ರಸ್ತುತವಾದ ಉಪಾಸನೆಗೆ ವಿಶೇಷವನ್ನು ಹೇಳುವುದು.

ಕಾಮ್ಯಾಸ್ತು – ಮೋಕ್ಷಭಿನ್ನವಾದ ಇಷ್ಟಫಲಕ್ಕೆ ಸಾಧನವಾದ ಭಗವಂತನ ಗುಣಗಳಾದರೋ, ಯಥಾಕಾಮಂ - ಸಂಪತ್ತು ಮೊದಲಾದ ಕಾಮಕ್ಕನುಸಾರವಾಗಿ, ಸಮುಚ್ಚೀಯೇರನ್ ನ ವಾ – ಉಪಸಂಹರಿಸಲ್ಪಡತಕ್ಕವುಗಳು ಅಥವಾ ಅಲ್ಲ. ಮುಮುಕ್ಷುಗಳಲ್ಲದವರಿಂದ ಉಪಸಂಹರಿಸಲ್ಪಡತಕ್ಕವುಗಳು, ಮುಮುಕ್ಷುಗಳಿಂದಲ್ಲ ವೆಂದು 'ವಾ' ಶಬ್ದವು ಪುರುಷಭೇದದಿಂದ ವ್ಯವಸ್ಥಿತ ವಿಕಲ್ಪವನ್ನು ಹೇಳುವುದು. ಮುಮುಕ್ಷುಗಳು ಆ ಗುಣಗಳನ್ನು ಉಪಸಂಹಾರ ಮಾಡಬಾರದೇಕೆ ಎಂಬ ಪ್ರಶ್ನೆಗೆ

विकल्पार्थो वाशब्दः। मुमुक्षुभिर्नेति कुतः ? पूर्वहेत्वभावात् मोक्षेच्छातः पूर्वो यो हेतुः वित्तादिकामाख्यः तदभावादित्यर्थः। यथाकाममिति समुच्चयविशेषणं सत् यस्य यद्वित्तादिकामः तस्य तत्तदनुगुणगुणा उपसंहार्या इति विशेषोक्त्यर्थम्।

यद्वा कामेति कामविशेषत्वादीशप्रसादो मोक्षान्यकामश्च गृह्यते। द्वयोर्विशेषणम्। यथाकामं ईशप्रसादमनुल्लंघ्य तमुद्दिश्येति यावत्, मुमुक्षुभिः समुच्चीयेरन्। यथाकामम् अन्यकामानुरोधेन तमुद्दिश्य न

---

ಉತ್ತರ - ಪೂರ್ವಹೇತ್ವಭಾವಾತ್ – ಮುಕ್ತಿಯ ಇಚ್ಛೆಗಿಂತಲೂ ಹಿಂದಿನದಾದ ಹೇತುವೆಂದರೆ ಧನ ಮೊದಲಾದವುಗಳ ಕಾಮನೆ, ಮುಮುಕ್ಷುವಿಗೆ ಆ ಕಾಮನೆ ಇಲ್ಲದಿರುವುದರಿಂದ ಆ ಗುಣಗಳ ಉಪಸಂಹಾರವನ್ನು ಮಾಡಬಾರದೆಂದರ್ಥ. ಯಾರಿಗೆ ಧನ ಮೊದಲಾದ ಯಾವ ಫಲದ ಕಾಮನೆ ಇದೆಯೋ ಅವರು ಅದಕ್ಕನುಗುಣವಾದ ಗುಣಗಳನ್ನು ಉಪಸಂಹಾರ ಮಾಡತಕ್ಕದ್ದೆಂದು ವಿಶೇಷವನ್ನು ಹೇಳುವ ಸಲುವಾಗಿ 'ಸಮುಚ್ಚೀಯೇರನ್' ಎಂಬಲ್ಲಿರುವ ಸಮುಚ್ಚಯ ಅಂದರೆ ಉಪಸಂಹಾರಕ್ಕೆ 'ಯಥಾಕಾಮಂ' ಎಂಬ ವಿಶೇಷಣವನ್ನು ಕೊಡಲಾಗಿದೆ.

### ಸೂತ್ರಕ್ಕೆ ಮತ್ತೊಂದು ರೀತಿಯ ವ್ಯಾಖ್ಯಾನ

ಅಥವಾ 'ಯಥಾಕಾಮಂ' ಎಂಬಲ್ಲಿರುವ ಕಾಮಶಬ್ದದಿಂದ, ಕಾಮವಿಶೇಷವಾದ ಕಾರಣ ಈಶ್ವರಪ್ರಸಾದವನ್ನೂ, ಮೋಕ್ಷಭಿನ್ನವಾದ ಕಾಮವನ್ನೂ, ಗ್ರಹಿಸಬೇಕು. ಯಥಾಕಾಮಂ ಎಂಬ ಪದವು ಎರಡಕ್ಕೆ ವಿಶೇಷಣವಾಗಿದೆ.[1] ಯಥಾಕಾಮಂ - ಈಶಪ್ರಸಾದವನ್ನು ಅತಿಕ್ರಮಿಸದೆ – ಅದನ್ನುದ್ದೇಶಿಸಿ ಎಂದು ಭಾವ— ಮುಮುಕ್ಷುಗಳು, ಸಮುಚ್ಚೀಯೇರನ್ - ಗುಣೋಪಸಂಹಾರವನ್ನು ಮಾಡತಕ್ಕದ್ದು, ಯಥಾಕಾಮಂ - ಇತರ ಕಾಮಗಳನ್ನನುಸರಿಸಿ ಅಂದರೆ ಅವುಗಳನ್ನು ಉದ್ದೇಶವಾಗಿಟ್ಟು

---

1. 'ಸಮುಚ್ಚೀಯೇರನ್' ಮತ್ತು 'ನ ವಾ' ಇವೆರಡಕ್ಕೆ ವಿಶೇಷಣವಾಗಿದೆ.

बोपसंहार्याः । फलभेदेन मुमुक्षुष्वेव विकल्पार्थो वाशब्दः । अन्यकामाय नेति कुतः ? पूर्वहेत्वभावात् कामाख्यहेत्वभावादित्यर्थः । यद्वा विशिष्टफलाख्यपूर्वनयोक्तहेत्वभावादित्यर्थः ।

अत एव कामेति वाच्ये पूर्वेत्युक्तिः मुमुक्षादशायाम् अन्यकामो नास्ति, तस्य पूर्वकालीनत्वादिति कामाभावस्य पक्षधर्मतासूचनाय च । कामाभावेऽप्यस्तु समुच्चय इत्यप्रयोजकत्वशङ्काव्युदासाय हेत्वित्युक्तिः ॥ ४० ॥

---

ಕೊಂಡು, ನ ವಾ – ಉಪಸಂಹಾರವನ್ನು ಮಾಡತಕ್ಕದ್ದಲ್ಲ. 'ವಾ' ಶಬ್ದವು ಫಲಭೇದದಿಂದ ಉಪಸಂಹಾರದ ವಿಕಲ್ಪವನ್ನು ಮುಮುಕ್ಷುಗಳ ವಿಷಯದಲ್ಲೇ ಹೇಳುವುದು. ಬೇರೆ ಕಾಮುಕರ್ಶ್ರೀಸ್ಕರ ಗುಣೋಪಸಂಹಾರವನ್ನು ಮುಮುಕ್ಷುಗಳು ಮಾಡಬಾರದೇಕೆ ? ಎಂಬ ಪ್ರಶ್ನೆಗೆ ಉತ್ತರ - ಪೂರ್ವಹೇತ್ವಭಾವಾತ್ – ಕಾಮವೆಂಬ ಹೇತುವಿಲ್ಲದಿರುವುದರಿಂದ ಎಂದು ಅರ್ಥ. ಅಥವಾ, ಹಿಂದಿನ ಅಧಿಕರಣದಲ್ಲಿ ಹೇಳಿರುವ ವಿಶಿಷ್ಟಫಲವೆಂಬ ಕಾರಣವಿಲ್ಲದಿರುವುದರಿಂದ ಎಂದು ಅರ್ಥ. ಈ ಅಭಿಪ್ರಾಯವನ್ನು ಸೂಚಿಸುವ ಸಲುವಾಗಿಯೇ ಸೂತ್ರದಲ್ಲಿ 'ಕಾಮ' ಎಂದು ಹೇಳುವ ಬದಲು 'ಪೂರ್ವ' ಎಂದು ಹೇಳಲಾಗಿದೆ[1]. ಅಲ್ಲದೆ, ಮುಕ್ತಿಯನ್ನು ಬಯಸುವ ಅವಸ್ಥೆಯಲ್ಲಿ, ಬೇರೆ ಕಾಮನೆಗಳಿರುವುದಿಲ್ಲ. ಏಕೆಂದರೆ ಅವು ಮೋಕ್ಷೇಚ್ಛೆಯ ಕಾಲಕ್ಕಿಂತ ಹಿಂದಿನ ಕಾಲಕ್ಕೆ ಸಂಬಂಧಪಟ್ಟವು ಎಂದು ಕಾಮಾಭಾವವೆಂಬ ಹೇತುವು ಪಕ್ಷ

---

1. ಸೂತ್ರದಲ್ಲಿ 'ಪೂರ್ವಹೇತ್ವಭಾವಾತ್' ಎಂದು ಹೇಳುವ ಬದಲು 'ಕಾಮಾಭಾವಾತ್' ಎಂದು ಹೇಳಬಹುದಾಗಿದ್ದಿತು. ಆದರೆ, ಹಿಂದಿನ ಅಧಿಕರಣದಲ್ಲಿ, ದುರಿತನಿವೃತ್ತ್ಯಾದಿ ರೂಪವಾದ ಫಲವಿಶೇಷದ ದೃಷ್ಟಿಯಿಂದ ಬಿಂಬಭಿನ್ನವಾದ ಭಗವದ್ರೂಪದ ಉಪಾಸನೆ ಮಾಡಬಹುದೆಂದು ಹೇಳಿದೆ. ಅಂತಹ ವಿಶಿಷ್ಟಫಲವಿಲ್ಲದಿರುವ ಕಾರಣ ಮೋಕ್ಷಭಿನ್ನಫಲಸಾಧನವಾದ ಗುಣೋಪಾಸನೆಯನ್ನು ಮಾಡತಕ್ಕದ್ದಲ್ಲವೆಂದು ಸೂಚಿಸಲು 'ಪೂರ್ವಹೇತ್ವಭಾವಾತ್' ಎಂದು ಹೇಳಲಾಗಿದೆ ಎಂದು ಭಾವ.

अङ्गाधिकरणम्—४१

## ॥ ॐ अङ्गेषु यथाऽश्रयभावः ॐ ॥ ३.३.६३

**अत्र ब्रह्मादीनाम् ईशाङ्गाश्रितत्वेन देवमात्रोपास्यत्वमुच्यते। अङ्गेष्वित्युक्तेः सूर्यादिदेवतानामित्यन्वेति।**

ದಲ್ಲಿದೆ ಎಂದು ಸೂಚಿಸುವ ಸಲುವಾಗಿಯೂ 'ಪೂರ್ವಹೇತ್ವಭಾವಾತ್' ಎಂದು ಹೇಳಲಾಗಿದೆ.[1] 'ಕಾಮವಿಲ್ಲದಿದ್ದರೂ ಮುಮುಕ್ಷುಗಳು ಇತರ ಫಲಸಾಧನವಾದ ಗುಣೋಪಸಂಹಾರವನ್ನು ಮಾಡಲಿ' ಎಂಬ ಅಪ್ರಯೋಜಕತ್ವ ಶಂಕೆಯನ್ನು ಪರಿಹರಿಸಲು 'ಹೇತು' ಎಂದು ಹೇಳಲಾಗಿದೆ[2].

ಅಂಗಾಧಿಕರಣ--೪೧

## ಓಂ ಅಂಗೇಷು ಯಥಾಽಽಶ್ರಯಭಾವಃ ಓಂ ೩.೩.೬೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಬ್ರಹ್ಮಾದಿಗಳು ಭಗವಂತನ ಅಂಗಗಳಲ್ಲಿ ಆಶ್ರಿತರೆಂದು ಉಪಾಸನೆ ಮಾಡಲು ದೇವತೆಗಳು ಮಾತ್ರ ಅರ್ಹರೆಂದು ಹೇಳಲಾಗುವುದು. 'ಅಂಗೇಷು' ಎಂದು ಹೇಳುವುದರಿಂದ 'ಸೂರ್ಯಾದಿದೇವತಾನಾಂ' ಎಂಬ ಪದವು ಅನ್ವಿತವಾಗುವುದು.

1. 'ಮುಮುಕ್ಷುಗಳು ಈಶಪ್ರಸಾದಕ್ಕಿಂತ ಭಿನ್ನವಾದ ಫಲದ ಉದ್ದೇಶದಿಂದ ಉಪಾಸನೆ ಮಾಡತಕ್ಕದ್ದಲ್ಲ, ಅಂತಹ ಕಾಮನೆಗಳಿಲ್ಲದಿರುವುದರಿಂದ' ಎಂಬ ಅನುಮಾನದಲ್ಲಿ ಮುಮುಕ್ಷುಗಳು ಪಕ್ಷ. ಕಾಮಾಭಾವ ಅಥವಾ ಬೇರೆ ಕಾಮನೆಗಳಿಲ್ಲದಿರುವುದು ಹೇತು. ಈ ಹೇತು ಪಕ್ಷದಲ್ಲಿದೆ ಎಂಬುದನ್ನು ಸೂಚಿಸುವ ದೃಷ್ಟಿಯಿಂದ 'ಪೂರ್ವಹೇತ್ವಭಾವಾತ್' ಎಂದು ಹೇಳಲಾಗಿದೆ ಎಂದು ಭಾವ.

2. ಅಪ್ರಯೋಜಕತ್ವಶಂಕೆ ಎಂದರೆ 'ಹೇತುವಿರಲಿ, ಸಾಧ್ಯವನ್ನೇಕೆ ಒಪ್ಪಬೇಕು' ಎಂಬ ಶಂಕೆ. ಪ್ರಸ್ತುತ ಅನುಮಾನದಲ್ಲಿ ಮುಮುಕ್ಷುಗಳಿಗೆ ಕಾಮವಿಲ್ಲದಿರಬಹುದು, ಆದರೆ ಇತರ ಫಲಾಪೇಕ್ಷೆಯಿಂದ ಗುಣೋಪಾಸನೆಯನ್ನೇಕೆ ಮಾಡಬಾರದು ಎಂಬ ಶಂಕೆ ಅಪ್ರಯೋಜಕತ್ವ ಶಂಕೆಯಾಗುವುದು. ಇತರ ಫಲಸಾಧನವಾದ ಗುಣೋಪಾಸನೆಗೆ ಕಾಮವೇ ಹೇತುವಾದದ್ದರಿಂದ ಅದಿಲ್ಲದೆ ಮುಮುಕ್ಷುಗಳು ಅಂತಹ ಗುಣೋಪಾಸನೆ ಮಾಡಲು ಸಾಧ್ಯವಿಲ್ಲವೆಂದು ಸೂಚಿಸಲು ಹೇತು ಪದವನ್ನು ಉಪಯೋಗಿಸಲಾಗಿದೆಯೆಂದು ಭಾವ.

यथाऽश्रयभावः 'चक्षोः सूर्यः', 'तदाश्रिताश्च ते सर्वे' इत्यादावुक्तस्तथैव ईशाङ्गेषूपास्तिः कार्येति प्रकरणादन्वेति । अन्यथा 'चक्षोः' इत्याद्यङ्गस्थितिश्रुतिवैय्यर्थ्यापत्तेः ।

यत्र जन्म तत्रैव स्थितेरिति भावः ।

इतश्चैवमित्याह—

॥ ॐ शिष्टेश्च ॐ ॥ ३.३.६४

शिष्टिः शिक्षाविधिरिति यावत् । 'यस्मिन् यस्मिन् यो हि

---

ಯಥಾ ಆಶ್ರಯಭಾವಃ – 'ಚಕ್ಷೋಃ ಸೂರ್ಯಃ', 'ತದಾಶ್ರಿತಾಶ್ಚ ತೇ ಸರ್ವೇ' ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಸೂರ್ಯಾದಿದೇವತೆಗಳಿಗೆ ಹೇಗೆ ಆಶ್ರಿತತ್ವವನ್ನು ಹೇಳಲಾಗಿದೆಯೋ ಹಾಗೆಯೇ ಭಗವಂತನ ಅಂಗಗಳಲ್ಲಿ ಆ ದೇವತೆಗಳು ಆಶ್ರಿತರೆಂದು ಉಪಾಸನೆಯನ್ನು ಮಾಡತಕ್ಕದ್ದು - ಉಪಾಸನಾಪ್ರಕರಣವಾದ್ದರಿಂದ ಇಲ್ಲಿ 'ಉಪಾಸನೆಯನ್ನು ಮಾಡತಕ್ಕದ್ದು' ಎಂಬ ಪದಗಳು ಅನ್ವಿತವಾಗುವವು. ಹಾಗೆ ಉಪಾಸನೆ ಮಾಡುವುದಿಲ್ಲದಿದ್ದಲ್ಲಿ 'ಚಕ್ಷೋಃ ಸೂರ್ಯೋ ಅಜಾಯತ' ಇತ್ಯಾದಿಯಾದ, ದೇವತೆಗಳು ಭಗವಂತನ ಅಂಗಗಳಲ್ಲಿರತಕ್ಕವರೆಂದು ಹೇಳುವ ಶ್ರುತಿಗಳು ವ್ಯರ್ಥವಾಗಬೇಕಾದೀತು. ಎಲ್ಲಿ ಜನ್ಮವೋ ಅಲ್ಲೇ ದೇವತೆಗಳು ಇರುವುದರಿಂದ - ಎಂದು ಭಾವ.

ಈ ಮುಂದೆ ಹೇಳುವ ಕಾರಣದಿಂದಲೂ ಸೂರ್ಯಾದಿದೇವತೆಗಳು ಭಗವದಂಗಾಶ್ರಿತರೆಂದು ಉಪಾಸನೆ ಮಾಡತಕ್ಕದ್ದೆಂದು ಹೇಳುವ ಸೂತ್ರ—

ಓಂ ಶಿಷ್ಟೇಶ್ಚ ಓಂ ೩.೩.೬೪

**ಸೂತ್ರಾರ್ಥ**

ಶಿಷ್ಟಿ ಎಂದರೆ 'ಹೀಗೆ ಮಾಡತಕ್ಕದ್ದು' ಎಂದು ಶಿಕ್ಷೆಯ ವಿಧಿ ಎಂದು ಭಾವ. 'ಯಸ್ಮಿನ್ ಯಸ್ಮಿನ್ ಯೋ ಹಿ ಚಾಂಗೇ ನಿವಿಷ್ಟಃ ಪರಸ್ಯ ಚಿಂತ್ಯಃ ಸ ತಥಾ ತಥೈವ'

चाङ्गे निविष्टः परस्य चिन्त्यः स तथा तथैव' इति श्रुतौ विधानाच्च अङ्गेषूपास्तिः कार्येत्यनुषङ्गः । न केवलं 'चक्षोः' इत्यादिवचनान्यथानुपपत्त्येति चार्थः ।

अधिकार्यभावात् न कार्येत्यत आह—

॥ ॐ समाहारात् ॐ ॥ ३.३.६५

---

ಎಂದು ಶ್ರುತಿಯಲ್ಲಿ[1] ವಿಹಿತವಾಗಿರುವುದರಿಂದಲೂ ಭಗವದಂಗಗಳಲ್ಲಿ ಸೂರ್ಯಾದಿಗಳ ಉಪಾಸನೆಯನ್ನು ಮಾಡತಕ್ಕದ್ದು. ಇಲ್ಲಿ 'ಉಪಾಸನೆಯನ್ನು ಮಾಡತಕ್ಕದ್ದು' ಎಂಬ ಪದಗಳು ಹಿಂದಿನ ಸೂತ್ರದಿಂದ ಅನುವೃತ್ತವಾಗುವವು. ಸೂತ್ರದಲ್ಲಿರುವ 'ಚ' ಶಬ್ದಕ್ಕೆ "ಭಗವದಂಗಾಶ್ರಿತರೆಂದು ಸೂರ್ಯಾದಿ ದೇವತೆಗಳ ಉಪಾಸನೆಯನ್ನು ಅಂಗೀಕರಿಸದಿದ್ದಲ್ಲಿ 'ಚಕ್ಷೋಃ ಸೂರ್ಯೋ ಅಜಾಯತ' ಇತ್ಯಾದಿ ವಚನಗಳು ಅನುಪಪನ್ನವಾಗುತ್ತಿದ್ದವು ಎನ್ನುವುದರಿಂದ ಮಾತ್ರವಲ್ಲದೆ" ಎಂದು ಅರ್ಥ.

ಭಗವದಂಗಗಳಲ್ಲಿ ಸೂರ್ಯಾದಿದೇವತೆಗಳು ಆಶ್ರಿತರೆಂದು ಉಪಾಸನೆ ಮಾಡಲು ಅಧಿಕಾರಿಗಳಿಲ್ಲದಿರುವುದರಿಂದ ಅಂತಹ ಉಪಾಸನೆಯನ್ನು ಮಾಡಲಾಗದು ಎಂಬ ಆಶಂಕೆಗೆ ಉತ್ತರ—

**ಓಂ ಸಮಾಹಾರಾತ್ ಓಂ ೩.೩.೬೫**

---

1. ಯಾವ ಯಾವ ದೇವತೆಯು ಸರ್ವೋತ್ತಮನಾದ ವಿಷ್ಣುವಿನ ಯಾವ ಯಾವ ಅಂಗದಲ್ಲಿ ಆಶ್ರಿತನಾಗಿರುವನೋ ಆಯಾಯಾ ದೇವತೆಯನ್ನು ಭಗವಂತನ ಆಯಾಯಾ ಅಂಗದಲ್ಲಿ ಆಶ್ರಿತನಾಗಿರುವನೆಂದು ಉಪಾಸನೆ ಮಾಡತಕ್ಕದ್ದು ಎಂದು 'ಯಸ್ಮಿನ್' ಇತ್ಯಾದಿ ಪೌತ್ರಾಯಣಶ್ರುತಿಯ ಭಾವ.

अनेन तद्वचनमुपलक्ष्यते । 'अङ्गैः पराध्ये हि देवा विसृष्टास्तत्तद्गुणान् परमे संहरेत । तांश्चापि तत्रैव विचिन्त्य देवान् स्थानं मुमुक्षुः परमं व्रजेत ॥' इति प्रकाशकत्वादिगुणानां तत्तद्देवानां चोपसंहारफलवचनादित्यर्थः । एतच्छ्रुतौ तथोपास्तेः परमस्थानावाप्तिफलत्वोक्तेः तस्य देवयोग्यत्वात् देवैस्तथोपास्तिः कार्या, न

---

**ಸೂತ್ರಾರ್ಥ**

ಸೂತ್ರದಲ್ಲಿರುವ 'ಸಮಾಹಾರ' ಪದದಿಂದ ಸಮಾಹಾರವನ್ನು ಹೇಳುವ ವಚನವನ್ನು ಲಕ್ಷಣಯಾ ಗ್ರಹಿಸಬೇಕು[1]. 'ಅಂಗೈಃ ಪರಾದ್ಯೇ ಹಿ ದೇವಾ ವಿಸೃಷ್ಟಾಸ್ತತ್ತದ್ಗುಣಾನ್ ಪರಮೇ ಸಂಹರೇತ ತಾಂಶ್ಚಾಪಿ ತತ್ರೈವ ವಿಚಿಂತ್ಯ ದೇವಾನ್ ಸ್ಥಾನಂ ಮುಮುಕ್ಷುಃ ಪರಮಂ ವ್ರಜೇತ' (ಕಾಷಾಯಣಶ್ರುತಿ) ಎಂಬುದಾಗಿ ಸೂರ್ಯಾದಿದೇವತೆಗಳ ಪ್ರಕಾಶಕತ್ವಾದಿ ಗುಣಗಳನ್ನು ಮತ್ತು ಸೂರ್ಯಾದಿ ದೇವತೆಗಳನ್ನು ಭಗವಂತನ ಅಂಗಗಳಲ್ಲಿ ಉಪಸಂಹಾರ ಮಾಡುವುದರ ಫಲವನ್ನು ಹೇಳುವ ವಚನದಿಂದ ಎಂದು ಅರ್ಥ. ಈ ಶ್ರುತಿಯಲ್ಲಿ, ಹಾಗೆ ಮಾಡುವ ಉಪಾಸನೆಗೆ ಪರಮಸ್ಥಾನದ ಪ್ರಾಪ್ತಿಯೇ ಫಲವೆಂದು ಹೇಳಲಾಗಿದೆ. ಆ ಫಲವು ದೇವಯೋಗ್ಯವಾದ ಫಲವಾದುದರಿಂದ ದೇವತೆಗಳು ಹಾಗೆ ಉಪಾಸನೆ ಮಾಡಬಹುದೇ

---

1. ಪರಮಾತ್ಮನ ಚಕ್ಷುರಾದಿ ಅಂಗಗಳಿಂದ ಯಾವ ಯಾವ ದೇವತೆಗಳು ವಿವಿಧ ಪ್ರಕಾರವಾಗಿ ಸೃಷ್ಟರಾಗಿರುವರೋ ಸೂರ್ಯ, ಚಂದ್ರ ಮೊದಲಾದ ಆಯಾಯಾ ದೇವತೆಗಳ ಮಹಾಪ್ರಕಾಶ, ಆಹ್ಲಾದಕರತ್ವ ಮೊದಲಾದ ಗುಣಗಳನ್ನು ಭಗವಂತನ ಆಯಾಯಾ ಅಂಗಗಳಲ್ಲಿ ಉಪಸಂಹಾರ ಮಾಡತಕ್ಕದ್ದು. ಗುಣಗಳನ್ನು ಮಾತ್ರವಲ್ಲದೆ, ಆಯಾಯಾ ಅಂಗದಿಂದ ಜನಿಸಿದ ದೇವತೆಗಳನ್ನೂ ಆಯಾಯಾ ಅಂಗಗಳಲ್ಲಿ ಉಪಾಸನೆ ಮಾಡಬೇಕು. ದೇವತ್ವಯೋಗ್ಯನಾದ ಮುಮುಕ್ಷುವು ಹೀಗೆ ಉಪಾಸನೆಮಾಡಿ ಭಗವಂತನ ಸಾಯುಜ್ಯರೂಪ ಶ್ರೇಷ್ಠವಾದ ಸ್ಥಾನವನ್ನು ಪಡೆಯುವನು ಎಂದು ಶ್ರುತಿಯ ಭಾವ.

सर्वैरिति सिद्ध्यतीति 'आनन्दादयः' इत्युक्तविरोधो नेति भावः।

देवैरिति वाच्ये एवमुक्तिर्युक्तिसूचनाय। मधुविद्यायां तथा क्लृप्तत्वादिति।

इतश्च तथोपास्तिः कार्येत्याह—

॥ ॐ गुणसाधारण्यश्रुतेश्च ॐ ॥ ३.३.६६

गुणानामीशगुणानां साधारण्यस्य उपास्यत्वेन साम्यस्य सर्वेषां

---

ಹೊರತು ಎಲ್ಲರೂ ಮಾಡಬಹುದೆಂದು ಸಿದ್ಧಿಸುವುದಿಲ್ಲ. ಆದ್ದರಿಂದ [1]'ಆನಂದಾದಯಃ' (ಬ್ರ.ಸೂ. ೩.೩.೧೨) ಎಂಬಲ್ಲಿ ಹೇಳಿರುವ ಪ್ರಮೇಯಕ್ಕೆ ವಿರೋಧವಿಲ್ಲವೆಂದು ಭಾವ. ದೇವತೆಗಳು ಹೀಗೆ ಉಪಾಸನೆ ಮಾಡಲು ಅಧಿಕಾರಿಗಳು ಎಂದು ಹೇಳುವ ಬದಲಾಗಿ 'ಭಗವಂತನ ಅಂಗಗಳಲ್ಲಿ ದೇವತೆಗಳ ಗುಣಗಳನ್ನೂ, ದೇವತೆಗಳನ್ನೂ ಉಪಸಂಹಾರ ಮಾಡಿದರೆ ಲಭಿಸುವ ಫಲವನ್ನು ಹೇಳುವ ವಚನವನ್ನು ಸೂತ್ರದಲ್ಲಿ ಹೇಳಿರುವುದು[2] ಯುಕ್ತಿಯ ಸೂಚನೆಗಾಗಿ. ಮಧುವಿದ್ಯೆಯಲ್ಲಿ ಈ ವಿಷಯವು ಸಿದ್ಧವಾಗಿದೆ.

ಈ ಮುಂದಿನ ಕಾರಣದಿಂದಲೂ ಭಗವಂತನ ಅಂಗಗಳಲ್ಲಿ ಆಶ್ರಿತರೆಂದು ದೇವತೆಗಳ ಉಪಾಸನೆಯನ್ನು ಮಾಡತಕ್ಕದ್ದು ಎಂದು ಹೇಳುವ ಸೂತ್ರ—

ಓಂ ಗುಣಸಾಧಾರಣ್ಯಶ್ರುತೇಶ್ಚ ಓಂ ೩.೩.೬೬

**ಸೂತ್ರಾರ್ಥ**

ಗುಣಾನಾಂ - ಭಗವಂತನ ಗುಣಗಳಿಗೆ, ಸಾಧಾರಣ್ಯಸ್ಯ - ಉಪಾಸನಾಯೋಗ್ಯವಾಗಿರುವ ಅಂಶದಲ್ಲಿ ಸಮಾನತೆಯು – ಭಗವಂತನ ಎಲ್ಲ ಗುಣಗಳು ಉಪಾಸ್ಯ

---

1. 'ಆನಂದಾದಯಃ ಪ್ರಧಾನಸ್ಯ' ಎಂಬ ಅಧಿಕರಣದಲ್ಲಿ ಚತುರ್ಗುಣೋಪಾಸನೆಗೆ ಸರ್ವಮುಮುಕ್ಷುಗಳು ಅಧಿಕಾರಿಗಳೆಂದು ಹೇಳಲಾಗಿದೆ. ಇಲ್ಲಿ ಹೇಳಿರುವ ಉಪಾಸನೆಗೂ ಸರ್ವಮುಮುಕ್ಷುಗಳು ಅಧಿಕಾರಿಗಳಾದ ಪಕ್ಷದಲ್ಲಿ ಆ ಪ್ರಮೇಯದ ವಿರೋಧ ಬರುತ್ತಿತ್ತು. ಪ್ರಕೃತ ಹೇಳಿರುವ ಉಪಾಸನೆಯು ದೇವಮಾತ್ರಾಧಿಕಾರಿಕವಾದ್ದರಿಂದ ವಿರೋಧವಿಲ್ಲವೆಂದು ಭಾವ.

2. 'ಅಂಗೈಃ ಪರಾರ್ಧ್ಯೇ' ಇತ್ಯಾದಿ ವಾಕ್ಯದಲ್ಲಿ ಹೇಳಿರುವ ಪರಮಸ್ಥಾನಪ್ರಾಪ್ತಿರೂಪವಾದ ಫಲಕ್ಕೆ ದೇವತೆಗಳೇ ಅಧಿಕಾರಿಗಳಾದ್ದರಿಂದ ಅಂತಹ ಫಲಪ್ರದವಾದ ಉಪಾಸನೆಗೆ ದೇವತೆಗಳೇ ಅಧಿಕಾರಿಗಳು ಎಂದು ಯುಕ್ತಿಯ ಸೂಚನೆಗಾಗಿ.

गुणानामुपास्यत्वस्येति यावत्, श्रुतेः 'साधारण्यात् सर्वगुणाः परस्य समाहार्यास्तत्त्वदृशो मुमुक्षोः' इति श्रवणाच्चेत्यर्थः। सूर्याश्रयचक्षुष्ट्वादीनामपि ईशगुणत्वादेवम् उपास्तिः कार्येति भावः ॥ ४१ ॥

नवाधिकरणम्—४२

॥ ॐ न वाऽतत्सहभावश्रुतेः ॐ ॥ ३.३.६७

अत्राङ्गदेवतोपासनस्य देवान्यैरकर्तव्यत्वमुच्यते। न वाऽङ्गेषु सूर्यादीनामुपास्तिः कार्या। कुतः? अतत्सहभावश्रुतेः सर्वशाखा-

---

ವಾಗಿವೆ ಎಂಬ ವಿಷಯವು ಎಂದು ಭಾವ— ಶ್ರುತೇಃ – 'ಸಾಧಾರಣ್ಯಾತ್ ಸರ್ವ ಗುಣಾಃ ಪರಸ್ಯ ಸಮಾಹಾರ್ಯಾಃ ತತ್ತ್ವದೃಶೋ ಮುಮುಕ್ಷೋಃ'[1] (ಮಾಂಡವ್ಯ ಶ್ರುತಿ) ಎಂಬ ಶ್ರುತಿಯಲ್ಲಿ ಕೇಳಿಬರುವುದರಿಂದಲೂ ಎಂದು ಅರ್ಥ. 'ಸೂರ್ಯನಿಗೆ ಆಶ್ರಯವಾಗಿರುವ ಚಕ್ಷುಸ್ಸನ್ನು ಪಡೆದಿರುವಿಕೆ' ಮೊದಲಾದವುಗಳೂ ಭಗವಂತನ ಗುಣಗಳೇ ಆದುದರಿಂದ ಅವುಗಳ ಉಪಾಸನೆಯನ್ನು ಮಾಡತಕ್ಕದ್ದೆಂದು ಭಾವ.

ನವಾಧಿಕರಣ—೪೨

ಓಂ ನ ವಾऽತತ್ಸಹಭಾವಶ್ರುತೇಃ ಓಂ ೩.೩.೬೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವಂತನ ಅಂಗಗಳಲ್ಲಿ ದೇವತೋಪಾಸನೆಯನ್ನು ದೇವತೆಗಳಲ್ಲದವರು ಮಾಡತಕ್ಕದ್ದಲ್ಲ ಎಂದು ಹೇಳಲಾಗುವುದು.

ನ ವಾ - ಭಗವದಂಗಗಳಲ್ಲಿ ಸೂರ್ಯಾದಿದೇವತೆಗಳ ಉಪಾಸನೆಯನ್ನು ಮಾಡತಕ್ಕದ್ದಲ್ಲ. ಏಕೆಂದರೆ, ಅತತ್ಸಹಭಾವಶ್ರುತೇಃ – ಎಲ್ಲ ಶಾಖೆಗಳಲ್ಲಿ ಹೇಳಿರುವ

---

1. ಬ್ರಹ್ಮಜ್ಞಾನಿಯಾದ ಮುಮುಕ್ಷುವು, ಈ ಗುಣಗಳು ಉಪಾಸ್ಯಗಳು, ಇವುಗಳಲ್ಲ ಎಂಬ ವಿಭಾಗವಿಲ್ಲದೆ ಯಥಾಶಕ್ತಿ ಭಗವಂತನ ಎಲ್ಲ ಗುಣಗಳನ್ನು ಉಪಸಂಹಾರಮಾಡತಕ್ಕದ್ದು ಎಂದು ಶ್ರುತಿಯ ಭಾವ.

गतोपासनेन सहभावेन सहस्त्वेनाश्रवणादिति नञो व्यत्यासेन योज्यम् । देवान्यापेक्षया वाशब्दः ।

इतश्चैवमित्याह—

॥ ॐ दर्शनाच्च ॐ ॥ ३.३.६८

'सत्यो ज्ञानः परमानन्दरूप आत्मा' इत्यादिश्रुतौ देवैस्तथो-

---

ಉಪಾಸನೆಯೊಂದಿಗೆ ಭಗವದಂಗಗಳಲ್ಲಿ ದೇವತೋಪಾಸನೆಯು ಶ್ರುತವಾಗಿಲ್ಲದಿರುವುದ ರಿಂದ. ಹೀಗೆ, 'ಅತತ್ಸಹಭಾವಶ್ರುತೇಃ' ಎಂಬಲ್ಲಿ 'ತತ್' ಪದದೊಂದಿಗಿರುವ ನಞ್ಪದ ವನ್ನು ಸ್ಥಾನವ್ಯತ್ಯಾಸ ಮಾಡಿ 'ಶ್ರುತಿ' ಶಬ್ದದೊಂದಿಗೆ ಯೋಜಿಸಬೇಕು. ಸೂತ್ರದಲ್ಲಿ ರುವ 'ವಾ' ಶಬ್ದವು ದೇವಭಿನ್ನರ ವಿವಕ್ಷೆಯಿಂದ ಉಪಯೋಗಿಸಲ್ಪಟ್ಟಿದೆ.[1]

ಈ ಮುಂದಿನ ಕಾರಣದಿಂದಲೂ ದೇವತೆಗಳಲ್ಲದವರು ಅಂಗದೇವತೋಪಾಸನೆ ಯನ್ನು ಮಾಡತಕ್ಕದ್ದಲ್ಲ ಎಂದು ಹೇಳುವ ಸೂತ್ರ—

ಓಂ ದರ್ಶನಾಚ್ಚ ಓಂ ೩.೩.೬೮

**ಸೂತ್ರಾರ್ಥ**

ಸತ್ಯೋ ಜ್ಞಾನಃ ಪರಮಾನಂದರೂಪ ಆತ್ಮಾ'[2] ಎಂಬ ಶ್ರುತಿಯಲ್ಲಿ ದೇವತೆ

---

1. ಸೂತ್ರದಲ್ಲಿ 'ನ ವಾ' ಎಂದು ಹೇಳಿರುವುದು ದೇವತೆಗಳು ಅಂಗದೇವತೋಪಾಸನೆ ಯನ್ನು ಮಾಡಬಹುದು ಅಥವಾ ಮಾಡದಿರಬಹುದು ಎಂಬ ಅಭಿಪ್ರಾಯದಿಂದಲ್ಲ. ದೇವ ಭಿನ್ನರ ದೃಷ್ಟಿಯಿಂದ ಇಲ್ಲಿ 'ವಾ' ಶಬ್ದದ ಪ್ರಯೋಗ. ದೇವತೆಗಳು ಅಂಗದೇವತೋಪಾಸನೆ ಯನ್ನು ಮಾಡತಕ್ಕದ್ದು. ದೇವಾನ್ಯರು ಮಾಡತಕ್ಕದ್ದಲ್ಲ ಎಂದು 'ನ ವಾ' ಎಂಬ ಪದಗಳ ಭಾವ.

2. ಸತ್ಯೋ ಜ್ಞಾನಃ ಪರಮಾನಂದರೂಪ ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್।
ನಾನ್ಯತ್ ಕಿಂಚಿತ್ ಸಮುಪಾಸೀತ ಧೀರಃ ಸರ್ವೈರ್ಗುಣೈಃ ದೇವಗಣಾ
ಉಪಾಸತೇ ॥ ಎಂದು ಕಮಠಶ್ರುತಿ.

पास्तिः कार्या नान्यैरित्यस्यार्थस्य दर्शनाच्चैवमित्यर्थः ॥ ४२ ॥

इति श्रीराघवेन्द्रयतिकृतायां तन्त्रदीपिकायां
तृतीयाध्याये तृतीयपादः

॥ श्रीकृष्णार्पणमस्तु ॥

---

ಗಳು ಹಾಗೆ ಉಪಾಸನೆ ಮಾಡತಕ್ಕದ್ದು, ಅನ್ಯರಲ್ಲ ಎಂಬ ಅರ್ಥವು ಕಾಣಬರುವುದರಿಂದಲೂ ಎಂದರ್ಥ.

ಶ್ರೀರಾಘವೇಂದ್ರಯತಿಗಳು ರಚಿಸಿರುವ 'ತಂತ್ರದೀಪಿಕೆ'ಯ
ಕನ್ನಡ ಅನುವಾದದಲ್ಲಿ ಮೂರನೆ ಅಧ್ಯಾಯದ ಮೂರನೆ
ಪಾದವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

## अथ चतुर्थः पादः

प्रागुक्तोपासनासाध्यापरोक्षज्ञानस्य विद्यैवेत्यत्र स्वतन्त्रस्यैव मुक्तिहेतुत्वरूप सामर्थ्यसिद्धावपि इह पादे मुक्त्यन्यफलादावपि सामर्थ्यमस्तीत्युच्यते ।

पुरुषार्थाधिकरणम् —१

॥ ॐ पुरुषार्थोऽतः शब्दादिति बादरायणः ॐ ॥ ३.४.१

अत्र ज्ञानस्य सर्वपुरुषार्थहेतुत्वमहिमोच्यते । यदर्थं प्रागुपासना

---

## ತೃತೀಯಾಧ್ಯಾಯ ಚತುರ್ಥಪಾದ

**ಈ ಪಾದದ ವಿಷಯ**

ಹಿಂದಿನ ಪಾದದಲ್ಲಿ 'ವಿದ್ಯೈವ ತು ನಿರ್ಧಾರಣಾತ್' (ಬ್ರ.ಸೂ. ೩.೩.೪೮) ಎಂಬಲ್ಲಿ ಉಪಾಸನೆಯಿಂದ ಉಂಟಾಗುವ ಭಗವದಪರೋಕ್ಷಜ್ಞಾನವು ಸ್ವತಂತ್ರವಾಗಿ ಮುಕ್ತಿಹೇತುವಾಗುವ ಸಾಮರ್ಥ್ಯವನ್ನು ಪಡೆದಿದೆ ಎಂದು ಸಿದ್ಧವಾಗಿದ್ದರೂ, ಈ ಪಾದದಲ್ಲಿ ಆ ಅಪರೋಕ್ಷಜ್ಞಾನಕ್ಕೆ ಮುಕ್ತಿಭಿನ್ನವಾದ ಫಲವನ್ನು ಕೊಡುವ ಸಾಮರ್ಥ್ಯವೂ ಇದೆ ಎಂದು ಹೇಳಲಾಗುವುದು.

ಪುರುಷಾರ್ಥಾಧಿಕರಣ—೧

**ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ**

**೩.೪.೧**

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವದಪರೋಕ್ಷಜ್ಞಾನಕ್ಕೆ ಸರ್ವಪುರುಷಾರ್ಥಕಾರಣತ್ವ

उक्ता तज्ज्ञानम् अत इति परामृशति । पुरुषैः अर्थ्यत इति पुरुषार्थ इति सर्वोऽपि पुमर्थ उच्यते ।

अतो ज्ञानात् पुरुषार्थो भवति । कुत ? शब्दात् 'यं यं लोकं' इत्यादिशब्दादिति बादरायणो मन्यते । विमतिसूचनार्थैतत्पदम् ।

---

ವೆಂಬ ಮಹಿಮೆ ಇರುವುದೆಂದು ಹೇಳಲಾಗುವುದು. ಹಿಂದಿನ ಪಾದದಲ್ಲಿ, ಯಾವುದ ಕ್ಕೋಸ್ಕರವಾಗಿ ಉಪಾಸನೆಯನ್ನು ಹೇಳಲಾಯಿತೋ ಆ ಜ್ಞಾನವನ್ನು ಸೂತ್ರದಲ್ಲಿ ರುವ 'ಅತಃ' ಎಂಬ ಶಬ್ದವು ಪರಾಮರ್ಶಿಸುವುದು. ಪುರುಷೈಃ ಅರ್ಥ್ಯತೇ - ಪುರುಷ ರಿಂದ ಇಚ್ಛಿಸಲ್ಪಡತಕ್ಕದ್ದು ಎಂಬ ವ್ಯುತ್ಪತ್ತಿಗನುಸಾರವಾಗಿ 'ಪುರುಷಾರ್ಥ' ಶಬ್ದವು ಸಮಸ್ತ ಪುರುಷಾರ್ಥಗಳನ್ನು ಹೇಳುವುದು.

ಅತಃ - ಭಗವದಪರೋಕ್ಷಜ್ಞಾನದಿಂದ, ಪುರುಷಾರ್ಥಃ ಭವತಿ - ಸಮಸ್ತ ಪುರು ಷಾರ್ಥಗಳೂ ಉಂಟಾಗುವವು. ಏಕೆಂದರೆ, ಶಬ್ದಾತ್ – [1]'ಯಂ ಯಂ ಲೋಕಂ' ಇತ್ಯಾದಿ ಶ್ರುತಿಯ ಆಧಾರದಿಂದ ಎಂದು, ಬಾದರಾಯಣಃ – ಬಾದರಾಯಣರು ತಿಳಿಯುತ್ತಾರೆ. 'ಭಗವದಪರೋಕ್ಷಜ್ಞಾನವು ಸಮಸ್ತಪುರುಷಾರ್ಥಗಳಿಗೆ ಹೇತು' ಎಂಬ ವಿಷಯದಲ್ಲಿರುವ ಭಿನ್ನಾಭಿಪ್ರಾಯವನ್ನು ಬಾದರಾಯಣಪದವು ಸೂಚಿಸು ವುದು.

---

1. 'ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ ।
ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್ ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ ಭೂತಿಕಾಮಃ ॥ (ಮು ೩.೧.೧೦)

ನಿರ್ಮಲವಾದ ಅಂತಃಕರಣವುಳ್ಳ ಬ್ರಹ್ಮಜ್ಞಾನಿಯು ಸ್ವರ್ಗ ಮೊದಲಾದ ಯಾವ ಯಾವ ಲೋಕವನ್ನು ಪಡೆಯಲು ಮನಸ್ಸಿನಲ್ಲಿ ಬಯಸುವನೋ, ತನಗಿಷ್ಟವಾದ ಯಾವ ಯಾವ ವಸ್ತು ಗಳನ್ನು ಇಚ್ಛಿಸುವನೋ ಅವೆಲ್ಲವನ್ನೂ ಪಡೆಯುವನು. ಹೀಗೆ ಭಗವಂತನ ಅಪರೋಕ್ಷಜ್ಞಾನವು ಸರ್ವಪುರುಷಾರ್ಥಸಾಧನವಾಗಿರುವ ಕಾರಣದಿಂದಲೇ, ಅಂತಹ ಜ್ಞಾನವನ್ನು ಪಡೆಯಲು ಸರ್ವ ಪುರುಷಾರ್ಥಕಾಮನಾದ ಪುರುಷನು ಬ್ರಹ್ಮಜ್ಞಾನಿಯನ್ನು ಪೂಜಿಸತಕ್ಕದ್ದು ಎಂದು ಶ್ರುತಿಯ ಭಾವ.

उक्तमाक्षिपति—

॥ ॐ शेषत्वात् पुरुषार्थवादो यथाऽन्येष्विति जैमिनिः ॐ ॥

३.४.२

अत इत्येतद्विपरिणम्य वर्तते । अस्य ज्ञानस्य पुरुषार्थवादः 'यं यं' इति श्रुतौ स्वर्गादिमुक्त्यन्यपुमर्थहेतुत्ववादः शेषत्वात् तद्धेतुकर्मशेषत्वात् न साक्षात् । एवं तर्हि ज्ञानस्य प्राधान्येन श्रुतौ तद्वादः कथम् ? यथाऽन्येषु 'स्वर्गं धनाद्धहतो वै गृहाच्च प्राप्स्यन्ति'

---

ಈಗ ಹೇಳಿದುದನ್ನು ಆಕ್ಷೇಪಿಸುವ ಸೂತ್ರ—

ಓಂ ಶೇಷತ್ವಾತ್ ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ ಓಂ ೩.೪.೨

**ಸೂತ್ರಾರ್ಥ**

ಹಿಂದಿನ ಸೂತ್ರದ 'ಅತಃ' ಎಂಬ ಪದವು 'ಅಸ್ಯ' ಎಂದು ವಿಭಕ್ತಿಯ ಬದಲಾವಣೆಯೊಂದಿಗೆ ಇಲ್ಲಿ ಅನುವೃತ್ತವಾಗುವುದು.

ಅಸ್ಯ - ಭಗವದಪರೋಕ್ಷಜ್ಞಾನಕ್ಕೆ, ಪುರುಷಾರ್ಥವಾದಃ – 'ಯಂ ಯಂ' ಎಂಬ ಶ್ರುತಿಯಲ್ಲಿ ಮೋಕ್ಷಭಿನ್ನವಾದ ಸ್ವರ್ಗ ಮೊದಲಾದ ಪುರುಷಾರ್ಥಹೇತುತ್ವವಿದೆ ಎಂದು ಹೇಳಿರುವುದು, ಶೇಷತ್ವಾತ್ - ಸ್ವರ್ಗ ಮೊದಲಾದ ಪುರುಷಾರ್ಥಗಳಿಗೆ ಕಾರಣವಾದ ಕರ್ಮಕ್ಕೆ ಜ್ಞಾನವು ಅಂಗವಾಗಿರುವುದರಿಂದಲೇ ಹೊರತು ಸಾಕ್ಷಾತ್ ಅಂತಹ ಪುರುಷಾರ್ಥಗಳಿಗೆ ಕಾರಣವಾದದ್ದರಿಂದಲ್ಲ. ಹಾಗಾದರೆ, 'ಯಂ ಯಂ ಲೋಕಂ' ಎಂಬ ಶ್ರುತಿಯಲ್ಲಿ ಪ್ರಧಾನವಾಗಿ ಜ್ಞಾನಕ್ಕೆ ಸರ್ವಪುರುಷಾರ್ಥಹೇತುತ್ವವನ್ನು ಹೇಳಿರುವುದು ಹೇಗೆ ? ಯಥಾ ಅನ್ಯೇಷು - 'ಸ್ವರ್ಗಂ ಧನಾತ್ ದೇಹತೋ ವೈ ಗೃಹಾಚ್ಚ ಪ್ರಾಪ್ಸ್ಯಂತಿ' ಎಂಬ ಶ್ರುತಿಯಲ್ಲಿ ಸ್ವರ್ಗಹೇತುವಾದ ಕರ್ಮಕ್ಕೆ ಅಂಗ

1. 'ಸ್ವರ್ಗಂ ಧನಾತ್ ದೇಹತೋ ವೈ ಗೃಹಾಚ್ಚ ಪ್ರಾಪ್ಸ್ಯಂತಿ ಧೀರಾ ನ ತ್ವಧೀರಾಃ ಕುತಶ್ಚಿತ್' ಎಂದು ಶ್ರುತಿ.

इति श्रुतौ वित्तादिषु स्वर्गहेतुकर्मशेषेषु यथा तद्वादस्तथेति जैमिनिर्मन्यत इत्यर्थः । शेषत्वं च ज्ञानस्य कर्माजिते अतिशयाधायकत्वं बोध्यम् ।

कुतः शेषत्वकल्पना ? साक्षादेव किं नेत्यत आह—

॥ ॐ आचारदर्शनाच्च ॐ ॥ ३.४.३

चो ज्ञानिनां च देवानामित्यन्वेति । आचारस्य कर्मानुष्ठानस्य

---

ವಾಗಿರುವ ಧನಾದಿಗಳನ್ನು ಪ್ರಧಾನವಾಗಿ ಸ್ವರ್ಗಕ್ಕೆ ಹೇತುವೆಂದು ಹೇಳಿರುವುದು ಹೇಗೋ ಹಾಗೆ ಎಂದು ಜೈಮಿನಿ ಋಷಿಗಳು ತಿಳಿಯುತ್ತಾರೆ. ಕರ್ಮಕ್ಕೆ ಜ್ಞಾನವು ಶೇಷವಾಗಿರುವುದು ಎಂದರೆ ಕರ್ಮಾರ್ಜಿತವಾದ ಫಲದಲ್ಲಿ ಅತಿಶಯುವನ್ನು ಉಂಟು ಮಾಡುವುದು ಎಂದು ತಿಳಿಯತಕ್ಕದು.

ಸ್ವರ್ಗಕಾರಣವಾದ ಕರ್ಮಗಳಿಗೆ ಜ್ಞಾನವು ಅಂಗವೆಂದೇಕೆ ಕಲ್ಪಿಸಬೇಕು ? ಸ್ವರ್ಗಾದಿಗಳಿಗೆ ಜ್ಞಾನವು ಸಾಕ್ಷಾತ್ತಾಗಿಯೇ ಹೇತುವಾಗಬಾರದೇಕೆ ? ಎಂಬ ಪ್ರಶ್ನೆಗೆ ಉತ್ತರ—

ಓಂ ಆಚಾರದರ್ಶನಾಚ್ಚ ಓಂ ೩.೪.೩

**ಸೂತ್ರಾರ್ಥ**

'ಚ' ಶಬ್ದವು 'ಜ್ಞಾನಿನಾಂ ಚ ದೇವಾನಾಂ' ಎಂದು ಅನ್ವಯುವನ್ನು ಪಡೆ

---

ಬಹುಧನವ್ಯಯದಿಂದ, ಶರೀರಶ್ರಮದಿಂದ ಮತ್ತು ಗೃಹಸ್ಥಾಶ್ರಮದಿಂದ ಜ್ಞಾನಿಗಳು ಸ್ವರ್ಗವನ್ನು ಪಡೆಯುವರು, ಅಜ್ಞಾನಿಗಳು ಪಡೆಯಲಾರರು ಎಂದು ಶ್ರುತಿಯ ಭಾವ. ಬಹು ಧನವ್ಯಯ, ಶರೀರಾಯಾಸ, ಗೃಹಸ್ಥಾಶ್ರಮ ಮೊದಲಾದವುಗಳು ಸ್ವರ್ಗಸಾಧನವಾದ ಯಾಗಾದಿ ಕರ್ಮಕ್ಕೆ ಅಂಗವೇ ಹೊರತು ಸಾಕ್ಷಾತ್ ಸಾಧನಗಳಲ್ಲ. ಆದರೂ ಈ ಶ್ರುತಿಯಲ್ಲಿ ಅವುಗಳನ್ನು ಸ್ವರ್ಗಸಾಧನವೆಂದು ಹೇಳಿರುವಂತೆ 'ಯಂ ಯಂ' ಇತ್ಯಾದಿ ಶ್ರುತಿಯಲ್ಲಿ ಸ್ವರ್ಗಾದಿಗಳಿಗೆ ಸಾಕ್ಷಾತ್ ಸಾಧನವಾದ ಕರ್ಮಕ್ಕೆ ಅಂಗವಾದ ಜ್ಞಾನವನ್ನು ಸ್ವರ್ಗಸಾಧನ ವೆಂದು ಹೇಳಲಾಗಿದೆ. ವಾಸ್ತವಿಕವಾಗಿ, ಜ್ಞಾನಕ್ಕೆ ಮೋಕ್ಷಹೇತುತ್ವ ಮಾತ್ರ. ಕರ್ಮಕ್ಕೇ ಇತರ ಪುರುಷಾರ್ಥಹೇತುತ್ವವೆಂದು ಜೈಮಿನಿಗಳ ಅಭಿಪ್ರಾಯ.

'यज्ञेन यज्ञमयजन्त देवाः' इत्यादौ दर्शनात् । अत एषा कल्पना । अन्यथाऽऽचारवैयर्थ्यादित्यर्थः ।

अस्त्वेतावता द्वयोर्हेतुत्वम् । स्वर्गादावङ्गाङ्गित्वं कुत इत्यत आह—

॥ ॐ तच्छ्रुतेः ॐ ॥ ३.४.४

तस्य कर्मप्रतिज्ञाने शेषत्वस्य 'यदेव विद्यया करोति तदेव

---

ಯುವುದು. ಜ್ಞಾನಿನಾಂ ಚ ದೇವಾನಾಂ – ಜ್ಞಾನಿಗಳಾಗಿದ್ದರೂ ದೇವತೆಗಳಿಗೆ, ಆಚಾರಸ್ಯ - ಕರ್ಮಾನುಷ್ಠಾನವು, ದರ್ಶನಾತ್ - 'ಯಜ್ಞೇನ ಯಜ್ಞಮಯಜಂತ ದೇವಾಃ' ಇತ್ಯಾದಿ ಶ್ರುತಿಯಲ್ಲಿ ಕಂಡುಬರುವುದರಿಂದ. ಆದ್ದರಿಂದಲೇ ಜ್ಞಾನವು ಕರ್ಮಕ್ಕೆ ಅಂಗವೆಂಬ ಕಲ್ಪನೆ. ಜ್ಞಾನವೇ ಸಾಕ್ಷಾತ್ ಸ್ವರ್ಗಾದಿ ಕಾರಣವಾಗಿದ್ದಲ್ಲಿ ಜ್ಞಾನಿಗಳಾದ ದೇವತೆಗಳು ಕರ್ಮಾನುಷ್ಠಾನ ಮಾಡುವುದು ವ್ಯರ್ಥವಾಗುವುದೆಂದು ಅರ್ಥ.

ಜ್ಞಾನ ಮತ್ತು ಕರ್ಮಗಳೆರಡೂ ಸ್ವರ್ಗಾದಿಗಳಿಗೆ ಕಾರಣವೆಂದಾಗಲಿ. ಕರ್ಮ ಪ್ರಧಾನವಾದ ಕಾರಣ, ಜ್ಞಾನ ಅದಕ್ಕೆ ಅಂಗವೆಂದು ಅಂಗಾಂಗಿಭಾವವೇಕೆ ? ಎಂಬ ಶಂಕೆಗೆ ಸಮಾಧಾನ—

ಓಂ ತಚ್ಛ್ರುತೇಃ ಓಂ ೩.೪.೪

**ಸೂತ್ರಾರ್ಥ**

ತಸ್ಯ - ಕರ್ಮವನ್ನು ಕುರಿತು ಜ್ಞಾನವು ಅಂಗವೆನ್ನುವುದು, ಶ್ರವಣಾಚ್ಚ – 'ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ[1] (ಛಾಂ. ೧.೧.೧೦)

---

1. ಆಸ್ತಿಕ್ಯಬುದ್ಧಿಸಹಿತವಾದ ಸ್ವಯೋಗ್ಯವಾದ ಜ್ಞಾನದಿಂದ ಜ್ಞಾನಿಯು ಯಾವ ಕರ್ಮವನ್ನು ಆಚರಿಸುವನೋ ಆ ಕರ್ಮವೇ ಅಧಿಕಫಲಕ್ಕೆ ಸಾಧನವಾಗುವುದೆಂದು ಶ್ರುತಿಯ ಭಾವ.

वीर्यवत्तरं भवति' इति श्रवणात् तच्छेषत्वमित्यर्थः । 'यं यं' इति श्रुतमपि ज्ञानप्राधान्यं यथा नोपेयते तथा कर्मप्राधान्यं श्रुतमपि नोपेयतामित्यत आह—

॥ ॐ समन्वारम्भणात् ॐ ॥ ३.४.५

'कर्मैव देहं दैविकं मानुषं वाऽप्यन्वारभेत्' इति श्रुत्या कर्मणैव

---

ಎಂಬ ಶ್ರುತಿಯಲ್ಲಿ ಕೇಳಿಬರುವುದರಿಂದ ಕರ್ಮಕ್ಕೆ ಜ್ಞಾನವು ಅಂಗವೆಂದು ಅರ್ಥ.

'ಯಂ ಯಂ ಲೋಕಂ ಮನಸಾ ಸಂವಿಭಾತಿ' ಎಂಬ ಶ್ರುತಿಯಲ್ಲಿ ಕರ್ಮಕ್ಕಿಂತ ಜ್ಞಾನಕ್ಕೇ ಪ್ರಾಧಾನ್ಯ ಶ್ರುತವಾಗಿದ್ದರೂ ಅದನ್ನು ಹೇಗೆ ಅಂಗೀಕರಿಸುವುದಿಲ್ಲವೋ ಹಾಗೆಯೇ 'ಯದೇವ ವಿದ್ಯಯಾ' ಎಂಬ ಶ್ರುತಿಯಲ್ಲಿ ಜ್ಞಾನಕ್ಕಿಂತ ಕರ್ಮಕ್ಕೇ ಪ್ರಾಧಾನ್ಯ ಶ್ರುತವಾಗಿದ್ದರೂ ಅದನ್ನು ಅಂಗೀಕರಿಸದಿರಲಿ ಎಂಬ ಶಂಕೆಗೆ ಉತ್ತರ—

ಓಂ ಸಮನ್ವಾರಂಭಣಾತ್ ಓಂ ೩.೪.೫

**ಸೂತ್ರಾರ್ಥ**

'ಕರ್ಮೈವ ದೇಹಂ ದೈವಿಕಂ ಮಾನುಷಂ ವಾಽಪ್ಯನ್ವಾರಭೇತ್'[1] ಎಂಬ ಶ್ರುತಿ

---

1. 'ಕರ್ಮೈವ ದೇಹಂ ದೈವಿಕಂ ಮಾನುಷಂ ವಾಽಪ್ಯನ್ವಾರಭೇತ್ ನಾಪರಸ್ತತ್ರ ಹೇತುಃ ।
ಭೋಗಾನ್ ತದೀಯಾಂಶ್ಚ ಯಥಾವಿಭಾಗಂ ದದಾತಿ ಕರ್ಮೈವ ಶುಭಾಶುಭಂ ಯತ್ ॥

ಎಂದು ಮಾಠರಶ್ರುತಿ. ಜ್ಞಾನೋತ್ತರಕಾಲದಲ್ಲಿ ಮಾಡಲಾಗಿರುವ ಶುಭಾಶುಭಕರ್ಮಗಳೇ ಮನುಷ್ಯರಿಗೆ ದೇವಲೋಕದಲ್ಲಿ ಜ್ಯೋತಿರ್ಮಯವಾದ ದೇಹವನ್ನು, ಪ್ರತಿಬಂಧಕವಿರುವ ದೇವತೆಗಳಿಗೆ ಮಾನುಷದೇಹವನ್ನು ಉತ್ಪಾದಿಸುವವು. ಕರ್ಮಭಿನ್ನವಾದ ಜ್ಞಾನಾದಿಗಳು ಅಂತಹ ಶರೀರಾದಿಗಳಿಗೆ ಪ್ರಧಾನವಾದ ಕಾರಣವಲ್ಲ. ದೇವತೆಗಳಿಗೆ ಮತ್ತು ಮನುಷ್ಯರಿಗೆ ಸಂಬಂಧಿಸಿದ ಭೋಗಗಳನ್ನು, ಶುಭಕರ್ಮಗಳಿಗೆ ಪುಣ್ಯಫಲ, ಅಶುಭಕರ್ಮಗಳಿಗೆ ಪಾಪಫಲ ಎಂಬ ವಿಭಾಗವನ್ನು ಮೀರದೆ ಶುಭಾಶುಭಕರ್ಮಗಳೇ ಕೊಡುವವು ಎಂದು ಶ್ರುತಿಯ ಭಾವ.

ऐहिकामुष्मिकदेहादेः सं प्राधान्येन अन्वारम्भणात् उत्पादनोक्तेः तस्यैव प्राधान्यं न ज्ञानशेषत्वं तत्साम्यं वेत्यर्थः ।

तथापि ज्ञान्याचारस्य मुक्तवत् लीलात्वेन फलाभावात् न शेषत्वसाधकं तदित्यत आह—

॥ ॐ तद्वतो विधानात् ॐ ॥ ३.४.६

'ज्ञानी च कर्माणि सदोदितानि कुर्यादकामः' इति श्रुतौ

---

ಯಲ್ಲಿ ಕರ್ಮದಿಂದಲೇ ಐಹಿಕ ಮತ್ತು ಆಮುಷ್ಮಿಕದೇಹ ಮೊದಲಾದವುಗಳಿಗೆ, ಸಂ - ಪ್ರಧಾನವಾಗಿ, ಅನ್ವಾರಂಭಣಾತ್ - ಉತ್ಪತ್ತಿಯಾಗುವುದೆಂದು ಹೇಳಿರುವುದರಿಂದ ಕರ್ಮಕ್ಕೇ ಪ್ರಾಧಾನ್ಯವಿದೆ. ಕರ್ಮವು ಜ್ಞಾನಕ್ಕೆ ಅಂಗವಾಗಲೀ ಸಮವಾಗಲೀ ಅಲ್ಲವೆಂದರ್ಥ.

ಆದರೂ, ಜ್ಞಾನಿಗಳು ಮಾಡುವ ಕರ್ಮಾನುಷ್ಠಾನವು ಮುಕ್ತರ ಕರ್ಮಾನುಷ್ಠಾನದಂತೆ ಕೇವಲ ಲೀಲೆಯಾಗಿದ್ದು ಅದಕ್ಕೆ ಫಲವಿಲ್ಲ. ಆದ್ದರಿಂದ ಜ್ಞಾನಿಗಳು ಮಾಡುವ ಕರ್ಮಾನುಷ್ಠಾನವು ಕರ್ಮಕ್ಕೆ ಜ್ಞಾನವು ಅಂಗವಾಗಿದೆ ಎಂಬುದಕ್ಕೆ ಸಾಧಕ ವಾಗಲಾರದು ಎಂಬ ಆಶಂಕೆಗೆ ಉತ್ತರ—

## ಓಂ ತದ್ವತೋ ವಿಧಾನಾತ್ ಓಂ ೩.೪.೬

**ಸೂತ್ರಾರ್ಥ**

'ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ'[1] ಎಂಬ ಶ್ರುತಿ ಯಲ್ಲಿ, ತದ್ವತಃ – ಪ್ರಸ್ತುತವಾದ ಭಗವಂತನ ಜ್ಞಾನವುಳ್ಳ ಪುರುಷನಿಗೆ, ವಿಧಾ

---

1. 'ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ ಸತತಂ ಭವೇತ' ಎಂದು ಕಮಠಶ್ರುತಿ. ಶ್ರುತಿಯಲ್ಲಿ ಹೇಳಿರುವ ಕರ್ಮಗಳನ್ನು ಜ್ಞಾನಿಯೂ ಸದಾ ಮಾಡ ತಕ್ಕದ್ದು. ಅಷ್ಟೇ ಅಲ್ಲದೆ ಅವನು ಯಾವಾಗಲೂ ಕಾಮರಹಿತನೂ ಆಗಿರಬೇಕೆಂದು ಶ್ರುತಿಯ ಭಾವ.

तद्वतः प्रस्तुतज्ञानवतः कर्मविधानात् न लीलात्वमित्यर्थः। न हि विहितस्य लीलात्वमिति भावः।

इतश्च न लीलात्वमित्याह—

॥ ॐ नियमाच्च ॐ ॥ ३.४.७

'कुर्वन्नेवेह कर्माणि जिजीविषेत्' इति श्रुत्या ज्ञानिनोऽपि कर्मणो नियमितत्वाच्चेत्यर्थः। अकरणे प्रत्यवायाच्च न लीलात्वमिति भावः।

---

ನಾತ್ – ಕರ್ಮವನ್ನು ವಿಧಿಸಿರುವುದರಿಂದ ಜ್ಞಾನಿಗೆ ಕರ್ಮವು ಲೀಲೆಯಲ್ಲವೆಂದು ಅರ್ಥ. ವಿಹಿತವಾದದ್ದು ಲೀಲೆಯಲ್ಲವಷ್ಟೆ ಎಂದು ಭಾವ.

ಈ ಮುಂದಿನ ಕಾರಣದಿಂದಲೂ ಜ್ಞಾನಿಗೆ ಕರ್ಮಾನುಷ್ಠಾನವು ಲೀಲೆಯಲ್ಲವೆಂದು ಹೇಳುವ ಸೂತ್ರ—

ಓಂ ನಿಯಮಾಚ್ಚ ಓಂ ೩.೪.೭

**ಸೂತ್ರಾರ್ಥ**

'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್[1]' ಎಂಬ ಶ್ರುತಿಯಿಂದ ಜ್ಞಾನಿಗೂ ಕರ್ಮವು ನಿಯಮಿತವಾದುದರಿಂದಲೂ ಕರ್ಮಾನುಷ್ಠಾನವು ಜ್ಞಾನಿಗಳಿಗೆ ಲೀಲೆಯಲ್ಲವೆಂದು ಅರ್ಥ. ಜ್ಞಾನಿಗಳು ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವಿರುವುದರಿಂದಲೂ ಅವರಿಗೆ ಕರ್ಮಾನುಷ್ಠಾನವು ಲೀಲೆಯಲ್ಲವೆಂದು ಭಾವ.

---

1. 'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ॥'

ಎಂದು ಈಶಾವಾಸ್ಯಶ್ರುತಿ. ನೂರುವರ್ಷಗಳ ಕಾಲ ಮಾನುಷಾದಿ ಜನ್ಮದಲ್ಲಿ ಜೀವಿಸಲು ಇಚ್ಛಿಸಿದ್ದೇ ಆದರೆ ಮರಣಪರ್ಯಂತ ಸ್ವೋಚಿತವಾದ ಭಗವತ್ಪೂಜಾತ್ಮಕವಾದ ಕರ್ಮಗಳನ್ನು ನಿಷ್ಕಾಮನಾಗಿ ಆಚರಿಸಲೇಬೇಕು. ಹೀಗೆ ಕರ್ಮಗಳನ್ನು ಅನುಷ್ಠಿಸುವ ಮನುಷ್ಯ ಮೊದಲಾದ ಅಲ್ಪಾಧಿಕಾರಿಗೂ ಹಿಂದೆ ಮಾಡಿದ, ಮುಂದೆ ಮಾಡುವ ಕರ್ಮಗಳು ಬಾಧಿಸಲಾರವು. ಕರ್ಮಗಳನ್ನು ಮಾಡದಿದ್ದವನಿಗೆ ಕರ್ಮಲೇಪವಾಗದಿರಲಾರದು ಎಂದು ಭಾವ.

एवं जैमिनिमतमुपन्यस्य स्वमतं साधयति—

॥ ॐ अधिकोपदेशात्तु बादरायणस्यैवं तद्दर्शनात् ॐ ॥
३.४.८

तुः प्राचीनाद्विशेषार्थः । एवमिति 'पुरुषार्थोऽतः' इत्युक्तपरामर्शः । बादरायणस्य एवं ज्ञानादेव सर्वपुरुषार्थो भवतीत्येवं मतं, न तु ज्ञानं कर्मशेषतया तथेति । तर्हि ज्ञान्याचारवैयर्थ्यं प्रागुक्तविध्याद्ययोगश्चेति न शङ्क्यम् । कुतः ? अधिकोपदेशात् ज्ञानार्जिते

---

ಹೀಗೆ ಜೈಮಿನಿಮತವನ್ನು ಹೇಳಿ ಬಾದರಾಯಣರು ತಮ್ಮ ಮತವನ್ನು ಮುಂದಿನ ಸೂತ್ರದಿಂದ ಸಮರ್ಥಿಸುತ್ತಾರೆ—

ಓಂ ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ಓಂ ३.೪.೮

**ಸೂತ್ರಾರ್ಥ**

ಸೂತ್ರದಲ್ಲಿರುವ 'ತು' ಶಬ್ದವು ಹಿಂದಿನ ಮತಕ್ಕಿಂತ ಈ ಮತದ ವಿಶೇಷವನ್ನು ಹೇಳುವುದು. 'ಏವಂ' ಶಬ್ದವು 'ಪುರುಷಾರ್ಥೋಽತಃ' (ಬ್ರ.ಸೂ. ३.೪.೧) ಎಂಬ ಸೂತ್ರದಲ್ಲಿ ಹೇಳಿರುವುದನ್ನು ಪರಾಮರ್ಶಿಸುವುದು.

ಬಾದರಾಯಣಸ್ಯ – ಬಾದರಾಯಣರಿಗೆ, ಏವಂ – ಜ್ಞಾನದಿಂದಲೇ ಸರ್ವ ಪುರುಷಾರ್ಥಗಳು ಉಂಟಾಗುವವು ಎಂಬುದು ಸಮ್ಮತವಾಗಿದೆ ಹೊರತು ಜ್ಞಾನವು ಕರ್ಮಕ್ಕೆ ಅಂಗವಾಗಿ ಸರ್ವಪುರುಷಾರ್ಥಹೇತುವೆನ್ನುವುದಲ್ಲ. ಹಾಗಾದರೆ, ಜ್ಞಾನಿಗಳು ಕರ್ಮಾನುಷ್ಠಾನ ಮಾಡುವುದು ವ್ಯರ್ಥ ಮತ್ತು ಹಿಂದೆ ಹೇಳಿದ, ಜ್ಞಾನಿಗಳಿಗೂ ಕರ್ಮವನ್ನು ವಿಧಿಸುವ ಶ್ರುತಿಗಳು ಯುಕ್ತವಾಗಲಾರವು ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ಅಧಿಕೋಪದೇಶಾತ್ – ಜ್ಞಾನದಿಂದ ಸಂಪಾದಿಸಿದ ಫಲದಲ್ಲಿ, ಅಧಿಕಸ್ಯ

फलेऽधिकस्य कर्माधीनातिशयस्य 'यथा यथा कर्म कुरुते तथा तथाऽधिको भवति' इत्युपदेशात्। कर्मणो ज्ञानशेषत्वोक्तेरित्यर्थः। तद्दर्शनात्। चस्यानुवृत्तिः। तस्य ज्ञानफले कर्मार्जितातिशयस्य राजसूयादिनोपलम्भाच्चेत्यर्थः।

राजसूयार्जितान् लोकानश्वमेधाभिवर्धितान्।
प्राप्नुहि त्वं महाभाग तपसश्च महाफलम्॥

इति तत्त्वप्रदीपोक्तवचनादेतदवसेयम्। शेषत्वश्रुत्या लिङ्गदर्शनेन

---

ಕರ್ಮಾಧೀನವಾದ ಅತಿಶಯುವನ್ನು, ಉಪದೇಶಾತ್ - '[1]ಯಥಾ ಯಥಾ ಕರ್ಮ ಕುರುತೇ ತಥಾ ತಥಾ ಅಧಿಕೋ ಭವತಿ' ಎಂದು ಉಪದೇಶಿಸಿರುವುದರಿಂದ. ಜ್ಞಾನಕ್ಕೆ ಕರ್ಮವು ಅಂಗವೆಂದು ಹೇಳಿರುವುದರಿಂದ ಎಂದು ಅರ್ಥ.

ತದ್ದರ್ಶನಾತ್ - ಹಿಂದಿನ ಸೂತ್ರದಿಂದ 'ಚ' ಶಬ್ದವು ಅನುವೃತ್ತವಾಗುವುದು– ತಸ್ಯ – ಜ್ಞಾನಫಲದಲ್ಲಿ ಕರ್ಮದಿಂದ ಅತಿಶಯುವುಂಟಾಗುವುದು ಎಂಬ ವಿಷಯು ರಾಜ ಸೂಯ ಮೊದಲಾದ ಯಾಗಗಳಿಂದ ತಿಳಿದುಬರುವುದರಿಂದಲೂ ಕೂಡ ಎಂದು ಅರ್ಥ.

[2]ರಾಜಸೂಯಾರ್ಜಿತಾನ್ ಲೋಕಾನ್ ಅಶ್ವಮೇಧಾಭಿವರ್ಧಿತಾನ್ ।
ಪ್ರಾಪ್ನುಹಿ ತ್ವಂ ಮಹಾಭಾಗ ತಪಸಶ್ಚ ಮಹಾಫಲಮ್॥

ಎಂಬ ತತ್ತ್ವಪ್ರದೀಪದಲ್ಲಿ ಹೇಳಿದ ವಚನದಿಂದ ಇದನ್ನು ತಿಳಿಯುತಕ್ಕದ್ದು.

---

1. 'ಜ್ಞಾನಾದೇವ ಸ್ವರ್ಗೋ ಜ್ಞಾನಾದೇವಾಪವರ್ಗೋ ಜ್ಞಾನಾದೇವ ಸರ್ವೇ ಕಾಮಾಃ ಸಂಪದ್ಯಂತೇ । ತಥಾಪಿ ಯಥಾ ಯಥಾ ಕರ್ಮ ಕುರುತೇ ತಥಾ ತಥಾ ಅಧಿಕೋ ಭವತಿ' ಎಂದು ಕೌಂತರವ್ಯ ಶ್ರುತಿ.

2. ಮಹಾಭಾರತ ಸ್ವರ್ಗಾರೋಹಣಪರ್ವದಲ್ಲಿ ಧರ್ಮರಾಜನನ್ನು ಕುರಿತು ಆಡಿರುವ ವಚನ.

चाचारस्य विध्यादेश्च कर्मणः शेषत्वेनोपपत्तिरिति भावः। तत्त्वप्रदीपे तु एवमित्यस्य एवं प्राग् जैमिन्युक्तश्रुतिगतेरित्यर्थ उक्तः। तुः दर्शनाच्चेति चार्थ इत्येके।

कर्मणो ज्ञानशेषत्वेऽपि ज्ञान एवातिशयार्जकत्वमस्त्वित्यत आह—

॥ ॐ तुल्यं तु दर्शनम् ॐ ॥ ३.४.९

तुरेव। ज्ञानिनां दर्शनं तुल्यं तु। कर्मणः कृतावकृतौ च

---

ಕರ್ಮವು ಜ್ಞಾನಕ್ಕೆ ಅಂಗವೆಂದು ಹೇಳುವ ಶ್ರುತಿಯಿಂದ, ಯುಧಿಷ್ಠಿರ ಮೊದಲಾದ ಜ್ಞಾನಿಗಳಿಗೆ ರಾಜಸೂಯಾದಿ ಕರ್ಮಾನುಷ್ಠಾನದಿಂದ ಅಧಿಕಫಲ ದೊರೆತಿದೆಯೆಂಬ ಲಿಂಗವು ಕಂಡುಬರುವುದರಿಂದ ಮತ್ತು ಜ್ಞಾನಿಗಳಿಗೆ ಕರ್ಮಾನುಷ್ಠಾನವನ್ನು ವಿಧಿಸುವ ವಾಕ್ಯದಿಂದಲೂ ಜ್ಞಾನಕ್ಕೆ ಕರ್ಮವು ಶೇಷವೆನ್ನುವುದು ಯುಕ್ತವಾಗುವುದೆಂದು ಭಾವ.

ತತ್ತ್ವಪ್ರದೀಪದಲ್ಲಾದರೋ 'ಏವಂ' ಎಂಬ ಪದಕ್ಕೆ 'ಹೀಗೆ ಹಿಂದೆ ಜೈಮಿನಿ ಋಷಿಗಳು ಹೇಳಿದ ಶ್ರುತಿಗೆ ಬೇರೆ ಮಾರ್ಗವಿರುವುದರಿಂದ' ಎಂದು ಅರ್ಥವನ್ನು ಹೇಳಲಾಗಿದೆ. ಕೆಲವರು ಸೂತ್ರದಲ್ಲಿರುವ 'ತು' ಶಬ್ದವು 'ಚ' ಶಬ್ದದ ಅರ್ಥವನ್ನು ಹೊಂದಿದ್ದು 'ದರ್ಶನಾಚ್ಚ' ಎಂದು ಅನ್ವಯವನ್ನು ಪಡೆಯುವುದೆಂದು ಹೇಳುವರು.

ಕರ್ಮವು ಜ್ಞಾನಕ್ಕೆ ಅಂಗವಾಗಿರುವುದಾದರೂ ಅದು ಜ್ಞಾನದಲ್ಲೇ ಅತಿಶಯುವನ್ನು ಉಂಟುಮಾಡುವುದೆಂದಾಗಲಿ ಎಂಬ ಆಶಂಕೆಗೆ ಸಮಾಧಾನ—

## ಓಂ ತುಲ್ಯಂ ತು ದರ್ಶನಮ್ ಓಂ ೩.೪.೯

**ಸೂತ್ರಾರ್ಥ**

'ತು' ಶಬ್ದಕ್ಕೆ 'ಏವ' ಎಂದು ಅರ್ಥ. ಜ್ಞಾನಿಗಳ, ದರ್ಶನಂ - ಜ್ಞಾನವು, ತುಲ್ಯಂ ತು - ಜ್ಞಾನಿಗಳು ಕರ್ಮವನ್ನು ಮಾಡಲಿ ಅಥವಾ ಮಾಡದಿರಲಿ ಸಮಾನ

**सममेव पुमर्थसमर्थमेवेत्यर्थः । एतच्च 'कामकारेण चैके' इत्यग्रे व्यक्तमतो नैवमिति भावः । मोक्षेतरस्वर्गादिफले ज्ञानशेषत्वकर्मशेषत्वयोः जैमिनिव्यासमतयोः मनुष्यदेवरूपाधिकारिभेदेन वा, देवेष्वपि प्रबलकर्मप्रतिबद्धाप्रतिबद्धज्ञानिभेदेन वा अविरोधो बोध्यः ।**

---

ವಾಗಿಯೇ ಇರುವುದು. ಪುರುಷಾರ್ಥವನ್ನು ನೀಡಲು ಸಮರ್ಥವಾಗಿಯೇ ಇರುವುದು ಎಂದು ಅರ್ಥ. ಈ ವಿಷಯವು 'ಕಾಮಕಾರೇಣ ಚೈಕೇ' (ಬ್ರ.ಸೂ. ೩.೪.೧೫) ಎಂಬಲ್ಲಿ ಮುಂದೆ ಸ್ಪಷ್ಟವಾಗುವುದು. ಆದ್ದರಿಂದ ಕರ್ಮವು ಜ್ಞಾನದಲ್ಲಿ ಅತಿಶಯವನ್ನುಂಟುಮಾಡುವುದು ಎಂಬುದು ಸರಿಯಲ್ಲವೆಂದು ಅರ್ಥ.

**ವ್ಯಾಸಮತಕ್ಕೂ ಜೈಮಿನಿಮತಕ್ಕೂ ವಿರೋಧವಿಲ್ಲ**

ಮೋಕ್ಷವ್ಯತಿರಿಕ್ತವಾದ ಸ್ವರ್ಗಾದಿಫಲಗಳ ವಿಷಯದಲ್ಲಿ ಜ್ಞಾನವು ಕರ್ಮಕ್ಕೆ ಅಂಗವೆಂಬ ಜೈಮಿನಿಮತ ಮತ್ತು ಕ್ರಮವಾಗಿ ಕರ್ಮವು ಜ್ಞಾನಕ್ಕೆ ಅಂಗವೆಂಬ ವ್ಯಾಸಮತವು ಮನುಷ್ಯರು, ದೇವತೆಗಳು ಎಂಬ ವಿಭಿನ್ನ ಅಧಿಕಾರಿಗಳಿಗೆ ಸಂಬಂಧಿಸಿದ್ದೆಂದು ಅಥವಾ ದೇವತೆಗಳಲ್ಲೂ ಕೂಡ, ಪ್ರಬಲಕರ್ಮದಿಂದ ಪ್ರತಿಬದ್ಧರಾದ ಜ್ಞಾನಿಗಳು ಮತ್ತು ಅಂತಹ ಪ್ರತಿಬಂಧಕವಿಲ್ಲದ ಜ್ಞಾನಿಗಳು ಎಂಬ ವಿಭಿನ್ನ ಅಧಿಕಾರಿಗಳಿಗೆ ಸಂಬಂಧಪಟ್ಟಿರುವುದೆಂದು ಆದ್ದರಿಂದ ಅವುಗಳಿಗೆ ವಿರೋಧವಿಲ್ಲವೆಂದು ತಿಳಿಯಬೇಕು.[1]

---

1. ಅಪರೋಕ್ಷಜ್ಞಾನಿಗಳಾದ ಮನುಷ್ಯರಿಗೆ ಸ್ವರ್ಗಾದಿ ಪುರುಷಾರ್ಥಗಳು ಕರ್ಮದಿಂದಲೇ ಉಂಟಾಗುವುವು ಹೊರತು ಜ್ಞಾನದಿಂದಲ್ಲ ಎಂದು ಜೈಮಿನಿಗಳ ಮಾತು. ದೇವತೆಗಳಿಗೆ ಅಂತಹ ಪುರುಷಾರ್ಥಗಳು ಜ್ಞಾನದಿಂದಲೇ ಉಂಟಾಗುವುವು. ಕರ್ಮಗಳು ಜ್ಞಾನಕ್ಕೆ ಅಂಗವೆಂದು ವ್ಯಾಸರ ಮತ. ಆದ್ದರಿಂದ ಎರಡು ಮತಗಳಿಗೆ ವಿರೋಧವಿಲ್ಲವೆಂದು ಒಂದು ಸಮಾಧಾನ. ಅಥವಾ, ಎರಡೂ ಮತಗಳು ದೇವತೆಗಳಿಗೇ ಸಂಬಂಧಪಟ್ಟಿವೆ. ಪ್ರಬಲ ಕರ್ಮದಿಂದ ಪ್ರತಿಬದ್ಧರಾದ ದೇವತೆಗಳಿಗೆ ಕರ್ಮದಿಂದಲೇ ಮೋಕ್ಷವ್ಯತಿರಿಕ್ತ ಫಲಗಳು ಉಂಟಾಗುವವು ಎಂದು ಜೈಮಿನಿ ಮತ. ಹಾಗೆ ಪ್ರತಿಬದ್ಧರಲ್ಲದ ದೇವತೆಗಳಿಗೆ ಜ್ಞಾನದಿಂದಲೇ ಸರ್ವಪುರುಷಾರ್ಥಗಳು ಉಂಟಾಗುವವೆಂದು ವ್ಯಾಸಮತ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲವೆಂದು ಭಾವ.

नन्वेवं शेषत्वादिषट्सूत्र्या ज्ञानिमनुष्याणां प्रतिबन्धयुतदेवानां च मोक्षान्यपुमर्थो ज्ञानशेषिकर्मणा प्रतिबन्धहीनदेवानां तु कर्मशेषिज्ञानेन भवतीत्यर्थस्य अधिकेत्यादियोगाभ्यामेव सिद्धेराद्यो योगः शक्योऽवक्तुम् । तदर्थस्याप्येतदर्थद्वये एव स्थाप्यत्वात् , सामान्यस्य विशेषनिष्ठत्वावश्यंभावादिति चेन्मैवम् ।

सामान्यतो ज्ञानस्य पुमर्थमात्रहेतुत्वसिद्धावेव केषाञ्चित् कर्मशेषत्वेन केषाञ्चित् कर್मशेषित्वेन अन्यफलहेतुत्वमिति

---

**'ಪುರುಷಾರ್ಥೋಽತಃ' ಇತ್ಯಾದಿ ಈ ಅಧಿಕರಣದ ಮೊದಲನೆ ಸೂತ್ರ ವ್ಯರ್ಥವೆಂಬ ಶಂಕೆ ಮತ್ತು ಸಮಾಧಾನ :**

'ಶೇಷತ್ವಾತ್ ಪುರುಷಾರ್ಥವಾದಃ' (ಬ್ರ.ಸೂ. ೩.೪.೨) ಇತ್ಯಾದಿ ಆರು ಸೂತ್ರಗಳಿಂದ ಜ್ಞಾನಿಗಳಾದ ಮನುಷ್ಯರಿಗೆ ಮತ್ತು ಪ್ರಬಲಕರ್ಮದ ಪ್ರತಿಬಂಧವಿರುವ ದೇವತೆಗಳಿಗೆ ಮೋಕ್ಷಭಿನ್ನವಾದ ಪುರುಷಾರ್ಥವು ಜ್ಞಾನವನ್ನು ಅಂಗವನ್ನಾಗಿ ಪಡೆಯುವ ಕರ್ಮದಿಂದ ಉಂಟಾಗುವುದೆಂದು ಸಿದ್ಧವಾಗುವುದು. ಅಂತೆಯೇ, ಪ್ರಬಲಕರ್ಮ ಪ್ರತಿಬಂಧಕವಿಲ್ಲದ ದೇವತೆಗಳಿಗೆ ಅಂತಹ ಪುರುಷಾರ್ಥಗಳು ಕರ್ಮವನ್ನು ಅಂಗವನ್ನಾಗಿ ಪಡೆದಿರುವ ಜ್ಞಾನದಿಂದ ಉಂಟಾಗುವವೆಂದು 'ಅಧಿಕೋಪದೇಶಾತ್' (ಬ್ರ.ಸೂ. ೩.೪.೮) ಇತ್ಯಾದಿ ಎರಡು ಸೂತ್ರಗಳಿಂದ ಸಿದ್ಧವಾಗುವುವು. ಆದ್ದರಿಂದ 'ಪುರುಷಾರ್ಥೋಽತಃ' ಇತ್ಯಾದಿ ಮೊದಲನೆ ಸೂತ್ರವನ್ನು ಹೇಳದಿರಲೂ ಸಾಧ್ಯವಿದೆ. ಏಕೆಂದರೆ, ಆ ಮೊದಲನೆ ಸೂತ್ರದಲ್ಲಿ ಹೇಳಿರುವ ವಿಷಯವು ಮುಂದಿನ ಸೂತ್ರಗಳಿಂದ ಲಭಿಸುವ ಎರಡು ವಿಷಯಗಳಲ್ಲೇ ಪರ್ಯವಸಾನ ಹೊಂದುವುದು. ಸಾಮಾನ್ಯವು ವಿಶೇಷಗಳಲ್ಲಿ ಅಂತರ್ಗತವಾಗುವುದು ಆವಶ್ಯಕವಷ್ಟೆ ಎಂದರೆ ಅದು ಸರಿಯಲ್ಲ. ಜ್ಞಾನವು ಸಮಸ್ತ ಪುರುಷಾರ್ಥಗಳಿಗೆ ಹೇತುವಾಗಿದೆ ಎಂದು ಸಾಮಾನ್ಯ ರೀತಿಯಿಂದ ಸಿದ್ಧವಾದಮೇಲೆಯೇ. ಕೆಲವರಿಗೆ ಕರ್ಮವು ಅಂಗವಾಗಿ, ಇತರ ಕೆಲ

विशेषविचारावसरात् । अन्यथा अस्यानवसरदुःस्थत्वेनानुत्थानात् । उक्तं च पूर्वमीमांसायाम् — सामान्यविशेषवता लक्षणेनेत्यादि । एवमन्यत्रापि ध्येयम् ॥ १ ॥

असार्वत्रिकाधिकरणम्—२

॥ ॐ असार्वत्रिकी ॐ ॥ ३.४.१०

अत्र ईशज्ञानम् असर्वाधिकारिकमित्युच्यते । ज्ञानाधिकारितेति शेषः । असार्वत्रिकी सर्वजननिष्ठा नेत्यर्थः ।

---

ವರಿಗೆ ಆ ಕರ್ಮವು ಪ್ರಧಾನವಾಗಿ ಮೋಕ್ಷಭಿನ್ನವಾದ ಫಲಗಳಿಗೆ ಹೇತುವಾಗುವುದು ಎಂಬ ವಿಶೇಷವಿಚಾರವು ಪ್ರಸ್ತುತವಾಗುವುದು. ಮೊದಲು ಸಾಮಾನ್ಯತಃ 'ಜ್ಞಾನವು ಸಕಲಪುರುಷಾರ್ಥಗಳಿಗೆ ಹೇತು' ಎಂದು ಹೇಳದಿದ್ದಲ್ಲಿ ಸಂದರ್ಭವೇ ಒದಗದೆ ವಿಶೇಷ ವಿಚಾರವು ಪ್ರಸ್ತುತವಾಗಲಾರದು. ಪೂರ್ವಮೀಮಾಂಸಾಶಾಸ್ತ್ರದಲ್ಲೂ ಇದನ್ನೇ 'ಸಾಮಾನ್ಯವಿಶೇಷವತಾ ಲಕ್ಷಣೇನ' ಇತ್ಯಾದಿಯಾಗಿ ಹೇಳಲಾಗಿದೆ — ಬೇರೆ ಕಡೆಗಳಲ್ಲೂ ಇಂತಹ ಆಕ್ಷೇಪಕ್ಕೆ ಇದೇ ರೀತಿಯ ಸಮಾಧಾನವನ್ನು ತಿಳಿಯಬೇಕು.

**ಅಸಾರ್ವತ್ರಿಕಾಧಿಕರಣ—೨**

**ಓಂ ಅಸಾರ್ವತ್ರಿಕೀ ಓಂ ೩.೪.೧೦**

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವಂತನ ಜ್ಞಾನವನ್ನು ಪಡೆಯಲು ಎಲ್ಲರಿಗೂ ಅಧಿಕಾರ ವಿಲ್ಲವೆಂದು ಹೇಳಲಾಗುವುದು. 'ಜ್ಞಾನಾಧಿಕಾರಿತಾ' ಎಂಬ ಶೇಷವನ್ನು ಸೇರಿಸ ಬೇಕು.

अर्थित्वादेः साम्यात् कथं नेत्यत आह—

॥ ॐ विभागः शतवत् ॐ ॥ ३.४.११

नवकोटीनां देवत्वसाम्येऽपि परापरब्रह्मद्वयाधिकस्य शतस्य सोमाधिकारो नान्येषामिति विभागो यथा तथैव अर्थित्वादिसाम्येऽपि केषाञ्चिदधिकारिता अन्येषां नेति विभागः इत्यर्थः । अर्थित्वादिमात्रं न प्रयोजकमिति भावः ।

---

ಜ್ಞಾನಾಧಿಕಾರಿತಾ – ಭಗವಂತನ ಜ್ಞಾನವನ್ನು ಪಡೆಯುವ ಅಧಿಕಾರವು ಅಸಾರ್ವತ್ರಿಕೀ - ಸಮಸ್ತಜನರಲ್ಲಿ ಇರತಕ್ಕದ್ದಲ್ಲ ಎಂದರ್ಥ.

'ಜ್ಞಾನವನ್ನು ಪಡೆಯುವ ಬಯಕೆ' ಮೊದಲಾದ ಅಧಿಕಾರವು ಎಲ್ಲರಿಗೂ ಸಮಾನವಾಗಿರುವಾಗ ಎಲ್ಲರಿಗೂ ಅಧಿಕಾರವಿಲ್ಲವೆನ್ನುವುದು ಹೇಗೆ ಯುಕ್ತ ? ಎಂಬ ಶಂಕೆಗೆ ಸಮಾಧಾನವನ್ನು ಹೇಳುವ ಸೂತ್ರ—

ಓಂ ವಿಭಾಗಃ ಶತವತ್ ಓಂ ೩.೪.೧೧

**ಸೂತ್ರಾರ್ಥ**

ಒಂಬತ್ತು ಕೋಟಿ ದೇವಗಣಗಳಿಗೆ ದೇವತ್ವವು ಸಮಾನವಾಗಿದ್ದರೂ ಪರಬ್ರಹ್ಮ ಮತ್ತು ಅಪರಬ್ರಹ್ಮ – ಈ ಇಬ್ಬರು ಅಧಿಕವಾಗಿ ಸೇರಿರುವ ನೂರು ದೇವಗಣಕ್ಕೆ ಮಾತ್ರ ಸೋಮಾಧಿಕಾರವಿದೆ, ಉಳಿದವರಿಗಿಲ್ಲ ಎಂಬ ವಿಭಾಗ ಹೇಗೋ ಹಾಗೆಯೇ ಜ್ಞಾನವನ್ನು ಪಡೆಯುವ ಇಚ್ಛೆ ಮೊದಲಾದವು ಎಲ್ಲರಲ್ಲೂ ಸಮಾನವಾಗಿದ್ದರೂ ಕೆಲವರಿಗೆ ಅಧಿಕಾರ, ಇತರರಿಗಿಲ್ಲ ಎಂಬ ವಿಭಾಗವಿದೆ ಎಂದರ್ಥ. ಕೇವಲ ಜ್ಞಾನವನ್ನು ಹೊಂದುವ ಇಚ್ಛೆ ಮೊದಲಾದವು ಅಪ್ರಯೋಜಕವೆಂದು ಭಾವ.

इतोऽन्यत् नास्त्येव प्रयोजकमित्यत आह—

॥ ॐ अध्ययनमात्रवतः ॐ ॥ ३.४.१२

'अधिकारिता' इत्यस्ति। मात्रेति कार्त्स्न्यमुच्यते। यथाशक्ति-कृत्स्नाध्ययनवतः अधिकारितेत्यर्थः।

तत्त्वप्रदीपे तु अध्ययनेति फलवदध्ययनमुच्यते। मात्रेति साङ्गत्वरूपकार्त्स्न्योक्तिः। तेनात्रैवर्णिकृताध्ययनस्य साङ्गत्वसफलत्व-

---

ಅರ್ಥಿತ್ವ ಮೊದಲಾದವುಗಳಿಗಿಂತ ಬೇರೆಯಾದ ಜ್ಞಾನಾಧಿಕಾರಕ್ಕೆ ಪ್ರಯೋಜಕವಾದದ್ದು ಇಲ್ಲವೇ ಇಲ್ಲವೆಂಬ ಆಶಂಕೆಗೆ ಉತ್ತರ—

ಓಂ ಅಧ್ಯಯನಮಾತ್ರವತಃ ಓಂ ೩.೪.೧೨

**ಸೂತ್ರಾರ್ಥ**

'ಅಧಿಕಾರಿತಾ' ಎಂಬ ಪದವು ಅನುವೃತ್ತವಾಗುವುದು. ಸೂತ್ರದಲ್ಲಿರುವ 'ಮಾತ್ರ' ಶಬ್ದವು 'ಸಮಸ್ತ' ಎಂಬ ಅರ್ಥವನ್ನು ಹೇಳುವುದು. ಅಧ್ಯಯನ ಮಾತ್ರವತಃ – ಯಥಾಶಕ್ತಿ ಸಮಸ್ತ ವೇದಾಧ್ಯಯನ ಮಾಡಿದವನಿಗೆ, ಅಧಿಕಾರಿತಾ - ಅಧಿಕಾರವಿದೆ ಎಂದು ಅರ್ಥ.

**ತತ್ತ್ವಪ್ರದೀಪರೀತ್ಯಾ ಸೂತ್ರಾರ್ಥ**

ತತ್ತ್ವಪ್ರದೀಪದಲ್ಲಾದರೋ, ಸೂತ್ರದಲ್ಲಿರುವ 'ಅಧ್ಯಯನ' ಪದವು ಸಫಲವಾದ ವೇದಾಧ್ಯಯನವನ್ನು ಹೇಳುವುದು. 'ಮಾತ್ರ' ಶಬ್ದವು ವೇದಾಧ್ಯಯನಕ್ಕೆ ಸಾಂಗತ್ವರೂಪವಾದ ಸಮಸ್ತತ್ವವನ್ನು ಹೇಳುವುದು. ಆದ್ದರಿಂದ, ಅವೈಷ್ಣವರು ಮಾಡಿದ ವೇದಾಧ್ಯಯನಕ್ಕೆ ಸಾಂಗತ್ವ, ಸಫಲತ್ವಗಳೆರಡೂ ಇಲ್ಲದಿರುವುದರಿಂದ ಅದು ಭಗವಂತನ ಜ್ಞಾನಕ್ಕೆ ಅಧಿಕಾರವಲ್ಲವೆಂದು ವ್ಯಾವೃತ್ತಿಗೊಳಿಸಲ್ಪಟ್ಟಿದೆ— ಎಂದು

योरभावाद् व्यावृत्तिरित्युक्तम् । साङ्गसफलवेदाध्ययनवत्त्वं प्रयोजक-
मिति भावः ॥ २ ॥

अविशेषाधिकरणम् —३

॥ ॐ नाविशेषात् ॐ ॥ ३.४.१३

अत्र ज्ञानाधिकारे तारतम्यमस्तीत्युच्यते । अधिकारितेत्यस्ति । अविशेषादित्यावृत्तिः । देवादीनां यज्ञाधिकारिताऽविशेषेण न । एकरूपा न । कुतः ? अविशेषात् ज्ञानस्याप्यविशेषप्रसङ्गात् । अधिकारानुसारित्वस्येत्यर्थः । ज्ञाने तारतम्यं च प्रज्ञान्तरपृथक्त्ववद्दृष्टिश्च इत्यत्र साधितमिति भावः ।

---

ಹೇಳಲಾಗಿದೆ. ಸಾಂಗ ಮತ್ತು ಸಫಲವಾದ ವೇದಾಧ್ಯಯನವೇ ಜ್ಞಾನಾಧಿಕಾರಕ್ಕೆ ಪ್ರಯೋಜಕವೆಂದು ಭಾವ.

ಅವಿಶೇಷಾಧಿಕರಣ—೩

ಓಂ ನಾವಿಶೇಷಾತ್ ಓಂ ೩.೪.೧೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜ್ಞಾನಾಧಿಕಾರದಲ್ಲಿ ತಾರತಮ್ಯವಿದೆಯೆಂದು ಹೇಳಲಾಗುವುದು. 'ಅಧಿಕಾರಿತಾ' ಎಂಬ ಪದವು ಅನುವೃತ್ತವಾಗುವುದು, 'ಅವಿಶೇಷಾತ್' ಎಂಬ ಪದವು ಆವೃತ್ತಿಗೊಳ್ಳುವುದು.

ದೇವತೆಗಳು ಮೊದಲಾದವರಿಗೆ, ಜ್ಞಾನಾಧಿಕಾರಿತಾ - ಜ್ಞಾನದಲ್ಲಿ ಅಧಿಕಾರವು, ಅವಿಶೇಷೇಣ ನ – ಏಕರೂಪವಾದದ್ದಲ್ಲ. ಏಕೆಂದರೆ, ಅವಿಶೇಷಾತ್ – ಜ್ಞಾನಕ್ಕೂ ಏಕರೂಪತೆ ಉಂಟಾಗುವ ಪ್ರಸಂಗವಿರುವುದರಿಂದ. ಅಧಿಕಾರವನ್ನನುಸರಿಸಿ ಜ್ಞಾನವು ಉಂಟಾಗುವುದರಿಂದ ಎಂದು ಅರ್ಥ. ಜ್ಞಾನದಲ್ಲಿ ತಾರತಮ್ಯವಿರುವುದೆನ್ನುವುದನ್ನು 'ಪ್ರಜ್ಞಾಂತರಪೃಥಕ್ತ್ವವದ್ ದೃಷ್ಟಿಶ್ಚ' (ಬ್ರ. ಸೂ. ೩.೩.೫೨) ಎಂಬಲ್ಲಿ ಸಾಧಿಸಲಾಗಿದೆ ಎಂದು ಭಾವ.

यावदधिकारमित्यत्र वृद्धिह्रासभाक्त्वमिति नयसिद्धेन मुक्तितारतम्येन उपासनाधिकारितातारतम्यमुक्तम् । इह तु प्रज्ञान्तरेत्यत्र सिद्धदृष्टितारतम्येन तदधिकारविशेष उच्यत इति भेदः ॥ ३ ॥

स्तुत्यधिकरणम्—४

॥ ॐ स्तुतयेऽनुमतिर्वा ॐ ॥ ३.४.१४

अत्र ज्ञानिनः सदसत्प्रवृत्तौ विशेष उच्यते । नेत्यस्ति ।

---

**ಯಾವದಧಿಕರಣಕ್ಕೂ ಈ ಅಧಿಕರಣಕ್ಕೂ ವಿಷಯಭೇದ**

'ಯಾವದಧಿಕಾರಂ' (ಬ್ರ.ಸೂ. ೩.೩.೩೩) ಎಂಬ ಅಧಿಕರಣದಲ್ಲಿ, 'ವೃದ್ಧಿಹ್ರಾಸಭಾಕ್ತ್ವಂ' (ಬ್ರ.ಸೂ. ೩.೨.೨೦) ಎಂಬ ಅಧಿಕರಣದಲ್ಲಿ ಸಿದ್ಧವಾಗಿರುವ ಮೋಕ್ಷತಾರತಮ್ಯವನ್ನನುಸರಿಸಿ ಉಪಾಸನಾಧಿಕಾರದಲ್ಲಿ ತಾರತಮ್ಯವನ್ನು ಹೇಳಲಾಗಿದೆ. ಈ ಅಧಿಕರಣದಲ್ಲಾದರೋ 'ಪ್ರಜ್ಞಾಂತರ' (ಬ್ರ.ಸೂ. ೩.೩.೫೭) ಎಂಬ ಅಧಿಕರಣದಲ್ಲಿ ಸಿದ್ಧವಾದ ಜ್ಞಾನತಾರತಮ್ಯವನ್ನನುಸರಿಸಿ ಜ್ಞಾನಾಧಿಕಾರದಲ್ಲಿ ತಾರತಮ್ಯವನ್ನು ಹೇಳಲಾಗಿದೆ ಎಂದು ಭೇದವಿದೆ.

ಸ್ತುತ್ಯಧಿಕರಣ—೪

ಓಂ ಸ್ತುತಯೇಽನುಮತಿರ್ವಾ ಓಂ ೩.೪.೧೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜ್ಞಾನಿಯ ಸತ್ಪ್ರವೃತ್ತಿ ಮತ್ತು ಅಸತ್ಪ್ರವೃತ್ತಿಗಳಿಗೆ ಇರುವ ವಿಶೇಷವನ್ನು ಹೇಳಲಾಗುವುದು. ಹಿಂದಿನ ಸೂತ್ರದಿಂದ 'ನ' ಎಂಬ ಪದವು ಅನುವೃತ್ತವಾಗುವುದು. [1]ಮುಂದೆ ಬರುವ 'ವಿಧಿಃ' ಎಂಬ ಪದವನ್ನು ಈ ಸೂತ್ರಕ್ಕೆ ತೆಗೆದುಕೊಳ್ಳಲಾಗುವುದು.

---

1. 'ವಿಧಿರ್ವಾ ಧಾರಣವತ್' (ಬ್ರ.ಸೂ. ೩.೪.೨೦) ಎಂಬ ಸೂತ್ರದಲ್ಲಿರುವ

विधिपदम् अचेतनम् आकृष्यते । 'स ब्राह्मणः केन स्याद् येन स्यात् तेनेदृश एव' इति श्रुतौ ज्ञानिनो यथेष्टाचरणं न विधिः । किन्तु स्तुतये ज्ञानिस्तुत्यर्थम् । यथेष्टाचारेऽपि ज्ञानी मुच्यत एवेति सामर्थ्यप्रकटनायैवोच्यते । अनुमतिर्वा ज्ञानिना क्रियमाणस्याभ्यनुज्ञानमात्रं वा । वाशब्दोऽपरोक्षिमात्रसाधारणस्तुत्यर्थेन सह देवमात्र-

---

'[1]ಸ ಬ್ರಾಹ್ಮಣಃ ಕೇನ ಸ್ಯಾತ್ ಯೇನ ಸ್ಯಾತ್ ತೇನ ಈದೃಶ ಏವ' ಎಂಬ ಶ್ರುತಿಯಲ್ಲಿ ಹೇಳಿರುವ ಜ್ಞಾನಿಯ ಸ್ವೇಚ್ಛಾನುಸಾರವಾದ ಆಚರಣೆಯು, ನ ವಿಧಿಃ - ಹಾಗೆ ಮಾಡತಕ್ಕದ್ದೆಂದು ವಿಹಿತವಾದದ್ದಲ್ಲ. ಅದರ ಬದಲು, ಸ್ತುತಯೇ - ಜ್ಞಾನಿಯ ಸ್ತೋತ್ರದ ಉದ್ದೇಶವುಳ್ಳದ್ದು, ಸ್ವೇಚ್ಛಾನುಸಾರವಾಗಿ ಕರ್ಮಗಳನ್ನು ಆಚರಿಸಿದರೂ ಜ್ಞಾನಿಯು ಮುಕ್ತನಾಗಿಯೇ ಆಗುವನು ಎಂದು ಜ್ಞಾನಿಯ ಸಾಮರ್ಥ್ಯವನ್ನು ಪ್ರಕಟಗೊಳಿಸುವ ಸಲುವಾಗಿಯೇ ಹಾಗೆ ಹೇಳಲಾಗಿದೆ. ಅನುಮತಿರ್ವಾ - ಅಥವಾ, ಜ್ಞಾನಿಯು ಮಾಡುವ ಕರ್ಮಗಳಿಗೆ ಕೇವಲ ಅನುಮತಿ

---

1. 'ತಸ್ಮಾದ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್ ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯಾಥ ಮುನಿರಮೌನಂ ಚ ಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ ಸ ಬ್ರಾಹ್ಮಣಃ ಕೇನ ಸ್ಯಾದ್ಯೇನ ಸ್ಯಾತ್ತೇನೇದೃಶ ಏವ' ಎಂದು ಬೃಹದಾರಣ್ಯಕ (೫.೫.೧) ಶ್ರುತಿ. ಅಪರೋಕ್ಷಜ್ಞಾನದಿಂದ ಮೋಕ್ಷಪ್ರಾಪ್ತಿಯಾಗುವ ಕಾರಣ ಬ್ರಹ್ಮನನ್ನು ಹೊಂದಲು ಯೋಗ್ಯನಾದ ಅಧಿಕಾರಿಯು ಆಗಮಗಳಿಂದ ಲಭಿಸುವ ಶ್ರವಣರೂಪವಾದ ಜ್ಞಾನವನ್ನು ಸಂಪಾದಿಸಬೇಕು. ಹೀಗೆ ಪಾಂಡಿತ್ಯವನ್ನು ಸರಿಯಾಗಿ ಪಡೆದ ನಂತರ ಯುಕ್ತಿರೂಪವಾದ ಬಲದಿಂದ ಜನಿಸುವ ಮನನರೂಪ - ಜ್ಞಾನವನ್ನು ಪಡೆಯಬೇಕು. ಈ ರೀತಿಯಾಗಿ ಪಾಂಡಿತ್ಯ ಮತ್ತು ಬಾಲ್ಯಗಳೆರಡನ್ನೂ ಪಡೆದ ನಂತರ ಆ ಅಧಿಕಾರಿಯು ಧ್ಯಾನಿಯಾಗುವನು. ಉಪಾಸನಾರೂಪವಾದ ಜ್ಞಾನ ಮತ್ತು ಅಪರೋಕ್ಷಜ್ಞಾನವನ್ನು ಪಡೆದ ಆ ಅಧಿಕಾರಿಯು ಜೀವನ್ಮುಕ್ತನಾಗುವನು. ಅವನು ಸತ್ಕರ್ಮವನ್ನಾಚರಿಸಲಿ ಅಥವಾ ಅಸತ್ಕರ್ಮವನ್ನಾಚರಿಸಲಿ, ಆ ಸ್ವೇಚ್ಛಾನುಸಾರಿಯಾದ ಜೀವನ್ಮುಕ್ತನು ಜ್ಞಾನಸಫಲವಾದ ಮೋಕ್ಷವನ್ನು ಪಡೆದೇ ತೀರುವನು ಎಂದು ಶ್ರುತಿಯ ಭಾವ.

विषयानुमतिरूपार्थभेदस्य विकल्पार्थः । सर्वथा यथेष्टाचारो न विधीयते येन सदसत्प्रवृत्त्योः विशेषो न स्यादिति भावः ।

तर्ह्यसत्प्रवृत्त्या कुण्ठितशक्तेर्ज्ञानस्य मुक्तिहेतुत्वं न स्यात् । स्याच्च सत्प्रवृत्तिसमुचितस्येत्यत आद्यं चोद्यं निराह—

॥ ॐ कामकारेण चैके ॐ ॥ ३.४.१५

चोऽप्यर्थे । एके शाखिनः कामकारेण च, कारश्चरणं,

---

ಯನ್ನು ಆ ಶ್ರುತಿಯಲ್ಲಿ ನೀಡಲಾಗಿದೆ. 'ವಾ' ಶಬ್ದವು ಎಲ್ಲ ಅಪರೋಕ್ಷ ಜ್ಞಾನಿಗಳಿಗೂ ಅನ್ವಯಿಸುವ ಸ್ತುತಿ ಎಂಬ ಶ್ರುತ್ಯರ್ಥಕ್ಕೂ ದೇವತೆಗಳಿಗೆ ಮಾತ್ರ ಸಂಬಂಧಿಸುವ ಅನುಮತಿರೂಪವಾದ ಶ್ರುತಿಯ ಅರ್ಥವಿಶೇಷಕ್ಕೂ ವಿಕಲ್ಪವನ್ನು ಹೇಳುವುದು. ಜ್ಞಾನಿಗಳ ಸತ್ಪ್ರವೃತ್ತಿಗೂ ಅಸತ್ಪ್ರವೃತ್ತಿಗೂ ವಿಶೇಷವೇ ಇಲ್ಲದಾಗುವ ಪ್ರಸಂಗಕ್ಕೆ ಕಾರಣವಾಗುವ ಸ್ವೇಚ್ಛಾನುಸಾರವಾದ ಆಚರಣೆಯನ್ನು ಈ ಶ್ರುತಿಯಲ್ಲಿ ಸರ್ವಥಾ ವಿಧಿಸಲಾಗಿಲ್ಲವೆಂದು ಭಾವ.

ಹಾಗಾದರೆ ಅಸತ್ಪ್ರವೃತ್ತಿಯಿಂದ ಶಕ್ತಿ ಕುಂಠಿತವಾಗಿರುವ ಜ್ಞಾನವು ಮೋಕ್ಷಸಾಧನವಾಗದಿರಲಿ, ಸತ್ಪ್ರವೃತ್ತಿಸಹಿತವಾದ ಜ್ಞಾನವೇ ಮೋಕ್ಷಹೇತುವಾಗಲಿ ಎಂದು ಶಂಕಿಸಿದರೆ ಮೊದಲನೆಯ ಶಂಕೆಯನ್ನು ನಿರಾಕರಿಸುವ ಸೂತ್ರ—

ಓಂ ಕಾಮಕಾರೇಣ ಚೈಕೇ ಓಂ ೩.೪.೧೫

**ಸೂತ್ರಾರ್ಥ**

ಸೂತ್ರದಲ್ಲಿರುವ 'ಚ' ಶಬ್ದವು ಅಪಿಶಬ್ದದ ಅರ್ಥವನ್ನು ಹೇಳುವುದು, ಏಕೇ - ಕೆಲವು ವೇದಶಾಖಿಗಳು, ಕಾಮಕಾರೇಣ ಚ – ಕಾರವೆಂದರೆ ಆಚರಣೆ - ಸ್ವೇಚ್ಛಾನುಸಾರಿಯಾದ ಕರ್ಮಾಚರಣೆಯಿಂದಲೂ ಜ್ಞಾನಿಗೆ ಮೋಕ್ಷವಾಗುವುದೆಂದು

यथेष्टाचारेणापि ज्ञानिनो मोक्षं 'कामचाराः कामभक्षाः' इति श्रुतौ पठन्ति यतोऽतो बाधकाभावादस्ति ज्ञानिनः सदसत्प्रवृत्तौ विशेष इति भावः। द्वितीयचोद्यं 'अत एव चाग्नीन्धन' इत्यत्र निरसिष्यते।

कैमुत्येनाप्येतमर्थमाह—

॥ ॐ उपमर्दं च ॐ ॥ ३.४.१६

एक इत्यस्ति। ज्ञानं प्रकृतम्। चोऽप्यर्थः सन् कर्मसमुच्चये।

---

'ಕಾಮಭಕ್ಷಾಃ ಕಾಮಚಾರಾಃ[1]' ಎಂಬ ಶ್ರುತಿಯಲ್ಲಿ ಪಠಿಸುವರು. ಆದ ಕಾರಣ, ಬಾಧಕವಿಲ್ಲದಿರುವುದರಿಂದ ಜ್ಞಾನಿಯು ಸದಸತ್ಪ್ರವೃತ್ತಿಗಳಲ್ಲಿ ವಿಶೇಷವಿದೆಯೆಂದು ಭಾವ. ಎರಡನೆಯ ಶಂಕೆಯನ್ನು 'ಅತ ಏವ ಚಾಗ್ನೀಂಧನ' (ಬ್ರ.ಸೂ. ೩.೪.೨೫) ಎಂಬಲ್ಲಿ ನಿರಾಕರಿಸಲಾಗುವುದು.

ಕೈಮುತ್ಯನ್ಯಾಯದಿಂದಲೂ ಇದೇ ವಿಷಯವನ್ನು ಹೇಳುವ ಸೂತ್ರ—

## ಓಂ ಉಪಮರ್ದಂ ಚ ಓಂ ೩.೪.೧೬

**ಸೂತ್ರಾರ್ಥ**

'ಏಕೇ' ಎಂಬ ಪದವು ಅನುವೃತ್ತವಾಗುವುದು. ಭಗವದಪರೋಕ್ಷಜ್ಞಾನವು ಪ್ರಸ್ತುತವಾಗಿದೆ. ಸೂತ್ರದಲ್ಲಿರುವ 'ಚ' ಶಬ್ದವು ಅಪಿಶಬ್ದದ ಅರ್ಥವುಳ್ಳದ್ದಾಗಿ

---

1. 'ಕಾಮಚಾರಾಃ ಕಾಮಭಕ್ಷಾಃ ಕಾಮವಾದಾಃ ಕಾಮೇನೈವೇಮಂ ದೇಹಮುತ್ಸೃಜ್ಯಾಥ ಪರಾತ್ಪರಮಾಯುರನಾರಂಭಣಮ್' ಎಂದು ಸಾಮಶಾಖಿಗಳು ಪಠಿಸುವ ಶ್ರುತಿ. ಇಷ್ಟವಾದುದನ್ನು ಆಚರಿಸುವ, ಇಷ್ಟವಾದುದನ್ನು ಭುಜಿಸುವ, ಇಷ್ಟವಾದದ್ದನ್ನು ಹೇಳುವ ಭಗವಂತನ ಅಪರೋಕ್ಷಜ್ಞಾನಿಗಳು ತಮ್ಮ ಇಚ್ಛಾನುಗುಣವಾಗಿ ಕರ್ಮನಿಮಿತ್ತಕವಾದ ದೇಹವನ್ನು ತೊರೆದು ಅನಾದಿಯೂ ಪರಾತ್ಪರನೂ ಆದ ಭಗವಂತನನ್ನು ಹೊಂದುವರು ಎಂದು ಶ್ರುತಿಯ ಭಾವ.

अनिवर्त्यतया प्राप्तस्यारब्धकर्मणोऽपि किञ्चिद्भुक्तस्य ज्ञानेनोपमर्दं फलह्रासमेके 'ओमित्युच्चार्यान्तरिममात्मानमभिपश्योपमृद्य पुण्यं च पापं च' इति पठन्ति । किमुत्तरकालीनं विकर्म न मुक्तिप्रतिबन्धकमिति वाच्यमित्यर्थः ।

यद्येवं जिज्ञासूनामपि विकर्माचारेऽप्यपरोक्षाधिकारः स्यादित्यत आह——

---

ಕರ್ಮದ ಸಮುಚ್ಚಯವನ್ನು ಹೇಳುವುದು. ಜ್ಞಾನದಿಂದ ನಷ್ಟವಾಗುವುದಿಲ್ಲವೆಂದು ತಿಳಿದುಬಂದಿರುವ ಸ್ವಲ್ಪ ಭುಕ್ತವಾಗಿರುವ ಪ್ರಾರಬ್ಧಕರ್ಮಕ್ಕೂ ಕೂಡ ಜ್ಞಾನದಿಂದ, ಉಪಮರ್ದಂ - ಫಲಹ್ರಾಸವನ್ನು, ಏಕೇ - ಕೆಲವು ಶಾಖಿಗಳು '[1]ಓಮಿತ್ಯುಚ್ಚಾರ್ಯ ಅಂತರಿಮಂ ಆತ್ಮಾನಂ ಅಭಿಪಶ್ಯೋಪಮೃದ್ಯ ಪುಣ್ಯಂ ಚ ಪಾಪಂ ಚ' ಎಂದು ಪಠಿಸುವರು. ಹೀಗಿರುವಾಗ ಜ್ಞಾನೋತ್ತರಕಾಲದ ಅಸತ್ಕರ್ಮವು ಮುಕ್ತಿಪ್ರತಿಬಂಧಕವಲ್ಲವೆಂದು ಹೇಳಬೇಕಾದುದೇನು ? ಎಂದು ಅರ್ಥ.

ಹಾಗಾದರೆ, ಜಿಜ್ಞಾಸುಗಳಿಗೂ ಅಸತ್ಕರ್ಮಾಚರಣೆ ಇದ್ದರೂ ಭಗವದಪರೋಕ್ಷ ಜ್ಞಾನಕ್ಕೆ ಅಧಿಕಾರವಿರಲಿ ಎಂಬ ಶಂಕೆಗೆ ಸಮಾಧಾನ ಹೇಳುವ ಸೂತ್ರ—

---

1. ಓಮಿತ್ಯುಚ್ಚಾರ್ಯ ಅಂತರಿಮಮಾತ್ಮಾನಮಭಿಪಶ್ಯೋಪಮೃದ್ಯ ಪುಣ್ಯಂ ಚ ಪಾಪಂ ಚ ಕಾಮಮಾಚರಂತೋ ಬ್ರಹ್ಮಾನುವ್ರಜಂತಿ' ಎಂದು ತುರಶ್ರುತಿ. ಮುಕ್ತಿಯೋಗ್ಯರಾದ ಜೀವರು 'ಓಂ' ಎಂದು ಉಚ್ಚರಿಸಿ ಶ್ರವಣಾದಿಗಳನ್ನು ಮಾಡಿ ತಮ್ಮ ಹೃದಯದಲ್ಲಿ ಮತ್ತು ಪ್ರತಿಮಾದಿಗಳಲ್ಲಿ ಸನ್ನಿಹಿತನಾಗಿರುವ ಪರಮಾತ್ಮನನ್ನು ನೋಡಿ ಸ್ವಲ್ಪ ಭುಕ್ತವಾಗಿರುವ, ಅನಿಷ್ಟ ಪ್ರಾರಬ್ಧ ಪುಣ್ಯ-ಪಾಪಗಳನ್ನು ತಮ್ಮ ಜ್ಞಾನದ ಬಲದಿಂದ ಫಲಹ್ರಾಸದ ಮೂಲಕ ನಷ್ಟಗೊಳಿಸಿ ತಮ್ಮ ಇಚ್ಛಾನುಸಾರ ಸದಸತ್ಕರ್ಮಗಳನ್ನು ಆಚರಿಸುತ್ತಿದ್ದರೂ ಪರಬ್ರಹ್ಮನನ್ನು ಹೊಂದಿಯೇ ತೀರುವರು ಎಂದು ಶ್ರುತ್ಯರ್ಥ.

## ॥ ॐ ऊर्ध्वरेतस्सु च शब्दे हि ॐ ॥ ३.४.१७

चः साध्यसमुच्चयेऽवधारणे वा । ज्ञानिवत् जिज्ञासूनामपि तथेति न । कुतः ? हि यस्मादूर्ध्वरेतःसु च, उपलक्षणं, ऊर्ध्वरेतस्त्वादिगुणयुक्तेष्वेव 'य इमं परमं गुह्यमूर्ध्वरेतःसु भाषयेत्' इत्यादिशब्दे ज्ञानोपदेशविधिरस्तीति शेषः, अत इत्यर्थः । परोक्षपूर्वकत्वादपरोक्षस्येति भावः ।

---

## ಓಂ ಊರ್ಧ್ವರೇತಸ್ಸು ಚ ಶಬ್ದೇ ಹಿ ಓಂ ೩.೪.೧೭

**ಸೂತ್ರಾರ್ಥ**

ಸೂತ್ರದಲ್ಲಿರುವ 'ಚ' ಶಬ್ದವು 'ಕಾಮಚಾರಿಗಳಾದ ಜಿಜ್ಞಾಸುಗಳಿಗೆ ಜ್ಞಾನಾಧಿಕಾರವಿಲ್ಲ' ಎಂಬ ಸಾಧ್ಯದ ಸಮುಚ್ಚಯವನ್ನು ಹೇಳುವುದು. ಅಥವಾ ಅವಧಾರಣಾರ್ಥಕವಾಗಿದೆ ಜ್ಞಾನಿಗಳಿಗೆ ಹೇಗೋ ಹಾಗೆ ಜಿಜ್ಞಾಸುಗಳಿಗೂ ಅಸತ್ಕರ್ಮವು ಪ್ರತಿಬಂಧಕವಲ್ಲವೆಂಬುದು ಸರಿಯಲ್ಲ. ಏಕೆಂದರೆ, ಹಿ - ಯಾವ ಕಾರಣದಿಂದ, ಊರ್ಧ್ವರೇತಸ್ಸು ಚ - [1]ಊರ್ಧ್ವರೇತಸ್ ಶಬ್ದವು ಇಲ್ಲಿ ಲಕ್ಷಣಯಾ ಇತರ ಗುಣಗಳನ್ನೂ ಹೇಳುವುದು – ಊರ್ಧ್ವರೇತಸ್ತ್ವ ಮೊದಲಾದ ಗುಣಯುಕ್ತರಾದವರನ್ನು ಉದ್ದೇಶಿಸಿಯೇ, ಶಬ್ದೇ – '[2]ಯ ಇಮಂ ಪರಮಂ ಗುಹ್ಯಂ ಊರ್ಧ್ವರೇತಸ್ಸು ಭಾಷಯೇತ್' ಇತ್ಯಾದಿ ಶ್ರುತಿಯಲ್ಲಿ ಜ್ಞಾನೋಪದೇಶದ ವಿಧಿ ಇದೆಯೋ ಆದ್ದರಿಂದ

---

1. ಗುರುಕುಲವಾಸ, ಬ್ರಹ್ಮಚರ್ಯ, ಶಮಾದಿಸಂಪತ್ತಿ ಮೊದಲಾದ ಗುಣಗಳನ್ನು ಹೇಳುವುದು.

2. ಯ ಇಮಂ ಪರಮಂ ಗುಹ್ಯಂ ಊರ್ಧ್ವರೇತಸ್ಸು ಭಾಷಯೇತ್ ।
ನ ತಥಾ ವಿದ್ಯತೇ ಭೂಯಾನ್ ಯಂ ಪ್ರಾಪ್ಯಾನ್ಯೇಪಿ ಭೂಯಸಃ ॥

ಎಂದು ಮಾಠರ ಶ್ರುತಿ. ಯಾರು ರಹಸ್ಯವಾದ ಭಗವತ್ತತ್ತ್ವವನ್ನು ಊರ್ಧ್ವರೇತಸ್ತ್ವಾದಿಗುಣಯುಕ್ತರಾದ ಶಿಷ್ಯರಿಗೆ ಮಾತ್ರ ಉಪದೇಶಿಸುವರೋ ಅಂತಹ ಉಪದೇಶಕರಂತೆ ಶ್ರೇಷ್ಠರಾದವರು ಮತ್ತೊಬ್ಬರಿಲ್ಲ. ಅಂತಹ ಉಪದೇಶಗಳನ್ನು ಪಡೆದ ಇತರ ಶಿಷ್ಯರೂ ಕೂಡ ಶ್ರೇಷ್ಠತೆಯನ್ನು ಪಡೆಯುವಾಗ ಆ ಉಪದೇಶಕರ ಶ್ರೇಷ್ಠತೆಯನ್ನೇನು ಹೇಳುವುದು ಎಂದು ಶ್ರುತ್ಯರ್ಥ.

प्राधान्यात् स्वशब्देनोर्ध्वरेतस्त्वोक्तिः । 'ऊर्ध्वरेतःसु भाषयेत्' इति श्रुतिविशेषद्योतनाय वा ।

'केन स्यात्' इति श्रुतेः स्तुत्याद्यर्थत्वमुक्तम् । सदाचार-नियमाचरणरूपम् अर्थान्तरं चाऽह–

---

ಎಂದು ಅರ್ಥ. ಇಲ್ಲಿ 'ಜ್ಞಾನೋಪದೇಶದ ವಿಧಿ ಇವೆ' ಎಂಬ ಶೇಷವನ್ನು ಸೇರಿಸಲಾಗಿದೆ. [1]ಅಪರೋಕ್ಷಜ್ಞಾನಕ್ಕೆ ಪರೋಕ್ಷಜ್ಞಾನವು ಕಾರಣವಾಗಿರುವುದರಿಂದ ಎಂದು ಭಾವ.

**ಸೂತ್ರದಲ್ಲಿ 'ಊರ್ಧ್ವರೇತಸ್' ಶಬ್ದವನ್ನು ಪ್ರಯೋಗಿಸುವುದರ ಕಾರಣ**

ಊರ್ಧ್ವರೇತಸ್ತ್ವ ಮೊದಲಾದ ಗುಣಗಳಲ್ಲಿ ಊರ್ಧ್ವರೇತಸ್ತ್ವಗುಣಕ್ಕೆ ಪ್ರಾಧಾನ್ಯವಿರುವುದರಿಂದ ಸೂತ್ರದಲ್ಲಿ 'ಊರ್ಧ್ವರೇತಸ್' ಶಬ್ದದಿಂದಲೇ ಆ ಗುಣವನ್ನು ಹೇಳಲಾಗಿದೆ. ಅಥವಾ, 'ಊರ್ಧ್ವರೇತಸ್ಸು ಭಾಷಯೇತ್' ಎಂಬ ಶ್ರುತಿವಿಶೇಷವನ್ನು ಸೂಚಿಸಲು ಆ ಪದವನ್ನು ಸೂತ್ರದಲ್ಲಿ ಹೇಳಲಾಗಿದೆ.

'ಕೇನ ಸ್ಯಾತ್' ಇತ್ಯಾದಿ ಶ್ರುತಿಯು ಜ್ಞಾನಿಗಳ ಸ್ತುತಿಯನ್ನು ಮಾಡುವುದು ಅಥವಾ ಅವರು ಅನುಷ್ಠಿಸುವ ಸತ್ಕರ್ಮಗಳ ವಿಷಯದಲ್ಲಿ ಇಚ್ಛಾನುಸಾರ ಆಚರಿಸಬಹುದೆಂಬ ಅನುಮತಿಯನ್ನು ನೀಡುವುದು ಎಂದು ಹೇಳಲಾಯಿತು. ಈಗ ಆ ಶ್ರುತಿಗೆ, ಜ್ಞಾನಿಗಳು ಸದಾಚಾರವನ್ನೇ ತಮ್ಮ ಇಚ್ಛಾನುಸಾರವಾಗಿಯೇ ನಿಯಮೇನ ಆಚರಿಸುವರು ಎಂಬ ಮತ್ತೊಂದು ಅರ್ಥವೂ ಇದೆ ಎಂದು ಹೇಳುವ ಸೂತ್ರ—

---

1. ಪ್ರಕೃತ ಮಾಠರಶ್ರುತಿಯಲ್ಲಿ ಊರ್ಧ್ವರೇತಸ್ತ್ವಾದಿಗುಣರಹಿತರಾದ ಕಾಮಚಾರಿಗಳಿಗೆ ಪರೋಕ್ಷಜ್ಞಾನದಲ್ಲಿ ಅಧಿಕಾರವಿಲ್ಲವೆಂದೇ ಸೂಚಿಸಲಾಗಿದೆ ಹೊರತು ಅಪರೋಕ್ಷಜ್ಞಾನಾಧಿಕಾರವಿಲ್ಲದಿರುವ ಬಗ್ಗೆ ಏನೂ ಹೇಳಿಲ್ಲ. ಆದ್ದರಿಂದ ಕಾಮಚಾರಿಗಳಾದ ಜಿಜ್ಞಾಸುಗಳಿಗೆ ಅಪರೋಕ್ಷಜ್ಞಾನಾಧಿಕಾರವಿಲ್ಲವೆಂಬ ಪ್ರಕೃತ ವಿಷಯಕ್ಕೆ ಸಂಬಂಧಿಸಿದಂತೆ ಈ ಶ್ರುತಿಯು ಅನುಪಯುಕ್ತವೆಂದು ತೋರಬಹುದು. ಆದರೆ ಕಾಮಚಾರಿಗಳಾದ ಜಿಜ್ಞಾಸುಗಳಿಗೆ ಪರೋಕ್ಷಜ್ಞಾನಕ್ಕೇ ಅಧಿಕಾರವಿಲ್ಲವೆಂದಾದ ಬಳಿಕ ಸುತರಾಂ ಅಪರೋಕ್ಷಜ್ಞಾನಾಧಿಕಾರವಿಲ್ಲವೆಂದು ಸಿದ್ಧವಾಗುವುದು ಎಂಬ ಅಭಿಪ್ರಾಯದಿಂದ 'ಊರ್ಧ್ವರೇತಸ್ಸು' ಇತ್ಯಾದಿ ಶ್ರುತಿಯು ಇಲ್ಲಿ ಸಂಗತವಾಗಿದೆಯೆಂದು ಭಾವ.

॥ ॐ परामर्शं जैमिनिरचोदना चापवदति हि ॐ ॥ ३.४.१८

जैमिनिः 'केन स्यात्' इति श्रुतेः 'प्रातरुत्थाय' इत्यादिश्रुत्यन्तरोक्तसदाचारपरामर्शं ब्रूते। किमुक्तं भवति। श्रुत्यन्तरविहितसदाचारेष्वेव विधिबन्धेन विना स्वेच्छयाऽनियमेन वर्तेत। न तु कामचारविधिः स्तुत्यादिर्वेत्युक्तं भवति। सदसद्विषया कुतो नेति

---

ಓಂ ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ ಓಂ ೩.೪.೧೮

**ಸೂತ್ರಾರ್ಥ**

ಜೈಮಿನಿಃ - ಜೈಮಿನಿಋಷಿಗಳು, ಪರಾಮರ್ಶಂ - 'ಕೇನ ಸ್ಯಾತ್' ಎಂಬ ಶ್ರುತಿಯು 'ಪ್ರಾತರುತ್ಥಾಯ' ಇತ್ಯಾದಿ ಶ್ರುತ್ಯಂತರದಲ್ಲಿ ಹೇಳಿರುವ ಸದಾಚಾರವನ್ನು ಪರಾಮರ್ಶಿಸುವುದೆಂದು ಹೇಳುವರು. ಏನು ಹೇಳಿದಂತಾಯಿತು ? 'ಕೇನ ಸ್ಯಾತ್' ಇತ್ಯಾದಿ ಶ್ರುತಿಯು - '[1]ಪ್ರಾತರುತ್ಥಾಯ' ಇತ್ಯಾದಿ ಶ್ರುತ್ಯಂತರದಲ್ಲಿ ವಿಧಿಸಲಾಗಿರುವ ಸದಾಚಾರದ ವಿಷಯದಲ್ಲಿ ಜ್ಞಾನಿಗಳು ಯಾವ ವಿಧಿಬಂಧನವೂ ಇಲ್ಲದೆ ತಮ್ಮ ಇಚ್ಛಾನುಸಾರವಾಗಿ, ಆದರೆ ತಪ್ಪದೇ ಪ್ರವರ್ತಿಸುವರು ಎಂದು ಹೇಳುವುದೇ ಹೊರತು ಅವರು ಸತ್ಕರ್ಮವನ್ನಾಗಲಿ ಅಸತ್ಕರ್ಮವನ್ನಾಗಲೀ ಆಚರಿಸಬಹುದೆಂದು ಕಾಮಚಾರವನ್ನು ಹೇಳುವುದಿಲ್ಲ ಅಥವಾ ಅವರ ಸ್ತುತಿ ಮೊದಲಾದವುಗಳನ್ನು ಮಾಡುವುದಿಲ್ಲವೆಂದು ಹೇಳಿದಂತಾಗುವುದು.

'ಕೇನ ಸ್ಯಾತ್' ಇತ್ಯಾದಿ ಶ್ರುತಿಯು – ಜ್ಞಾನಿಗಳು ಸದಾಚಾರಗಳಲ್ಲೂ,

---

1. 'ಪ್ರಾತರುತ್ಥಾಯ ಸಂಧ್ಯಾಮುಪಾಸೀತ ಯತ್ಸಂಧ್ಯಾಮುಪಾಸತೇ ಬ್ರಹ್ಮೈವ ತದುಪಾಸತೇ । ಅಥ ದೇವಾನ್ನಮೇತ್ ಜುಹುಯಾದ್ ವೇದಾನಾವರ್ತಯೀತ ನಾನೃತ್ಕಿಂಚಿದಾಚರೇತ್ ನ ಸುರಾಂ ಪಿಬೇತ್ ನ ಪಲಾಂಡುಂ ಭಕ್ಷಯೇತ್ ನ ಭೃಶಂ ವದೇತ್ ನ ವಿಸ್ಮರೇದಾತ್ಮಾನಂ ಸೋಮಂ ಪಿಬೇತ್ ಹುತಶೇಷೇಣ ವರ್ತಯೇತ್' ಎಂಬ ಶ್ರುತಿ.

न शङ्क्यम् । हि यस्मात् अचोदना निषिद्धं ज्ञानिना कार्यमिति विधिर्नास्ति । 'ब्राह्मणो न हन्तव्यः' इत्यपवदति च श्रुतिः । अतो विध्यभावात् निषेधसत्त्वाच्च कल्पकाभावादिति । चः समुच्चये । सामान्यनिषेधस्य ज्ञानिष्वपि प्रवृत्तेरिति भावः ।

प्रागुक्तं स्तुत्याद्यर्थत्वमेवास्याः साधयति—

॥ ॐ अनुष्ठेयं बादरायणः साम्यश्रुतेः ॐ ॥ ३.४.१९

---

ಅಸದಾಚಾರಗಳಲ್ಲೂ ಸ್ವೇಚ್ಛೆಯಾಗಿ ನಿಯಮೇನ ಪ್ರವರ್ತಿಸುವರು ಎಂದು ಹೇಳುವ ಅಭಿಪ್ರಾಯವುಳ್ಳದ್ದೆಂದೇಕೆ ಹೇಳಬಾರದು ಎಂದು ಶಂಕಿಸತಕ್ಕದ್ದಲ್ಲ. ಹಿ - ಏಕೆಂದರೆ, ಅಚೋದನಾ – ನಿಷಿದ್ಧವಾದುದನ್ನು ಜ್ಞಾನಿಯು ಮಾಡತಕ್ಕದ್ದು ಎಂಬ ವಿಧಿ ಇಲ್ಲ, ಅಪವದತಿ ಚ - ಮತ್ತು 'ಬ್ರಾಹ್ಮಣೋ ನ ಹಂತವ್ಯಃ' ಎಂಬುದಾಗಿ ಶ್ರುತಿಯು ಅಸದಾಚಾರವನ್ನು ನಿಷೇಧಿಸುತ್ತಿದೆ. ಜ್ಞಾನಿಗಳು ಅಸತ್ಕರ್ಮವನ್ನು ಆಚರಿಸತಕ್ಕದ್ದೆಂಬ ವಿಧಿ ಇಲ್ಲದಿರುವುದರಿಂದ, ಅಸತ್ಕರ್ಮಾಚರಣೆಯನ್ನು ಅವರೂ ಮಾಡತಕ್ಕದ್ದಲ್ಲ ಎಂಬ ನಿಷೇಧವೂ ಇರುವುದರಿಂದ; ಜ್ಞಾನಿಗಳು ಅಸತ್ಕರ್ಮಾಚರಣೆಯನ್ನು ಮಾಡಲು ಪ್ರಮಾಣವೇ ಇಲ್ಲವಾದ್ದರಿಂದ ಎಂದರ್ಥ. ಸೂತ್ರದಲ್ಲಿರುವ 'ಚ' ಶಬ್ದವು ಸಮುಚ್ಚಯವನ್ನು ಹೇಳುವುದು. ಅಸತ್ಕರ್ಮಾಚರಣೆಯನ್ನು ಕುರಿತ ಸಾಮಾನ್ಯನಿಷೇಧವು ಜ್ಞಾನಿಗಳ ವಿಷಯದಲ್ಲಿ ಪ್ರವೃತ್ತವಾಗುವುದರಿಂದ ಎಂದು ಭಾವ.

'ಕೇನ ಸ್ಯಾತ್' ಇತ್ಯಾದಿ ಶ್ರುತಿಗೆ ಹಿಂದೆ ಹೇಳಿದ ಜ್ಞಾನಿಗಳ ಸ್ತುತಿ ಮೊದಲಾದ ಅರ್ಥವೇ ಇರುವುದೆಂದು ಸಾಧಿಸುವ ಸೂತ್ರ—

ಓಂ ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ಓಂ

೩.೪.೧೯

बादरायणोऽनुष्ठेयं कामचारश्रुतेरर्थं ब्रूते। किमुक्तं भवति? अनुष्ठेयमध्य एव स्वेच्छया केषाञ्चिदनुष्ठानं केषांचिन्नत्यनुष्ठेये कामचारानुमतिरेव न तु कामचारविधिः। प्रागुक्तं नियमेन कर्तव्यत्वं नेत्युक्तं भवति। कुतः? साम्यश्रुतेः केनापि प्रकारेण प्रवृत्तावपि ईदृश एवेति साम्योक्तेः। 'यस्त्वात्मरतिरेव स्यात्' इति स्मृतेरप्युपलक्षणम्। विहिताकरणप्राप्तसाम्यशङ्कानिरासार्थत्वात् तस्याः।

**ಸೂತ್ರಾರ್ಥ**

ಬಾದರಾಯಣರು, ಅನುಷ್ಠೇಯಂ – ಅನುಷ್ಠಾನಕ್ಕೆ ಯೋಗ್ಯವಾದುದನ್ನು 'ಕೇನ ಸ್ಯಾತ್' ಇತ್ಯಾದಿ ಕಾಮಚಾರಶ್ರುತಿಗೆ ಅರ್ಥವೆಂದು ಹೇಳುವರು. ಏನು ಹೇಳಿದಂತಾಗುವುದು? ಅನುಷ್ಠಾನಯೋಗ್ಯವಾದ ಕರ್ಮಗಳ ಮಧ್ಯದಲ್ಲಿ ತಮ್ಮ ಇಚ್ಛಾನುಗುಣವಾಗಿ ಕೆಲವನ್ನು ಅನುಷ್ಠಾನ ಮಾಡುವುದು, ಕೆಲವನ್ನು ಅನುಷ್ಠಾನ ಮಾಡದಿರುವುದು – ಹೀಗೆ ಅನುಷ್ಠೇಯವಾದ ಕರ್ಮಗಳ ವಿಷಯದಲ್ಲಿ ತಮ್ಮ ಇಚ್ಛಾನುಗುಣವಾಗಿ ಮಾಡಬಹುದು ಎಂಬ ಅನುಮತಿಯೇ ಹೊರತು ಸ್ವೇಚ್ಛೆಯಿಂದ ಆಚರಿಸಲೇಬೇಕೆಂಬ ವಿಧಿಯಲ್ಲ. ಹಿಂದೆ ಹೇಳಿದ 'ಜ್ಞಾನಿಗಳಿಗೂ ಕರ್ಮವು ನಿಯಮೇನ ಕರ್ತವ್ಯವಾಗಿದೆ' ಎನ್ನುವುದು ಇಲ್ಲವೆಂದು ಹೇಳಿದಂತಾಗುವುದು. ಏಕೆಂದರೆ, ಸಾಮ್ಯಶ್ರುತೇಃ - ಯಾವ ರೀತಿಯಿಂದ ವರ್ತಿಸಿದರೂ ಜ್ಞಾನಫಲವಾದ ಮೋಕ್ಷವನ್ನು ಪಡೆದೇ ತೀರುವನು ಎಂದು ಸಾಮ್ಯವನ್ನು ಹೇಳಿರುವುದರಿಂದ – ಸೂತ್ರದಲ್ಲಿರುವ 'ಸಾಮ್ಯಶ್ರುತಿ' ಪದವು 'ಯಸ್ತ್ವಾತ್ಮರತಿರೇವ ಸ್ಯಾತ್[1]' ಎಂಬ ಸ್ಮೃತಿಗೂ ಉಪಲಕ್ಷಣವಾಗಿದೆ.

---

1. ಯಸ್ತ್ವಾತ್ಮರತಿರೇವ ಸ್ಯಾತ್ ಆತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ ॥ (ಗೀ. ೩.೧೭)

ಭಗವದ್ದರ್ಶನದಿಂದ ಉಂಟಾಗುವ ಆನಂದವನ್ನು ಪಡೆದ, ಭಗವದನುಗ್ರಹವನ್ನು ಪಡೆದು ತೃಪ್ತನಾಗಿ ವಿಷಯವೈರಾಗ್ಯವನ್ನು ಹೊಂದಿರುವ ಜ್ಞಾನಿಗೆ ಅವಶ್ಯ ಕರ್ತವ್ಯವೆಂದೆನಿಸುವ ಯಾವ ಕರ್ಮವೂ ಇಲ್ಲವೆಂದು ಭಾವ.

नियमेन सर्वाचरणपक्षे कदाचिदसाम्यप्रसक्त्यभावेन सर्वाचरणेन सम्भावितसाम्यज्ञापनार्थतैव स्यात् । ततोऽपि प्राप्तसाम्यनिरासार्थत्वस्य वरत्वादिति भावः ।

एवमर्थद्वयमुक्त्वा स्वेच्छाचरणविध्यर्थं चाऽह—

॥ ॐ विधिर्वा धारणवत् ॐ ॥ ३.४.२०

---

ಜ್ಞಾನಿಯು ವಿಹಿತವಾದುದನ್ನು ಅನುಷ್ಠಾನ ಮಾಡದಿದ್ದಲ್ಲಿ ಒದಗುವ ಅಸಾಮ್ಯಶಂಕೆಯನ್ನು ಪರಿಹರಿಸುವುದೇ ಸಾಮ್ಯಶ್ರುತಿಯ ಉದ್ದೇಶವಾಗಿದೆ. ಜ್ಞಾನಿಯು ನಿಯಮೇನ ಸರ್ವಕರ್ಮಗಳನ್ನೂ ಅನುಷ್ಠಾನ ಮಾಡುವನೆಂಬ ಪಕ್ಷದಲ್ಲಿ ಒಮ್ಮೆಯೂ ಅಸಮಾನತೆಯ ಪ್ರಸಕ್ತಿಯೇ ಇಲ್ಲದಿರುವುದರಿಂದ 'ಈದೃಶ ಏವ ಸ್ಯಾತ್' ಎಂಬ ಸಾಮ್ಯಶ್ರುತಿಯು ಸರ್ವಕರ್ಮಗಳನ್ನೂ ಅನುಷ್ಠಾನ ಮಾಡುವುದರಿಂದ ಜ್ಞಾನಿಗಳಲ್ಲಿ ಉಂಟಾಗಬಹುದಾದ ಸಾಮ್ಯವನ್ನು ಜ್ಞಾಪಿಸುವ ಉದ್ದೇಶವನ್ನು ಹೊಂದಿದೆ ಎಂದು ಮಾತ್ರ ಆದೀತು. ಅದಕ್ಕಿಂತಲೂ, ಜ್ಞಾನಿಗಳ ವಿಷಯದಲ್ಲಿ ಬಂದೊದಗುವ ಅಸಾಮ್ಯಶಂಕೆಯನ್ನು ಪರಿಹರಿಸುವುದೇ ಆ ಶ್ರುತಿಯ ಉದ್ದೇಶವೆನ್ನುವುದು ಹೆಚ್ಚು ಸಮಂಜಸವಾಗಿದೆ ಎಂದು ಭಾವ.

'ಕೇನ ಸ್ಯಾತ್' ಇತ್ಯಾದಿ ಶ್ರುತಿಗೆ, ಜ್ಞಾನಿಯು ನಿಯಮೇನ ಸರ್ವಸದಾಚಾರಗಳನ್ನು ಅನುಷ್ಠಿಸತಕ್ಕದ್ದು ಎಂಬ ವಿಧಿರೂಪವಾದ ಅರ್ಥ ಮತ್ತು ಅನುಷ್ಠೇಯವಾದ ಕರ್ಮಗಳ ಮಧ್ಯೆ ತನ್ನ ಇಷ್ಟಾನುಸಾರ ಕರ್ಮಗಳನ್ನು ಅನುಷ್ಠಿಸಬಹುದು ಎಂಬ ಅನುಮತಿರೂಪವಾದ ಅರ್ಥ – ಹೀಗೆ ಎರಡು ಅರ್ಥಗಳನ್ನು ಹೇಳಿದ ನಂತರ, ಆ ಶ್ರುತಿಗೆ 'ತಮ್ಮ ಇಚ್ಛಾನುಸಾರ ಕರ್ಮಗಳನ್ನು ಆಚರಿಸತಕ್ಕದ್ದು' ಎಂಬ ವಿಧಿರೂಪವಾದ ಅರ್ಥವನ್ನು ಹೇಳುವ ಸೂತ್ರ—

**ಓಂ ವಿಧಿರ್ವಾ ಧಾರಣವತ್ ಓಂ ೩.೪.೨೦**

'केन स्यात्' इति ज्ञानिनो यथेष्टाचारविधिः। वाशब्दोऽधिकारिभेदेन प्रागुक्तेन व्यवस्थितविकल्पार्थः। तर्ह्यज्ञस्याप्येवं स्यादत उक्तं धारणेति। यथा वेदधारणं त्रैवर्णिकानामेव विहितं तथा कामचारोऽपि ज्ञानिनामेवेत्यर्थः।

विधिर्वेत्युक्तम् आक्षिप्याऽह—

---

**ಸೂತ್ರಾರ್ಥ**

'ಕೇನ್ ಸ್ಯಾತ್' ಇತ್ಯಾದಿ ಶ್ರುತಿಯು ಜ್ಞಾನಿಯು ತನ್ನ ಇಚ್ಛಾನುಸಾರ ಕರ್ಮಗಳನ್ನು ಮಾಡತಕ್ಕದ್ದು ಎಂದು ಯಥೇಷ್ಟಾಚಾರವಿಧಿರೂಪವಾಗಿದೆ. ಸೂತ್ರದಲ್ಲಿರುವ 'ವಾ' ಶಬ್ದವು ಅಧಿಕಾರಿಭೇದದ ದೃಷ್ಟಿಯಿಂದ ಹಿಂದೆ ಹೇಳಿದ ವಿಧಿ – ಅನುಮತಿಗಳಿಗೂ ಈಗ ಹೇಳುತ್ತಿರುವ ಯಥೇಷ್ಟಾಚಾರವಿಧಿಗೂ ವ್ಯವಸ್ಥಿತವಿಕಲ್ಪವನ್ನು[1] ಹೇಳುವುದು. ಹಾಗಾದರೆ, ಅಜ್ಞಾನಿಗಳೂ ಕೂಡ ತಮ್ಮ ಇಚ್ಛಾನುಸಾರ ಕರ್ಮಾಚರಣೆಯನ್ನು ಮಾಡುವರೆಂದಾಗಲಿ ಎಂಬ ಆಶಂಕೆಗೆ ಸಮಾಧಾನ – 'ಧಾರಣ' ಎಂದು. ಹೇಗೆ ವೇದಧಾರಣವು[2] ತ್ರೈವರ್ಣಿಕರಿಗೆ ಮಾತ್ರವೇ ವಿಹಿತವಾಗಿದೆಯೋ ಹಾಗೆ ಯಥೇಷ್ಟಾಚರಣೆಯು ಜ್ಞಾನಿಗಳಿಗೆ ಮಾತ್ರ ವಿಹಿತವಾಗಿದೆ ಎಂದು ಅರ್ಥ.

'ವಿಧಿರ್ವಾ' ಎಂಬ ಸೂತ್ರದಲ್ಲಿ ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

---

1. ಕೆಲವು ಅಧಿಕಾರಿಗಳನ್ನು ಉದ್ದೇಶಿಸಿ ಸರ್ವಸದಾಚಾರವಿಧಿ ಅಥವಾ ಅನುಷ್ಠೇಯ ಕರ್ಮಗಳಲ್ಲಿ ಸ್ವೇಚ್ಛಾನುಸಾರ ಕರ್ಮಗಳನ್ನು ಆಚರಿಸಬಹುದು ಎಂಬ ಅನುಮತಿ. ಇತರ ಕೆಲವು ಅಧಿಕಾರಿಗಳ ದೃಷ್ಟಿಯಿಂದ ಯಥೇಷ್ಟಾಚಾರವಿಧಿ–ಹೀಗೆ ಅಧಿಕಾರಿಭೇದದಿಂದ ವ್ಯವಸ್ಥಿತವಾದ ವಿಕಲ್ಪವನ್ನು 'ವಾ' ಶಬ್ದವು ಹೇಳುವುದೆಂದು ಅಭಿಪ್ರಾಯ.

2. ವೇದಧಾರಣವೆಂದರೆ ವೇದಾಧ್ಯಯನ, ಅಥವಾ ವೇದಾಧ್ಯಯನ ಮಾಡಿದವರೂ ಸ್ಮರಣೆಗಾಗಿ ಮಾಡುವ ಪುನಃ ಪುನಃ ಪಠನ.

## ॥ ॐ स्तुतिमात्रमुपादानादिति चेन्नापूर्वत्वात् ॐ ॥ ३.४.२१

ज्ञानिभिरपि 'सन्ध्यामुपासीत' इत्यादिसामान्यविधिस्वीकारात् 'केन स्यात्' इति श्रुतिः प्रागुक्तस्तुतिमात्रम्। न विधिः। विधित्वे तदुपादानायोगादिति चेन्न। कुतः ? अपूर्वत्वात्। तत्त्वप्रदीपदिशा पूर्वमनादिब्रह्म। ज्ञानिनः अब्रह्मत्वात् ब्रह्माधीनत्वादिति यावत्। अः ब्रह्म पूर्वं नेतृ यस्य तस्य भावस्तस्मादित्यर्थ इत्येके। एतदुक्तं

---

## ಓಂ ಸ್ತುತಿಮಾತ್ರಮುಪಾದಾನಾದಿತಿ ಚೇನ್ನ ಅಪೂರ್ವತ್ವಾತ್ ಓಂ ३.४.२१

**ಸೂತ್ರಾರ್ಥ**

ಜ್ಞಾನಿಗಳೂ ಕೂಡ 'ಸಂಧ್ಯಾಂ ಉಪಾಸೀತ' ಇತ್ಯಾದಿಯಾದ ಸರ್ವಜನ ಸಾಧಾರಣವಾದ ವಿಧಿಯನ್ನು ಸ್ವೀಕರಿಸಿರುವುದರಿಂದ 'ಕೇನ ಸ್ಯಾತ್' ಎಂಬ ಶ್ರುತಿಯು ಹಿಂದೆ ಹೇಳಿದಂತೆ ಜ್ಞಾನಿಗಳ ಸ್ತುತಿಯೇ ಆಗಿದೆ ಹೊರತು ವಿಧಿಯಲ್ಲ. 'ತಮ್ಮ ಇಚ್ಛಾನುಸಾರ ಇರತಕ್ಕದ್ದು' ಎಂದು ವಿಧಿಯೇ ಆಗಿರುವ ಪಕ್ಷದಲ್ಲಿ ಸಂಧ್ಯಾವಂದನಾದಿ ಸಾಮಾನ್ಯವಿಧಿಯನ್ನು ಜ್ಞಾನಿಗಳು ಸ್ವೀಕರಿಸಿರುವುದು ಯುಕ್ತವಾಗಲಾರದು ಎಂದರೆ ಅದು ಸರಿಯಲ್ಲ. ಏಕೆಂದರೆ, ಅಪೂರ್ವತ್ವಾತ್ – ತತ್ತ್ವಪ್ರದೀಪದಲ್ಲಿ ಹೇಳಿರುವಂತೆ ಪೂರ್ವ ಎಂದರೆ ಅನಾದಿಯಾದ ಬ್ರಹ್ಮ. ಅಪೂರ್ವತ್ವಾತ್ ಎಂದರೆ ಜ್ಞಾನಿಯು ಬ್ರಹ್ಮನಲ್ಲದಿರುವುದರಿಂದ, ಬ್ರಹ್ಮನಿಗೆ ಅಧೀನನಾಗಿರುವುದರಿಂದ ಎಂದು ತಾತ್ಪರ್ಯ.

**'ಅಪೂರ್ವತ್ವಾತ್' ಎಂಬ ಪದಕ್ಕೆ ವ್ಯಾಖ್ಯಾನಾಂತರ**

ಅಃ ಎಂದರೆ ಬ್ರಹ್ಮನು, ಪೂರ್ವಂ ಅಂದರೆ ನೇತಾರನಾಗಿ ಯಾರಿಗೆ ಇರುವನೋ

भवति । 'केन स्यात्' इत्यस्याविधित्वेन स्तुतित्वे ज्ञानिनां सर्वविध्यतिदूरत्वेन स्तुतिमात्रविषयत्वं स्यात् । तच्चायुक्तम् । सर्वविध्यतिदूरत्वस्य ब्रह्मलक्षणत्वात् । ज्ञानिनश्च ब्रह्मवशतया अब्रह्मत्वादिति ।

न केवलं ज्ञानिनोऽपूर्वत्वात् सर्वविध्यतिदूरत्वभयात् 'केन स्यात्' इति श्रुतिः स्वेच्छाचारविधिः, स्पष्टप्रमाणाच्चेत्याह—

---

ಆವನು ಅಪೂರ್ವ. ಅಪೂರ್ವತ್ವವೆಂದರೆ ಪರಮಾತ್ಮನನ್ನು ನೇತಾರನನ್ನಾಗಿ ಹೊಂದಿರುವಿಕೆ. ಅಪೂರ್ವತ್ವಾತ್ ಎಂದರೆ ಹೀಗೆ ಪರಮಾತ್ಮನನ್ನು ನೇತಾರನನ್ನಾಗಿ ಹೊಂದಿರುವುದರಿಂದ ಎಂದು ಅರ್ಥವೆಂದು ಕೆಲವರು ಹೇಳುವರು.

**ಸೂತ್ರದ ತಾತ್ಪರ್ಯ ನಿರೂಪಣೆ**

ಹೀಗೆ ಹೇಳಿದಂತಾಗುವುದು – 'ಕೇನ ಸ್ಯಾತ್' ಎಂಬ ಶ್ರುತಿಯು ವಿಧಿಯಲ್ಲ, ಸ್ತುತಿ ಎಂದು ಹೇಳಿದರೆ ಜ್ಞಾನಿಗಳು ಎಲ್ಲ ವಿಧಿಗಳಿಗೂ ಅತ್ಯಂತ ಅತೀತರೆಂದು ಸ್ತುತಿ ಸಲ್ಪಡುತ್ತಿದ್ದಾರೆ ಎಂದು ಹೇಳಿದಂತಾಗುವುದು, ಆದರೆ ಅದು ಯುಕ್ತವಲ್ಲ. ಏಕೆಂದರೆ, ಸಮಸ್ತ ವಿಧಿಗಳಿಗೆ ಅತ್ಯಂತ ಅತೀತವಾಗಿರುವಿಕೆಯು ಪರಮಾತ್ಮನ ಲಕ್ಷಣ ವಾಗಿದೆ. ಜ್ಞಾನಿಗಳು ಪರಮಾತ್ಮನ ಅಧೀನರಾಗಿರುವುದರಿಂದ ಪರಮಾತ್ಮನಲ್ಲ— ಎಂದು.

ಜ್ಞಾನಿಗಳು ಪರಮಾತ್ಮನ ಅಧೀನರಾಗಿದ್ದು ಪರಮಾತ್ಮನಿಂದ ಭಿನ್ನರಾಗಿರುವರು. 'ಕೇನ ಸ್ಯಾತ್' ಎಂಬ ಶ್ರುತಿಯು ಜ್ಞಾನಿಗಳ ಸ್ತುತಿಯಾಗಿದ್ದಲ್ಲಿ ಇಂತಹ ಜ್ಞಾನಿಗಳೂ ಸಮಸ್ತ ವಿಧಿಗಳಿಗೆ 'ಅತಿದೂರರೆಂದು ಒಪ್ಪಬೇಕಾಗುವುದು ಎಂಬ ಭಯದಿಂದ ಮಾತ್ರವಲ್ಲದೆ ಸ್ಪಷ್ಟಪ್ರಮಾಣ ಇರುವ ಕಾರಣದಿಂದಲೂ 'ಕೇನ ಸ್ಯಾತ್' ಎಂಬ ಶ್ರುತಿಯು ಜ್ಞಾನಿಗಳಿಗೆ ಸ್ವೇಚ್ಛಾಚಾರವನ್ನು ವಿಧಿಸತಕ್ಕದ್ದು ಎಂದು ಹೇಳುವ ಸೂತ್ರ—

## ॥ ॐ भावशब्दाच्च ॐ ॥ ३.४.२२

'यथाविधानमपरे विधिर्भावे प्रजापतेः' इति श्रुतौ इच्छाऽपरपर्यायभावशब्दाच्च स्वेच्छाचारविधिरित्यनुषङ्गः । पूर्वसूत्रे स्वेच्छाचारविधेरर्थसिद्धत्वात् चशब्दः ।

---

## ಓಂ ಭಾವಶಬ್ದಾಚ್ಚ ಓಂ ೩.೪.೨೨

**ಸೂತ್ರಾರ್ಥ**

'ಯಥಾವಿಧಾನಮಪರೇ ವಿಧಿರ್ಭಾವೇ ಪ್ರಜಾಪತೇಃ[1]' ಎಂಬ ಶ್ರುತಿಯಲ್ಲಿ 'ಇಚ್ಛಾ' ಶಬ್ದಕ್ಕೆ ಸಮಾನಾರ್ಥಕವಾದ ಮತ್ತೊಂದು ಪದವಾದ 'ಭಾವ' ಶಬ್ದವು ಇರುವ ಕಾರಣದಿಂದಲೂ 'ಕೇನ ಸ್ಯಾತ್' ಎಂಬ ಶ್ರುತಿಯು ಸ್ವೇಚ್ಛಾಚಾರವಿಧಿಯಾಗಿದೆ. ಇಲ್ಲಿ 'ಸ್ವೇಚ್ಛಾಚಾರವಿಧಿ' ಎಂಬ ಪದವು ಅನುವೃತ್ತವಾಗಿದೆ. ಹಿಂದಿನ ಸೂತ್ರದಲ್ಲಿ 'ಸ್ವೇಚ್ಛಾಚಾರವಿಧಿ'ಯು ಅರ್ಥಾತ್ ಸಿದ್ಧವಾಗಿರುವ ಕಾರಣ ಈ ಸೂತ್ರದಲ್ಲಿ 'ಚ' ಶಬ್ದವನ್ನು ಪ್ರಯೋಗಿಸಲಾಗಿದೆ.[2]

---

1. ಯಥಾವಿಧಾನಮಪರೇ ವಿಧಿರ್ಭಾವೇ ಪ್ರಜಾಪತೇಃ ।
ಬ್ರಹ್ಮಣಃ ಪರಮಸ್ಯೈವ ಸರ್ವವಿಧ್ಯತಿದೂರತಾ ॥ ಎಂದು ತುರಶ್ರುತಿ.

ಚತುರ್ಮುಖನಿಗಿಂತ ಇತರರಾದ ಮನುಷ್ಯಜ್ಞಾನಿಗಳು ನಿತ್ಯನೈಮಿತ್ತಿಕ ಕರ್ಮಗಳನ್ನು ವಿಧಿಸುವ ಶಾಸ್ತ್ರವನ್ನು ಅತಿಕ್ರಮಿಸದೆ ಅವುಗಳನ್ನು ಪಾಲಿಸುವರು, ಚತುರ್ಮುಖ ಮತ್ತು ಇತರ ದೇವತೆಗಳು ತಮ್ಮ ಇಚ್ಛೆಯನ್ನನುಸರಿಸಿ ಕರ್ಮಗಳನ್ನು ಮಾಡತಕ್ಕದ್ದು ಎಂದು 'ಕೇನ ಸ್ಯಾತ್' ಇತ್ಯಾದಿ ವಿಧಿ ಇರುವುದು. ಪರಬ್ರಹ್ಮನಾದ ಶ್ರೀಹರಿ ಮಾತ್ರ ಸರ್ವವಿಧಿಗಳಿಗೂ ಅತಿದೂರನಾಗಿರುವನು ಎಂದು ಶ್ರುತಿಯ ಭಾವ.

2. ಹಿಂದಿನ ಸೂತ್ರದಲ್ಲಿ 'ಕೇನ ಸ್ಯಾತ್' ಇತ್ಯಾದಿ ಶ್ರುತಿಯು ಜ್ಞಾನಿಗೆ ಸ್ವೇಚ್ಛಾಚಾರವಿಧಿಯಾಗಿದೆ ಎಂದು ಹೇಳುವ ಪದವಿಲ್ಲದಿದ್ದರೂ ಅದು ಅರ್ಥಾತ್ ಸಿದ್ಧವಾಗಿದೆ. ಅದೇ ವಿಷಯವನ್ನು ಈ ಸೂತ್ರದಲ್ಲಿ 'ಭಾವಶಬ್ದ' ಎಂಬ ಮತ್ತೊಂದು ಹೇತುವಿನಿಂದ ಸಮರ್ಥಿಸುವ ಕಾರಣ 'ಚ' ಶಬ್ದ ಅವಶ್ಯಕವೆಂದು ಭಾವ.

उक्तमाक्षिप्याह—

॥ ॐ पारिप्लवार्था इति चेन्न विशेषितत्वात् ॐ ॥ ३.४.२३

'केन स्यात्' इत्यादिश्रुतयः पारिप्लवार्थाः चञ्चलार्था अव्यवस्थितार्थाः स्युः। नियमेन सर्वधर्माचरणं तन्मध्य एव कामचारेणाचरणं यथेष्टाचारविधिरित्युक्तार्थत्रयस्य विरुद्धत्वादिति चेन्न। विशेषितत्वात् 'त्रेधा ह ज्ञानिनः' इत्यादिश्रुत्या ज्ञानिनामनेकप्रकारत्वादित्यर्थः।

---

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ಓಂ ೩.೪.೨೩

**ಸೂತ್ರಾರ್ಥ**

'ಕೇನ ಸ್ಯಾತ್' ಇತ್ಯಾದಿ ಶ್ರುತಿಗಳು ಪಾರಿಪ್ಲವಾರ್ಥಾಃ – ಚಂಚಲವಾದ ಅರ್ಥವುಳ್ಳವುಗಳು ಅಂದರೆ ಅವ್ಯವಸ್ಥಿತವಾದ ಅರ್ಥಗಳನ್ನು ಹೊಂದಿವೆ ಎಂದಾದೀತು. ಸರ್ವಧರ್ಮಗಳನ್ನೂ ತಪ್ಪದೆ ಆಚರಿಸತಕ್ಕದ್ದು, ಸರ್ವಧರ್ಮಗಳ ಮಧ್ಯದಲ್ಲೇ ಕೆಲವನ್ನು ಇಷ್ಟಬಂದಂತೆ ಆಚರಿಸುವುದು, ಜ್ಞಾನಿಗಳು ತಮ್ಮ ಇಚ್ಛಾನುಗುಣವಾಗಿ ಕರ್ಮಗಳನ್ನು ಆಚರಿಸತಕ್ಕದ್ದು ಎಂಬ ಹಿಂದೆ ಹೇಳಿದ ಮೂರು ಅರ್ಥಗಳು ಪರಸ್ಪರ ವಿರುದ್ಧವಾಗಿರುವುದರಿಂದ ಎಂದರೆ ಅದು ಸರಿಯಲ್ಲ. ವಿಶೇಷಿತತ್ವಾತ್ - ತ್ರೇಧಾ ಹ ಜ್ಞಾನಿನಃ[1]' ಇತ್ಯಾದಿ ಶ್ರುತಿಯಲ್ಲಿ ಹೇಳಿರುವಂತೆ ಜ್ಞಾನಿಗಳು ಅನೇಕ ಪ್ರಕಾರವಾಗಿರುವುದರಿಂದ ಎಂದು ಅರ್ಥ.

---

1. 'ತ್ರೇಧಾ ಹ ಜ್ಞಾನಿನೋ ಹ ವಾವ ಭವಂತಿ । ವಿಧಿನಿಯತಾ ಅನಿಯತಾಃ ಸ್ವೇಚ್ಛಾನಿಯತಾ ಇತಿ । ವಿಧಿನಿಯತಾ ಮನುಷ್ಯಾ ಅನಿಯತಾ ಹಿ ದೇವಾ ಬ್ರಹ್ಮೈವ ಸ್ವೇಚ್ಛಾನಿಯತಃ' ಎಂದು ಗೌಪವನಶ್ರುತಿ.

ततश्च किमित्यत आह—

॥ ॐ तथा चैकवाक्योपबन्धात् ॐ ॥ ३.४.२४

एकवाक्येति भावप्रधानम् । तथा च ज्ञानिनां त्रैविध्ये सति 'केन स्यात्' इत्यस्य त्र्यर्थत्वानुगुणानां 'प्रातरुत्थाय' इति, 'यत्स्त्वात्मरतिः' इति, 'यथाविधानं' इति च वाक्यानामेकवाक्यत्वेन ज्ञानिभेद-

---

ಜ್ಞಾನಿಗಳು ಅನೇಕ ಪ್ರಕಾರವಾಗಿರುವುದರಿಂದ ವಿರೋಧ ಪರಿಹಾರವಾಗುವುದೆನ್ನುವುದೂ ಹೇಗೆ ಎಂಬ ಶಂಕೆಗೆ ಉತ್ತರ—

ಓಂ ತಥಾ ಚೈಕವಾಕ್ಯೋಪಬಂಧಾತ್ ಓಂ ೩.೪.೨೪

**ಸೂತ್ರಾರ್ಥ**

ಸೂತ್ರದಲ್ಲಿರುವ 'ಏಕವಾಕ್ಯ'[1] ಎಂಬ ಪದ ಭಾವಪ್ರಧಾನವಾಗಿದೆ. ತಥಾಚ– ಹೀಗೆ ಜ್ಞಾನಿಗಳು ಮೂರು ವಿಧವಾಗಿದ್ದಾರೆ ಎಂದಾದಾಗ, 'ಕೇನ ಸ್ಯಾತ್' ಎಂಬ ಶ್ರುತಿಗೆ ಮೂರು ಅರ್ಥಗಳಿರಲು ಕಾರಣವಾದ, 'ಪ್ರಾತರುತ್ಥಾಯ'. 'ಯಸ್ತ್ವಾತ್ಮರತಿಃ' 'ಯಥಾವಿಧಾನಂ' ಎಂಬ ವಾಕ್ಯಗಳಿಗೆ, ಏಕವಾಕ್ಯತ್ವೋಪಬಂಧಾತ್ - ಏಕವಾಕ್ಯತ್ವೇನ – ಜ್ಞಾನಿಭೇದವಿರುವುದನ್ನು ಅನುಸರಿಸಿ ಅವಿರೋಧವಿರುವುದರಿಂದ,

---

ಜ್ಞಾನಿಗಳು ಮೂರು ವಿಧವಾಗಿ ಪ್ರಸಿದ್ಧರಾಗಿದ್ದಾರೆ. ವಿಧಿನಿಷೇಧಗಳ ಬಂಧವಿಲ್ಲದಿದ್ದರೂ ತಮ್ಮ ಇಚ್ಛಾನುಸಾರವಾಗಿಯೇ ತಪ್ಪದೆ ವಿಹಿತಕರ್ಮಗಳನ್ನು ಆಚರಿಸುವವರು, ಅನುಷ್ಠಿಸಬೇಕಾದ ಕರ್ಮಗಳಲ್ಲೇ ಬೇಕಾದುದನ್ನು ಅನುಷ್ಠಾನ ಮಾಡಬಹುದೆಂದು ಅನುಮತಿ ಇದ್ದವರು ಮತ್ತು ಇಚ್ಛೆಗನುಗುಣವಾಗಿಯೇ ಕರ್ಮಗಳನ್ನು ಆಚರಿಸತಕ್ಕದ್ದು ಎಂಬ ವಿಧಿಗೆ ಬದ್ಧರಾದವರು - ಎಂದು. ಇದರಲ್ಲಿ ಮೊದಲನೆಯ ಗುಂಪಿಗೆ ಸೇರಿದ ವಿಧಿನಿಯತರು ಮನುಷ್ಯರು. ಎರಡನೆಯ ಗುಂಪಿನ ಅನಿಯತರು ದೇವತೆಗಳು. ಚತುರ್ಮುಖಬ್ರಹ್ಮದೇವರು ಸ್ವೇಚ್ಛಾನಿಯತರೆಂದೆನಿಸುವ ಮೂರನೆಯ ಗುಂಪಿಗೆ ಸೇರುವರು ಎಂದು ಶ್ರುತಿಯ ಭಾವ.

1. 'ಏಕವಾಕ್ಯ' ಪದಕ್ಕೆ ಏಕವಾಕ್ಯತ್ವವೆಂದು ಅರ್ಥವೆಂದು ಅಭಿಪ್ರಾಯ.

माश्रित्याविरोधेन उपबन्धात्। तथा च तेषामविरोधे सति 'केन स्यात्' इति वाक्यस्यापि एकवाक्यत्वोपबन्धात् अपारिप्लवार्थोपबन्धात् ज्ञानिभेदेन स्थिरार्थत्वयोगादित्यर्थः। जैमिनिमतं ज्ञानिमानुषविषयं व्यासमतं देवताविषयं विधिर्वेति मतं विरिञ्चिविषयमिति भावः।

---

ಉಪಬಂಧಾತ್ - ಸಂಬಂಧವಿರುವುದರಿಂದ; ತಥಾಚ – ಆ ಮೂರು ವಾಕ್ಯಗಳಿಗೆ ಪರಸ್ಪರ ವಿರೋಧವಿಲ್ಲವೆಂದಾದಮೇಲೆ. 'ಕೇನ ಸ್ಯಾತ್' ಎಂಬ ವಾಕ್ಯಕ್ಕೂ ಏಕ ವಾಕ್ಯತ್ವೋಪಬಂಧಾತ್ - ಅವ್ಯವಸ್ಥಿತವಾದ ಅರ್ಥವಿಲ್ಲದಿರುವಿಕೆಯು ಸಂಬಂಧವಿರುವುದರಿಂದ—ಜ್ಞಾನಿಭೇದವನ್ನು ಅನುಸರಿಸಿ ಸ್ಥಿರವಾದ ಅರ್ಥದ ಸಂಬಂಧವುಂಟಾಗುವುದರಿಂದ ಎಂದು ಅರ್ಥ.

ಜೈಮಿನಿಮತ[1] ಜ್ಞಾನಿಗಳಾದ ಮನುಷ್ಯರಿಗೆ ಸಂಬಂಧಪಟ್ಟಿದ್ದು; ಬಾದರಾ

---

1. 'ಪರಾಮರ್ಶಂ ಜೈಮಿನಿಃ' (ಬ್ರ.ಸೂ. ೩.೪.೧೮) ಇತ್ಯಾದಿ ಸೂತ್ರದಲ್ಲಿ ಹೇಳಿರುವ, ಸಂಧ್ಯೋಪಾಸನಾದಿ ಸದಾಚಾರಗಳನ್ನು ಜ್ಞಾನಿಯು ಇಚ್ಛಾಪೂರ್ವಕವಾಗಿ ತಪ್ಪದೆ ಆಚರಿಸತಕ್ಕದ್ದು. ನಿಷಿದ್ಧಾಚರಣೆಯನ್ನು ಎಂದೂ ಮಾಡತಕ್ಕದ್ದಲ್ಲ. ವಿಹಿತವಾದ ಕರ್ಮಗಳನ್ನು ಮಾಡದಿದ್ದಲ್ಲಿ ಅಧಃಪತನಕ್ಕೆ ಕಾರಣವಾದ ಪ್ರತ್ಯವಾಯವಿಲ್ಲದಿರುವುದರಿಂದ ಜ್ಞಾನಿಗಳು ವಿಧಿಬಂಧವರ್ಜಿತರು, ಸತ್ಕರ್ಮಗಳ ಮಧ್ಯೆ ಕೆಲವನ್ನು ಅವರು ಆಚರಿಸದೆ ಇರಬಹುದು ಎಂಬುದೂ ಇಲ್ಲ - ಎಂಬ ಮತ ಜೈಮಿನಿಮತ. ಅನುಷ್ಠೇಯವಾದ ಕರ್ಮಗಳ ಮಧ್ಯೆ ಯಾವ ಕರ್ಮವನ್ನು ಜ್ಞಾನಿಯು ಇಚ್ಛಿಸುವನೋ ಅದನ್ನು ಮಾಡಬಹುದು. ಯಾವುದನ್ನು ಮಾಡಲಿಚ್ಛಿಸುವುದಿಲ್ಲವೋ ಅದನ್ನು ಬಿಡಬಹುದು ಎಂಬ ಅನುಮತಿ ಇದೆ ಎಂದು ವ್ಯಾಸಮತ. ಈ ಮತವನ್ನು 'ಅನುಷ್ಠೇಯಂ ಬಾದರಾಯಣಃ' (ಬ್ರ.ಸೂ. ೩.೪.೧೯) ಇತ್ಯಾದಿ ಸೂತ್ರದಲ್ಲಿ ಹೇಳಲಾಗಿದೆ. ಇವೆರಡು ಮತಗಳಲ್ಲದೆ ಮತ್ತೊಂದು ಮತ 'ವಿಧಿರ್ವಾ ಧಾರಣವತ್' (ಬ್ರ.ಸೂ. ೩.೪.೨೦) ಎಂಬ ಸೂತ್ರದಲ್ಲಿ ಪ್ರಸ್ತುತವಾಗಿದೆ. ಜ್ಞಾನಿಯು ಇಚ್ಛೆ ಇದ್ದಲ್ಲಿ ವಿಹಿತವಾದ ಕರ್ಮ ಆಚರಿಸತಕ್ಕದ್ದು ಎಂಬ ವಿಧಿ 'ಕೇನ ಸ್ಯಾತ್' ಇತ್ಯಾದಿ ಶ್ರುತಿಸಮ್ಮತವಾದುದು ಎಂದು ಈ ಮೂರನೆ ಮತ. ಈ ಮತಗಳು ಕ್ರಮವಾಗಿ ಮನುಷ್ಯರಿಗೆ, ದೇವತೆಗಳಿಗೆ ಮತ್ತು ಚತುರ್ಮುಖನಿಗೆ ಸಂಬಂಧಿಸಿದ ಮತಗಳೆಂದು ಭಾವ.

एवं ज्ञानिनां सदसत्प्रवृत्तावविशेषो नेत्युक्तम्। तत्र स्याच्च सत्प्रवृत्तिसमुचितस्य ज्ञानस्य मुक्तिहेतुत्वमिति प्रा तं चोद्यं निराह—

॥ ॐ अत एव चाग्नीन्धनाद्यनपेक्षा ॐ ॥ ३.४.२५

अग्नेरिन्धनं दीपनं यस्मिन् तदग्निहोत्रम्। अत एव 'कामचाराः कामभक्षाः' इति श्रुतौ कामचारेऽपि मोक्षनैयत्यस्य उक्तत्वादेव, ज्ञानस्य मोक्षार्जने अग्निहोत्राद्याश्रमवर्णधर्मापेक्षा

---

ಯಣರ ಮತವು ದೇವತೆಗಳಿಗೆ ಸಂಬಂಧಿಸಿದುದು; 'ವಿಧಿರ್ವಾ' (ಬ್ರ.ಸೂ. ೩.೪.೨೦) ಎಂಬ ಸೂತ್ರದಲ್ಲಿ ಹೇಳುವ ಮತವು ಚತುರ್ಮುಖನಿಗೆ ಸಂಬಂಧಿಸಿದ್ದೆಂದು ಭಾವ.

ಹೀಗೆ, ಜ್ಞಾನಿಗಳ ಸತ್ಪ್ರವೃತ್ತಿ ಮತ್ತು ಅಸತ್ಪ್ರವೃತ್ತಿಗಳಲ್ಲಿ ವಿಶೇಷವಿಲ್ಲ ಎನ್ನುವುದು ಸರಿಯಲ್ಲ ಎಂದು ಹೇಳಲಾಯಿತು. ಈ ಸತ್ಪ್ರವೃತ್ತಿಸಹಿತವಾದ ಜ್ಞಾನವೇ ಮೋಕ್ಷಸಾಧನವೆಂದಾಗಲಿ ಎಂಬ ಹಿಂದೆ ಮಾಡಿದ ಶಂಕೆಯನ್ನು ನಿರಾಕರಿಸುವ ಸೂತ್ರ—

## ಓಂ ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ಓಂ ೩.೪.೨೫

**ಸೂತ್ರಾರ್ಥ**

ಅಗ್ನಿಯ ಇಂಧನ ಅಂದರೆ ದೀಪನವು ಯಾವ ಕರ್ಮದಲ್ಲಾಗುವುದೋ ಅದು ಎಂಬ ವ್ಯುತ್ಪತ್ತಿಯಂತೆ ಅಗ್ನೀಂಧನವೆಂದರೆ ಅಗ್ನಿಹೋತ್ರವೆಂಬ ಕರ್ಮ. ಅತ ಏವ – 'ಕಾಮಚಾರಾಃ ಕಾಮಭಕ್ಷಾಃ' ಎಂಬ ಶ್ರುತಿಯಲ್ಲಿ ಸ್ವೇಚ್ಛಾಚಾರವಿದ್ದರೂ ಜ್ಞಾನಿಗಳಿಗೆ ಮೋಕ್ಷವಾಗಿಯೇ ತೀರುವುದು ಎಂದು ಹೇಳಿರುವುದರಿಂದಲೇ ಜ್ಞಾನದಿಂದ ಮೋಕ್ಷವಾಗಲು, ಅಗ್ನೀಂಧನಾದ್ಯನಪೇಕ್ಷಾ - ಅಗ್ನಿಹೋತ್ರ ಮೊದಲಾದ ಆಶ್ರಮ ಧರ್ಮ ಮತ್ತು ವರ್ಣಧರ್ಮಗಳ ಅಪೇಕ್ಷೆ ಇಲ್ಲವೆಂದು ಅರ್ಥ.

नास्तीत्यर्थः । चशब्दो ज्ञानिनः सदसत्प्रवृत्तिभ्यां विशेषसत्त्वेऽपीति वा, 'येषां ज्ञानं समुत्पन्नं तेषां मोक्षो विनिश्चितः । शुभकर्मभिराधिक्यं विपरीतैर्विपर्ययः' इत्यादिस्मृतिं वा समुच्चिनोति । तेन ताभ्यां ज्ञानिनः कथं विशेष इति निरस्तम् ।

सत्प्रवृत्तेः मुक्तावेवोपयोगोऽस्तु । किमाधिक्य इत्यत आह—

॥ ॐ सर्वापेक्षा च यज्ञादिश्रुतेरश्ववत् ॐ ॥ ३.४.२६

ज्ञानं प्रकृतम् । सर्वधर्मापेक्षा च ज्ञानोत्पत्त्यर्थमेव न मोक्षार्थम् ।

---

ಸೂತ್ರದಲ್ಲಿ 'ಚ' ಶಬ್ದವು 'ಜ್ಞಾನಿಗಳಿಗೆ ಸತ್ಪ್ರವೃತ್ತಿ - ಅಸತ್ಪ್ರವೃತ್ತಿಗಳಿಂದ ವಿಶೇಷವಿದ್ದರೂ' ಎಂಬ ಅರ್ಥವನ್ನಾಗಲೀ, '[1]ಯೇಷಾಂ ಜ್ಞಾನಂ ಸಮುತ್ಪನ್ನಂ ತೇಷಾಂ ಮೋಕ್ಷೋ ವಿನಿಶ್ಚಿತಃ । ಶುಭಕರ್ಮಭಿರಾಧಿಕ್ಯಂ ವಿಪರೀತೈರ್ವಿಪರ್ಯಯಃ ॥' ಎಂಬ ಸ್ಮೃತಿಯು ಸಮುಚ್ಚಯವನ್ನಾಗಲಿ ಹೇಳುವುದು. ಈ ಸ್ಮೃತಿಯಲ್ಲಿ ಮೋಕ್ಷದಲ್ಲಿ ಜ್ಞಾನಿಗಳಿಗೆ ಸತ್ಪ್ರವೃತ್ತಿ - ಅಸತ್ಪ್ರವೃತ್ತಿಗಳಿಂದ ಆನಂದದ ವೃದ್ಧಿ-ಹ್ರಾಸಗಳು ಉಂಟಾಗುವವೆಂದು ಹೇಳಿರುವುದರಿಂದ ಸದಸತ್ಪ್ರವೃತ್ತಿಗಳಿಂದ ಜ್ಞಾನಿಗೆ ಯಾವ ರೀತಿಯು ವಿಶೇಷ ಎಂಬ ಶಂಕೆಯು ನಿರಾಕೃತವಾಯಿತು.

ಸತ್ಪ್ರವೃತ್ತಿಯು ಮೋಕ್ಷಕ್ಕೇ ಕಾರಣವೆಂದಾಗಲಿ. ಮೋಕ್ಷದಲ್ಲಿ ಆನಂದದ ಆಧಿಕ್ಯಕ್ಕೆ ಅದು ಕಾರಣವೆಂದೇಕೆ ಒಪ್ಪಬೇಕು ಎಂಬ ಆಶಂಕೆಗೆ ಉತ್ತರ—

**ಓಂ ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ಓಂ**
**೩.೪.೨೬**

**ಸೂತ್ರಾರ್ಥ**

ಜ್ಞಾನವು ಪ್ರಸ್ತುತವಾಗಿದೆ. ಸರ್ವಧರ್ಮಾಪೇಕ್ಷಾ ಚ - ಎಲ್ಲ ಧರ್ಮಗಳ

---

1. ಬ್ರಹ್ಮತರ್ಕವಚನ.

कुतः? यज्ञादिश्रुतेः 'विविदिषन्ति यज्ञेन दानेन तपसा' इत्यादिश्रुतेः। उभयार्थं कुतो नेत्यत उक्तम्—अश्ववत्। गतौ निवृत्तायां तत्साधनाश्वादेर्यथाऽनपेक्षा तथा ज्ञानार्थकर्मणां ज्ञाने निवृत्ते तत्फलार्थमपेक्षा नेत्यर्थः।

एवं तर्हि न ताभ्यां विशेषः। ज्ञानादेव मुक्तावाधिक्यसिद्धेरित्यत आह—

॥ ॐ शमदमाद्युपेतः स्यात्तथापि तु तद्विधेस्तदङ्गतया तेषामवश्यानुष्ठेयत्वात् ॐ ॥ ३.४.२७

---

ಆವಶ್ಯಕತೆಯು ಜ್ಞಾನೋತ್ಪತ್ತಿಗಾಗಿಯೇ ಹೊರತು ಮೋಕ್ಷಕ್ಕಲ್ಲ. ಏಕೆಂದರೆ, ಯಜ್ಞಾದಿಶ್ರುತೇಃ - '[1]ವಿವಿದಿಷಂತಿ ಯಜ್ಞೇನ ದಾನೇನ ತಪಸಾ' ಇತ್ಯಾದಿ ಶ್ರುತಿಯಿಂದ. ಜ್ಞಾನ ಮತ್ತು ಮೋಕ್ಷ ಇವೆರಡಕ್ಕೂ ಸತ್ಪ್ರವೃತ್ತಿಯು ಕಾರಣವೆಂದೇಕೆ ಹೇಳಬಾರದು ಎಂಬ ಶಂಕೆಗೆ ಸಮಾಧಾನ – ಅಶ್ವವತ್. ಪ್ರಯಾಣ ಮುಗಿದ ಮೇಲೆ ಪ್ರಯಾಣಸಾಧನವಾದ ಅಶ್ವ ಮೊದಲಾದವುಗಳ ಅಪೇಕ್ಷೆ ಹೇಗೆ ಇರುವುದಿಲ್ಲವೋ ಹಾಗೆ ಜ್ಞಾನವನ್ನು ಪಡೆದನಂತರ ಜ್ಞಾನಫಲಕವಾದ ಕರ್ಮಗಳನ್ನು ಜ್ಞಾನರೂಪವಾದ ಫಲದ ಉದ್ದೇಶದಿಂದ ಆಚರಿಸುವ ಆವಶ್ಯಕತೆ ಇಲ್ಲವೆಂದರ್ಥ.

ಹಾಗಾದರೆ, ಜ್ಞಾನದಿಂದಲೇ ಮುಕ್ತಿಯಲ್ಲಿ ಫಲದ ಆಧಿಕ್ಯ ಸಿದ್ಧವಾಗುವುದರಿಂದ ಸತ್ಪ್ರವೃತ್ತಿ ಮತ್ತು ಅಸತ್ಪ್ರವೃತ್ತಿಗಳಿಂದ ಯಾವ ವಿಶೇಷವೂ ಮೋಕ್ಷದಲ್ಲಿ ಉಂಟಾಗಲಾರದು ಎಂಬ ಶಂಕೆಗೆ ಸಮಾಧಾನ—

**ಓಂ ಶಮದಮಾದ್ಯುಪೇತಃ ಸ್ಯಾತ್ತಥಾಪಿ ತು ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ಓಂ ೩.೪.೨೭**

---

1. ಪರಬ್ರಹ್ಮನನ್ನು ತಿಳಿಯಲು ಇಚ್ಛಿಸುವವರು ಯಜ್ಞ, ದಾನ, ತಪಸ್ಸು ಮೊದಲಾದವುಗಳನ್ನು ಆಚರಿಸತಕ್ಕದ್ದು ಎಂದು ಈ ಬೃಹದಾರಣ್ಯಕ ಶ್ರುತಿಯು (೬.೪.೨೨) ಜ್ಞಾನಕ್ಕಾಗಿಯೇ ಎಲ್ಲ ಧರ್ಮಗಳ ಆವಶ್ಯಕತೆ ಎಂದು ಹೇಳುವುದೆಂದು ಭಾವ.

तथापि ज्ञानस्यैव मुक्तिहेतुत्वेऽपि ज्ञानी शमदमादिसत्प्रवृत्त्युपेतः स्यात् । कुतः ? तद्विधेः 'आचार्याद्विद्यामवाप्यैतमात्मानमभिपश्य शान्तो भवेद्दान्तो भवेत्' इति तस्य शमदमाद्युपेतत्वस्य ज्ञानिनो विधानात् । किमर्थोऽयं विधिरित्यत उक्तं तदित्यादि । तदङ्गतया प्रस्तुतज्ञानाङ्गतया ज्ञानप्रतिष्ठापकतया तेषां शमदमादीनामवश्यानुष्ठेयत्वादित्यर्थः । 'तपो दमः कर्मेति प्रतिष्ठा' इत्यादिश्रुतेरिति भावः ।

---

**ಸೂತ್ರಾರ್ಥ**

ತಥಾಪಿ - ಜ್ಞಾನವೇ ಮೋಕ್ಷಹೇತುವಾಗಿದ್ದರೂ ಜ್ಞಾನಿಯು, ಶಮದಮಾದ್ಯುಪೇತಃ ಸ್ಯಾತ್ - ಶಮ, ದಮ ಮೊದಲಾದ ಸತ್ಪ್ರವೃತ್ತಿಯುಕ್ತನಾಗಿರಬೇಕು. ಏಕೆಂದರೆ, ತದ್ವಿಧೇಃ - '[1]ಆಚಾರ್ಯಾದ್ ವಿದ್ಯಾಮವಾಪ್ಯೈತಮಾತ್ಮಾನಮಭಿಪಶ್ಯ ಶಾಂತೋ ಭವೇದ್ದಾಂತೋ ಭವೇತ್' ಎಂದು ಜ್ಞಾನಿಯನ್ನು ಉದ್ದೇಶಿಸಿ ಶಮದಮಾದ್ಯುಪೇತತ್ವವನ್ನು ವಿಧಿಸಿರುವುದರಿಂದ. ಶಮಾದಿಗಳ ವಿಧಿಯ ಪ್ರಯೋಜನವೇನು ಎಂಬ ಶಂಕೆಗೆ ಉತ್ತರವಾಗಿ 'ತತ್' ಇತ್ಯಾದಿ ಹೇಳಲಾಗಿದೆ. ತದಂಗತಯಾ- ಪ್ರಸ್ತುತವಾದ ಜ್ಞಾನಕ್ಕೆ ಅಂಗವಾಗಿ ಅಂದರೆ ಜ್ಞಾನಪ್ರತಿಷ್ಠಾಪಕವಾಗಿ[2] ಶಮದಮಾದಿಗಳನ್ನು ಅವಶ್ಯ ಅನುಷ್ಠಾನ ಮಾಡಬೇಕಾಗಿರುವುದರಿಂದ ಎಂದು ಅರ್ಥ.

---

1. 'ಆಚಾರ್ಯಾದ್ ವಿದ್ಯಾಮವಾಪ್ಯ ಏತಮಾತ್ಮಾನಮಭಿಪಶ್ಯ ಶಾಂತೋ ಭವೇದ್ದಾಂತೋ ಭವೇದನುಕೂಲೋ ಭವೇದಾಚಾರ್ಯಂ ಪರಿಚರೇದಾಚಾರ್ಯಂ' ಎಂದು ಮಾಠರಶ್ರುತಿ. ಆಚಾರ್ಯರ ಉಪದೇಶದಿಂದ ಪರೋಕ್ಷಜ್ಞಾನವನ್ನು ಪಡೆದು, ಹೃದ್ಗತನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಭಗವನ್ನಿಷ್ಠನಾಗಿಯೂ ಇಂದ್ರಿಯನಿಗ್ರಹವುಳ್ಳವನಾಗಿಯೂ ಆಗಿರಬೇಕು. ಸಜ್ಜನರಿಗೆ ಅನುಕೂಲನಾಗಿರಬೇಕು, ಆಚಾರ್ಯನನ್ನು ಸೇವಿಸಬೇಕು. ತನಗಿಂತಲೂ ಶ್ರೇಷ್ಠರಾದ, ಆಚಾರ್ಯಸಮರಾದವರನ್ನು ಆದರಭಾವದಿಂದ ಉಪಚರಿಸಬೇಕು ಎಂದು ಶ್ರುತಿಯ ಭಾವ.

2. ಜ್ಞಾನಪ್ರತಿಷ್ಠಾಪಕವಾಗಿರುವಿಕೆ ಎಂದರೆ ಜ್ಞಾನವೃದ್ಧಿಗೆ ಕಾರಣವಾಗಿರುವಿಕೆ.

**प्रतिष्ठयाऽपि किं फलमित्यतः सम्पूर्णफलार्थकत्वद्योतकः तुरुक्तः। ज्ञानादेव मुक्तिसिद्धौ स्वयोग्यपूर्णफलावाप्त्यै शमाद्यावश्यकम्। 'यस्य ज्ञानं तस्य मोक्षः' इति स्मृतेरिति।**

---

'[1]ತಪೋ ದಮಃ ಕರ್ಮೇತಿ ಪ್ರತಿಷ್ಠಾ' ಇತ್ಯಾದಿಶ್ರುತಿ ಇರುವುದರಿಂದ ಎಂದು ಭಾವ. ಜ್ಞಾನದ ಪ್ರತಿಷ್ಠೆಯಿಂದಾದರೂ ಪ್ರಯೋಜನವೇನು ಎಂಬ ಶಂಕೆಗೆ ಉತ್ತರವಾಗಿ ಸಂಪೂರ್ಣಫಲವೇ ಜ್ಞಾನದ ಪ್ರಯೋಜನವೆಂದು ಸೂಚಿಸುವ 'ತು' ಶಬ್ದವನ್ನು ಸೂತ್ರದಲ್ಲಿ ಹೇಳಲಾಗಿದೆ. ಜ್ಞಾನದಿಂದಲೇ ಮುಕ್ತಿ ಸಿದ್ಧವಾದಮೇಲೆ ಸ್ವಯೋಗ್ಯವಾದ ಪೂರ್ಣಫಲದ ಪ್ರಾಪ್ತಿಗಾಗಿ ಶಮಾದಿಗಳು ಆವಶ್ಯಕವಾಗಿವೆ. '[2]ಯಸ್ಯ ಜ್ಞಾನಂ ತಸ್ಯ ಮೋಕ್ಷಃ' ಇತ್ಯಾದಿ ಸ್ಮೃತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ.

---

1. 'ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ। ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ ವೇದಾಃ ಸರ್ವಾಂಗಾನಿ ಸತ್ಯಮಾಯತನಂ। ಯೋ ವಾ ಏತಾಮುಪನಿಷದಮೇವಂ ವೇದ' (ಕೇನ. ೪-೭,೮,೯.) ಎಂದು ಶ್ರುತಿ. 'ಉಪನಿಷದಂ ಭೋ ಬ್ರೂಹಿ' ಎಂದು ರುದ್ರನು ಚತುರ್ಮುಖನನ್ನು ಸಂಬೋಧಿಸಿ ಪ್ರಶ್ನಿಸಿದಾಗ ಉಪನಿಷತ್-ಪ್ರತಿಪಾದ್ಯನನ್ನು ಕುರಿತು ಪ್ರಶ್ನಿಸುವಿಯೋ, ಅಥವಾ ಉಪನಿಷತ್ತಿನಿಂದ ಜನಿಸುವ ವಿದ್ಯೆಯು ವರ್ಧಿಸಲು ಆವಶ್ಯಕವಾದ ಕಾರಣಗಳನ್ನು ಕುರಿತು ಪ್ರಶ್ನೆಯೋ, ಅಥವಾ ವಿದ್ಯೆಯ ಉತ್ಪತ್ತಿಗೆ ಕಾರಣವನ್ನು ಕೇಳುವಿಯೋ ಎಂದು ವಿಕಲ್ಪಗಳನ್ನು ಮಾಡಿಕೊಂಡು ಚತುರ್ಮುಖನು ಕ್ರಮವಾಗಿ ಉತ್ತರಿಸುವನು. ಮೊದಲನೆಯ ಪ್ರಶ್ನೆಗೆ ಪರಬ್ರಹ್ಮಸ್ವರೂಪವನ್ನು ಸಂದೇಹಕ್ಕೆಡೆ ಇಲ್ಲದಂತೆ ಈಗಾಗಲೇ ಹೇಳಲಾಗಿದೆ ಎಂದು ಉತ್ತರ. ಎರಡನೆಯ ಪ್ರಶ್ನೆಯಾದರೆ, ಕೃಚ್ಛ್ರ - ಚಾಂದ್ರಾಯಣಾನುಷ್ಠಾನ, ಶಾಸ್ತ್ರಪ್ರವಚನರೂಪವಾದ ತಪಸ್ಸು, ಇಂದ್ರಿಯನಿಗ್ರಹ, ವರ್ಣಾಶ್ರಮೋಚಿತವಾದ ಕರ್ಮಾನುಷ್ಠಾನ, ಇವು ಜ್ಞಾನವೃದ್ಧಿಗೆ ಕಾರಣವೆಂದುತ್ತರ. ಮೂರನೆಯದಕ್ಕೆ, ಋಗಾದಿವೇದಗಳು, ತದನುಸಾರಿಗ್ರಂಥಗಳು, ಶಿಕ್ಷಾದಿ ವೇದಾಂಗಗಳು ಮತ್ತು ಮೀಮಾಂಸಾಶಾಸ್ತ್ರ ಇವುಗಳು ವಿದ್ಯೆಯ ಉತ್ಪತ್ತಿಗೆ ಕಾರಣವೆಂದು ಉತ್ತರ.

2. ಯಸ್ಯ ಜ್ಞಾನಂ ತಸ್ಯ ಮೋಕ್ಷ ಇತಿ ನಾತ್ರ ವಿಚಾರಣಾ।
ತಸ್ಯ ಶಾಂತ್ಯಾದಯೋಽಂಗಾನಿ ತಸ್ಮಾತ್ತೇಷಾಮನುಷ್ಠಿತಿಃ॥
ಆವಶ್ಯಕರಣೀಯಾ ಸ್ಯಾದನ್ಯಥಾಽಲ್ಪಫಲಂ ಭವೇತ್॥
ಎಂದು ಆಗ್ನೇಯ ವಚನ.

कथं तर्हि निषिद्धान्नभोजनेऽपि ज्ञानिनो 'यदि वा अप्येवं-विन्निखिलं भक्षयीतैवमेव स भवति' इति ह्रासाभावोक्तिरित्यत आह–

॥ ॐ सर्वान्नानुमतिश्च प्राणात्यये तद्दर्शनात् ॐ ॥

३.४.२८

चस्त्वर्थः सन् श्रुतेर्विषयद्योतकः । 'यदि हवा इति श्रुतौ सर्वान्नानुमतिश्च ज्ञानिनः प्राणात्ययविषया । यदि ज्ञानी प्राणात्ययकाले

---

ಹಾಗಾದರೆ, ಜ್ಞಾನಿಯು ನಿಷಿದ್ಧಾನ್ನಭೋಜನ ಮಾಡಿದರೂ ಮುಕ್ತಿಯಲ್ಲಿ ಫಲಹ್ರಾಸವಿಲ್ಲವೆಂದು "ಯದಿ ಹ ವಾ ಅಪ್ಯೇವಂವಿತ್ ನಿಖಿಲಂ ಭಕ್ಷಯೀತ ಏವಮೇವ ಸ ಭವತಿ' ಎಂಬ ಶ್ರುತಿಯಲ್ಲಿ ಹೇಳಿರುವುದು ಹೇಗೆ ಎಂಬ ಶಂಕೆಗೆ ಸಮಾಧಾನ ನೀಡುವ ಸೂತ್ರ —

ಓಂ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ
ತದ್ದರ್ಶನಾತ್ ಓಂ ೩.೪.೨೮

**ಸೂತ್ರಾರ್ಥ**

ಸೂತ್ರದಲ್ಲಿರುವ 'ಚ' ಶಬ್ದವು 'ತು' ಶಬ್ದಾರ್ಥವನ್ನು ಹೇಳತಕ್ಕದ್ದಾಗಿ 'ಯದಿ ಹ ವಾ ಅಪ್ಯೇವಂ' ಇತ್ಯಾದಿ ಶ್ರುತಿಯ ವಿಷಯವನ್ನು ಸೂಚಿಸುವುದು. 'ಯದಿ ಹ ವಾ' ಎಂಬ ಶ್ರುತಿಯಲ್ಲಿ ಜ್ಞಾನಿಗೆ ಸರ್ವರೀತಿಯ ಅನ್ನವನ್ನು ಅನುಮತಿಸಿರುವುದು ಅವನ ಪ್ರಾಣಕ್ಕೆ ವಿಪತ್ತು ಒದಗಿದ ಕಾಲಕ್ಕೆ ಸಂಬಂಧಪಟ್ಟಿರುವುದಾಗಿದೆ.

---

ಯಾರಿಗೆ ಪರಬ್ರಹ್ಮನ ಅಪರೋಕ್ಷಜ್ಞಾನವಾಗುವುದೋ ಅವರಿಗೆ ಮುಕ್ತಿಯಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಆ ಅಪರೋಕ್ಷಜ್ಞಾನದ ವೃದ್ಧಿಗೆ ಶಮದಮಾದಿಗಳು ಕಾರಣವಾಗಿವೆ. ಆದ್ದರಿಂದಲೇ ಅವುಗಳ ಅನುಷ್ಠಾನವನ್ನು ಅವಶ್ಯ ಮಾಡತಕ್ಕದ್ದು. ಇಲ್ಲದಿದ್ದಲ್ಲಿ ಮುಕ್ತಿಯಲ್ಲಿ ಪಡೆಯುವ ಫಲದಲ್ಲಿ ಹ್ರಾಸವುಂಟಾದೀತು ಎಂದು ಆಗ್ನೇಯ ವಚನದ ಭಾವ.

निषिद्धमपि भुञ्जीत तदा न तेन तस्य विशेष इति। कुतः? तद्दर्शनात्। तस्य प्राणात्यये यथालब्धादनस्य दर्शनात् वाक्यशेष इत्यर्थः। 'न वा अजीविष्यमिमानखादन्निति होवाच कामो म उदपानम्' इति उच्छिष्टमित्युदकत्यागेन कुल्माषाभक्षणे जीवनं न स्यादिति तद्भक्षणं दृश्यत इति लिङ्गदर्शनादेव ज्ञायत इत्यर्थः।

---

ಜ್ಞಾನಿಯು ತನ್ನ ಪ್ರಾಣಕ್ಕೆ ವಿಪತ್ತು ಸಂಭವಿಸಿದ ಸಮಯದಲ್ಲಿ ನಿಷಿದ್ಧಾನ್ನವನ್ನು ಭುಜಿಸಿದರೂ ಅದರಿಂದ ಅವನಿಗೆ ಯಾವ ವಿಶೇಷವೂ ಉಂಟಾಗುವುದಿಲ್ಲ ಎಂದು ಆ ಶ್ರುತಿಯ ಅರ್ಥ. ಆ ಶ್ರುತಿಯು ಜ್ಞಾನಿಯ ಪ್ರಾಣಾತ್ಯಯಕಾಲಕ್ಕೆ ಸಂಬಂಧಿಸಿದ್ದೆನ್ನಲು ಆಧಾರವೇನು ? ಎಂಬ ಶಂಕೆಗೆ ಉತ್ತರ — 'ತದ್ದರ್ಶನಾತ್' ಎಂದು. ತಸ್ಯ - ಪ್ರಾಣ ವಿಪತ್ತಿಯ ಸಮಯದಲ್ಲಿ ಯಾವುದೋ ಲಭಿಸುವುದೋ ಅದನ್ನು ಭಕ್ಷಿಸುವುದು, ದರ್ಶನಾತ್ – ವಾಕ್ಯಶೇಷದಲ್ಲಿ ದೃಷ್ಟವಾಗಿರುವುದರಿಂದ ಎಂದು ಅರ್ಥ. '[1]ನ ವಾ ಅಜೀವಿಷ್ಯಮಿಮಾನಖಾದನ್ನಿತಿ ಹೋವಾಚ ಕಾಮೋ ಮೇ ಉದಪಾನಂ' ಎಂದು ಉಚ್ಛಿಷ್ಟವೆಂಬ ಕಾರಣದಿಂದ ನೀರನ್ನು ತ್ಯಜಿಸಿ' ಕುಲ್ಮಾಷವನ್ನು ಭಕ್ಷಿಸದಿದ್ದರೆ ಜೀವಿಸಲಾರ ಎಂದು ನಿಷಿದ್ಧಭಕ್ಷಣವು ದೃಷ್ಟವಾಗಿದೆ. ಹೀಗೆ ಪ್ರಾಣಾತ್ಯಯ ಕಾಲದಲ್ಲಿ ಉಚ್ಛಿಷ್ಟಜಲಪಾನವನ್ನು ತ್ಯಜಿಸಿ ನಿಷಿದ್ಧಾನ್ನಭಕ್ಷಣ ಮಾಡಿರುವುದು' ಎಂಬ ಲಿಂಗವು ದೃಷ್ಟವಾಗಿರುವುದರಿಂದ ಜ್ಞಾನಿಗೆ ನಿಷಿದ್ಧಾಚರಣೆಯು ಪ್ರಾಣಾತ್ಯಯಕಾಲದಲ್ಲಿ ಮಾತ್ರವೆಂದು ತಿಳಿದುಬರುವುದೆಂದು ಅರ್ಥ.

---

1. 'ನ ವಾ ಅಜೀವಿಷ್ಯಮಿಮಾನಖಾದನ್' ಇತ್ಯಾದಿ ಛಾಂದೋಗ್ಯಶ್ರುತಿಯು ಪ್ರಸ್ತಾಪಿಸಿರುವ ಪ್ರಕರಣ ಹೀಗಿದೆ - ಚಕ್ರಾಯಣನ ಪುತ್ರನಾದ ಉಷಸ್ತಿ ಎಂಬ ಮುನಿಯು ಅತಿವೃಷ್ಟಿಯಿಂದ ದುರ್ಭಿಕ್ಷೆ ಒದಗಿದಾಗ ತನ್ನ ಗ್ರಾಮವನ್ನು ಬಿಟ್ಟು ಧನಿಕನೊಬ್ಬನ ಗ್ರಾಮದಲ್ಲಿ ತನ್ನ ಪತ್ನಿಯೊಂದಿಗೆ ವಾಸಿಸಲು ಉಪಕ್ರಮಿಸಿದನು. ಆ ಗ್ರಾಮದಲ್ಲಿ ಒಮ್ಮೆ ಅವನು ಅನ್ನಾರ್ಥಿಯಾಗಿ ಸಂಚರಿಸುತ್ತಿರುವಾಗ ಕುಲ್ಮಾಷ (ಹೆಸರುಕಾಳು ಅಥವಾ ಕುತ್ಸಿತವಾದ, ವನದಲ್ಲಿ ಬೆಳೆದ ಉದ್ದು) ವನ್ನು ತಿನ್ನುತ್ತಿದ್ದ ಧನಿಕನನ್ನು ಆಕಸ್ಮಾತ್ತಾಗಿ ನೋಡಿ ಆ ಧಾನ್ಯವನ್ನು ಯಾಚಿಸಿದನು. ಆ ಧನಿಕನು ತಾನು ತಿನ್ನುತ್ತಿದ್ದ ಕುಲ್ಮಾಷವನ್ನು ಮುನಿಗೆ ಕೊಟ್ಟಿದ್ದಲ್ಲದೆ ತಾನು

किञ्च ज्ञानिनः सदसत्प्रवृत्तौ विशेषो नेत्येतत् किं निषिद्धस्या-कृतौ बाधकसत्त्वाद्वा कृतौ प्रमाणसत्त्वाद्वा निषेधकमानाभावाद्वा कृतौ बाधकाभावाद्वा ? नाद्य इत्याह—

॥ ॐ अबाधाच्च ॐ ॥ ३.४.२९

---

ಅಲ್ಲದೆ, ಜ್ಞಾನಿಗೆ ಸತ್ಪ್ರವೃತ್ತಿ – ಅಸತ್ಪ್ರವೃತ್ತಿಗಳಿಂದ ಯಾವ ವಿಶೇಷವೂ ಇಲ್ಲವೆನ್ನುವುದು ೧. ಜ್ಞಾನಿಯು ನಿಷಿದ್ಧವಾದುದನ್ನು ಆಚರಿಸದಿದ್ದರೆ ಬಾಧಕವಿರುವುದರಿಂದಲೋ? ೨. ನಿಷಿದ್ಧವನ್ನು ಆಚರಿಸಬೇಕೆನ್ನುವುದರಲ್ಲಿ ಪ್ರಮಾಣವಿರುವುದರಿಂದಲೋ ? ೩. ಜ್ಞಾನಿಯು ನಿಷಿದ್ಧಾಚರಣೆಯನ್ನು ನಿಷೇಧಿಸುವ ಪ್ರಮಾಣವಿಲ್ಲದಿರುವುದರಿಂದಲೋ ? ಅಥವಾ ೪. ನಿಷಿದ್ಧವನ್ನು ಆಚರಿಸಿದರೂ ಬಾಧಕವಿಲ್ಲದಿರುವುದರಿಂದಲೋ ?

ಮೊದಲನೆಯದಲ್ಲವೆಂದು ಹೇಳುವ ಸೂತ್ರ —

ಓಂ ಅಬಾಧಾಚ್ಚ ಓಂ ೩.೪.೨೯

---

ಕುಡಿದು ಉಳಿದಿದ್ದ ಜಲವನ್ನೂ ಸ್ವೀಕರಿಸುವಂತೆ ಪ್ರಾರ್ಥಿಸಿದನು. ಆ ಜಲವನ್ನು ಕುಡಿದರೆ ಉಚ್ಛಿಷ್ಟಪಾನ ಮಾಡಿದಂತಾಗುವುದೆಂದು ಉಷಸ್ತಿಯು ನುಡಿಯಲು ಕುಲ್ಮಾಷಧಾನ್ಯವೂ ಉಚ್ಛಿಷ್ಟವಲ್ಲವೇ ? ಎಂದು ಧನಿಕನು ಪ್ರಶ್ನಿಸುವನು. ಅದಕ್ಕುತ್ತರವಾಗಿ ಮುನಿಯು 'ನ ವಾ ಅಜೀವಿಷ್ಯಂ' ಇತ್ಯಾದಿಯಾಗಿ ಹೇಳುವನು. 'ಪ್ರಾಣಾತ್ಯಯ ಕಾಲದಲ್ಲಿ ನಿಷಿದ್ಧ ಭಕ್ಷಣವು ದೋಷವಲ್ಲವಾದ್ದರಿಂದ ಉಚ್ಛಿಷ್ಟವಾದದ್ದಾದರೂ ಕುಲ್ಮಾಷವನ್ನು ಭಕ್ಷಿಸಿದೆ. ಒಮ್ಮೆ ಪ್ರಾಣ ರಕ್ಷಣೆಯಾದಮೇಲೆ ಜಲಪಾನಮಾಡುವುದು ಅಥವಾ ಬಿಡುವುದು ನನ್ನ ಇಚ್ಛೆಗೆ ಅಧೀನವಾದದ್ದು. ವಿಷಮ ಪರಿಸ್ಥಿತಿ ಇಲ್ಲದಿದ್ದರೂ ಉಚ್ಛಿಷ್ಟವನ್ನು ಸ್ವೀಕರಿಸುವುದು ದೋಷದಾಯಕವಾದ್ದರಿಂದ ಆ ಜಲವನ್ನು ಪಾನಮಾಡಲಾರೆ' ಎಂದು ಉಷಸ್ತಿಯ ಮಾತಿನ ಭಾವ, ಈ ಶ್ರುತಿಯಲ್ಲಿ ದೃಷ್ಟವಾಗಿರುವ 'ಉಚ್ಛಿಷ್ಟಜಲತ್ಯಾಗಪೂರ್ವಕ ನಿಷಿದ್ಧಭಕ್ಷಣ' ಎಂಬ ಲಿಂಗವು ಪ್ರಾಣಾತ್ಯಯಕಾಲದಲ್ಲಿ ಮಾತ್ರ ಜ್ಞಾನಿಗೆ ನಿಷಿದ್ಧಾಚರಣವು ಅನುಮತವಾಗಿದೆ ಎಂದು ತಿಳಿಸುವುದೆಂದು ತಾತ್ಪರ್ಯ.

किञ्चेति चार्थः । अन्याय्यानाचरणे ज्ञाने बाधकाभावात् नैवं कल्पनीयमित्यर्थः । न द्वितीयः । असिद्धेरिति भावः ।

न तृतीय इत्याह—

|| ॐ अपि स्मर्यते ॐ || ३.४.३०

सद्धर्मात्यागः 'अतीतानागतज्ञानी' इति स्मर्यतेऽपीत्यर्थः । निषेधकस्मृतिसत्त्वान्नायं कल्प इति भावः ।

---

**ಸೂತ್ರಾರ್ಥ**

ಸೂತ್ರದಲ್ಲಿರುವ 'ಚ' ಶಬ್ದಕ್ಕೆ 'ಕಿಂಚ' ಎಂದು ಅರ್ಥ. ನಿಷಿದ್ಧವಾದುದನ್ನು ಆಚರಿಸದಿದ್ದರೆ ಜ್ಞಾನಕ್ಕೆ ಯಾವ ಬಾಧಕವೂ ಇಲ್ಲದಿರುವುದರಿಂದ ಜ್ಞಾನಿಯು ನಿಷಿದ್ಧವಾದುದನ್ನು ಆಚರಿಸಬೇಕೆಂದು ಕಲ್ಪಿಸತಕ್ಕದ್ದಲ್ಲ ಎಂದು ಅರ್ಥ. ನಿಷಿದ್ಧವಾದುದನ್ನು ಜ್ಞಾನಿಯು ಆಚರಿಸಬೇಕೆನ್ನುವುದರಲ್ಲಿ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಎರಡನೆಯ ವಿಕಲ್ಪವೂ ಯುಕ್ತವಲ್ಲವೆಂದು ಭಾವ.

ಮೂರನೆಯ ವಿಕಲ್ಪವೂ ಸಮಂಜಸವಲ್ಲವೆಂದು ಹೇಳುವ ಸೂತ್ರ —

ಓಂ ಅಪಿ ಸ್ಮರ್ಯತೇ ಓಂ ೩.೪.೩೦

**ಸೂತ್ರಾರ್ಥ**

ಜ್ಞಾನಿಯು ಸದ್ಧರ್ಮಗಳನ್ನು ತ್ಯಜಿಸಬಾರದೆನ್ನುವುದು '[1]ಅತೀತಾನಾಗತಜ್ಞಾನೀ' ಎಂಬ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ ಕೂಡ ಎಂದು ಅರ್ಥ. ಜ್ಞಾನಿಯು ನಿಷಿದ್ಧಾಚರಣೆಯನ್ನು ನಿಷೇಧಿಸುವ ಸ್ಮೃತಿ ಇರುವುದರಿಂದ ಈ ಮೂರನೆಯ ಕಲ್ಪ ಯುಕ್ತವಲ್ಲವೆಂದು ಭಾವ.

---

1. ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।
ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ॥ (ಹರಿವಂಶ)

न स्मृतिमात्रं श्रुतिश्चास्तीत्याह—

॥ ॐ शब्दश्चातोऽकामाचारे ॐ ॥ ३.४.३१

अकामचारे 'एवं पश्यन्न कामचरितं चरेत्' इति शब्दश्चास्ति यतोऽतो न तृतीयः कल्प इत्यर्थः ।

तुरीयं प्रत्याह अत इति । 'तथापि तु' इत्यत्र तुशब्दार्थ-

---

ಸ್ಮೃತಿ ಮಾತ್ರವಲ್ಲ ಶ್ರುತಿಯೂ ಇದೆ ಎಂದು ಹೇಳುವ ಸೂತ್ರ —

ಓಂ ಶಬ್ದಶ್ಚಾತೋಽಕಾಮಚಾರೇ ಓಂ ೩.೪.೩೧

**ಸೂತ್ರಾರ್ಥ**

ಅಕಾಮಚಾರೇ – ಜ್ಞಾನಿಯು ತನ್ನ ಇಚ್ಛೆ ಬಂದಂತೆ ಕರ್ಮಗಳನ್ನು ಆಚರಿಸ ತಕ್ಕದ್ದಲ್ಲ ಎಂಬ ವಿಷಯದಲ್ಲಿ '[1]ಏವಂ ಪಶ್ಯನ್ ನ ಕಾಮಚರಿತಂ ಚರೇತ್' ಎಂಬ ಶ್ರುತಿಯೂ ಇದೆಯಾದ್ದರಿಂದ ಮೂರನೆಯ ಕಲ್ಪ ಯುಕ್ತವಲ್ಲ ಎಂದು ಅರ್ಥ.

ನಾಲ್ಕನೆಯ ಕಲ್ಪವನ್ನು ನಿರಾಕರಿಸುವ ಸಲುವಾಗಿ ಸೂತ್ರದಲ್ಲಿ 'ಅತಃ' ಎಂದು ಹೇಳಲಾಗಿದೆ. ಈ 'ಅತಃ' ಎಂಬ ಶಬ್ದದಿಂದ 'ಶಮದಮಾದ್ಯುಪೇತಃ ಸ್ಯಾತ್ ತಥಾಪಿ ತು' (ಬ್ರ.ಸೂ. ೩.೪.೨೭) ಎಂಬಲ್ಲಿ 'ತು' ಶಬ್ದಾರ್ಥದ ವಿರೋಧಿಯಾಗಿ ಬುದ್ಧಿಸನ್ನಿಹಿತವಾದುದನ್ನು ಪರಾಮರ್ಶಿಸಲಾಗುವುದು[2]. ನಿಷಿದ್ಧಕರ್ಮವು ಅಲ್ಪಫಲಕ್ಕೆ ಕಾರಣವಾದುದರಿಂದಲೂ 'ನಿಷಿದ್ಧಕರ್ಮಾ

---

1. 'ಸ ಯ ಏವಂ ವಿದೇವಂ ಮನ್ವಾನ ಏವಂ ಪಶ್ಯನ್ ನ ಕಾಮಚರಿತಂ ಚರೇತ್ ನ ಕಾಮಂ ಭಕ್ಷಯೀತ ನ ಕಾಮಮನುವರ್ತೇತ' ಎಂದು ಕೌಂಡಿನ್ಯಶ್ರುತಿ. ಪರಮಾತ್ಮನ ಗುಣಪೂರ್ಣತ್ವವನ್ನು ಶ್ರವಣಮಾಡಿ ಮನನ - ಧ್ಯಾನಗಳನ್ನು ಆಚರಿಸಿ ಬ್ರಹ್ಮದರ್ಶನ ಮಾಡಿರುವ ಜ್ಞಾನಿಯು ನಿಷಿದ್ಧಕರ್ಮಗಳನ್ನು ಆಚರಿಸತಕ್ಕದ್ದಲ್ಲ ಎಂದು ಶ್ರುತಿಯ ಭಾವ.

2. 'ಶಮದಮಾದ್ಯುಪೇತಃ ಸ್ಯಾತ್ ತಥಾಪಿ ತು' ಇತ್ಯಾದಿ ಸೂತ್ರದಲ್ಲಿ 'ತು' ಶಬ್ದವು ಶಮಾದಿಗಳೂ ಪೂರ್ಣಫಲವನ್ನು ಹೊಂದಲು ಪ್ರಯೋಜಕವೆಂದು ಸೂಚಿಸುವುದು ಎಂದು ಭಾಷ್ಯದಲ್ಲಿ ವ್ಯಾಖ್ಯಾನ ಮಾಡಲಾಗಿದೆ. ತುಶಬ್ದಸೂಚಿತವಾದ ಪೂರ್ಣಫಲಕ್ಕೆ ವಿರೋಧಿಯಾಗಿ ಬುದ್ಧಿಸನ್ನಿಹಿತವಾದ ಅಲ್ಪಫಲವನ್ನು ಪ್ರಕೃತ 'ಅತಃ' ಶಬ್ದವು ಪರಾಮರ್ಶಿಸುವುದು ಎಂದು ಭಾವ.

प्रतियोगितया सन्निहितं परामृश्यते। अल्पफलत्वाच्च न बाधकाभावकल्पो युक्त इत्यर्थः। निषिद्धकृतौ फलह्रासापत्तेरिति भावः।

अस्तु बाधकान्निषिद्धाकृतिः। कर्मकृतिस्तु कुतः? ह्रासहेतोरसत्त्वे ज्ञानादेव पूर्णफलसिद्धेरत आह—

॥ ॐ विहितत्वाच्चाश्रमकर्मापि ॐ ॥ ३.४.३२

अपिर्वर्णधर्मसमुच्चये। 'पश्यन्नपीममात्मानं कुर्यात् कर्म'

---

ಚರಣೆಗೆ ಯಾವ ಬಾಧಕವೂ ಇಲ್ಲ' ಎಂಬ ಕಲ್ಪವು ಯುಕ್ತವಲ್ಲ ಎಂದು ಅರ್ಥ. ಜ್ಞಾನಿಯು ನಿಷಿದ್ಧವಾದುದನ್ನು ಆಚರಿಸಿದರೆ ಫಲದಲ್ಲಿ ಹ್ರಾಸವಾದೀತಾದ್ದರಿಂದ ಎಂದು ಭಾವ.

ಬಾಧಕವಿರುವ ಕಾರಣ ಜ್ಞಾನಿಯು ನಿಷಿದ್ಧವನ್ನು ಆಚರಿಸದಿರುವುದು ಸರಿಯೇ. ಆದರೆ ಅವನು ಸತ್ಕರ್ಮವನ್ನು ಆಚರಿಸಬೇಕೇಕೆ? ಫಲಹ್ರಾಸಕ್ಕೆ ಕಾರಣವಾದದ್ದು ಇಲ್ಲದಿದ್ದರೆ ಜ್ಞಾನದಿಂದಲೇ ಪೂರ್ಣಫಲ ಸಿದ್ಧಿಸುವುದಷ್ಟೇ ಎಂಬ ಶಂಕೆಯನ್ನು ಪರಿಹರಿಸುವ ಸೂತ್ರ—

## ಓಂ ವಿಹಿತತ್ವಾಚ್ಚಾಶ್ರಮಕರ್ಮಾಪಿ ಓಂ ३.४.३२

**ಸೂತ್ರಾರ್ಥ**

'ಅಪಿ' ಶಬ್ದವು ವರ್ಣಧರ್ಮದ ಸಮುಚ್ಚಯವನ್ನು ಹೇಳುವುದು. '[1]ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ ಕರ್ಮ' ಎಂಬ ಶ್ರುತಿಯಲ್ಲಿ ವಿಹಿತವಾಗಿರುವುದ

---

1. ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ ಕರ್ಮಾವಿಚಾರಯನ್ ।
ಯದಾತ್ಮನಃ ಸುನಿಯತಂ ಆನಂದೋತ್ಕರ್ಷಮಾಪ್ನುಯಾತ್ ॥
ಎಂದು ಕೌಷಾರವ ಶ್ರುತಿ.

इति श्रुतौ विहितत्वात् आश्रमाद्युचितकर्म कार्यं च। न केवलं निषिद्धं न कार्यमिति चार्थः।

विहितत्वेऽपि प्रागुक्तदिशा फलाभावान्न कार्यम्। अन्यथा समुच्चयवादापत्तेरित्यत आह—

॥ ॐ सहकारित्वेन च ॐ ॥ ३.४.३३

मोक्षहेतुज्ञानसहकारित्वेनापि कर्म कार्यं, न विहितत्वादेवेति

---

ರಿಂದ ವರ್ಣಾಶ್ರಮಾದಿಗಳಿಗೆ ಉಚಿತವಾದ ಕರ್ಮವನ್ನು ಮಾಡಲೂಬೇಕಾಗಿದೆ. ಸೂತ್ರದಲ್ಲಿರುವ 'ಚ' ಶಬ್ದವು 'ನಿಷಿದ್ಧವಾದುದನ್ನು ಮಾಡತಕ್ಕದ್ದಲ್ಲ ಎಂದಿಷ್ಟೇ ಅಲ್ಲ' ಎಂಬ ಅರ್ಥವನ್ನು ಹೇಳುವುದು.

ವಿಹಿತವಾಗಿದ್ದರೂ ಹಿಂದೆ ಹೇಳಿದಂತೆ ಫಲವಿಲ್ಲದ ಕಾರಣ ಜ್ಞಾನಿಯು ಸತ್ಕರ್ಮಗಳನ್ನು ಮಾಡತಕ್ಕದ್ದಲ್ಲ. ಹಾಗಿಲ್ಲವಾದರೆ [1]ಜ್ಞಾನಕರ್ಮ ಸಮುಚ್ಚಯ ವಾದವನ್ನು ಅಂಗೀಕರಿಸಿದಂತಾಗುವುದು ಎಂಬ ಆಕ್ಷೇಪಕ್ಕೆ ಉತ್ತರ ನೀಡುವ ಸೂತ್ರ—

ಓಂ ಸಹಕಾರಿತ್ವೇನ ಚ ಓಂ ೩.೪.೩೩

**ಸೂತ್ರಾರ್ಥ**

ಮೋಕ್ಷಕಾರಣವಾದ ಜ್ಞಾನಕ್ಕೆ ಸಹಕಾರಿಯಾಗಿರುವುದರಿಂದಲೂ ಜ್ಞಾನಿಯು ಸತ್ಕರ್ಮಗಳನ್ನು ಆಚರಿಸತಕ್ಕದ್ದು. 'ವಿಹಿತವಾದುದರಿಂದ ಮಾತ್ರವಲ್ಲ' ಎಂದು ಸೂತ್ರದಲ್ಲಿರುವ 'ಚ' ಶಬ್ದದ ಅರ್ಥ. ಅಥವಾ, ಕರ್ಮವಿಲ್ಲದೆ ಜ್ಞಾನದಿಂದಲೇ

---

1. ಮೋಕ್ಷ ಲಭಿಸಲು ಜ್ಞಾನ - ಕರ್ಮಗಳೆರಡೂ ಸಮಪ್ರಾಧಾನ್ಯವಿರುವ ಕಾರಣಗಳು ಎಂಬ ವಾದ.

चार्थः । विनाऽपि कर्म ज्ञानादेव मोक्षस्वरूपसिद्धौ सम्पूर्णतत्सिद्ध्यर्थं कर्म सहकारितयाऽपेक्ष्यत इति विशेषद्योतकतुशब्दार्थो वा चशब्दः । तेन समुच्चयवादो व्यावर्तितः । 'ज्ञानान्मोक्षो भवत्येव' इति स्मृतिसमुच्चायक इत्येके ॥ ४ ॥

उभयलिङ्गाधिकरणम्—५

॥ ॐ सर्वथाऽपि तु त एवोभयलिङ्गात् ॐ ॥ ३.४.३४

अत्र ज्ञानस्याधिकारिमात्रप्राप्यत्वं साध्यते । उभशब्दपर्यायोऽत्रोभयशब्दः । सर्वथाऽपि देशकालगुरूपसत्तिश्रवणाद्यनेकोत्साहेपि

---

ಮುಕ್ತಿಸ್ವರೂಪ ಸಿದ್ಧವಾಗುವುದಾದರೂ ಸಂಪೂರ್ಣಮುಕ್ತಿಯ ಸಿದ್ಧಿಗಾಗಿ ಸಹಕಾರಿಯಾಗಿ ಕರ್ಮವು ಅಪೇಕ್ಷಿತವಾಗಿದೆ ಎಂಬ ವಿಶೇಷವನ್ನು ಸೂಚಿಸುವ 'ತು' ಶಬ್ದದ ಅರ್ಥವನ್ನು 'ಚ' ಶಬ್ದವು ಹೇಳುವುದು. ಇದರಿಂದ ಸಮುಚ್ಚಯವಾದವು ನಿರಾಕೃತವಾಯಿತು. 'ಜ್ಞಾನಾನ್ಮೋಕ್ಷೋ ಭವತ್ಯೇವ' ಎಂಬ ಸ್ಮೃತಿಯ ಸಮುಚ್ಚಯವನ್ನು 'ಚ' ಶಬ್ದವು ಹೇಳುವುದೆಂದು ಕೆಲವರು ಹೇಳುವರು.

ಉಭಯಲಿಂಗಾಧಿಕರಣ—೫

## ಓಂ ಸರ್ವಥಾಽಪಿ ತು ತ ಏವೋಭಯಲಿಂಗಾತ್ ಓಂ
## ೩.೪.೩೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜ್ಞಾನವನ್ನು ಅಧಿಕಾರಿ ಮಾತ್ರ ಪಡೆಯಬಲ್ಲನೆಂದು ಸಾಧಿಸಲಾಗುವುದು.

ಈ ಸೂತ್ರದಲ್ಲಿರುವ 'ಉಭಯ' ಶಬ್ದವು 'ಉಭ' ಶಬ್ದಸಮಾನಾರ್ಥಕವಾಗಿದೆ. ಸರ್ವಥಾಽಪಿ – ದೇಶ, ಕಾಲ, ಗುರೂಪಸತ್ತಿ, ಶ್ರವಣ ಮೊದಲಾದ ಅನೇಕ

त एव प्रस्तुतयोग्या एव ज्ञानं प्राप्नुवन्तीति शेषः । न त्वयोग्याः । प्रत्युत विपरीतज्ञानमाप्नुवन्तीति तोरर्थस्तत्त्वप्रदीपोक्तः । कुतः उभयलिङ्गात् । योग्यायोग्ययोर्ज्ञानप्राप्त्यप्राप्तिरूपोभयलिङ्गदर्शना-दित्यर्थः । इन्द्रविरोचनयोः 'य एषोऽन्तरीक्षणि पुरुषो दृश्यते एष

---

ಪ್ರಕಾರದ ಉತ್ಸಾಹವಿದ್ದರೂ, ತೇ ಏವ – ಪ್ರಸ್ತುತರಾದ ಜ್ಞಾನಯೋಗ್ಯರೇ ಜ್ಞಾನವನ್ನು ಪಡೆಯುವರು – 'ಜ್ಞಾನವನ್ನು ಪಡೆಯುವರು' ಎಂಬುದು ಶೇಷಪೂರಣವಾಗಿದೆ — ಹೊರತು ಅಯೋಗ್ಯರು ಪಡೆಯಲಾರರು. ಅದರ ಬದಲು ಅಯೋಗ್ಯರು ವಿಪರೀತ ಜ್ಞಾನವನ್ನೇ ಪಡೆಯುವರೆಂದು 'ತು' ಶಬ್ದದ ಅರ್ಥವನ್ನು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ.

ಯೋಗ್ಯರೇ ಜ್ಞಾನವನ್ನು ಪಡೆಯುವರು ಹೊರತು ಅಯೋಗ್ಯರಲ್ಲ ಎಂಬುದಕ್ಕೆ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ – 'ಉಭಯಲಿಂಗಾತ್' ಎಂದು. ಯೋಗ್ಯರಿಗೆ ಜ್ಞಾನಪ್ರಾಪ್ತಿ, ಅಯೋಗ್ಯರಿಗೆ ಜ್ಞಾನದ ಅಪ್ರಾಪ್ತಿ ಹೀಗೆ ಎರಡು ರೀತಿಯ ಲಿಂಗವು ದೃಷ್ಟವಾಗಿರುವುದರಿಂದ ಎಂದು ಅರ್ಥ. '[1]ಯ ಏಷೋಽಂತರೀಕ್ಷಣಿ

---

1. ಛಾಂದೋಗ್ಯದ ಎಂಟನೆ ಅಧ್ಯಾಯದಲ್ಲಿ ಬರುವ ಆಖ್ಯಾಯಿಕೆ ಹೀಗಿದೆ – ಇಂದ್ರ-ವಿರೋಚನರಿಬ್ಬರೂ ಪ್ರಜಾಪತಿಯ ಬಳಿಗೆ ಹೋಗಿ ಮೂವತ್ತೆರಡು ಸಹಸ್ರ ವರ್ಷಗಳ ಕಾಲ ಬ್ರಹ್ಮಚರ್ಯ ವ್ರತದಿಂದ ಗುರುಕುಲವಾಸವನ್ನು ಮಾಡುವರು. ಕೊನೆಗೆ ಅವರಿಬ್ಬರನ್ನೂ ಪ್ರಜಾಪತಿಯು ನಿಮಗೇನು ಬೇಕೆಂದು ಕೇಳಲು ಪರಬ್ರಹ್ಮನನ್ನು ತಿಳಿಯಲು ಬಯಸುವುದಾಗಿ ಇಬ್ಬರೂ ನುಡಿಯುವರು. ಪ್ರಜಾಪತಿಯು ಇಬ್ಬರನ್ನೂ ಕುರಿತು 'ಯ ಏಷೋಽಂತರೀಕ್ಷಣಿ ಪುರುಷೋ ದೃಶ್ಯತೇ ಏಷ ಆತ್ಮಾ' ಎಂದು ಪರಬ್ರಹ್ಮಸ್ವರೂಪವನ್ನು ಉಪದೇಶಿಸುವನು. ಜ್ಞಾನಯೋಗ್ಯನಾದ ಇಂದ್ರನು ಈ ವಾಕ್ಯವು ಚಕ್ಷುಃಸ್ಥಿತನಾದ ವಿಶ್ವನಾಮಕನಾದ ಹರಿಯನ್ನು ಬೋಧಿಸುವುದೆಂದು ತಿಳಿದರೆ ಜ್ಞಾನಯೋಗ್ಯನಲ್ಲದ ವಿರೋಚನನು ಚಕ್ಷುಸ್ಸಿನಲ್ಲಿ ಕಾಣುವ ಮನುಷ್ಯನ ಪ್ರತಿಬಿಂಬವೇ ಪರಬ್ರಹ್ಮವೆಂದು ವಿಪರೀತವಾಗಿ ತಿಳಿಯುವನು. ಹೀಗೆ ಇಂದ್ರನಿಗೆ ಜ್ಞಾನಪ್ರಾಪ್ತಿ, ವಿರೋಚನನಿಗೆ ಜ್ಞಾನದ ಅಪ್ರಾಪ್ತಿ ಎಂಬ ಲಿಂಗದಿಂದ ಜ್ಞಾನವು ಅಧಿಕಾರಿಗೆ ಮಾತ್ರ ಲಭಿಸುವುದೆಂದು ತಿಳಿಯುವುದೆಂದು ಭಾವ.

आत्मेति होवाच' इति प्रजापतिनोपदिष्टयोर्ज्ञानप्राप्त्यप्राप्त्योः श्रुतौ दर्शनादिति भावः ।

यद्वा, उभयत्र अयोग्येन उत्साहेनापि ज्ञानं नाप्यते, प्रत्युत विपरीतमाप्यत इत्युभयत्र लिङ्गदर्शनात् विरोचनस्य ज्ञानानाप्ति-विपरीतावाप्तिदर्शनरूपलिङ्गादित्यर्थः । सर्वथाऽपीत्युक्तिः असार्वत्रिकी' इति नयसिद्धानधिकारेऽपि प्रयत्नेन ज्ञानं तैराप्यतामिति शङ्काव्यु-दासाय ।

---

ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ' ಎಂದು ಇಂದ್ರ ವಿರೋಚನರನ್ನು ಕುರಿತು ಪ್ರಜಾಪತಿಯು ಉಪದೇಶಿಸಿದಾಗ ಯೋಗ್ಯರಿಗೆ ಜ್ಞಾನಪ್ರಾಪ್ತಿ, ಅಯೋಗ್ಯರಿಗೆ ಜ್ಞಾನದ ಅಪ್ರಾಪ್ತಿ ಇವುಗಳು ಶ್ರುತಿಯಲ್ಲಿ ಕಂಡುಬರುವುದರಿಂದ ಎಂದು ಭಾವ.

**'ಉಭಯಲಿಂಗಾತ್' ಎಂಬ ಸೂತ್ರಭಾಗಕ್ಕೆ ವ್ಯಾಖ್ಯಾನಾಂತರ :**

ಅಥವಾ, ಉಭಯತ್ರ – ಅಯೋಗ್ಯರು ಉತ್ಸಾಹವಿದ್ದರೂ ಜ್ಞಾನವನ್ನು ಪಡೆಯಲಾಗುವುದಿಲ್ಲ, ಅದರ ಬದಲು ವಿಪರೀತ ಜ್ಞಾನವನ್ನು ಪಡೆಯುವರು ಎಂದು ಎರಡು ವಿಷಯದಲ್ಲೂ, ಲಿಂಗದರ್ಶನಾತ್–ವಿರೋಚನನಿಗೆ ಜ್ಞಾನ ಲಭಿಸದಿರುವುದು, ವಿಪರೀತಜ್ಞಾನ ಲಭಿಸುವುದು – ಇವುಗಳ ದರ್ಶನವೆಂಬ ಲಿಂಗದಿಂದ ಎಂದು ಅರ್ಥ.

'ಅಸಾರ್ವತ್ರಿಕೀ' (ಬ್ರ.ಸೂ. ೩.೪.೧೦) ಎಂಬ ಅಧಿಕರಣದಲ್ಲಿ ಸಿದ್ಧವಾದಂತೆ ಅಧಿಕಾರವಿಲ್ಲದಿದ್ದರೂ ಪ್ರಯತ್ನದಿಂದ ಅನಧಿಕಾರಿಗಳೂ ಜ್ಞಾನವನ್ನು ಪಡೆಯಬಹುದು ಎಂಬ ಶಂಕೆಯನ್ನು ನಿರಾಕರಿಸಲು 'ಸರ್ವಥಾಽಪಿ' ಎಂದು ಹೇಳಲಾಗಿದೆ.

ಗಾಧಿಪುತ್ರನಾದ ವಿಶ್ವಾಮಿತ್ರನು ಮಹಾಪ್ರಯತ್ನದಿಂದ ವಿಪ್ರತ್ವವನ್ನು ಪಡೆದಂತೆ ಜ್ಞಾನಕ್ಕೆ ಅಯೋಗ್ಯರಾದವರೂ ಮಹಾಪ್ರಯತ್ನದಿಂದ ತಮ್ಮ ಅಯೋಗ್ಯತೆ

महायत्नेनायोग्यताभिभवसम्भवात् अयोग्यानामपि ज्ञानावाप्तिरस्तु । गाधिजस्य विप्रत्वावाप्तिवदित्यत आह—

॥ ॐ अनभिभवं च दर्शयति ॐ ॥ ३.४.३५

स्वभावस्येति शेषः । 'दैवीमेव सम्पत्ति देवा अभिगच्छन्त्यासुरीमेव चासुरा नैवैतयोरभिभवः कदाचित् स्वभाव एव ह्यवतिष्ठते' इति श्रुतिः स्वभावस्यानभिभवं दर्शयति । अयोग्यता च स्वभाव इति कथं तदभिभव इति चार्थः । क्षत्रियत्वादिकं त्वस्वाभाविकमिति भावः ।

---

ಯನ್ನು ನಷ್ಟಗೊಳಿಸಲು ಸಾಧ್ಯವಿರುವುದರಿಂದ ಅವರಿಗೂ ಜ್ಞಾನಪ್ರಾಪ್ತಿಯಾಗಲಿ ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರ –

ಓಂ ಅನಭಿಭವಂ ಚ ದರ್ಶಯತಿ ಓಂ ३.४.३५

**ಸೂತ್ರಾರ್ಥ**

'ಸ್ವಭಾವಸ್ಯ' ಎಂಬ ಶೇಷವನ್ನು ಸೇರಿಸಬೇಕು. '[1]ದೈವೀಮೇವ ಸಂಪದಂ ದೇವಾ ಅಭಿಗಚ್ಛಂತ್ಯಾಸುರೀಮೇವ ಚಾಸುರಾ ನೈವೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠಂತೇ' ಎಂಬ ಶ್ರುತಿಯು ಸ್ವಭಾವಕ್ಕೆ ನಾಶವಿಲ್ಲದಿರುವುದನ್ನು ತಿಳಿಸುತ್ತದೆ. ಅಯೋಗ್ಯರಿಗೆ ಅಯೋಗ್ಯತೆಯು ಸ್ವಭಾವವೇ ಆಗಿರುವುದರಿಂದ ಅದರ ನಾಶವಾಗುವುದು ಹೇಗೆ ? ಎಂದು 'ಚ' ಶಬ್ದದ ಅರ್ಥವಾಗಿದೆ. ವಿಶ್ವಾಮಿತ್ರನೇ ಮೊದಲಾದವರ ಕ್ಷತ್ರಿಯತ್ವಾದಿಗಳು ಅವರ ಸ್ವಭಾವವಾಗಿರಲಿಲ್ಲ ಎಂದು ಭಾವ.

---

1. ದೇವತೆಗಳಿಗೆ ಸಂಬಂಧಿಸಿದ ಮುಕ್ತಿಯೋಗ್ಯಸ್ವರೂಪವಾದ ಸ್ವಭಾವವನ್ನೇ ಮುಕ್ತಿಯೋಗ್ಯರು ಹೊಂದಿರುವರು. ಅಸುರಸಂಬಂಧಿಯಾದ ಅಯೋಗ್ಯಸ್ವರೂಪವಾದ ಸ್ವಭಾವವನ್ನೇ ಅಸುರರು ಪಡೆದಿರುವರು. ಈ ಸ್ವಭಾವಗಳು ಎಂದೂ ನಾಶವಾಗಲಾರವು. ದೇವಾಸುರರು ತಮ್ಮ ತಮ್ಮ ಸ್ವಭಾವದಲ್ಲೇ ಸ್ಥಿರವಾಗಿ ನೆಲೆಸಿರುವರು ಎಂದು ಶ್ರುತಿಯ ಭಾವ.

नीचोच्चानां तदभावेऽपि मध्यमानां स्वभावाभिभवेन ज्ञानाप्तिरस्त्वित्यत आह—

॥ ॐ अन्तरा चापि तु तद्दृष्टेः ॐ ॥ ३.४.३६

अपिः मिश्रबुद्धीनामिति समुच्चिनोति । स्वभावानभिभव इत्यस्ति । 'सर्वथाऽपि तु' इत्यत्र प्रस्तुतसम्यग्ज्ञानविपरीतज्ञानयोरिहान्वयः । च एव । सम्यग्ज्ञानासम्यग्ज्ञाने अन्तरा च तयोर्मध्य एव स्थितिरिति शेषः । केषाम् ? तद्द्वययोग्यदेवासुरान्येषां मानवानामिति यावत् ।

---

ನೀಚಜೀವರಿಗೂ ಉಚ್ಚಜೀವರಿಗೂ ಸ್ವಭಾವದ ನಾಶವಾಗದಿದ್ದರೂ ಮಧ್ಯಮ ಜೀವರಿಗೆ ಸ್ವಭಾವದ ನಾಶವಾಗಿ ಜ್ಞಾನಪ್ರಾಪ್ತಿಯಾಗಲಿ ಎಂಬ ಶಂಕೆಗೆ ಉತ್ತರ ನೀಡುವ ಸೂತ್ರ—

**ಓಂ ಅಂತರಾ ಚಾಪಿ ತು ತದ್ದೃಷ್ಟೇಃ ಓಂ ೩.೪.೩೬**

**ಸೂತ್ರಾರ್ಥ**

ಸೂತ್ರದಲ್ಲಿರುವ 'ಅಪಿ' ಶಬ್ದವು 'ಮಿಶ್ರಬುದ್ಧಿಗಳಿಗೂ' ಎಂದು ಸಮುಚ್ಚಯವನ್ನು ಹೇಳುವುದು. 'ಸ್ವಭಾವಾನಭಿಭವಃ' ಎಂಬ ಪದವು ಅಧ್ಯಾಹೃತವಾಗುವುದು. 'ಸರ್ವಥಾ' (ಬ್ರ.ಸೂ. ೩.೪.೩೪) ಎಂಬಲ್ಲಿ ಪ್ರಸ್ತುತವಾಗಿರುವ ಸಮ್ಯಗ್ ಜ್ಞಾನ ಮತ್ತು ವಿಪರೀತಜ್ಞಾನಗಳು ಇಲ್ಲಿ ಅನ್ವಿತವಾಗುವವು. 'ಚ' ಶಬ್ದಕ್ಕೆ 'ಏವ' ಎಂದು ಅರ್ಥ.

ಸಮ್ಯಗ್‌ಜ್ಞಾನಾಸಮ್ಯಗ್‌ಜ್ಞಾನೇ ಅಂತರಾ ಚ - ಸಮ್ಯಗ್‌ಜ್ಞಾನ, ವಿಪರೀತ ಜ್ಞಾನಗಳ ಮಧ್ಯದಲ್ಲೇ ಇರುವಿಕೆ ಇದೆ – ಇಲ್ಲಿ 'ಇರುವಿಕೆ ಇದೆ' ಎಂಬ ಪದಗಳು ಶೇಷಪೂರಣವಾಗಿದೆ – ಯಾರಿಗೆ ? ಸಮ್ಯಗ್‌ಜ್ಞಾನ, ವಿಪರೀತಜ್ಞಾನ ಇವೆರಡಕ್ಕೆ ಯೋಗ್ಯರಾದ ದೇವತೆಗಳು ಮತ್ತು ಅಸುರರಿಗಿಂತ ಭಿನ್ನರಾದ ಮಾನವರಿಗೆ ಎಂದು ಭಾವ.

यद्वा, अनभिभावाकर्षः। अन्तर स्थितानामिति शेषः। सम्यग्ज्ञानविपरीतज्ञानयोर्मध्ये स्थितानां मानवानामिति यावत्, अनभिभव एव मिश्रबुद्धित्वमेव न केवलं ज्ञानादिप्राप्तिरित्यर्थः। मिश्रबुद्धीनामपि स्वभावाभिभवो नास्ति। कुतः? तद्दृष्टेः। तदिति तन्त्रम्। तुर्विशेषे। तेषां तत्र मिश्रबुद्धित्वे एव तस्य दार्ढ्यस्य विशेषेण दृष्टेरित्यर्थः।

---

### 'ಅಂತರಾ ಚ' ಎಂಬ ಸೂತ್ರಭಾಗಕ್ಕೆ ವ್ಯಾಖ್ಯಾನಾಂತರ

ಅಥವಾ, ಹಿಂದಿನ ಸೂತ್ರದಿಂದ 'ಅನಭಿಭವ' ಪದವನ್ನು ಈ ಸೂತ್ರಕ್ಕೆ ತೆಗೆದು ಕೊಳ್ಳಬೇಕು. ಅಂತರಾ ಸ್ಥಿತಾನಾಂ – ಇಲ್ಲಿ 'ಸ್ಥಿತಾನಾಂ' ಎಂಬ ಪದವು ಶೇಷ ಪೂರಣವಾಗಿದೆ – ಸಮ್ಯಗ್ಜ್ಞಾನ, ವಿಪರೀತಜ್ಞಾನ ಇವುಗಳ ಮಧ್ಯೆ ಇರುವವರಿಗೆ, ಮಾನವರಿಗೆ ಎಂದು ತಾತ್ಪರ್ಯ, ಅನಭಿಭವ ಏವ - ಮಿಶ್ರಬುದ್ಧಿಯೇ ಹೊರತು ಜ್ಞಾನಾದಿಗಳ ಪ್ರಾಪ್ತಿಯಿಲ್ಲ ಎಂದು ಅರ್ಥ.

### 'ಅಪಿ ತು ತದ್ದೃಷ್ಟೇಃ' ಎಂಬ ಸೂತ್ರಭಾಗದ ವ್ಯಾಖ್ಯಾನ

ಅಪಿ - ಮಿಶ್ರಬುದ್ಧಿಗಳಿಗೂ ಸ್ವಭಾವದ ನಾಶವಿಲ್ಲ. ಏಕೆಂದರೆ, ತದ್ದೃಷ್ಟೇಃ – '[1]ತತ್' ಶಬ್ದವು ಅನೇಕ ರೀತಿಯಾಗಿ ಉಪಕಾರಕವಾಗಿದೆ. 'ತು' ಶಬ್ದವು ವಿಶೇಷಾರ್ಥಕವಾಗಿದೆ. ತೇಷಾಂ – ಆ ಮಿಶ್ರಬುದ್ಧಿಗಳಾದ ಮಾನವರಿಗೆ, ತತ್ರ – ಮಿಶ್ರಬುದ್ಧಿಯಲ್ಲೇ, ತಸ್ಯ – ದಾರ್ಢ್ಯದ ಇರುವಿಕೆಯು, ತು - ವಿಶೇಷವಾಗಿ, ದೃಷ್ಟೇಃ - ಕಂಡುಬರುವುದರಿಂದ ಎಂದು ಅರ್ಥ.

---

1. ಮುಂದೆ ಸ್ಪಷ್ಟವಾಗುವಂತೆ ತೇಷಾಂ, ತತ್ರ, ತಸ್ಯ ಎಂದು ಅನೇಕಾರ್ಥಗಳನ್ನು ಕೊಡುವ ಮೂಲಕ ಉಪಕಾರಕವಾಗಿದೆ.

देवासुरमनुष्याणामेवं स्वभावत्वं कुतः ? तथात्वे फलस्यापि तदनुगुणत्वापत्तेरित्यत आह—

॥ ॐ अपि स्मर्यते ॐ ॥ ३.४.३७

'असुरा आसुरेण' इति स्मृत्या तादृक्स्वभावत्वं तदनुगुणफलमिति तद्द्वयं स्मर्यतेऽपीत्यर्थः ।

---

ದೇವಾಸುರಮನುಷ್ಯರಿಗೆ ಸಮ್ಯಗ್‌ಜ್ಞಾನ ಮೊದಲಾದವುಗಳು ಸ್ವಭಾವವಾಗಿದೆ ಎಂಬುದಕ್ಕೆ ಆಧಾರವೇನು ? ಸಮ್ಯಗ್‌ಜ್ಞಾನಾದಿಗಳು ಹಾಗೆ ಅವರಿಗೆ ಸ್ವಭಾವವಾಗಿರುವುದಾದಲ್ಲಿ ಫಲವೂ ಅದಕ್ಕೆ ಅನುಗುಣವಾಗಿರಬೇಕಾಗುವುದು ಎಂಬ ಆಶಂಕೆಗೆ ಉತ್ತರ—

ಓಂ ಅಪಿ ಸ್ಮರ್ಯತೇ ಓಂ ೩.೪.೩೭

**ಸೂತ್ರಾರ್ಥ**

'[1]ಅಸುರಾ ಅಸುರೇಣ' ಎಂಬ ಸ್ಮೃತಿಯಿಂದ ದೇವಾದಿಗಳಿಗೆ ಅಂತಹ ಸ್ವಭಾವವಿರುವುದು ಮತ್ತು ತದನುಗುಣವಾದ ಫಲವಿರುವುದು – ಇವೆರಡೂ ಸ್ಮೃತಿಸಿದ್ಧವೂ ಆಗಿದೆ ಎಂದು ಅರ್ಥ.

---

1. ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ ।
ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್ ॥
ದೇವಾ ದೈವಸ್ವಭಾವೇನ ಕರ್ಮಣಾ ಚಾಪ್ಯಸಂಶಯಮ್ ।
ಸಮ್ಯಗ್ ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಮ್ ॥
ನಾನಯೋರನ್ಯಥಾಭಾವಃ ಕದಾಚಿತ್ ಕ್ವಾಪಿ ವಿದ್ಯತೇ ।
ಮಾನುಷಾ ಮಿಶ್ರಮತಯೋ ವಿಮಿಶ್ರಗತಯೋಽಪಿ ಚ ॥

ಸ್ಕಾಂದಪುರಾಣ

ಅಯೋಗ್ಯರು ತಮ್ಮ ತಾಮಸಸ್ವಭಾವದಿಂದ ಮತ್ತು ಅದಕ್ಕನುಸಾರಿಯಾದ ಕರ್ಮ ಮತ್ತು ವಿಪರೀತಜ್ಞಾನದಿಂದ ನಿಃಸಂದೇಹವಾಗಿ ತಮೋಗತಿಯನ್ನು ಪಡೆಯುವರು. ಮುಕ್ತಿಯೋಗ್ಯರು ಸಾತ್ತ್ವಿಕಸ್ವಭಾವ ಮತ್ತು ತದನುಸಾರಿಯಾದ ಕರ್ಮ-ಜ್ಞಾನಗಳಿಂದ ನಿಃಸಂಶಯ

इतश्च देवानामेव सम्यग्ज्ञानतत्फले, नान्येषामित्याह—

॥ ॐ विशेषानुग्रहं च ॐ ॥ ३.४.३८

देवेष्वीशस्य विशेषानुग्रहं च 'शृण्वे वीर उग्रमुग्रम्' इति श्रुतिर्दर्शयतीत्यस्ति । अतश्च तद्धेतुज्ञानमपि तेषामेवेत्यर्थः ।

---

ಈ ಮುಂದಿನ ಕಾರಣದಿಂದಲೂ ದೇವತೆಗಳಿಗೆ ಸಮ್ಯಗ್‌ಜ್ಞಾನ ಮತ್ತು ಅದರ ಫಲಗಳು, ಇತರರಿಗಲ್ಲ ಎಂದು ಹೇಳುವ ಸೂತ್ರ—

ಓಂ ವಿಶೇಷಾನುಗ್ರಹಂ ಚ ಓಂ ೩.೪.೩೮

**ಸೂತ್ರಾರ್ಥ**

ದೇವತೆಗಳ ವಿಷಯದಲ್ಲಿ ಭಗವಂತನಿಗೆ ವಿಶೇಷಾನುಗ್ರಹವನ್ನು '[1]ಶೃಣ್ವೇ ವೀರ ಉಗ್ರಮುಗ್ರಂ' ಎಂಬ ಶ್ರುತಿಯು ಪ್ರತಿಪಾದಿಸುತ್ತದೆ. 'ಪ್ರತಿಪಾದಿಸುತ್ತಿದೆ' ಎಂಬ ಪದವು ಇಲ್ಲಿ ಅಧ್ಯಾಹೃತವಾಗಿದೆ. ಆದ್ದರಿಂದಲೇ ಆ ವಿಶೇಷಾನುಗ್ರಹಕ್ಕೆ ಕಾರಣವಾದ ಜ್ಞಾನವೂ ಅವರಿಗೇ ಎಂದು ಅರ್ಥ.

---

ವಾಗಿ ಸರ್ವೋತ್ತಮನಾದ ಶ್ರೀಹರಿಯನ್ನು ಸೇರುವರು. ಈ ದೈವಾಸುರಸ್ವಭಾವಗಳಾಗಲಿ ಅವುಗಳ ಫಲಗಳಾಗಲಿ ಎಂದೂ, ಯಾವ ವ್ಯಕ್ತಿಯ ವಿಷಯದಲ್ಲೂ ವ್ಯತ್ಯಾಸ ಹೊಂದಲಾರವು. ನಿತ್ಯಸಂಸಾರಯೋಗ್ಯರೂ, ಸಮ್ಯಗ್ - ವಿಪರೀತಜ್ಞಾನ ಮಿಶ್ರವಾದ ರಾಜಸಬುದ್ಧಿಯ ಚೇತನರು ತಮ್ಮ ಸ್ವಭಾವಾನುಗುಣ ಕರ್ಮ-ಜ್ಞಾನಗಳಿಂದ ವಿಮಿಶ್ರಫಲವನ್ನು ಪಡೆಯುವರೆಂದು ಭಾವ.

1. ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿ ನೇನೀಯಮಾನಃ ।
ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥ (ಋ, ೬.೪೭.೧೬)

ತನ್ನ ಸಂಕಲ್ಪಕ್ಕನುಗುಣವಾಗಿ ಕಾರ್ಯಗಳನ್ನು ಸಮಾಪ್ತಿಗೊಳಿಸುವ ಕಾರಣ ವೀರನೆಂದೆನಿಸುವ ಪರಮೇಶ್ವರನಾದ ನರಸಿಂಹನು ದುಷ್ಟಸ್ವಭಾವದ ಅಸುರರೆಲ್ಲರನ್ನೂ ನಿತ್ಯನರಕವನ್ನು ಹೊಂದುವಂತೆ ಮಾಡುತ್ತ, ದುಷ್ಟಸ್ವಭಾವರಲ್ಲದ ಸಾತ್ತ್ವಿಕರನ್ನು ಸಂಸಾರದಿಂದ ದಾಟಿಸಿ ತನ್ನ ಸ್ಥಾನಕ್ಕೆ ಕರೆದೊಯ್ಯುವವನಾಗಿ, ತನ್ನ ಯೋಗ್ಯತೆಯನ್ನು ಮೀರಿ ಬೆಳೆಯುವವನನ್ನು ಸಹಿಸದ ಕಾರಣ 'ಏಧಮಾನದ್ವಿಟ್' ಎಂದು ವೇದಾದಿಗಳಲ್ಲಿ ಶ್ರುತನಾಗಿದ್ದಾನೆ. ಹೀಗೆ ದೇವಾಸುರವರ್ಗಕ್ಕೆ ರಾಜನಾದ ಆ ಭಗವಂತನು ಸ್ವರ್ಗಾದಿಫಲಗಳನ್ನುದ್ದೇಶಿಸಿ ಕರ್ಮಗಳನ್ನು ಮಾಡುವ ಕಾರಣ ವೈಶ್ಯರೆಂದೆನಿಸುವ ಮಧ್ಯಮಜೀವರನ್ನು ನಿತ್ಯವೂ ಸಂಸಾರದಲ್ಲೇ ತಿರುಗಿಸುವನು ಎಂದು ಶ್ರುತಿಯ ಭಾವ.

दैत्यानां स्वभावाभिभवो नेत्येतद् युक्त्याऽह–

॥ ॐ अतस्त्वितरज्ज्यायो लिङ्गाच्च ॐ ॥ ३.४:३९

अत इति विशेषेति प्रस्तुतदेवभागस्य परामर्शः। तुरेव। अग्रेऽन्वेति। अतो देवभागादितरदसुरजातमेव ज्यायः अतिबहुलमस्ति यतोऽतः स्वभावानभिभव इत्यनुषङ्गः। अन्यथा देवभागादूनता स्यादिति भावः। ज्यायस्त्वमेव कुतः? लिङ्गात्, 'तस्मान्न

---

ದೈತ್ಯರ ಸ್ವಭಾವಕ್ಕೆ ನಾಶವಿಲ್ಲವೆನ್ನುವುದನ್ನು ಯುಕ್ತಿಯಿಂದ ಸಮರ್ಥಿಸುವ ಸೂತ್ರ—

**ಓಂ ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ಓಂ ೩.೪.೩೯**

**ಸೂತ್ರಾರ್ಥ**

ಸೂತ್ರದಲ್ಲಿರುವ 'ಅತಃ' ಶಬ್ದವು 'ವಿಶೇಷಾನುಗ್ರಹಂ ಚ' (ಬ್ರ.ಸೂ. ೩.೪.೩೮) ಎಂಬಲ್ಲಿ ಪ್ರಸ್ತುತವಾಗಿರುವ ದೇವತೆಗಳ ಭಾಗವನ್ನು ಪರಾಮರ್ಶಿಸುವುದು. 'ತು' ಶಬ್ದಕ್ಕೆ 'ಏವ' ಎಂದು ಅರ್ಥ. ಮುಂದಿನ ಪದದೊಂದಿಗೆ ಅನ್ವಯವನ್ನು ಪಡೆಯುವುದು.

ಅತಃ - ದೇವತೆಗಳ ಭಾಗಕ್ಕಿಂತಲೂ, ಇತರತ್ ತು - ಭಿನ್ನವಾದ ಅಸುರ ಸಮೂಹವೇ, ಜ್ಯಾಯಃ - ಅತಿಬಹುಲವಾಗಿದೆ. ಆದಕಾರಣದಿಂದಲೇ ದೈತ್ಯರ ಸ್ವಭಾವಕ್ಕೆ ಅಭಿಭವವಿಲ್ಲ. ಇಲ್ಲಿ 'ಅಭಿಭವವಿಲ್ಲ' ಎಂಬ ಪದವು 'ಅನಭಿಭವಂ ಚ ದರ್ಶಯತಿ' (ಬ್ರ.ಸೂ. ೩.೪.೩೫) ಎಂಬ ಸೂತ್ರದಿಂದ ಅನುವೃತ್ತವಾಗಿದೆ. ದೈತ್ಯ ಸ್ವಭಾವಕ್ಕೆ ನಾಶವಾಗಬಹುದಾಗಿದ್ದರೆ ದೇವಭಾಗಕ್ಕಿಂತಲೂ ಅಸುರಭಾಗವು ಅಲ್ಪವಾಗಬೇಕಾಗಿದ್ದಿತೆಂದು ಭಾವ.

ಅಸುರಭಾಗ ಬಹುಲವಾದದ್ದು ಎನ್ನಲು ಆಧಾರವೇನು ಎಂಬ ಶಂಕೆಗೆ

जनतामियात्' इति जनसङ्घाप्रवेशोक्त्यन्यथानुपपत्तिरूपलिङ्गात् । 'कनीयसा एव देवा ज्यायसा आसुराः' इति श्रुतेश्चेति चार्थः ।

जैमिनिमतेनाप्येषोऽर्थः सिद्ध इत्याह—

॥ ॐ तद्भूतस्य तु तद्भावो जैमिनेरपि नियमा-
तद्रूपाभावेभ्यः ॐ ॥ ३.४.४०

तदिति प्रस्तुतदेवादित्रयपरामर्शः । तुरेव । भू प्राप्तौ ।

---

ಉತ್ತರ – ಲಿಂಗಾತ್. '[1]ತಸ್ಮಾನ್ನ ಜನತಾಮಿಯಾತ್' – 'ಜನಸಮೂಹವನ್ನು ಪ್ರವೇಶಿಸತಕ್ಕದ್ದಲ್ಲ' ಎಂದು ಹೇಳಿರುವುದು ಅಸುರಭಾಗವು ಬಹುಳವಾಗಿಲ್ಲದಿದ್ದರೆ ಯುಕ್ತವಾಗಲಾರದು ಎಂಬ ಲಿಂಗದಿಂದ. '[2]ಕನೀಯಸಾ ಏವ ದೇವಾ ಜ್ಯಾಯಸಾ ಅಸುರಾಃ' ಎಂಬ ಶ್ರುತಿಯಿಂದಲೂ ಕೂಡ, ಎಂದು ಸೂತ್ರದಲ್ಲಿರುವ 'ಚ' ಶಬ್ದದ ಅರ್ಥವಾಗಿದೆ.

ಜೈಮಿನಿಮತದಿಂದಲೂ ಇದೇ ವಿಷಯವು ಸಿದ್ಧವಾಗುವುದು ಎಂದು ಹೇಳುವ ಸೂತ್ರ—

ಓಂ ತದ್ಭೂತಸ್ಯ ತು ತದ್ಭಾವೋ ಜೈಮಿನೇರಪಿ
ನಿಯಮಾತದ್ರೂಪಾಭಾವೇಭ್ಯಃ ಓಂ ೩.೪.೪೦

**ಸೂತ್ರಾರ್ಥ**

'ತದ್ಭೂತಸ್ಯ' ಎಂಬಲ್ಲಿರುವ 'ತತ್' ಶಬ್ದವು ಪ್ರಸ್ತುತರಾಗಿರುವ ದೇವತೆಗಳು, ಅಸುರರು ಮತ್ತು ಮನುಷ್ಯರು - ಈ ಮೂವರನ್ನು ಪರಾಮರ್ಶಿಸುವುದು. 'ತು'

---

1. 'ತಸ್ಮಾತ್ ನ ಜನತಾಮಿಯಾತ್' (ಬೃ. ೩.೩.೧೦)
'ಅಸುರಾ ಬಹುಲಾ ಯಸ್ಮಾತ್ ತಸ್ಮಾನ್ನ ಜನತಾಮಿಯಾತ್' (ಬ್ರಾಹ್ಮಪುರಾಣ)
2. 'ತತಃ ಕನೀಯಸಾ ಏವ ದೇವಾ ಜ್ಯಾಯಸಾ ಅಸುರಾಃ' (ಬೃ. ೩.೩.೧)

तद्भूतस्य तत्त्वं देवादित्वं प्राप्तस्यैव देवादेस्तद्भावो देवादिभावः जैमिनेरपि सिद्धः। न व्यासस्यैवेत्यपेरर्थः। तेन पुरुषार्थनय इव व्यवस्थितविकल्पो नेति सूचयति। कुतः ? नियमातद्रूपाभावेभ्यः। एतेन नियमादिश्रुतिर्लक्ष्यते। तद्रूपं प्राग्विद्यमानस्वभावः। तन्नेत्यतद्रूपम्। भावप्रधानम्। अभावः अभूतिः। भूतेरप्युपलक्षणम्। 'नासुरा

---

ಶಬ್ದವು 'ಏವ' ಎಂಬ ಅರ್ಥವುಳ್ಳದ್ದು. 'ಭೂತಸ್ಯ' ಎಂಬಲ್ಲಿ ಭೂಧಾತುವು ಪ್ರಾಪ್ತಿ ಎಂಬಅ ರ್ಥವನ್ನು ಹೊಂದಿದೆ.

ತದ್ಭೂತಸ್ಯ - ದೇವತ್ವಾದಿಗಳನ್ನು ಪಡೆದಿರುವ ದೇವಾದಿಗಳಿಗೇ, ತದ್ಭಾವಃ - ದೇವತ್ವಾದಿ ಧರ್ಮವಿರುವುದೆನ್ನುವುದು, ಜೈಮಿನೇರಪಿ[1] -ಜೈಮಿನಿಗೂ ಸಿದ್ಧವಾಗಿದೆ. ವ್ಯಾಸರಿಗೆ ಮಾತ್ರವಲ್ಲ ಎಂದು ಅಪಿಶಬ್ದದ ಅರ್ಥ. ಅದರಿಂದ ಪುರುಷಾರ್ಥಾಧಿಕರಣ ದಂತೆ ಇಲ್ಲಿ ವ್ಯವಸ್ಥಿತವಿಕಲ್ಪವಿಲ್ಲವೆಂದು ಸೂತ್ರಕಾರರು ಸೂಚಿಸುತ್ತಿದ್ದಾರೆ.

ದೇವಾದಿಗಳ ಸ್ವಭಾವಕ್ಕೆ ನಾಶವಿಲ್ಲವೆಂದು ಜೈಮಿನಿಗಳು ಅಂಗೀಕರಿಸಲು ಕಾರಣವೇನು ಎಂಬ ಶಂಕೆಗೆ ಉತ್ತರ – 'ನಿಯಮಾತದ್ರೂಪಾಭಾವೇಭ್ಯಃ' ಎಂದು. ಸೂತ್ರದಲ್ಲಿರುವ 'ನಿಯಮಾತದ್ರೂಪಾಭಾವ' ಪದವು ನಿಯಮಾದಿಗಳನ್ನು ಹೇಳುವ

---

1. ಮೋಕ್ಷೇತರವಾದ ಸ್ವರ್ಗಾದಿಫಲಕ್ಕೆ ಕರ್ಮವೇ ಸಾಧನ, ಜ್ಞಾನವು ಕರ್ಮಶೇಷ ವಾದುದು ಎಂಬ ಜೈಮಿನಿಮತ ಮನುಷ್ಯರಾದ ಅಧಿಕಾರಿಗಳನ್ನು ಕುರಿತದ್ದು. ಅಂತಹ ಸ್ವರ್ಗಾದಿಗಳಿಗೂ ಜ್ಞಾನವೇ ಸಾಧನ, ಕರ್ಮಗಳು ಜ್ಞಾನಕ್ಕೆ ಅಂಗವಾದದ್ದು ಎಂಬ ವ್ಯಾಸ ಮತ ದೇವತೆಗಳನ್ನು ಕುರಿತದ್ದು ಎಂಬುದಾಗಿ ಪುರುಷಾರ್ಥಾಧಿಕರಣದಲ್ಲಿ ಅಧಿಕಾರಿಬೇಧದಿಂದ ಜೈಮಿನಿ-ವ್ಯಾಸಮತಗಳ ವ್ಯವಸ್ಥೆಯನ್ನು ತೋರಿಸಿ ವಿರೋಧವನ್ನು ಪರಿಹರಿಸಲಾಗಿದೆ. ಪ್ರಕೃತ, ದೇವಾದಿಗಳ ಸ್ವಭಾವಕ್ಕೆ ಎಂದೂ ನಾಶವಿಲ್ಲವೆಂಬ ವಿಷಯದಲ್ಲಿ ಜೈಮಿನಿ-ವ್ಯಾಸರಿಗೆ ಸಹಮತಿ ಇರುವುದರಿಂದ ಪುರುಷಾರ್ಥಾಧಿಕರಣದಲ್ಲಿ ಹೇಳಿದಂತೆ ಅಧಿಕಾರಿಭೇದ ಮೊದಲಾದವು ಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಜೈಮಿನಿ-ವ್ಯಾಸಮತಗಳ ವ್ಯವಸ್ಥೆಯನ್ನು ಹೇಳುವ ಅವಶ್ಯ ಕತೆ ಇಲ್ಲವೆಂದು ಭಾವ.

दैवीम्' इति नियमश्रुतेः । 'नासुराणां दैवं रूपं' इत्यतद्रूपत्वश्रुतेः । 'तं भूतिरिति देवा उपासांचक्रिरे ते बभूवुः', 'अभूतिरित्यसुरास्ते पराबभूवुः' इति देवासुरभूत्यभूतिश्रुतेरित्यर्थः ॥ ५ ॥

---

ಶ್ರುತಿಯನ್ನು ಲಕ್ಷಣಯಾ ಹೇಳುವುದು. 'ತದ್ರೂಪ' ಎಂದರೆ ಹಿಂದೆ ಇದ್ದ ಸ್ವಭಾವ. ಅದಲ್ಲದ್ದು 'ಅತದ್ರೂಪ', 'ಅತದ್ರೂಪ' ಶಬ್ದವು ಭಾವಪ್ರಧಾನವಾಗಿದೆ. 'ಅಭಾವ' ಎಂದರೆ ಅಭೂತಿ. ಭೂತಿಯನ್ನೂ ಇಲ್ಲಿ ಲಕ್ಷಣಯಾ ಗ್ರಹಿಸಬೇಕು. '[1]ನಾಸುರಾ ದೈವೀಂ' ಎಂದು ನಿಯಮವನ್ನು ಹೇಳುವ ಶ್ರುತಿಯಿಂದ, '[2]ನಾಸುರಾಣಾಂ ದೈವಂ ರೂಪಂ' ಎಂದು ಅತದ್ರೂಪತ್ವವನ್ನು ಹೇಳುವ ಶ್ರುತಿಯಿಂದ, '[3]ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ತೇ ಬಭೂವುಃ, ಅಭೂತಿರಿತ್ಯಸುರಾಸ್ತೇ ಪರಾಬಭೂವುಃ' ಎಂದು ದೇವಾಸುರರಿಗೆ ಭೂತಿ ಮತ್ತು ಅಭೂತಿಯನ್ನು ಹೇಳುವ ಶ್ರುತಿಯಿಂದ ಎಂದು ಅರ್ಥ.

---

1. 'ನಾಸುರಾ ದೈವೀಂ ನ ದೇವಾ ಆಸುರೀಂ ನ ಮನುಷ್ಯಾ ದೈವೀಮಾಸುರೀಂ ಚ ಗತಿಮಿಾಯುರಾತ್ಮೀಯಾಮೇವ ಜಾತಿಮನುಭವಂತಿ' ಎಂದು ಶ್ರುತಿ. ಈ ಶ್ರುತಿಯು ದೇವಾಸುರಮನುಷ್ಯರು ತಮ್ಮ ತಮ್ಮ ಸ್ವಭಾವದಂತೆ ಎಂದೆಂದೂ ಇರುವುದು. ಎಂದಿಗೂ ಬದಲಾಯಿಸುವುದಿಲ್ಲವೆಂಬ ನಿಯಮವನ್ನು ಹೇಳುವುದು.

2. 'ನಾಸುರಾಣಾಂ ದೈವಂ ರೂಪಂ ನ ದೇವಾನಾಮಾಸುರಂ ನ ಚೋಭಯಂ ಮನುಷ್ಯಾಣಾಂ ಯೋ ಯದ್ರೂಪಃ ಸ ತದ್ರೂಪೋ ನಿಸರ್ಗೋ ಹ್ಯೇಷ ಭವತಿ' ಎಂಬ ಶ್ರುತಿಯು ದೇವಾದಿಗಳಿಗೆ ಅವರವರ ಸ್ವಭಾವಕ್ಕನುಗುಣವಾದ ರೂಪ ಎಂದರೆ ಸಮ್ಯಗ್ ಜ್ಞಾನಾದಿ ಧರ್ಮಗಳಿರುತ್ತವೆ ಹೊರತು ವಿಭಿನ್ನವಾದ ರೂಪವಲ್ಲ ಎಂದು ಅತದ್ರೂಪತ್ವವನ್ನು ಹೇಳುವ ಶ್ರುತಿಯಾಗಿದೆ.

3. 'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ತೇ ಬಭೂವುಸ್ತಸ್ಮಾದ್ಧಾ ಅಪ್ಯೇತರ್ಹಿ ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತ್ಯಭೂರಿತ್ಯಸುರಾಸ್ತೇ ಹ ಪರಾಬಭೂವುಃ' (ಐ. ಆ. ೨.೧.೮) ಎಂದು ಶ್ರುತಿ.

### आधिकारिकाधिकरणम् —६

॥ ॐ न चाधिकारिकमपि पतनानुमानात्तदयोगात् ॐ ॥
३.४.४१

अत्र ज्ञानस्य देवादिपदानाकाङ्क्षिभिरेव प्राप्यत्वं साध्यते। चशब्दो ज्ञाने प्रागुक्तोर्ध्वरेतस्त्वादीतिकर्तव्यतातो देवादिपदानाकाङ्क्षित्वाख्येतिकर्तव्यतान्तरसूचकः। अपिः कैमुत्यसूचनार्थम्।

---

### ಅಧಿಕಾರಿಕಾಧಿಕರಣಮ್—೬

ಓಂ ನ ಚಾಧಿಕಾರಿಕಮಪಿ
ಪತನಾನುಮಾನಾತ್ತದಯೋಗಾತ್ ಓಂ ೩.೪.೪೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ದೇವಾದಿಪದವನ್ನು ಬಯಸದಿರುವವರಿಂದಲೇ ಬ್ರಹ್ಮಜ್ಞಾನವನ್ನು ಪಡೆಯಲು ಸಾಧ್ಯವೆಂದು ಸಮರ್ಥಿಸಲಾಗುವುದು. ಹಿಂದೆ ಬ್ರಹ್ಮಜ್ಞಾನ

---

ಮುಕ್ತಿಯೋಗ್ಯರು ಪರಮಾತ್ಮನನ್ನು ಜ್ಞಾನೈಶ್ವರ್ಯಾದಿರೂಪವಾದ ಭೂತಿಯನ್ನು ಕೊಡತಕ್ಕವನೆಂದೂ, ಅಂತಹ ಭೂತಿಸ್ವರೂಪನೆಂದೂ ಉಪಾಸನೆ ಮಾಡಿದರು. ಆ ನಿಮಿತ್ತದಿಂದ ಭೂತಿಯನ್ನು ಪಡೆದರು. ದೇವತೆಗಳು ಭೂತಿಯೆಂದು ಪರಮಾತ್ಮನನ್ನು ಉಪಾಸನೆ ಮಾಡುವವರಾದ್ದರಿಂದಲೇ ಈಗಲೂ ಸರ್ವದೇವೋತ್ತಮರಾದ, ಸುಪ್ತಜನರಲ್ಲಿರುವ ವಾಯುದೇವರು ಭಗವಂತನನ್ನು 'ಭೂಃ ಭೂಃ' - ಜ್ಞಾನೈಶ್ವರ್ಯಾದಿಪ್ರದನೂ ಜ್ಞಾನೈಶ್ವರ್ಯಾದಿಸ್ವರೂಪನೂ ಆಗಿರುವನೆಂದು ಶ್ವಾಸರೂಪದಿಂದ ಸ್ತುತಿಸುವರು. ಅಯೋಗ್ಯರಾದ ಅಸುರರು ಆ ಭಗವಂತನನ್ನು 'ಅಭೂಃ' ಅಂದರೆ ತಮಗೆ ಅನೈಶ್ವರ್ಯಾದಿಗಳನ್ನು ಕೊಡತಕ್ಕವನು ಮತ್ತು ಅನೈಶ್ವರ್ಯಾದಿಸ್ವರೂಪನೆಂದು ಉಪಾಸನೆ ಮಾಡುವರು. ಅದ್ದರಿಂದಲೆ ಅವರು ಭೂತ್ಯಾದಿಗುಣಹೀನರಾಗಿ ನಿತ್ಯನರಕರೂಪವಾದ ಪರಾಭವವನ್ನು ಪಡೆಯುವರು ಎಂದು ಶ್ರುತಿಯ ಭಾವ.

यस्य यस्मिन् पदेऽधिकारः श्रुत्यादिसिद्धः तद् ब्रह्मादिदेवपदम् आधिकारिकं तदपि ज्ञानार्थिना नाकाङ्क्ष्यं किम्वैशमैयं नाकाङ्क्ष्यमिति। कुतः? तदयोगात्। तदाकाङ्क्षाया अयोगादित्यर्थः। तदयोगः कुतः? पतनानुमानात्। अयोग्यमारोढुं यतमानस्य लोके पतनोपलम्भेन इहापि ब्रह्मादिपदाकाङ्क्षावान् पतति। अयोग्यारोह-

---

ವನ್ನು ಕುರಿತು ಆವಶ್ಯಕವೆಂದು ಹೇಳಲಾದ ಬ್ರಹ್ಮಚರ್ಯವೇ ಮೊದಲಾದ ಇತಿಕರ್ತವ್ಯತಾ[1]ಕ್ಕಿಂತ ಬೇರೆಯಾದ 'ದೇವಾದಿಪದವನ್ನು ಬಯಸದಿರುವಿಕೆ ಎಂಬ' ಇತಿಕರ್ತವ್ಯತಾವನ್ನು ಸೂತ್ರದಲ್ಲಿರುವ 'ಚ' ಶಬ್ದವು ಸೂಚಿಸುವುದು. 'ಅಪಿ' ಶಬ್ದವು ಕೈಮುತ್ಯಸೂಚಕವಾಗಿದೆ.

ಯಾರಿಗೆ ಯಾವ ಪದದಲ್ಲಿ ಅಧಿಕಾರವಿದೆಯೆಂದು ಶ್ರುತ್ಯಾದಿಪ್ರಮಾಣಗಳಿಂದ ಸಿದ್ಧವಾಗಿದೆಯೋ ಆ ಬ್ರಹ್ಮಾದಿದೇವಪದವು ಆಧಿಕಾರಿಕವೆನಿಸುವುದು. ಆ ಆಧಿಕಾರಿಕವಾದ ಬ್ರಹ್ಮಾದಿಪದವೂ ಬ್ರಹ್ಮಜ್ಞಾನಾರ್ಥಿಯಾದ ಪುರುಷನಿಂದ ಬಯಸಲ್ಪಡತಕ್ಕದ್ದಲ್ಲ; ಭಗವಂತನ ಐಶ್ವರ್ಯವನ್ನು ಬಯಸತಕ್ಕದ್ದಲ್ಲವೆಂದು ಹೇಳುವುದೇಸು? ಏಕೆಂದರೆ, ತದಯೋಗಾತ್ – ಅಂತಹ ಬಯಕೆಯೇ ಯುಕ್ತವಲ್ಲದ್ದರಿಂದ ಎಂದು ಅರ್ಥ. ಅಂತಹ ಆಕಾಂಕ್ಷೆಯೇ ಯುಕ್ತವಲ್ಲವೇಕೆ? ಎಂಬ ಶಂಕೆಗೆ ಉತ್ತರ – ಪತನಾನುಮಾನಾತ್ – ತನಗೆ ಹತ್ತಲು ಯೋಗ್ಯವಲ್ಲದ ವೃಕ್ಷಾದಿಗಳನ್ನು ಹತ್ತಲು ಪ್ರಯತ್ನಿಸುವವನು ಪತನ ಹೊಂದುವುದು ಲೋಕದಲ್ಲಿ ಕಂಡಿರುವುದರಿಂದ ಪ್ರಕೃತ, 'ಬ್ರಹ್ಮಾದಿಪದದ ಆಕಾಂಕ್ಷೆಯುಳ್ಳವನೂ ಪತನ ಹೊಂದುತ್ತಾನೆ; ತನಗೆ ಯೋಗ್ಯವಲ್ಲದ ಸ್ಥಾನವನ್ನು ಪಡೆಯುವ ಪ್ರಯತ್ನವುಳ್ಳವನಾದ್ದರಿಂದ, ಎಂದು ಭಾವ. ಅಥವಾ 'ಪತನಾನುಮಾನಾತ್' ಎಂದರೆ '[2]ವಿಮತನಾದ ವ್ಯಕ್ತಿಯು ದೇವಾದಿಗಳಿಂದ ಪತನಹೊಂದುವಂತೆ ಮಾಡಲ್ಪಡು

---

1. ಇತಿಕರ್ತವ್ಯತಾ – ಮುಖ್ಯಕಾರಣಕ್ಕೂ ಕಾರ್ಯಕ್ಕೂ ಮಧ್ಯವರ್ತಿಯಾಗಿರುವ ಕಾರಣ.

2. ಅಯೋಗ್ಯವಾದ ಪದವನ್ನು ಪಡೆಯಲು ಬಯಸುವ, ಪತನ ಹೊಂದುವನೋ ಇಲ್ಲವೋ ಎಂದು ವಿವಾದಗ್ರಸ್ತನಾದ ವ್ಯಕ್ತಿ.

प्रयत्नवत्त्वादिति भावः । विमतो देवादिभिः पात्यते, अशक्यतत्पदे-च्छुत्वात् राजपदेच्छुवदिति वा पतनानुमानादित्यर्थः । आद्ये इच्छाया यत्नविशेषत्वोपगमान्नासिद्धिः ।

देवपदमिति वाच्ये आधिकारिकमित्युक्तिः तत्तदधिकारिभिः प्राप्यं तदन्यैर्नाकाङ्क्ष्यमिति सूचयितुम् । तेन योग्यानामपि तत्तदाकाङ्क्षावतां ज्ञानानवाप्तिः अनुमानबाधादिदोषश्च स्यादिति शङ्कानवकाशः

---

ತ್ತಾನೆ. ತನಗೆ ಹೊಂದಲು ಶಕ್ಯವಲ್ಲದ ಆ ದೇವಾದಿಗಳ ಪದವನ್ನು ಇಚ್ಛಿಸುವವನಾದ್ದರಿಂದ, ರಾಜಪದವಿಯನ್ನು ಬಯಸುವವನಂತೆ' ಎಂಬ ಅನುಮಾನದಿಂದ ಎಂದು ಅರ್ಥ. [1]ಮೊದಲನೆ ಅನುಮಾನದಲ್ಲಿ ಇಚ್ಛೆಯನ್ನು ಪ್ರಯತ್ನವಿಶೇಷವೆಂದು ಅಂಗೀಕರಿಸಿರುವುದರಿಂದ ಅನುಮಾನಕ್ಕೆ ಅಸಿದ್ಧಿದೋಷವಿಲ್ಲ.

### ಸೂತ್ರದಲ್ಲಿ 'ಅಧಿಕಾರಿಕ' ಪದಪ್ರಯೋಗದ ಸ್ವಾರಸ್ಯ

ಆಯಾಯಾ ಅಧಿಕಾರಿಗಳು ಹೊಂದಲು ಅರ್ಹವಾದ ಪದವನ್ನು ಅನ್ಯರು ಬಯಸತಕ್ಕದ್ದಲ್ಲ ಎಂಬುದನ್ನು ಸೂಚಿಸಲು 'ದೇವಪದಂ' ಎಂದು ಹೇಳಬೇಕಾಗಿದ್ದರೂ ಅದರ ಬದಲು 'ಆಧಿಕಾರಿಕಂ' ಎಂದು ಹೇಳಲಾಗಿದೆ. ಹೀಗೆ ಹೇಳಿದ್ದರಿಂದ, ಆಯಾ ಪದಪ್ರಾಪ್ತಿಯ ಅರ್ಹತೆ ಇದ್ದವರಿಗೂ ಕೂಡ ಆ ಪದದ ಆಕಾಂಕ್ಷೆ ಇದ್ದುದಾದರೆ ಜ್ಞಾನಪ್ರಾಪ್ತಿಯಾಗದಿರಲಿ, ಅನುಮಾನಕ್ಕೆ ಬಾಧ ಮೊದಲಾದ ದೋಷಗಳೂ ಬರಲಿ ಎಂಬ ಶಂಕೆಗೆ ಅವಕಾಶವಿಲ್ಲ[2].

---

1. ಬ್ರಹ್ಮಾದಿಪದದ ಆಕಾಂಕ್ಷೆಯುಳ್ಳವನು ಪತನ ಹೊಂದುವನು, ಅಯೋಗ್ಯವನ್ನು ಪಡೆಯುವ ಪ್ರಯತ್ನವುಳ್ಳವನಾದ್ದರಿಂದ ಎಂಬ ಅನುಮಾನದಲ್ಲಿ ಕೇವಲ ಅಂತಹ ಆಕಾಂಕ್ಷೆಯುಳ್ಳವನು ಪತನಹೊಂದುವನೆಂದು ವಿವಕ್ಷೆ ಇರುವುದರಿಂದ, ಅವನಲ್ಲಿ ಪ್ರಯತ್ನರೂಪವಾದ ಹೇತು ಇಲ್ಲದಿರುವುದರಿಂದ ಅಸಿದ್ಧಿಯೆಂಬ ದೋಷವೆಂದು ಶಂಕೆ. ಇಚ್ಛೆಯನ್ನು ಪ್ರಯತ್ನವಿಶೇಷವೆಂದು ಅಂಗೀಕರಿಸಿರುವುದರಿಂದ ಕೇವಲ ಇಚ್ಛೆಯುಳ್ಳವನನ್ನೂ ಪ್ರಯತ್ನಶಾಲಿಯೆಂದು ಹೇಳಬಹುದಾದ್ದರಿಂದ ಅಸಿದ್ಧಿದೋಷವಿಲ್ಲವೆಂದು ಸಮಾಧಾನ.

2. ದೇವಪದದ ಆಕಾಂಕ್ಷೆ ಇದ್ದವರಿಗೆ ಜ್ಞಾನಪ್ರಾಪ್ತಿಯಾಗುವುದಿಲ್ಲವೆಂದು ಹೇಳಿದರೆ

कैमुत्येनापि देवपदाकाङ्क्षायोगमाह—

॥ ॐ उपपूर्वमपीत्येके भावशमनवत्तदुक्तम् ॐ ॥ ३.४.४२

नाकाङ्क्ष्यमित्यस्ति । आधिकारिकमित्युक्तिलब्धं देवपदमित्येतदिहाप्यन्वेति । उपेति शब्दः पूर्वो यस्य तदुपपूर्वं देवपदम् उपदेवपदमित्यर्थः । उपशब्दोऽयं समीपवर्तिवाची । सङ्ख्ययाव्ययासन्नेत्यत्र मञ्जर्यां समीपसमीपिरूपद्वयर्थत्वोक्तेः ।

---

ಕೈಮುತ್ಯನ್ಯಾಯದಿಂದಲೂ ಅನಧಿಕಾರಿಗಳಿಗೆ ದೇವಪದದ ಆಕಾಂಕ್ಷೆಯು ಯುಕ್ತವಲ್ಲವೆಂದು ಹೇಳುವ ಸೂತ್ರ—

ಓಂ ಉಪಪೂರ್ವಮಪೀತ್ಯೇಕೇ ಭಾವಶಮನವತ್ತ-
ದುಕ್ತಂ ಓಂ ೩.೪.೪೨

**ಸೂತ್ರಾರ್ಥ**

'ನ ಆಕಾಂಕ್ಷ್ಯಂ' ಎಂಬ ಪದಗಳು ಅಧ್ಯಾಹೃತವಾಗುವವು. ಹಿಂದಿನ ಸೂತ್ರದಲ್ಲಿ 'ಆಧಿಕಾರಿಕಂ' ಎಂಬ ಶಬ್ದದಿಂದ ಲಭಿಸುವ 'ದೇವಪದಂ' ಎಂಬ ಪದವೂ ಇಲ್ಲಿ ಅನ್ವಯವನ್ನು ಪಡೆಯುವುದು.

ಉಪಪೂರ್ವಂ -. 'ಉಪ' ಎಂಬ ಶಬ್ದವು ಯಾವುದಕ್ಕೆ ಪೂರ್ವದಲ್ಲಿದೆಯೋ ಅದು ಉಪಪೂರ್ವವಾದದ್ದು. 'ಉಪಪೂರ್ವಂ ದೇವಪದಂ' ಎಂದರೆ ಉಪದೇವಪದ

---

ಅರ್ಹತೆ ಇದ್ದವರಿಗೂ, ದೇವಪದದ ಆಕಾಂಕ್ಷೆ ಇದ್ದಲ್ಲಿ ಜ್ಞಾನಪ್ರಾಪ್ತಿಯಾಗದಿರುವ ಪ್ರಸಂಗ ಬರುವುದು. ಹಾಗೆಯೇ, 'ಅರ್ಹತೆ ಇದ್ದವರು ದೇವಪದವನ್ನು ಬಯಸಿದರೆ ಪತನ ಹೊಂದುವರು' ಎಂದು ಅನುಮಾನದಿಂದ ಸಮರ್ಥಿಸಿದರೆ, ಅಂತಹವರು ಪತನ ಹೊಂದುವುದಿಲ್ಲವಾದ್ದರಿಂದ ಅನುಮಾನಕ್ಕೆ ಬಾಧದೋಷ ಬರುವುದು. ಪ್ರಕೃತ, ಅಧಿಕಾರಿಕ ಪದಪ್ರಯೋಗದ ಬಲದಿಂದ ಅನಧಿಕಾರಿಗಳು ತಮಗೆ ಅರ್ಹತೆ ಇಲ್ಲದ ದೇವಪದವನ್ನು ಬಯಸಿದರೆ ಪತನ ಹೊಂದುವರು ಎಂದು ಅರ್ಥವಾಗುವುದರಿಂದ ಮೇಲೆ ಸೂಚಿಸಿದ ಯಾವ ದೋಷಗಳೂ ಬರಲಾರವೆಂದು ಭಾವ.

देवानामुपवर्तिनः उपदेवाः गन्धर्वादयस्तेषां पदमपि भाव-शमनवत् भावशमनपदवत् नाकाङ्क्ष्यमित्येके वदन्ति, किमु देवपदं नाकाङ्क्ष्यमित्यपेरर्थः । दृष्टान्तीभूतं ऋष्यादिपदं दार्ष्टान्तिकं गन्धर्वादिपदं च कुतो नाकाङ्क्ष्यम् ? तदुक्तं तद्द्वयं नाकाङ्क्ष्य-मित्येतदुक्तं 'यथर्षीन् प्रजापतीन् नाकाङ्क्षेदेवं न गन्धर्वान्' इति श्रुतावित्यर्थः

गन्धर्वानिति वा गन्धर्वादिपदमिति वा वाच्ये उपेत्याद्युक्तिः

---

ಎಂದು ಅರ್ಥ. 'ಸಂಖ್ಯಯಾವ್ಯಯಾಸನ್ನ' (ಪಾ.ಸೂ. ೨.೨ ೨೫) ಎಂಬ ಸೂತ್ರಕ್ಕೆ ಸಂಬಂಧಿಸಿದ ಮಂಜರೀಗ್ರಂಥದಲ್ಲಿ ಉಪಶಬ್ದವು ಸಮೀಪ, ಸಮೀಪವರ್ತಿ ಎಂಬ ಎರಡು ಅರ್ಥವುಳ್ಳದ್ದು ಎಂದು ಹೇಳಿರುವುದರಿಂದ ಪ್ರಕೃತ, 'ಉಪದೇವಪದಂ' ಎಂಬ ಶಬ್ದದಲ್ಲಿರುವ ಉಪಶಬ್ದವು ಸಮೀಪವರ್ತಿ ಎಂಬ ಅರ್ಥವುಳ್ಳದ್ದು. ದೇವತೆಗಳಿಗೆ ಸಮೀಪವರ್ತಿಗಳಾದವರು ಉಪದೇವರು - ಗಂಧರ್ವರೇ ಮೊದಲಾದವರು. ಅವರ ಪದವನ್ನೂ, ಭಾವಶಮನವತ್ - ಭಾವಶಮನರ ಪದದಂತೆ, ನ ಆಕಾಂಕ್ಷ್ಯಂ ಇತ್ಯೇಕೇ- ಬಯಸತಕ್ಕದ್ದಲ್ಲ ಎಂದು ಕೆಲವರು ಹೇಳುವರು. 'ದೇವಪದವನ್ನು ಬಯಸತಕ್ಕ ದ್ದಲ್ಲವೆಂದು ಹೇಳುವುದೇನು ? ಎಂಬ ಅಪಿಶಬ್ದದ ಅರ್ಥ.

ದೃಷ್ಟಾಂತವಾಗಿರುವ ಋಷ್ಯಾದಿಗಳ ಪದವನ್ನು ಹಾಗೆಯೇ ದಾರ್ಷ್ಟಾಂತಿಕವಾದ ಗಂಧರ್ವಾದಿಗಳ ಪದವನ್ನು ಬಯಸತಕ್ಕದ್ದಲ್ಲವೇಕೆ ಎಂಬ ಪ್ರಶ್ನೆಗೆ ಉತ್ತರ - ತದುಕ್ತಂ - 'ಯಥರ್ಷೀನ್ ಪ್ರಜಾಪತೀನ್ ನಾಕಾಂಕ್ಷೇದೇವಂ ಗಂಧರ್ವಾನ್' ಎಂಬ ಶ್ರುತಿಯಲ್ಲಿ ಅವೆರಡನ್ನು ಬಯಸತಕ್ಕದ್ದಲ್ಲವೆಂದು ಹೇಳಲಾಗಿದೆ ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

'ಗಂಧರ್ವಾನ್' ಎಂದಾಗಲಿ, ಗಂಧರ್ವಾದಿಪದಂ ಎಂದಾಗಲಿ ಹೇಳಬಹುದಾಗಿ ದ್ದರೂ 'ಉಪಪೂರ್ವಂ' ಇತ್ಯಾದಿಯಾಗಿ ಹೇಳಿರುವುದು, ದೇವತೆಗಳಿಗೆ ಸಮೀಪ

तत्समीपवर्तिनामपि पदं नाकाङ्क्ष्यं किमु तेषामित्यपिपदसूचित-कैमुत्यव्यक्त्यर्था । ऋषिवदिति वाच्ये भावेत्याद्युक्तिः 'भावे चित्ते चेष्टायां च शमनाद् भावशमना ऋषयः' इति तत्त्वप्रदीपोक्त्या ऋषिस्वरूपोक्त्यर्था । तेन ऋषित्वजातेरभावाद् वसिष्ठादिः स्याम्' इतीच्छाया अयोगेऽपि 'ऋषिः स्याम्' इति सामान्येच्छा न विरुद्धेति सूचितमिति केचित् । अत एव देवादिपदेभ्यो मुन्यादिपदाकाङ्क्षायां

---

ವರ್ತಿಗಳಾದ ಗಂಧರ್ವಾದಿಗಳ ಪದವೂ ಬಯುಸತಕ್ಕದ್ದಲ್ಲವೆಂದಮೇಲೆ ದೇವತೆಗಳ ಪದವನ್ನು ಬಯುಸತಕ್ಕದ್ದಲ್ಲವೆಂದು ಹೇಳುವುದೇನು ಎಂಬುದಾಗಿ 'ಅಪಿ' ಶಬ್ದವು ಸೂಚಿಸುವ ಕೈಮುತ್ಯವನ್ನು ಸ್ಪಷ್ಟಪಡಿಸುವುದಕ್ಕಾಗಿ, ಭಾವದಲ್ಲಿ ಅಂದರೆ ಚಿತ್ತದಲ್ಲಿ ಮತ್ತು ಕ್ರಿಯೆಗಳಲ್ಲಿ ನಿಯಂತ್ರಣ ಉಳ್ಳವರಾದ ಕಾರಣ ಭಾವಶಮನ ಎಂದರೆ ಋಷಿಗಳು ಎಂದು ಋಷಿಗಳ ಸ್ವರೂಪವನ್ನು ತಿಳಿಸಲು 'ಋಷಿವತ್' ಎಂದು ಹೇಳುವ ಬದಲು 'ಭಾವಶಮನವತ್' ಎಂದು ಹೇಳಲಾಗಿದೆ. ಇದರಿಂದ, 'ನಾನು ವಸಿಷ್ಠನಾಗಬೇಕು' ಎಂಬ ವಿಶೇಷರೀತಿಯ ಇಚ್ಛೆ ಯುಕ್ತವಲ್ಲದಿದ್ದರೂ 'ನಾನು ಋಷಿಯಾಗಬೇಕು' ಎಂಬ ಸಾಮಾನ್ಯಾಕಾರದ ಇಚ್ಛೆ ಅಯುಕ್ತವಲ್ಲವೆಂದು ಸೂಚಿತವಾಗುವುದೆಂದು ಕೆಲವರು ಹೇಳುವರು. ಆದ್ದರಿಂದಲೇ, ದೇವಾದಿಪದಕ್ಕಿಂತಲೂ ಋಷ್ಯಾದಿಪದವನ್ನು ಬಯುಸುವುದರಲ್ಲಿ ವಿಶೇಷವಿದೆಯೆಂದು ಸೂಚಿಸಲು ಸೂತ್ರದಲ್ಲಿ 'ಏಕೇ' ಎಂದು ಹೇಳಲಾಗಿದೆ. 'ಏಕೇ' ಎಂದರೆ ವಿಶೇಷವಿವಕ್ಷುಗಳು[1] ಋಷಿಪದವು ಹೇಗೆ ಬಯುಸಲ್ಪಡತಕ್ಕದ್ದಲ್ಲವೋ ಹಾಗೆ ಗಂಧರ್ವಾದಿಪದವೂ ಬಯುಸಲ್ಪಡತಕ್ಕದ್ದಲ್ಲ ಎಂದು ಹೇಳುವರೆಂದು ಹೇಳಿದ್ದರಿಂದ ಋಷಿಸಾಮಾನ್ಯ ವಿವಕ್ಷುಗಳು ಋಷಿಪದವನ್ನು ಬಯುಸಬಹುದೆಂದು

---

1. 'ನಾನು ವಸಿಷ್ಠನಾಗಬೇಕು', 'ವಿಶ್ವಾಮಿತ್ರನಾಗಬೇಕು' 'ತುಂಬುರುವಾಗಬೇಕು' ಇತ್ಯಾದಿ ವಿಶೇಷರೀತಿಯ ಇಚ್ಛೆಯನ್ನು ಮಾಡತಕ್ಕದಲ್ಲವೆಂದು ಹೇಳುವವರು ವಿಶೇಷವಿವಕ್ಷುಗಳು. 'ನಾನೊಬ್ಬ ಋಷಿಯಾಗಬೇಕು' ಎಂದು ಸಾಮಾನ್ಯರೀತಿಯ ಇಚ್ಛೆಯನ್ನು ಮಾಡಬಹುದೆಂದು ಹೇಳುವವರು ಸಾಮಾನ್ಯವಿವಕ್ಷುಗಳು.

विशेषसूचनायैक इत्युक्तिः । एके विशेषविवक्षवः । ऋषिपदं यथा-नाकाङ्क्ष्यं तथैतदपीत्याहुरित्युक्त्या ऋषिसामान्यविवक्षवस्त्वा-काङ्क्ष्यमित्याहुरिति लाभात् । उपदेवादिपदं तु सर्वथाऽना-काङ्क्ष्यमिति । विमतिसाम्येऽपि मुनिपदस्य दृष्टान्तत्वं श्रुत्यनुसारात्[2]।

तर्हि ज्ञानभक्त्यादिकमप्याकाङ्क्ष्यं न वेत्यत आह—

॥ ॐ बहिस्तूभयथाऽपि स्मृतेराचाराच्च ॐ ॥ ३.४.४३

---

ಹೇಳುವರೆಂದು ಲಭಿಸುವುದು. ಗಂಧರ್ವಾದಿಪದವನ್ನಂತೂ ಸರ್ವಥಾ ಬಯಸತಕ್ಕದ್ದಲ್ಲವೆಂದು ಭಾವ[1]. ದೇವಾದಿಪದದ ವಿಷಯದಲ್ಲಿ ಹೇಗೋ ಹಾಗೆಯೇ ಮುನಿಪದದ ವಿಷಯದಲ್ಲೂ ಆಕಾಂಕ್ಷ್ಯವೋ ಅಲ್ಲವೋ ಎಂಬ ವಿವಾದ ಸಮಾನವಾಗಿದ್ದರೂ, [2]ಶ್ರುತಿಯನ್ನನುಸರಿಸಿ ಮುನಿಪದವನ್ನು ಇಲ್ಲಿ ದೃಷ್ಟಾಂತವಾಗಿ ಕೊಡಲಾಗಿದೆ.

ಹಾಗಾದರೆ ಜ್ಞಾನ, ಭಕ್ತ್ಯಾದಿಗಳೂ ಕೂಡ ಬಯಸಲ್ಪಡತಕ್ಕವೋ ಅಲ್ಲವೋ ಎಂಬ ಶಂಕೆಗೆ ಸಮಾಧಾನ—

ಓಂ ಬಹಿಸ್ತೂಭಯಥಾಽಪಿ ಸ್ಮೃತೇರಾಚಾರಾಚ್ಚ ಓಂ
೩.೪.೪೩

---

1. 'ನಾನು ವಸಿಷ್ಠನಾಗಬೇಕು' ಇತ್ಯಾದಿ ವಿಶೇಷರೀತಿಯ ಇಚ್ಛೆಯು ನಿಷಿದ್ಧವಾದರೂ 'ನಾನೊಬ್ಬ ಋಷಿಯಾಗಬೇಕು' ಎಂಬ ಸಾಮಾನ್ಯರೀತಿಯ ಇಚ್ಛೆ ನಿಷಿದ್ಧವಲ್ಲ. ಆದರೆ ಗಂಧರ್ವಾದಿಪದಗಳ ವಿಷಯದಲ್ಲಿ ಯಾವ ರೀತಿಯ ಇಚ್ಛೆಯೂ ಸಮ್ಮತವಲ್ಲವೆಂದು ಅಭಿಪ್ರಾಯ.

2. 'ಅಥ ಯಥರ್ಷೀನ್ ಪ್ರಜಾಪತೀನ್ ನಾಕಾಂಕ್ಷೇತ್ ಏವಂ ನ ಗಂಧರ್ವಾನ್ ನ ವಿದ್ಯಾಧರಾನ್ ನ ಸಿದ್ಧಾನ್' ಎಂಬ ಇಂದ್ರದ್ಯುಮ್ನಶ್ರುತಿಯಲ್ಲಿ ಮುನಿಪದವನ್ನು ದೃಷ್ಟಾಂತವಾಗಿ ನಿರ್ದೇಶಿಸಿರುವುದರಿಂದ ಅದಕ್ಕನುಸಾರವಾಗಿ ಸೂತ್ರದಲ್ಲಿ 'ಭಾವತಮುನವತ್' ಎಂದು ಋಷಿಪದವನ್ನು ದೃಷ್ಟಾಂತವಾಗಿ ಕೊಡಲಾಗಿದೆ. ವಾಸ್ತವಿಕವಾಗಿ ಈ ಅಧಿಕರಣದ ಪೂರ್ವಪಕ್ಷಿಯು ಮುನಿಪದವನ್ನು ಬಯಸಬಹುದೆಂದೇ ಹೇಳುತ್ತಾನೆಂದು ಭಾವ.

तुर्विशेषद्योतकः। बहिस्तु देवर्षिगन्धर्वपदेभ्यो बहिर्भूतज्ञानभक्त्यादिष्वस्ति विशेषः। स कः? उभयथाऽपि आकाङ्क्षायामनाकाङ्क्षायामपि न पतनम्। कुतः? 'देवर्षिगन्धर्वाणाम्' इति स्मृतेः। आचारादित्याचारवाक्यं गृह्यते। 'नानात्वमेव कामानां नाकामः क्व च दृश्यते। अतोऽविरुद्धकामः स्यादकामस्तेन भण्यते॥' इत्यविरुद्धकामेनाचारप्रतिपादकवाक्याच्चेत्यर्थः। अनेन वाक्येन

---

**ಸೂತ್ರಾರ್ಥ**

ಸೂತ್ರದಲ್ಲಿರುವ 'ತು' ಶಬ್ದವು ವಿಶೇಷವನ್ನು ಸೂಚಿಸುವುದು. ಬಹಿಃ ತು - ದೇವಪದ, ಋಷಿಪದ, ಗಂಧರ್ವಪದಗಳಿಗಿಂತ ಭಿನ್ನವಾದ ಜ್ಞಾನಭಕ್ತ್ಯಾದಿಗಳ ವಿಷಯದಲ್ಲಿ ವಿಶೇಷವಿದೆ. ಅದೇನು ? ಉಭಯಥಾಽಪಿ – ಅವುಗಳನ್ನು ಬಯಸಿದರೂ, ಬಯಸದಿದ್ದರೂ ಪತನವಿಲ್ಲ. ಏಕೆಂದರೆ, ಸ್ಮೃತೇಃ – '[1]ದೇವರ್ಷಿಗಂಧರ್ವಾಣಾಂ' ಎಂಬ ಸ್ಮೃತಿ ಇರುವುದರಿಂದ. 'ಆಚಾರಾತ್' ಎಂಬ ಪದದಿಂದ ಆಚಾರವನ್ನು ಹೇಳುವ ವಾಕ್ಯವನ್ನು ಗ್ರಹಿಸಲಾಗುವುದು. 'ನಾನಾತ್ವಮೇವ ಕಾಮಾನಾಂ ನಾಕಾಮಃ ಕ್ವ ಚ ದೃಶ್ಯತೇ। ಅತೋಽವಿರುದ್ಧಕಾಮಃ ಸ್ಯಾದಕಾಮಸ್ತೇನ ಭಣ್ಯತೇ॥[2]' ಎಂದು ಅವಿರುದ್ಧಕಾಮದಿಂದ ಆಚಾರವನ್ನು ಪ್ರತಿಪಾದಿಸುವ

---

1. ದೇವರ್ಷಿಗಂಧರ್ವಾಣಾಂ ಪದಾಕಾಂಕ್ಷೀ ಪತೇದ್ ಧ್ರುವಮ್ ।
ಅನ್ಯತ್ರ ಶುಭಮಾಕಾಂಕ್ಷನ್ ನ ಪತೇದವಿರೋಧತಃ ॥
ಎಂಬ ಸ್ಮೃತಿವಾಕ್ಯ.

ದೇವತೆಗಳು, ಋಷಿಗಳು ಮತ್ತು ಗಂಧರ್ವರು ಇವರ ಪದವನ್ನು ಬಯಸುವವನು ನಿಶ್ಚಿತವಾಗಿಯೂ ಪತನ ಹೊಂದುವನು. ದೇವಾದಿಪದಗಳಿಗೆ ವ್ಯತಿರಿಕ್ತವಾದ ಜ್ಞಾನಭಕ್ತ್ಯಾದಿಗಳನ್ನೂ, ಅದಕ್ಕೆ ಸಾಧನವಾದ ಐಶ್ವರ್ಯವನ್ನೂ ಬಯಸುವುದು ಶ್ರುತ್ಯಾದಿಪ್ರಮಾಣವಿರುದ್ಧವಲ್ಲವಾದ್ದರಿಂದ ಅಂತಹ ಶುಭವಿಷಯಗಳನ್ನು ಬಯಸುವವನಿಗೆ ಪತನವಿಲ್ಲವೆಂದು ಸ್ಮೃತಿಯ ಭಾವ.

2. ನಿಷಿದ್ಧಕಾಮಗಳು, ಅನಿಷಿದ್ಧಕಾಮಗಳು ಎಂದು ಕಾಮಗಳು ನಾನಾಬಗೆಯಾಗಿ ಲೋಕದಲ್ಲಿ ಕಾಣುವದೇ ಹೊರತು ಸರ್ವಥಾ ಕಾಮರಹಿತನಾದ ಒಬ್ಬ ಪುರುಷನೂ ಕಾಣಲಾರನು.

'विहाय कामान् यः सर्वान् पुमांश्चरति' इति गीतोक्ताकामचारस्या-विरुद्धकामचारप्रतिपादनादिति भावः ।

विहायेति वाक्ये सर्वकामप्रहाणोक्तेः कथं भक्त्यादिकाम इत्यत आचाराच्चेत्युक्तिः । चः स्मृतिसमुच्चायक इति भाष्यादौ भाति । तत्त्वप्रदीपे तु चकारात् 'ऋषभं मा समानानां' इति श्रुतेश्चेत्युक्तम् ॥ ६ ॥

---

ವಾಕ್ಯದಿಂದಲೂ ಎಂದು ಅರ್ಥ. ಈ ವಾಕ್ಯದಿಂದ 'ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ' ಎಂದು ಗೀತೆಯಲ್ಲಿ ಹೇಳಿರುವ ಅಕಾಮಚಾರಕ್ಕೆ ವಿರುದ್ಧವಲ್ಲದ ಕಾಮಚಾರವು ಪ್ರತಿಪಾದಿತವಾಗಿರುವುದರಿಂದ ಎಂದು ಭಾವ.

**ಸೂತ್ರದ ಪದಗಳ ಸ್ವಾರಸ್ಯ**

'ವಿಹಾಯ ಕಾಮಾನ್' ಎಂಬ ವಾಕ್ಯದಲ್ಲಿ ಸರ್ವವಿಧವಾದ ಕಾಮನೆಗಳನ್ನು ಬಿಡತಕ್ಕದ್ದೆಂದು ಹೇಳಿರುವುದರಿಂದ ಭಕ್ತ್ಯಾದಿಗಳ ಕಾಮನೆ ಹೇಗೆ ಯುಕ್ತವಾಗುವುದು ಎಂಬ ಶಂಕೆಯನ್ನು ಪರಿಹರಿಸಲು 'ಆಚಾರಾಚ್ಚ' ಎಂದು ಹೇಳಲಾಗಿದೆ. 'ಚ' ಶಬ್ದವು ಸ್ಮೃತಿಸಮುಚ್ಚಯವನ್ನು ಹೇಳುವುದೆಂದು ಭಾಷ್ಯ ಮೊದಲಾದವುಗಳಲ್ಲಿ ತೋರುವುದು. ತತ್ತ್ವಪ್ರದೀಪದಲ್ಲಾದರೋ 'ಚ' ಶಬ್ದಕ್ಕೆ 'ಋಷಭಂ ಮಾ ಸಮಾನಾನಾಂ[1]' ಎಂಬ ಶ್ರುತಿಯಿಂದಲೂ ಎಂದು ಅರ್ಥವನ್ನು ಹೇಳಲಾಗಿದೆ.

---

ಆದ್ದರಿಂದ ಕಾಮಿಸುವವನು ಶ್ರುತ್ಯಾದಿಪ್ರಮಾಣಗಳಿಗೆ ವಿರುದ್ಧವಲ್ಲದಿದ್ದುದನ್ನು ಮಾತ್ರ ಕಾಮಿಸಬೇಕು. ಹಾಗೆ ಕಾಮಿಸುವವನೂ 'ಅಕಾಮ' ಎಂದೇ ಹೇಳಲ್ಪಡುತ್ತಾನೆ ಎಂದು ವಾಕ್ಯದ ಭಾವ. 'ವಿಹಾಯ ಕಾಮಾನ್' ಇತ್ಯಾದಿ ಗೀತಾವಾಕ್ಯವು ನಿಷಿದ್ಧಕಾಮದ ತ್ಯಾಗವನ್ನು ಮಾತ್ರ ಹೇಳುವುದರಿಂದ ಅದರ ವಿರೋಧವಿಲ್ಲವೆಂದು ಅಭಿಪ್ರಾಯ.

1. ಮಾ - ನನ್ನನ್ನು, ಸಮಾನಾನಾಂ - ಜ್ಞಾನಿಗಳ ಮಧ್ಯೆ, ಋಷಭಂ (ಕುರು) - ಶ್ರೇಷ್ಠನನ್ನಾಗಿ ಮಾಡು ಎಂದು ಶ್ರುತ್ಯರ್ಥ. ಶ್ರುತ್ಯಾದಿವಿರುದ್ಧವಲ್ಲದ ಜ್ಞಾನಾದಿಕಾಮಗಳನ್ನು ಪ್ರತಿಪಾದಿಸುವ ಈ ಶ್ರುತಿಯ ಸಮುಚ್ಚಯವನ್ನು ಸೂತ್ರದಲ್ಲಿರುವ 'ಚ' ಶಬ್ದವು ಹೇಳುವುದೆಂದು ತತ್ತ್ವಪ್ರದೀಪದ ಭಾವ.

फलश्रुत्यधिकरणम्—७

॥ ॐ स्वामिनः फलश्रुतेरित्यात्रेयः ॐ ॥ ३.४.४४

अत्र ज्ञानस्यास्वामिनोऽपि सन्निधानमात्रेण फलदातृत्वं साध्यते। स्वामिन इत्येकवचनं समुदायपरम्।

स्वामिनां देवानामेव ज्ञानफलमिति फलपदस्य बुद्ध्याऽत्राध्यन्वयः। कुतः? फलश्रुतेः। स्वामिन इत्यन्वेति। 'स्वामी हि फलमश्नुते नास्वामी' इति स्वामिनः फलश्रवणादित्यात्रेयो मन्यत

---

ಫಲಶ್ರುತ್ಯಧಿಕರಣ—೭

ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ ೩.೪.೪೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ತನಗೆ ಸ್ವಾಮಿಯಲ್ಲದವನಿಗೂ ತಾನು ಇರುವ ಮಾತ್ರದಿಂದ ಬ್ರಹ್ಮಜ್ಞಾನವು ಫಲವನ್ನು ಕೊಡುವುದು ಎಂದು ಸಮರ್ಥಿಸಲಾಗುವುದು. 'ಸ್ವಾಮಿನಃ' ಎಂಬಲ್ಲಿರುವ ಏಕವಚನವು ಸ್ವಾಮಿಗಳ ಸಮುದಾಯವನ್ನು ಹೇಳುವ ತಾತ್ಪರ್ಯವುಳ್ಳದ್ದು.

ಸ್ವಾಮಿನಾಂ – ಜ್ಞಾನಕ್ಕೆ ಸ್ವಾಮಿಗಳಾದ ದೇವತೆಗಳಿಗೇ ಜ್ಞಾನದ ಫಲವು ಉಂಟಾಗುವುದು. ಬುದ್ಧಿಸ್ಥವಾದ 'ಫಲ' ಪದವನ್ನು ಹೀಗೆ ಇಲ್ಲೂ ಅನ್ವಯಿಸಬೇಕು. ದೇವತೆಗಳಿಗೇ ಜ್ಞಾನದ ಫಲವಾಗುವುದು ಎಂಬುದಕ್ಕೆ ಆಧಾರವೇನು? ಎಂಬ ಪ್ರಶ್ನೆಗೆ ಉತ್ತರ— 'ಫಲಶ್ರುತೇಃ', 'ಸ್ವಾಮಿನಃ' ಎಂಬ ಪದವು ಇಲ್ಲಿ ಅನ್ವಿತವಾಗುವುದು. '[1]ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ' ಎಂದು ಸ್ವಾಮಿಗೆ

---

1. 'ಯದು ಕಿಂಚೇಮಾಃ ಪ್ರಜಾಃ ಶುಭಮಾಚರಂತಿ ದೇವಾ ಏವ ತದಾಚರಂತಿ ಯದು ಕಿಂಚೇಮಾಃ ಪ್ರಜಾ ವಿಜಾನತೇ ದೇವಾ ಏವ ತದ್ವಿಜಾನತೇ ದೇವಾನಾಂ ಹ್ಯೇತದ್ಭವತಿ ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ ಕರ್ಮ ಕುರ್ವಾಣಃ' ಎಂದು ಮಾಧ್ಯಂದಿನಾಯನ ಶ್ರುತಿ.

इत्यर्थः । स्वामिनः फलश्रुतेरिति हेतूक्त्या स्वामिनामेव फलमिति साध्यस्य शेषो वा ।

देवानामिति वाच्ये स्वामीत्युक्तिः तेषामेवेन्द्रियादिप्रेरकत्वेन

---

ಫಲವಾಗುವುದೆಂದು ಶ್ರುತವಾಗಿರುವುದರಿಂದ ಎಂದು ಆತ್ರೇಯರು ತಿಳಿಯುವರು ಎಂದು ಅರ್ಥ. ಅಥವಾ 'ಸ್ವಾಮಿನಃ ಫಲಶ್ರುತೇಃ' ಎಂದು ಹೇತುವನ್ನು ಹೇಳಿರುವ ಕಾರಣ 'ಸ್ವಾಮಿನಾಮೇವ ಫಲಂ' ಎಂಬ ಸಾಧ್ಯವನ್ನು ಹೇಳುವ ಪದಗಳನ್ನು ಶೇಷವಾಗಿ ಸೇರಿಸಬೇಕು[1].

**ಸೂತ್ರದ ಪದಗಳ ಸ್ವಾರಸ್ಯ**

ಇಂದ್ರಿಯಾದಿಪ್ರೇರಕರಾಗಿರುವ ಕಾರಣ ದೇವತೆಗಳೇ ಜ್ಞಾನಕ್ಕೆ ಸ್ವಾಮಿಯಾಗಿದ್ದಾರೆ ಎಂಬ ಹೇತುವನ್ನು ಸೂಚಿಸಲು 'ದೇವಾನಾಂ' ಎಂದು ಹೇಳಬೇಕಾಗಿದ್ದರೂ

---

ಪ್ರಜೆಗಳು ಯಾವುದಾದರೂ ಶುಭಕರ್ಮವನ್ನಾಚರಿಸುವುದಾದಲ್ಲಿ ವಾಸ್ತವಿಕವಾಗಿ ಕರ್ಮವನ್ನು ಮಾಡಲು ಸಾಧನವಾದ ಇಂದ್ರಿಯಗಳಿಗೆ ಪ್ರೇರಕರಾದ ದೇವತೆಗಳೇ ಆ ಕರ್ಮವನ್ನು ಆಚರಿಸುವವರು. ಪ್ರಜೆಗಳು ಏನಾದರೂ ಜ್ಞಾನವನ್ನು ಪಡೆದಲ್ಲಿ ಜ್ಞಾನಸಾಧನವಾದ ಇಂದ್ರಿಯಾದಿಗಳಿಗೆ ಪ್ರೇರಕರಾದ ದೇವತೆಗಳೇ ಆ ಜ್ಞಾನಕ್ಕೆ ಸ್ವಾಮಿಗಳು. ಹೀಗೆ ದೇವತೆಗಳೇ ಜ್ಞಾನಕರ್ಮಗಳಿಗೆ ಸ್ವಾಮಿಗಳಾದ್ದರಿಂದ ಅವುಗಳ ಫಲವೂ ಅವರಿಗೇ ಉಂಟಾಗುವುದು. ಸ್ವಾಮಿಯೇ ಫಲವನ್ನು ಅನುಭವಿಸತಕ್ಕವನು ಹೊರತು ಕರ್ಮ ಮಾಡುವ ಆದರೆ ಸ್ವಾಮಿಯಲ್ಲದ ಪುರುಷನಲ್ಲ ಎಂದು ಕೃಷಿ ಮೊದಲಾದ ಕರ್ಮಗಳಲ್ಲಿ ದೃಷ್ಟವಾಗಿದೆ ಎಂಬು ಶ್ರುತಿಯ ಭಾವ.

1. ಬುದ್ಧಿಸ್ಥವಾದ ಫಲಪದವನ್ನು 'ಸ್ವಾಮಿನಃ' ಎಂಬ ಪದದೊಡನೆ ಅನ್ವಯಿಸಿ 'ಸ್ವಾಮಿನಃ ಫಲಂ' ಎಂದು ವ್ಯಾಖ್ಯಾನ ಮಾಡುವುದು ಒಂದು ಪ್ರಕಾರ. ಅಥವಾ 'ಸ್ವಾಮಿನಃ ಫಲಂ' ಎಂಬ ಸಾಧ್ಯವನ್ನು ತಿಳಿಸುವ ಪದಗಳನ್ನು ಶೇಷಪದಗಳನ್ನಾಗಿ ಇಲ್ಲಿ ಸೇರಿಸಬೇಕು. 'ಸ್ವಾಮಿನಃ ಫಲಶ್ರುತೇಃ' ಎಂದು ಸೂತ್ರದಲ್ಲಿ ಹೇತುವನ್ನು ಹೇಳಿರುವುದು ಈ ರೀತಿ ಶೇಷಪೂರಣಮಾಡಬೇಕೆಂದು ಸೂಚಿಸುವುದೆಂದು ವ್ಯಾಖ್ಯಾನದ ಮತ್ತೊಂದು ಪ್ರಕಾರ.

ज्ञानस्वामित्वादिति हेतुसूचनाय । श्रुत्यनुरोधेनैकवचनोक्तिः । विमतिसूचनाय मुनिपदम् ।

प्रजानामपि फलमस्तीत्याह—

॥ ॐ आर्त्विज्यमित्यौडुलोमिस्तस्मै हि परिक्रियते ॐ ॥ ३.४.४५

ऋत्विजामिदमार्त्विज्यम् । लुप्तोपमानम् । सत्रे ऋत्विजां फलमिव प्रजानामपि ज्ञानादिफलमस्तीत्यन्वेति । इत्यौडुलोमिर्मन्यते ।

---

'ಸ್ವಾಮಿನಃ' ಎಂದು ಹೇಳಲಾಗಿದೆ. ಶ್ರುತಿಯನ್ನನುಸರಿಸಿ 'ಸ್ವಾಮಿನಃ' ಎಂದು ಏಕವಚನವನ್ನು ಪ್ರಯೋಗಿಸಲಾಗಿದೆ. ಭಿನ್ನಾಭಿಪ್ರಾಯವನ್ನು ಸೂಚಿಸುವ ಸಲುವಾಗಿ ಮುನಿಯ ಹೆಸರನ್ನು ಸೂತ್ರದಲ್ಲಿ ಉಪಯೋಗಿಸಲಾಗಿದೆ.

ಪ್ರಜೆಗಳಿಗೂ ಫಲವಿದೆ ಎಂದು ಹೇಳುವ ಸೂತ್ರ—

**ಓಂ ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರಿಯತೇ ಓಂ ೩.೪.೪೫**

**ಸೂತ್ರಾರ್ಥ**

'ಋತ್ವಿಜಾಂ ಇದಂ ಆರ್ತ್ವಿಜ್ಯಂ' ಎಂಬ ವ್ಯುತ್ಪತ್ತಿಯ ಪ್ರಕಾರ ಆರ್ತ್ವಿಜ್ಯವೆಂದರೆ ಋತ್ವಿಜರಿಗೆ ಸಂಬಂಧಿಸಿದ ಫಲ. ಇಲ್ಲಿ ಉಪಮಾನವಾಚಕಪದವು ಲುಪ್ತವಾಗಿದೆ[1]. ಸತ್ರಯಾಗದಲ್ಲಿ ಋತ್ವಿಜರಿಗೆ ಫಲವಿರುವಂತೆ ಪ್ರಜೆಗಳಿಗೂ ಜ್ಞಾನಾದಿಗಳ ಫಲವಿರುವುದು— 'ಪ್ರಜೆಗಳಿಗೂ ಜ್ಞಾನಾದಿಗಳ ಫಲವಿರುವುದು' ಎಂಬ ಪದಗಳು ಇಲ್ಲಿ ಅನ್ವಿತವಾಗುವವು – ಹೀಗೆ ಔಡುಲೋಮಿಗಳು ತಿಳಿಯುತ್ತಾರೆ.

---

1. 'ಆರ್ತ್ವಿಜ್ಯಮಿವ' ಎಂದಿರಬೇಕಾಗಿತ್ತು. ಆದರೆ ಇಲ್ಲಿ ಸಾದೃಶ್ಯವಾಚಕವಾದ ಇವ ಶಬ್ದವು ಲುಪ್ತವಾಗಿದೆ ಎಂದು ಭಾವ.

कुतः ? तस्मै हि परिक्रियते । तादर्थ्ये चतुर्थी । तस्मै प्रजार्थं देवैर्ज्ञानादि परिक्रियते सम्पाद्यते हि यस्मादत इति । हिर्हेतौ वा, यदर्थं यद् येन क्रियते तत्फलं तस्येति लोकप्रसिद्धमिति प्रसिद्धिद्योतको वा ।

आर्त्विज्यमित्युक्तिः सत्रे अयजमानानां तत्त्वप्रदीपादिशा गृहपतीनामपि यथा फलं तथा अस्वामित्वेऽपि प्रजानां फलमिति

---

ಏಕೆಂದರೆ. ತಸ್ಮೈ ಹಿ ಪರಿಕ್ರಿಯತೇ. 'ತಸ್ಮೈ' ಎಂಬಲ್ಲಿರುವ ಚತುರ್ಥೀವಿಭಕ್ತಿಯು 'ತಾದರ್ಥ್ಯ' ಎಂಬ ಅರ್ಥದಲ್ಲಿ ಬಂದಿದೆ. ತಸ್ಮೈ – ಪ್ರಜೆಗಳಿಗೋಸ್ಕರ; ಪರಿಕ್ರಿಯತೇ ಹಿ – ದೇವತೆಗಳಿಂದ ಜ್ಞಾನ ಮೊದಲಾದವುಗಳು ಸಂಪಾದಿಸಲ್ಪಟ್ಟಿರುವ ಕಾರಣದಿಂದ ಎಂದು ಅರ್ಥ. ಹೀಗೆ ಇಲ್ಲಿ 'ಹಿ' ಶಬ್ದವು ಹೇತು ಎಂಬ ಅರ್ಥದಲ್ಲಿದೆ, ಅಥವಾ 'ಯಾರಿಗೋಸ್ಕರ ಯಾವುದನ್ನು ಯಾರು ಮಾಡುವರೋ ಅದರ ಫಲವು ಅವರಿಗೆ ಸೇರುವುದು' ಎಂದು ಲೋಕಪ್ರಸಿದ್ಧವಾಗಿದೆ ಎಂದು ಪ್ರಸಿದ್ಧಿ ಸೂಚಕವಾಗಿದೆ.

**ಸೂತ್ರದ ಪದಗಳ ಸ್ವಾರಸ್ಯ**

ಸತ್ರಯಾಗದಲ್ಲಿ, ಯಜಮಾನರಲ್ಲದವರಿಗೂ, [1]ತತ್ತ್ವಪ್ರದೀಪದ ಪ್ರಕಾರ ಗೃಹಪತಿಗಳಲ್ಲದವರಿಗೂ ಹೇಗೆ ಫಲವು ದೊರಕುವುದೋ ಹಾಗೆ ಸ್ವಾಮಿಗಳಲ್ಲದಿದ್ದರೂ ಪ್ರಜೆಗಳಿಗೆ ಜ್ಞಾನದ ಫಲವು ದೊರೆಯುವುದೆಂದು ಸೂಚಿಸಲು ಸೂತ್ರದಲ್ಲಿ 'ಆರ್ತ್ವಿಜ್ಯಂ' ಎಂದು ಹೇಳಲಾಗಿದೆ.

---

1. ಸತ್ರಯಾಗಕ್ಕೆ ಆವಶ್ಯಕವಾದ ದ್ರವ್ಯ ಮೊದಲಾದವುಗಳನ್ನು ಒದಗಿಸುವವನು ಗೃಹಪತಿ. ಹೀಗೆ ಗೃಹಪತಿಗಳಲ್ಲದ, ಸತ್ರಯಾಗದಲ್ಲಿ ದಕ್ಷಿಣೆಯನ್ನು ಪಡೆಯದೇ ದೀಕ್ಷಿತರಾಗಿರುವ ಋತ್ವಿಜರಿಗೂ ಹೇಗೆ ಅಲ್ಪವಾದ ಯಜ್ಞಫಲವು ದೊರಕುವುದೋ ಹಾಗೆ ಜ್ಞಾನಸ್ವಾಮಿಗಳಲ್ಲದ ಪ್ರಜೆಗಳಿಗೂ ಜ್ಞಾನದ ಅಲ್ಪಫಲವು ದೊರೆಯುವುದೆಂದು ತತ್ತ್ವಪ್ರದೀಪದ ಪ್ರಕಾರ ಸೂತ್ರಾರ್ಥ.

सूचयति । ऋत्विजामगृहीतदक्षिणत्वेन कर्तृत्वादस्तु फलम् । इह कथमित्यतः तस्मा इत्याद्युक्तिः ।

एवं हि प्रजानामेव फलं स्यात्, न देवानामित्यत आह—

॥ ॐ सहकार्यन्तरविधिः पक्षेण तृतीयं तद्वतो विध्यादिवत् ॐ ॥ ३.४.४६

सहकार्यन्तरेति पक्षेणेति च भावप्रधानम् । प्रजानां सहकार्यन्त-

---

ಸತ್ರಯಾಗದಲ್ಲಿ ಋತ್ವಿಜರು ದಕ್ಷಿಣೆಯನ್ನು ಸ್ವೀಕರಿಸದೆ ಯಾಗಕರ್ತೃಗಳಾಗಿರುವುದರಿಂದ ಅವರಿಗೆ ಯಾಗದ ಫಲವಿರಲಿ, ಪ್ರಕೃತ ಪ್ರಜೆಗಳಿಗೆ ಜ್ಞಾನದ ಫಲವೇಕೆ ಲಭಿಸಬೇಕು ಎಂಬ ಶಂಕೆಯನ್ನು ಪರಿಹರಿಸಲು 'ತಸ್ಮೈ' ಇತ್ಯಾದಿಯಾಗಿ ಹೇಳಲಾಗಿದೆ[1].

ಪ್ರಜೆಗಳಿಗೋಸ್ಕರ ದೇವತೆಗಳು ಜ್ಞಾನಾದಿಗಳನ್ನು ಸಂಪಾದಿಸುವುದಾದರೆ ಜ್ಞಾನಾದಿಗಳ ಫಲ ಪ್ರಜೆಗಳಿಗೇ ಆದೀತು ಹೊರತು ದೇವತೆಗಳಿಗೆ ಆಗಲಾರದು ಎಂಬ ಶಂಕೆಗೆ ಸಮಾಧಾನ—

**ಓಂ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ಓಂ ೩.೪.೪೬**

**ಸೂತ್ರಾರ್ಥ**

'ಸಹಕಾರ್ಯಂತರ' ಮತ್ತು 'ಪಕ್ಷೇಣ' ಎಂಬ ಪದಗಳು ಭಾವಪ್ರಧಾನ

---

1. ಪ್ರಜೆಗಳಿಗೆ ಜ್ಞಾನದ ಫಲ ಲಭಿಸಲು, ಪ್ರಜೆಗಳಿಗೂ ಫಲ ಸಿದ್ಧಿಯಾಗುವುದಕ್ಕೋಸ್ಕರ ದೇವತೆಗಳು ಜ್ಞಾನಯಜ್ಞವನ್ನು ಅನುಷ್ಠಿಸುವುದು ಕಾರಣವೆಂದು '**ತಸ್ಮೈ ಹಿ ಪರಿಕ್ರಿಯತೇ**' ಎಂಬ ಸೂತ್ರಾಂಶದಿಂದ ತಿಳಿಯುವುದೆಂದು ಭಾವ.

रत्वेन देवान् प्रति सहकारित्वेन विधानं पक्षेण पक्षत्वेन तृतीयं तृतीयः पक्षः। कथम्? तद्वतो विध्यादिवत्। तद्वतः तदिति प्रस्तुतप्रजास्तद्विशेषाः शिष्याश्चोच्यन्ते। प्रजावतो राज्ञः शिष्यवतो गुरोश्च विध्यादिवत्। आदिपदात् फलम्। सहकार्यन्तरेति बुद्ध्याऽनुषङ्गः। यथा प्रजाशिष्याणां राजगुरुसहकारित्वेन विधानफलं च तयोरेव मुख्यं तद्वदित्यर्थः। यथा राज्ञो गुरोश्च पालने व्याख्याने च प್ರजानां शिष्याणां च सहकारित्वेऽपि तयोरेव मुख्यं पालनादिफलं

---

ನಿರ್ದೇಶವಾಗಿವೆ[1]. ಸಹಕಾರ್ಯಂತರವಿಧಿಃ – ಸಹಕಾರ್ಯಂತರತ್ವೇನ ವಿಧಾನಂ – ದೇವತೆಗಳಿಗೆ ಸಹಕಾರಿಗಳೆಂದು ಪ್ರಜೆಗಳನ್ನು ವಿಧಿಸಿರುವುದು, ಪಕ್ಷೇಣ ತೃತೀಯಂ – ಪಕ್ಷತ್ವೇನ ತೃತೀಯಂ – ಮೂರನೆಯ ಪಕ್ಷವಾಗಿದೆ. ಹೇಗೆಂದರೆ, ತದ್ವತೋ ವಿಧ್ಯಾದಿವತ್, ತದ್ವತಃ ಎಂಬಲ್ಲಿ 'ತತ್' ಶಬ್ದವು ಪ್ರಸ್ತುತರಾಗಿರುವ ಪ್ರಜೆಗಳನ್ನೂ ಪ್ರಜಾವಿಶೇಷರಾದ ಶಿಷ್ಯರನ್ನೂ ಹೇಳುವುದು. ಪ್ರಜಾಸಹಿತನಾದ ರಾಜನಿಗೆ ಮತ್ತು ಶಿಷ್ಯಸಹಿತನಾದ ಗುರುವಿಗೆ ವಿಧಿ ಮೊದಲಾದವುಗಳು ಹೇಗೋ ಹಾಗೆ. 'ವಿಧ್ಯಾದಿ' ಎಂಬಲ್ಲಿ 'ಆದಿ' ಪದದಿಂದ ಫಲವನ್ನು ಗ್ರಹಿಸಬೇಕು. ಬುದ್ಧಿಸ್ಥವಾದ 'ಸಹಕಾರ್ಯಂತರ' ಎಂಬ ಪದವನ್ನು ಅನ್ವಯಿಸಬೇಕು. ಪ್ರಜೆಗಳನ್ನು ರಾಜನಿಗೆ ಸಹಕಾರಿಯೆಂದು, ಶಿಷ್ಯರನ್ನು ಗುರುವಿಗೆ ಸಹಕಾರಿಯೆಂದು ವಿಧಿಸಿರುವುದು ಮತ್ತು ಫಲವೂ ಕೂಡ ರಾಜ ಮತ್ತು ಗುರುಗಳ ವಿಷಯದಲ್ಲೇ ಹೇಗೆ ಮುಖ್ಯವೋ ಹಾಗೆ ಎಂದು ಅರ್ಥ. ರಾಜನು ಮಾಡುವ ಪ್ರಜಾಪಾಲನಕರ್ಮದಲ್ಲಿ ಮತ್ತು ಗುರುವು ಶಿಷ್ಯರನ್ನು ಕುರಿತು ಮಾಡುವ ವ್ಯಾಖ್ಯಾನದಲ್ಲಿ ಪ್ರಜೆಗಳು ಮತ್ತು ಶಿಷ್ಯರು ಸಹಕಾರಿಗಳಾಗಿದ್ದರೂ ರಾಜ ಮತ್ತು ಗುರುಗಳಿಗೇ ಪಾಲನಾದಿಕರ್ಮದ ಮುಖ್ಯ ಫಲ. ಪ್ರಜೆಗಳಿಗೆ ಮತ್ತು ಶಿಷ್ಯರಿಗೆ ಅಲ್ಪವಾದ ಫಲ ಹೇಗೋ ಹಾಗೆ ದೇವತೆಗಳಿಗೆ ವಿಹಿತವಾಗಿರುವ ಜ್ಞಾನದಾನ ಮುಂತಾದ ಕ್ರಿಯೆಯಲ್ಲಿ ಪ್ರಜೆಗಳು ಸಹಕಾರಿಗಳಾಗಿ

---

1. ಸಹಕಾರ್ಯಂತರತ್ವ ಮತ್ತು ಪಕ್ಷತ್ವ ಎಂಬ ಧರ್ಮಗಳನ್ನು ನಿರ್ದೇಶಿಸುವ ಪದಗಳಾಗಿವೆ.

तेषां त्वल्पं तथा देवानां विहिते ज्ञानदानादौ प्रजानां सहकारीकरणात् देवानां मुख्यं फलं प्रजानामल्पमिति भावः ।

अन्तरशब्दः अनुग्राह्यत्वरूपविशेषपरः तत्सहकारीकरणं च देवानां तेष्वनुग्रहायेति सूचयति । यद्वा, आचार्यः सहकारी, प्रजास्तु सहकार्यन्तरमिति द्योतयितुम् अन्तरेत्युक्तिः ।

देवानामेव फलम् इति श्रुत्योक्तमाद्यं मतं पूर्णफलापेक्षया । प्रजानां फलमिति युक्त्योक्तं द्वितीयं मतम् अल्पफलापेक्षया ।

---

ರುವುದರಿಂದ ದೇವತೆಗಳಿಗೇ ಜ್ಞಾನದ ಮುಖ್ಯಫಲ, ಪ್ರಜೆಗಳಿಗೆ ಅಲ್ಪವಾದ ಫಲ ಎಂದು ಭಾವ.

**ಸೂತ್ರದಲ್ಲಿರುವ 'ಅಂತರ' ಶಬ್ದದ ಅರ್ಥ**

'ಅಂತರ' ಶಬ್ದವು ವಿಶೇಷಾರ್ಥಕವಾಗಿದ್ದು, ಪ್ರಕೃತ, ಅನುಗ್ರಾಹ್ಯತ್ವರೂಪವಾದ ವಿಶೇಷವನ್ನು ಹೇಳುವ ತಾತ್ಪರ್ಯ ಹೊಂದಿದ್ದಾಗಿ ಪ್ರಜೆಗಳು ದೇವತೆಗಳಿಗೆ ಸಹಕರಿಸುವುದು ಅವರ ಅನುಗ್ರಹಕ್ಕಾಗಿ ಎಂದು ಸೂಚಿಸುವುದು. ಅಥವಾ, ಜ್ಞಾನದಾನಕಾರ್ಯದಲ್ಲಿ ದೇವತೆಗಳಿಗೆ ಗುರುವು ಸಹಕಾರಿ, ಪ್ರಜೆಗಳಾದರೋ ಸಹಕಾರ್ಯಂತರ ಅಂದರೆ ಇನ್ನೊಂದು ಸಹಕಾರಿ ಎಂದು ಸೂಚಿಸಲು 'ಅಂತರ' ಎಂದು ಹೇಳಲಾಗಿದೆ.

**ಈ ಅಧಿಕರಣದಲ್ಲಿ ಪ್ರಸ್ತುತವಾಗಿರುವ ಮೂರು ಮತಗಳಿಗೆ ಪರಸ್ಪರ ವಿರೋಧವಿಲ್ಲ.**

ದೇವತೆಗಳಿಗೆ ಫಲವೆಂದು ಶ್ರುತಿಯಲ್ಲಿ ಹೇಳಲಾಗಿರುವ ಮೊದಲನೆ ಮತವು ಪೂರ್ಣಫಲದ ದೃಷ್ಟಿಯಿಂದ ಪ್ರಸ್ತುತವಾಗಿದೆ. ಪ್ರಜೆಗಳಿಗೆ ಫಲವೆಂದು ಯುಕ್ತಿಯಿಂದ ಸಾಧಿತವಾಗಿರುವ ಎರಡನೆ ಮತವು ಅಲ್ಪಫಲದ ದೃಷ್ಟಿಯುಳ್ಳದ್ದು. ಆಚಾರ್ಯನಲ್ಲಿ ಪ್ರವೇಶಿಸುವುದರಿಂದ ಪ್ರವಕ್ತೃತ್ವ, ಪ್ರಜೆಗಳಲ್ಲಿದ್ದು ಅವರ ಇಂದ್ರಿಯಗಳನ್ನು

आचार्यप्रवेशेन प्रवक्तृत्वं प्रजासु स्थित्वा तदिन्द्रियप्रवर्तनेन ज्ञापनमिति द्वयं देवानां फलाधिक्ये मुख्यं कारणम् । प्रजानां सहकारिमात्रत्वादल्पमिति प्रागुक्तद्वयमुपपादयितुमिदं स्वमतत्वेनोररीकृतमित्यविरोधः । एतच्च पुण्यविषयम् । प्रजाकृतपापफलं तु देवानां नैवास्ति, किन्त्वसुराणामेवेति ध्येयम् ॥ ७ ॥

### कृत्स्नभावाधिकरणम्—८

॥ ॐ कृत्स्नभावात्तु गृहिणोपसंहारः ॐ ॥ ३.४.४७

अत्र ज्ञाने विशेषाधिकारिणां यतीनां सर्वातिशयः साध्यते ।

---

ಪ್ರೇರಿಸುವ ಮೂಲಕ ಜ್ಞಾನಕ್ಕೆ ಸಾಧನವಾಗಿರುವುದು— ಇವೆರಡು ದೇವತೆಗಳಿಗೆ ಅಧಿಕಫಲ ಲಭಿಸಲು ಮುಖ್ಯವಾದ ಕಾರಣಗಳಾಗಿವೆ. ಪ್ರಜೆಗಳು ಕೇವಲ ಸಹಕಾರಿಗಳಾದ್ದರಿಂದ ಅವರಿಗೆ ಅಲ್ಪವಾದ ಫಲ ಎಂದು ಮೊದಲು ಹೇಳಿದ ಎರಡು ಅಂಶಗಳನ್ನು ಉಪಪಾದಿಸಲು ಈ ಸೂತ್ರದಲ್ಲಿ ಹೇಳಿರುವ ಮತವನ್ನು ಸ್ವಮತವೆಂದು ಅಂಗೀಕರಿಸಲಾಗಿರುವುದರಿಂದ ಪರಸ್ಪರ ವಿರೋಧವಿಲ್ಲ.

ಇದಿಷ್ಟೂ ಪುಣ್ಯಕ್ಕೆ ಸಂಬಂಧಿಸಿದೆ. ಪ್ರಜೆಗಳು ಮಾಡಿದ ಪಾಪದ ಫಲವಂತೂ ದೇವತೆಗಳಿಗೆ ಸರ್ವಥಾ ಇಲ್ಲ ; ಅದು ಅಸುರರಿಗೇ ಸೇರತಕ್ಕದ್ದೆಂದು ತಿಳಿಯಬೇಕು.

### ಕೃತ್ಸ್ನಭಾವಾಧಿಕರಣ—೮

## ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ
## ೩.೪.೪೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಜ್ಞಾನಕ್ಕೆ ವಿಶೇಷಾಧಿಕಾರಿಗಳಾದ ಯತಿಗಳಿಗೆ ಇತರ ಎಲ್ಲ ಆಶ್ರಮದವರಿಗಿಂತಲೂ ಅತಿಶಯವಿದೆಯೆಂದು ಸಾಧಿಸಲಾಗುವುದು. ಪ್ರಸ್ತುತ

देवानामिति प्रकृतत्वादन्वेति। यतीनामेव ज्ञानाधिकारिणां सर्वाश्रमिवृत्तमत्वमिति साध्यमभिमतम्।

'कुटुम्बी शुचौ देशे' इत्यादिना गृहिणां मोक्षमुक्त्वा 'न च पुनरावर्तते' इति गृहिणोपसंहारस्तु देवानां कृत्स्नभावात् कृत्स्नानां गृहधर्माणाम् सत्त्वात् तत्परो न तु मनुष्यगृहस्थपरः। येन तद्बलेन गृहिणो

---

ವಾದುದರಿಂದ 'ದೇವಾನಾಂ' ಎಂಬ ಪದವು ಅನ್ವಿತವಾಗುವುದು. 'ಜ್ಞಾನಾಧಿಕಾರಿಗಳಾದ ಯತಿಗಳಿಗೇ ಸಮಸ್ತ ಆಶ್ರಮಿಗಳ ಮಧ್ಯೆ ಉತ್ತಮತ್ವವಿರುವುದು' ಎಂಬುದು ಇಲ್ಲಿ ಸಾಧ್ಯವೆಂದು ಅಭಿಮತವಾಗಿದೆ.

ಉಪಸಂಹಾರಸ್ತು – 'ಕುಟುಂಬೀ ಶುಚೌ ದೇಶೇ[1]' ಇತ್ಯಾದಿ ವಾಕ್ಯದಿಂದ ಗೃಹಸ್ಥಾಶ್ರಮಿಗಳಿಗೆ ಮೋಕ್ಷವಾಗುವುದೆಂದು ಹೇಳಿ 'ನ ಚ ಪುನರಾವರ್ತತೇ' ಎಂಬುದಾಗಿ ಗೃಹಸ್ಥಾಶ್ರಮಿಗಳ ವಿಷಯದಲ್ಲೇ ಉಪನಿಷತ್ ಸಮಾಪ್ತಿಯಾಗಿರುವುದು, ಕೃತ್ಸ್ನಭಾವಾತ್ – ದೇವತೆಗಳಿಗೆ ಸಮಸ್ತವಾದ ಗೃಹಸ್ಥಾಶ್ರಮಧರ್ಮಗಳು ಇರುವುದರಿಂದ ಅಂತಹ ದೇವತೆಗಳ ತಾತ್ಪರ್ಯವುಳ್ಳದ್ದು ಹೊರತು ಮನುಷ್ಯಗೃಹಸ್ಥಪರ

---

1. 'ಆಚಾರ್ಯಕುಲಾದ್ವೇದಮಧೀತ್ಯ ಯಥಾವಿಧಾನಂ ಗುರೋಃ ಕರ್ಮಾತಿಶೇಷೇಣ ಅಭಿಸಮಾವೃತ್ಯ ಕುಟುಂಬೀ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ ವಿದಧದಾತ್ಮನಿ ಸರ್ವೇಂದ್ರಿಯಾಣಿ ಪ್ರತಿಷ್ಠಾಪ್ಯಾಹಿಂಸನ್ ಸರ್ವಾಣಿ ಭೂತಾನ್ಯನ್ಯತ್ರ ತೀರ್ಥೇಭ್ಯಃ ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾವರ್ತತೇ' (ಛಾಂ. ೮.೧೫.೧).

ಆಚಾರ್ಯವಂಶದಿಂದ ವಿಧಿವತ್ತಾಗಿ ವೇದಾಧ್ಯಯನ ಮಾಡಿ, ಸಮಸ್ತ ಗುರುಸೇವೆಯನ್ನೂ ವಿಧ್ಯುಕ್ತವಾಗಿ ಆಚರಿಸಿ, ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಶುಚಿಯಾದ ಪ್ರದೇಶದಲ್ಲಿ ನೆಲೆಸಿ ವೇದಾಧ್ಯಯನವನ್ನು ಮಾಡುತ್ತ, ಧಾರ್ಮಿಕ ಕಾರ್ಯಗಳನ್ನು ನಡೆಸುತ್ತ, ಪರಮಾತ್ಮನಲ್ಲಿ ಇಂದ್ರಿಯಗಳನ್ನು ನೆಲೆಗೊಳಿಸಿ, ಯಜ್ಞಗಳನ್ನು ಬಿಟ್ಟು ಉಳಿದೆಡೆ ಪ್ರಾಣಿಗಳನ್ನು ಹಿಂಸಿಸದೆ, ಜೀವನದುದ್ದಕ್ಕೂ ಹೀಗೆಯೇ ನಡೆಯುತ್ತ, ಪರಮಾತ್ಮನ ಸಾಕ್ಷಾತ್ಕಾರ ಪಡೆದು ಬ್ರಹ್ಮಲೋಕವನ್ನು ಹೊಂದುವನು. ಅವನೆಂದೂ ಹಿಂತಿರುಗುವುದಿಲ್ಲ – ಎಂದು ಶ್ರುತಿಯ ಭಾವ.

यतेरप्युत्तमत्वमाशङ्क्येतेत्यर्थः । एवं हि यतिभ्यो देवानामुत्तमत्वं कथमित्यतोऽपि कृत्स्नभावादिति । देवानां कृत्स्नयतिधर्माणां भावादित्यर्थः । गृहिभ्यो यतीनां तेभ्योऽपि देवानामुत्तमत्वमित्याशयः ।

कृत्स्नेत्युक्त्या 'कृत्स्ना ह्येते गृहिणो देवाः' इति श्रुतिः सूचिता । देवाः इत्येव वाच्ये कृत्स्नभावादित्युक्तिः तेषां मुख्यगृहि-

---

ವಾದುದಲ್ಲ. ಆ ಉಪಸಂಹಾರವು ಮನುಷ್ಯಗೃಹಸ್ಥಪರವಾಗಿದ್ದರೆ ಅದರ ಬಲದಿಂದ ಯತಿಗಿಂತಲೂ ಗೃಹಸ್ಥಾಶ್ರಮಿಗೇ ಉತ್ತಮತ್ವವಿರುವುದೆಂದು ಶಂಕಿಸಬಹುದಾಗಿತ್ತು ಎಂದು ಅರ್ಥ. ಹಾಗಾದರೆ, ಯತಿಗಿಂತಲೂ ದೇವತೆಗಳಿಗೆ ಉತ್ತಮತ್ವವಿರುವುದು ಹೇಗೆ ಎಂಬ ಶಂಕೆಯನ್ನು ಪರಿಹರಿಸುವ ಸಲುವಾಗಿಯೂ 'ಕೃತ್ಸ್ನಭಾವಾತ್' ಎಂದು ಹೇಳಲಾಗಿದೆ. ದೇವತೆಗಳಿಗೆ ಸಮಸ್ತವಾದ ಯತಿಧರ್ಮಗಳೂ ಇರುವುದರಿಂದ ಎಂದು ಅರ್ಥ. ಗೃಹಸ್ಥಾಶ್ರಮಿಗಳಿಗಿಂತಲೂ ಯತಿಗಳಿಗೆ, ಯತಿಗಳಿಗಿಂತಲೂ ದೇವತೆಗಳಿಗೆ ಉತ್ತಮತ್ವವಿರುವುದೆಂದು ಅಭಿಪ್ರಾಯ.

**ಸೂತ್ರದ ಪದಗಳ ಸ್ವಾರಸ್ಯ**

'ಕೃತ್ಸ್ನ' ಎಂದು ಹೇಳಿದ್ದರಿಂದ '[1]ಕೃತ್ಸ್ನಾ ಹ್ಯೇತೇ ಗೃಹಿಣೋ ದೇವಾಃ' ಎಂಬ ಶ್ರುತಿಯು ಸೂಚಿತವಾಗುವುದು. ಕುಟುಂಬೀ ಶುಚೌ ದೇಶೇ ಇತ್ಯಾದಿ ಶ್ರುತಿಯು ದೇವಪರವಾದುದು ಎಂದು ಹೇಳುವ ಬದಲು 'ಕೃತ್ಸ್ನಭಾವಾತ್'

---

1. ಕೃತ್ಸ್ನಾ ಹ್ಯೇತೇ ಗೃಹಿಣೋ ದೇವಾಃ ಕೃತ್ಸ್ನಾ ಹ್ಯೇತೇ ಯತಯೋಽತ ಏತೇಷಾಂ ನ ಪುತ್ರಾ ದಾಯಮುಪಯಂತಿ ನ ಹ್ಯೇತೇ ಗೃಹಾನ್ ವಿಸೃಜಂತ್ಯರಾಗಾ ಅದ್ವೇಷಾ ಅಲೋಭಾಃ ಸರ್ವಭೋಗಾಃ ಸರ್ವಜ್ಞಾಃ ಸರ್ವಕರ್ತಾರಃ ಎಂದು ಪೌತ್ರಾಯಣ ಶ್ರುತಿ.

ಈ ದೇವತೆಗಳು ಪೂರ್ಣಗೃಹಸ್ಥಾಶ್ರಮಿಗಳು. ಇವರು ಪೂರ್ಣಯತಿಗಳು. ಇವರು ಪೂರ್ಣಯತಿಗಳಾದ್ದರಿಂದಲೇ ಇವರ ಪುತ್ರರು ಇವರು ಸಂಪಾದಿಸುವ ಸಂಪತ್ತಿಗೆ ಭಾಗಿಗಳಾಗುವುದಿಲ್ಲ. ಪೂರ್ಣಗೃಹಸ್ಥರಾದ್ದರಿಂದಲೇ ಇವರು ಗೃಹವನ್ನು ತ್ಯಜಿಸುವುದಿಲ್ಲ. ಯತಿಗಳಾದ್ದರಿಂದ ಇವರು ರಾಗದ್ವೇಷಲೋಭಾದಿರಹಿತರೂ ಜ್ಞಾನಿಗಳೂ ಆಗಿರುವರು. ಗೃಹಸ್ಥರಾದ್ದರಿಂದ ಸರ್ವಭೋಗಗಳನ್ನು ಅನುಭವಿಸುವವರೂ, ಯಜ್ಞಾದಿ ಸರ್ವ ಕರ್ಮಗಳನ್ನು ಮಾಡತಕ್ಕವರೂ ಆಗಿದ್ದಾರೆಂದು ಶ್ರುತಿಯ ಭಾವ.

त्वेन तत्परत्वोपपादनाय, गृहिणो यतेस्ततोऽपि देवानामाधिक्यलाभाय च। तुः उपसंहारस्य गतिसूचको वा एवार्थः सन् अध्याहृतदेवपर इत्यनेनान्वेति वा। उपसंहार इत्युक्तिर्मुक्तौ गृहस्थस्याधिक्ये तात्पर्यमस्तीति पूर्वपक्षदार्ढ्यसूचनाय।

कैमुत्येनापि यतितो देवानामाधिक्यमाह—

---

ಎಂದು ಹೇಳಿರುವುದು ದೇವತೆಗಳೇ ಮುಖ್ಯವಾಗಿ ಗೃಹಸ್ಥಾಶ್ರಮಿಗಳಾಗಿರುವುದರಿಂದ ಶ್ರುತಿಯು ದೇವಪರವಾಗಿದೆ ಎಂಬುದನ್ನು ಸಮರ್ಥಿಸಲು ಮತ್ತು ಗೃಹಸ್ಥಾಶ್ರಮಿಗಿಂತಲೂ ಯತಿಗೆ, ಯತಿಗಿಂತಲೂ ದೇವತೆಗಳಿಗೆ ಶ್ರೇಷ್ಠತ್ವವಿದೆಯೆಂಬ ಪ್ರಮೇಯದ ಲಾಭಕ್ಕಾಗಿ. 'ತು' ಶಬ್ದವು ಗೃಹಸ್ಥಾಶ್ರಮಿಗೆ ಸಂಬಂಧಿಸಿದಂತೆ ಉಪನಿಷತ್ತು ಸಮಾಪ್ತಿಯಾಗಿರುವುದರ ಆಶಯವನ್ನು ಸೂಚಿಸುವುದು[1]. ಅಥವಾ 'ಏವ' ಎಂಬ ಅರ್ಥವುಳ್ಳದ್ದಾಗಿ ಅಧ್ಯಾಹಾರಗೊಳ್ಳುವ 'ದೇವಪರಃ' ಎಂಬ ಪದದೊಂದಿಗೆ ಅನ್ವಿತವಾಗುವುದು. ಮುಕ್ತಿಯಲ್ಲಿ ಗೃಹಸ್ಥನಿಗೇ ಆಧಿಕ್ಯವಿರುವುದರಲ್ಲಿ ಶ್ರುತಿಗೆ ತಾತ್ಪರ್ಯವಿದೆ ಎಂಬ ಪೂರ್ವಪಕ್ಷದ ದಾರ್ಢ್ಯವನ್ನು ಸೂಚಿಸಲು 'ಉಪಸಂಹಾರಃ' ಎಂದು ಹೇಳಲಾಗಿದೆ.[2]

ಕೈಮುತ್ಯನ್ಯಾಯದಿಂದಲೂ ಯತಿಗಳಿಗಿಂತ ದೇವತೆಗಳಿಗೆ ಉತ್ತಮತ್ವ ಸಿದ್ಧವಾಗುವುದೆಂದು ಹೇಳುವ ಸೂತ್ರ—

---

1. 'ಕುಟುಂಬೀ ಶುಚೌ ದೇಶೇ' ಎಂಬ ಶ್ರುತಿ ದೇವ ಗೃಹಸ್ಥಪರವಾದದ್ದು ಎಂಬ ಗತಿಯನ್ನು ಸೂಚಿಸುವುದು.

2. ಉಪಸಂಹಾರವು ಪ್ರಬಲವಾದ ತಾತ್ಪರ್ಯಲಿಂಗವಾದುದರಿಂದ ಉಪನಿಷತ್ತಿನ ಉಪಸಂಹಾರದಲ್ಲಿ ಗೃಹಸ್ಥರಿಗೆ ಮೋಕ್ಷವನ್ನು ಹೇಳಿರುವುದು ಗೃಹಸ್ಥರಿಗೇ ಶ್ರೇಷ್ಠತೆಯೆಂಬ ಪೂರ್ವಪಕ್ಷವನ್ನು ದೃಢಪಡಿಸುವುದು ಎಂದು ಭಾವ.

॥ ॐ मौनवदितरेषामप्युपदेशात् ॐ ॥ ३.४.४८

मुनेर्भावो मौनं यतित्वम्। तद्वदितराश्रमधर्माणामपि 'देवा एव ब्रह्मचारिणो देवा एव गृहस्था देवा एव वनस्था यथा ह्येते मुनयः' इति श्रुतावुपदेशादित्यर्थः । यदा आश्रमद्वयकर्मित्वेनैव यतितो देवानामाधिक्यं किमु तदा सर्वाश्रमकर्मित्वेनेति भावः ॥ ८ ॥

अन्वयाधिकरणम्—९

॥ ॐ अनाविष्कुर्वन्नन्वयात् ॐ ॥ ३.४.४९

---

ಓಂ ಮೌನವದಿತರೇಷಾಮಪ್ಯುಪದೇಶಾತ್ ಓಂ ೩.೪.೪೮

**ಸೂತ್ರಾರ್ಥ**

ಮುನೇಃ ಭಾವಃ ಮೌನಂ ಎಂಬ ವ್ಯುತ್ಪತ್ತಿಯನ್ನನುಸರಿಸಿ 'ಮೌನ' ಎಂದರೆ ಯತಿತ್ವ. ಮೌನವತ್ - ಯತಿತ್ವದಂತೆ, ಇತರೇಷಾಮಪಿ - ಇತರ ಆಶ್ರಮಧರ್ಮ ಗಳನ್ನೂ ಕೂಡ, ಉಪದೇಶಾತ್ – [1]ದೇವಾ ಏವ ಬ್ರಹ್ಮಚಾರಿಣೋ ದೇವಾ ಏವ ಗೃಹಸ್ಥಾ ದೇವಾ ಏವ ವನಸ್ಥಾ ಯಥಾ ಹ್ಯೇತೇ ಮುನಯಃ' ಎಂಬ ಶ್ರುತಿಯಲ್ಲಿ ಉಪದೇಶಿಸಿರುವುದರಿಂದ ಎಂದು ಅರ್ಥ. ಆಶ್ರಮದ್ವಯದ ಕರ್ಮಾನುಷ್ಠಾನದಿಂದಲೇ ಯತಿಗಳಿಗಿಂತ ದೇವತೆಗಳಿಗೆ ಉತ್ತಮತ್ವವಿರುವಾಗ ಸಮಸ್ತ ಆಶ್ರಮಧರ್ಮಗಳನ್ನು ಅನುಷ್ಠಾನ ಮಾಡುವ ಅವರಿಗೆ ಆಧಿಕ್ಯವಿರುವುದೆಂದು ಹೇಳುವುದೇನು ಎಂದು ಭಾವ.

ಅನ್ವಯಾಧಿಕರಣ—೯

ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ ೩.೪.೪೯

---

1. 'ದೇವಾ ಏವ ಬ್ರಹ್ಮಚಾರಿಣೋ ದೇವಾ ಏವ ಗೃಹಸ್ಥಾ ದೇವಾ ಏವ ವನಸ್ಥಾ ಯಥಾ ಹ್ಯೇತೇ ಮುನಯ ಏವ ಸರ್ವವರ್ಣಾಃ ಸರ್ವಾಶ್ರಮಾಃ ಸರ್ವಂ ಹ್ಯೇತೇ ಕರ್ಮ ಕುರ್ವಂತಿ' ಎಂದು ಕೌಂಠರವ್ಯಶ್ರುತಿ.

अत्रापरोक्षज्ञानसङ्गतपरोक्षज्ञानस्यातिगोप्यत्वं साध्यते । अनाविष्कुर्वन् सभाचत्वरादिष्वाविष्कारमकुर्वन्, उपदेशमित्यनुवर्त्य, कुर्यादिति शेषः । कुतः ? अन्वयात् उपपत्तेरित्यर्थः । आविष्कारे अयोग्यानामपि ज्ञानप्राप्त्याऽनर्थप्राप्तिरूपयुक्तेरित्यर्थः । अन्वयादित्युक्तिः अन्वीयते साध्येन सम्बध्यत इति युक्तेर्व्याप्तिमत्त्वं वक्तुमिति ॥ ९ ॥

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಭಗವದಪರೋಕ್ಷಜ್ಞಾನಕ್ಕೆ ಸಂಗತವಾದ ಪರೋಕ್ಷಜ್ಞಾನವು ಅತಿಗೋಪ್ಯವೆಂದು ಸಮರ್ಥಿಸಲಾಗುವುದು. ಅನಾವಿಷ್ಕುರ್ವನ್ ಉಪದೇಶಂ ಕುರ್ಯಾತ್ – ಸಭೆ, ಅಂಗಳ ಮೊದಲಾದವುಗಳಲ್ಲಿ ಬಹಿರಂಗಗೊಳಿಸದೆ ಉಪದೇಶವನ್ನು ಮಾಡತಕ್ಕದ್ದು. ಇಲ್ಲಿ 'ಉಪದೇಶಂ' ಎಂಬ ಪದವನ್ನು ಹಿಂದಿನ ಸೂತ್ರದಿಂದ ಅನುವೃತ್ತಿ ಮಾಡಿಕೊಳ್ಳಬೇಕು. 'ಕುರ್ಯಾತ್' ಎಂಬ ಪದ ಶೇಷಪೂರಣವಾಗಿದೆ. ಬಹಿರಂಗವಾಗಿ ಉಪದೇಶಿಸಬಾರದೇಕೆ ಎಂಬ ಶಂಕೆಗೆ ಉತ್ತರ — 'ಅನ್ವಯಾತ್'. ಉಪಪತ್ತಿ ಇರುವುದರಿಂದ ಎಂದು ಅರ್ಥ. 'ತತ್ತ್ವವನ್ನು ಬಹಿರಂಗವಾಗಿ ಉಪದೇಶಿಸಿದರೆ ಅಯೋಗ್ಯರಿಗೂ ಜ್ಞಾನ ಲಭಿಸುವುದರಿಂದ ಅನರ್ಥಪ್ರಾಪ್ತಿಯಾಗುವುದು' ಎಂಬ ಯುಕ್ತಿಯಿಂದ ಎಂದು ಅರ್ಥ. ಯುಕ್ತಿಗೆ[1] ಸಾಧ್ಯದ ವ್ಯಾಪ್ತಿ ಇದೆ ಎಂದು ಹೇಳಲು 'ಅನ್ವೀಯತೇ' ಅಂದರೆ 'ಸಾಧ್ಯದೊಂದಿಗೆ ಸಂಬಂಧವನ್ನು ಪಡೆದಿರತಕ್ಕದ್ದು' ಎಂಬ ಅರ್ಥವುಳ್ಳ 'ಅನ್ವಯಾತ್' ಎಂಬ ಪದವನ್ನು ಪ್ರಯೋಗಿಸಲಾಗಿದೆ.

---

1. 'ಬಹಿರಂಗಗೊಳಿಸದೆ ಉಪದೇಶಿಸತಕ್ಕದ್ದು' ಎಂಬುದು ಸಾಧ್ಯ. ತತ್ತ್ವವನ್ನು ಬಹಿರಂಗವಾಗಿ ಉಪದೇಶಿಸಿದರೆ ಅಯೋಗ್ಯರಿಗೂ ಜ್ಞಾನ ಲಭಿಸಿ ಅನರ್ಥಪ್ರಾಪ್ತಿಯಾಗುವುದು' ಎನ್ನುವುದು ಆ ಸಾಧ್ಯವನ್ನು ಸಮರ್ಥಿಸುವ ಯುಕ್ತಿ. ಈ ಯುಕ್ತಿಯು ಸಾಧ್ಯದ ವ್ಯಾಪ್ತಿಯನ್ನು ಪಡೆದಿದೆ ಎಂದು 'ಅನ್ವಯ' ಪದವು ಸೂಚಿಸುವುದೆಂದು ಭಾವ.

ऐहिकाधिकरणम्—१०

॥ ॐ ऐहिकमप्रस्तुतप्रतिबन्धे तद्दर्शनात् ॐ ॥ ३.४.५०

अत्र ज्ञानस्य प्रतिबन्धाभावे साधनसम्पूर्तिजन्मन्येवोदयः साध्यते। इह जन्मनि भवमैहिकम्। ज्ञानमित्यस्ति। अप्रस्तुतप्रतिबन्धे प्रारब्धप्रतिबन्धाभावे ज्ञानमैहिकं इह जन्मन्येव भवति। न चेज्जन्मान्तर इत्यर्थः। कुतः? तद्दर्शनात्। 'श्रुत्वाऽऽत्मानं मतिपूर्वं ह्युपास्येहैव दृष्टिं' इति श्रुतौ उक्तार्थस्य दर्शनादित्यर्थः ॥ १० ॥

---

ಐಹಿಕಾಧಿಕರಣ—೧೦

## ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ ೩.೪.೫೦

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಪ್ರತಿಬಂಧಕವಿಲ್ಲದಿದ್ದಲ್ಲಿ ಸಾಧನವು ಪೂರ್ಣವಾಗುವ ಜನ್ಮದಲ್ಲಿಯೇ ಭಗವಂತನ ಅಪರೋಕ್ಷಜ್ಞಾನವು ಉದಯಿಸುವುದೆಂದು ಈ ಅಧಿಕರಣದಲ್ಲಿ ಸಮರ್ಥಿಸಲಾಗುವುದು.

ಐಹಿಕವೆಂದರೆ ಈ ಜನ್ಮದಲ್ಲಿ ಉಂಟಾಗತಕ್ಕದ್ದು. 'ಜ್ಞಾನಂ' ಎಂಬ ಪದವು ಅಧ್ಯಾಹೃತವಾಗುವುದು. ಅಪ್ರಸ್ತುತಪ್ರತಿಬಂಧೇ – ಪ್ರಾರಬ್ಧಕರ್ಮದ ಪ್ರತಿಬಂಧಕವಿಲ್ಲದಿದ್ದಲ್ಲಿ, ಜ್ಞಾನಂ ಐಹಿಕಂ – ಅಪರೋಕ್ಷಜ್ಞಾನವು ಈ ಜನ್ಮದಲ್ಲಿಯೇ ಲಭಿಸುವುದು. ಇಲ್ಲದಿದ್ದಲ್ಲಿ ಮತ್ತೊಂದು ಜನ್ಮದಲ್ಲಿ ಲಭಿಸುವುದೆಂದು ಅರ್ಥ. ಏಕೆಂದರೆ, ತದ್ದರ್ಶನಾತ್ – '[1]ಶ್ರುತ್ವಾಽಽತ್ಮಾನಂ ಮತಿಪೂರ್ವಂ ಹ್ಯುಪಾಸ್ಯ ಇಹೈವ ದೃಷ್ಟಿಂ' ಎಂಬ ಶ್ರುತಿಯಲ್ಲಿ ಇಲ್ಲಿ ಹೇಳಿದ ವಿಷಯವು ಕಂಡಿರುವುದರಿಂದ ಎಂದು ಅರ್ಥ.

---

1. 'ಶ್ರುತ್ವಾಽಽತ್ಮಾನಂ ಮತಿಪೂರ್ವಂ ಹ್ಯುಪಾಸ್ಯ ಇಹೈವ ದೃಷ್ಟಿಂ ಪರಮಸ್ಯ ವಿಂದೇತ್ । ಯದ್ಯಾರಬ್ಧಂ ಕರ್ಮ ನಿಬಂಧಕಂ ಸ್ಯಾತ್ ಪ್ರೇತ್ಯೈವ ಪಶ್ಯೇದ್ ಯೋಗಮೇವಾನ್ವವೇಕ್ಷ ॥' ಎಂದು ಸೌಪರ್ಣಶ್ರುತಿ.

मुक्तिफलाधिकरणम्—११

॥ ॐ एवं मुक्तिफलानियमस्तदवस्थावधृतेस्तदवस्थावधृते: ॐ ॥ ३.४.५१

अत्र ज्ञानस्य स्वोत्पत्तिजन्मानन्तरमेवाप्रतिबन्धे मुक्त्यार्जकत्वं साध्यते। एवं ज्ञान इव मुक्तिफले अनियमः अप्रतिबन्धे तद्देहानन्तरमेव न चेद् देहान्तरावसाने इत्येव। न तु ज्ञानोत्पतिजन्मानन्तरमेवेति नियम

---

ಮುಕ್ತಿಫಲಾಧಿಕರಣ—೧೧

ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇ - ಸ್ತದವಸ್ಥಾವಧೃತೇಃ ಓಂ ೩.೪.೫೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವದಪರೋಕ್ಷಜ್ಞಾನವು, ಪ್ರತಿಬಂಧಕವಿಲ್ಲದಿದ್ದಲ್ಲಿ ತಾನು ಉತ್ಪನ್ನವಾದ ಜನ್ಮ ಮುಗಿದ ಕೂಡಲೇ ಮುಕ್ತಿಯನ್ನು ಸಂಪಾದಿಸಿಕೊಡುವುದೆಂದು ಸಮರ್ಥಿಸಲಾಗುವುದು.

ಏವಂ – ಜ್ಞಾನದ ವಿಷಯದಲ್ಲಿ ಹೇಗೋ ಹಾಗೆ, ಮುಕ್ತಿಫಲಾನಿಯಮಃ – ಮುಕ್ತಿರೂಪವಾದ ಫಲದ ವಿಷಯದಲ್ಲೂ ನಿಯಮವಿಲ್ಲ. ಪ್ರತಿಬಂಧಕವಿಲ್ಲದಿದ್ದರೆ ಆ ದೇಹವನ್ನು ತ್ಯಜಿಸಿದ ಕೂಡಲೆ ಮುಕ್ತಿಯು ಲಭಿಸುವುದು ; ಪ್ರತಿಬಂಧಕವಿರುವು

---

ಭಗವದ್ವಿಷಯಕ ಶ್ರವಣವನ್ನು ಮಾಡಿದ ನಂತರ ಮನನವನ್ನೂ ಅನಂತರ ನಿದಿಧ್ಯಾಸನವನ್ನೂ ಮಾಡಿ ಜ್ಞಾನಪ್ರತಿಬಂಧಕವಾದ ಪ್ರಾರಬ್ಧಕರ್ಮವಿಲ್ಲದಿದ್ದಲ್ಲಿ ಅದೇ ಜನ್ಮದಲ್ಲಿ ಭಗವಂತನ ಅಪರೋಕ್ಷಜ್ಞಾನವನ್ನು ಪಡೆಯುವನು. ಪ್ರಬಲವಾದ ಪ್ರಾರಬ್ಧಕರ್ಮ ಪ್ರತಿಬಂಧಕವಾಗಿರುವುದಾದಲ್ಲಿ ಆ ಶರೀರವನ್ನು ತ್ಯಜಿಸಿ ದೇಹಾಂತರವನ್ನು ಪಡೆದು ಪುನಃ ಶ್ರವಣಾದಿಗಳನ್ನು ಸ್ವಲ್ಪಕಾಲ ಮಾಡಿದನಂತರವೇ ಅಪರೋಕ್ಷಜ್ಞಾನವನ್ನು ಪಡೆಯುವನು ಎಂದು ಶ್ರುತಿಯ ಭಾವ.

इत्यर्थः। ज्ञानोत्पत्तिजन्मनि मुक्त्यभावे कदाऽपि नेति कुतो न कल्प्यते, प्रतिबन्धकल्पना कुतः? तदवस्थावधृतेः। तस्मिन् ब्रह्मण्यवस्थास्थितिर्यस्य तस्य ब्रह्मसंस्थस्य मुक्तिफलावधारणात् 'ब्रह्मसंस्थोऽमृतत्वमेत्येव' इति श्रुतावित्यर्थः।

मुक्त्यनियम इत्येव पूर्तौ फलेत्युक्तिः सर्वपुमर्थानां ज्ञानफलत्वोक्तावपि तेषामानुषङ्गिकत्वं, मुक्तेरेव साक्षात् फलत्वमिति सूचयितु-

---

ದಾದಲ್ಲಿ ಮತ್ತೊಂದು ದೇಹಾವಸಾನವಾದ ಮೇಲೆಯೇ ಮುಕ್ತಿ ಎಂದೇ ಹೊರತು ಜ್ಞಾನೋತ್ಪತ್ತಿಯಾದ ಜನ್ಮ ಮುಗಿದಕೂಡಲೇ ಮುಕ್ತಿಯಾಗುವುದೆಂಬ ನಿಯಮವಿಲ್ಲವೆಂದು ಅರ್ಥ.

ಜ್ಞಾನೋತ್ಪತ್ತಿಯಾದ ಜನ್ಮ ಮುಗಿದ ಕೂಡಲೇ ಮುಕ್ತಿಯಾಗದಿದ್ದಲ್ಲಿ ಎಂದೂ ಮುಕ್ತಿಯಾಗಲಾರದೆಂದು ಕಲ್ಪಿಸಬಾರದೇಕೆ ? ಕೂಡಲೇ ಮುಕ್ತಿಯಾಗದಿರುವುದಕ್ಕೆ ಪ್ರತಿಬಂಧಕವನ್ನೇಕೆ ಕಲ್ಪಿಸಬೇಕು ? ಎಂಬ ಆಶಂಕೆಗೆ ಸಮಾಧಾನ— ತದವಸ್ಥಾವಧೃತೇಃ – '[1]ಬ್ರಹ್ಮಸಂಸ್ಥೋಽಮೃತತ್ವಮೇತ್ಯೇವ' ಎಂಬ ಶ್ರುತಿಯಲ್ಲಿ ಬ್ರಹ್ಮನ ವಿಷಯದಲ್ಲಿ ಅವಸ್ಥಾ ಎಂದರೆ ಜ್ಞಾನವುಳ್ಳ ಬ್ರಹ್ಮಸಂಸ್ಥನಿಗೆ ಮುಕ್ತಿಫಲ ದೊರಕಿಯೇ ತೀರುವುದೆಂದು ನಿಶ್ಚಯವಾಗಿ ಹೇಳಿರುವುದರಿಂದ ಎಂದು ಅರ್ಥ.

**'ಮುಕ್ತಿಫಲಾನಿಯಮಃ' ಎಂಬ ಪದದ ಸ್ವಾರಸ್ಯ ಮತ್ತು ದ್ವಿರುಕ್ತಿಯ ಪ್ರಯೋಜನ**

'ಮುಕ್ತ್ಯನಿಯಮಃ' ಎಂದಿಷ್ಟೇ ಸಾಕಾಗಿದ್ದರೂ, ಎಲ್ಲ ಪುರುಷಾರ್ಥಗಳೂ ಜ್ಞಾನದ ಫಲಗಳೆಂದು ಹೇಳಲಾಗಿದ್ದರೂ ಅವುಗಳೆಲ್ಲವೂ ಜ್ಞಾನಕ್ಕೆ ಗೌಣವಾದ ಫಲಗ

---

1. 'ಧರ್ಮೀ ಸ್ವರ್ಗಂ ವಿಧರ್ಮೀ ನಿರಯಮೇತ್ಯೇವ ಬ್ರಹ್ಮಸಂಸ್ಥೋಽಮೃತತ್ವಮೇತ್ಯೇವ. ಎಂದು ಶ್ರುತಿ.

ಪುಣ್ಯಕರ್ಮಗಳನ್ನು ಮಾಡಿದವನು ಸ್ವರ್ಗವನ್ನೂ ಪಾಪಕರ್ಮಗಳನ್ನೂ ಮಾಡಿದವನು ನರಕವನ್ನೂ ಹೊಂದಿಯೇ ತೀರುವನು. ಬ್ರಹ್ಮಜ್ಞಾನಿಯು ಮೋಕ್ಷವನ್ನು ತಪ್ಪದೆ ಪಡೆಯುವನು ಎಂದು ಶ್ರುತಿಯ ಭಾವ.

मिति तत्त्वप्रदीपोक्तं ध्येयम्। द्विरुक्तिरुक्तस्य सर्वस्य प्रामाणिकत्व-सूचनार्था ।

"सर्वप्रमाणसिद्धत्वं वक्तुमाध्यायमूलतः ।
अध्यायान्ते द्विरुक्तिः स्यात् पूर्वोक्तस्यावधारणात् ॥" इत्युक्तेः ।
॥ ११ ॥

इति श्रीमद्राघवेन्द्रयतिकृतायां तन्त्रदीपिकायां
तृतीयाध्यायस्य चतुर्थः पादः । तृतीयाध्यायः सम्पूर्णः
॥ श्रीकृष्णार्पणमस्तु ॥

---

ಳಿಂದೂ ಮುಕ್ತಿಯೇ ಸಾಕ್ಷಾತ್ ಫಲವೆಂದೂ ಸೂಚಿಸಲು 'ಮುಕ್ತಿಫಲಾನಿಯಮಃ' ಎಂದು ಹೇಳಲಾಗಿದೆ ಎಂದು ತತ್ತ್ವಪ್ರದೀಪದಲ್ಲಿ ಹೇಳಿರುವುದನ್ನು ತಿಳಿಯತಕ್ಕದ್ದು.

ಸರ್ವಪ್ರಮಾಣಸಿದ್ಧತ್ವಂ ವಕ್ತುಂ ಮಾಧ್ಯಾಯಮೂಲತಃ ।
ಅಧ್ಯಾಯಾಂತೇ ದ್ವಿರುಕ್ತಿಃ ಸ್ಯಾತ್ ಪೂರ್ವೋಕ್ತಸ್ಯಾವಧಾರಣಾತ್ ॥

ಎಂದು ಹೇಳಿರುವಂತೆ ಈ ಅಧ್ಯಾಯದಲ್ಲಿ ಪ್ರತಿಪಾದಿತವಾಗಿರುವ ಎಲ್ಲ ವಿಷಯುಗಳೂ ಪ್ರಾಮಾಣಿಕವಾದದ್ದು ಎಂದು ಸೂಚಿಸಲು ದ್ವಿರುಕ್ತಿಯನ್ನು ಈ ಸೂತ್ರದಲ್ಲಿ ಉಪಯೋಗಿಸಲಾಗಿದೆ.

ಶ್ರೀ ರಾಘವೇಂದ್ರಯತಿಗಳು ವಿರಚಿಸಿರುವ ತಂತ್ರದೀಪಿಕೆಯಲ್ಲಿ
ಮೂರನೇ ಅಧ್ಯಾಯದ ನಾಲ್ಕನೆ ಪಾದವು ಸಮಾಪ್ತವಾಯಿತು.
ತೃತೀಯಾಧ್ಯಾಯವು ಸಮಾಪ್ತವಾಯಿತು.

## अथ चतुर्थाध्यायः

### प्रथम पादः

आवृत्त्यधिकरणम्—१

एवमथ ब्रह्मजिज्ञासापादार्थान् निरूप्यात्राध्यायेऽतःशब्दोक्तं कर्मक्षयोत्क्रान्तिमार्गभोगात्मकमोक्षस्वरूपं निरूप्यते । आद्यपादे प्राथम्यात् कर्मक्षयाख्यं प्राधान्येन विचार्यते । तत्र सप्तभिर्नयैः अत्यन्तावश्यंभावि साधनं विचार्यते ।

॥ ॐ आवृत्तिरसकृदुपदेशात् ॐ ॥ ४.१.१

---

## ನಾಲ್ಕನೆ ಅಧ್ಯಾಯ – ಪ್ರಥಮಪಾದ

ಆವೃತ್ತ್ಯಧಿಕರಣ––೧

**ಈ ಅಧ್ಯಾಯದ ಮತ್ತು ಪಾದದ ವಿಷಯ**

ಹೀಗೆ 'ಅಥ' ಮತ್ತು 'ಬ್ರಹ್ಮಜಿಜ್ಞಾಸಾ' ಪದಗಳ ಅರ್ಥಗಳನ್ನು ನಿರೂಪಿಸಿ ಈ ಅಧ್ಯಾಯದಲ್ಲಿ 'ಅತಃ' ಶಬ್ದದಿಂದ ಹೇಳಲಾಗಿರುವ ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ ಮತ್ತು ಭೋಗ ಎಂಬ ಮೋಕ್ಷಗಳ ಸ್ವರೂಪವನ್ನು ನಿರೂಪಿಸಲಾಗುವುದು. ಮೊದಲನೇ ಪಾದದಲ್ಲಿ, ನಾಲ್ಕು ವಿಧ ಮೋಕ್ಷಗಳಲ್ಲಿ ಮೊದಲನೆಯದಾದ ಕಾರಣ ಕರ್ಮಕ್ಷಯರೂಪವಾದ ಮುಕ್ತಿಯನ್ನು ಪ್ರಧಾನವಾಗಿ ವಿಚಾರಿಸಲಾಗುವುದು. ಈ ಪಾದದಲ್ಲಿ ಮೊದಲನೆ ಏಳು ಅಧಿಕರಣಗಳಿಂದ ಮುಕ್ತಿಗೆ ಅತ್ಯಂತ ಆವಶ್ಯಕವಾಗಿರುವ ಸಾಧನವನ್ನು ವಿಚಾರಿಸಲಾಗುವುದು.

ಓಂ ಆವೃತ್ತಿರಸಕೃದುಪದೇಶಾತ್ ಓಂ ೪.೧.೧

अत्र श्रवणादेरावृत्तिः कार्येति साध्यते । ज्ञानार्थं श्रवणादेरावृत्तिः कार्येति शेषः । कुतः ? 'स आत्मा तत्त्वमसि' इत्युद्दालकेन श्वेतकेतुं प्रति असकृत् अनेकवारं तत्त्वोपदेशादित्यर्थः । शिष्येण श्रवणाद्यावृत्तेरकर्तव्यत्वे असकृदुपदेशो व्यर्थः स्यादिति भावः ।

श्रवणावृत्तिकर्तव्यत्वमनेन सिद्धम् । त्रितयकर्तव्यत्वं च साधयति—

॥ ॐ लिङ्गाच्च ॐ ॥ ४.१.२

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಶ್ರವಣ ಮೊದಲಾದವುಗಳ ಆವೃತ್ತಿಯನ್ನು ಮಾಡತಕ್ಕದ್ದೆಂದು ಸಮರ್ಥಿಸಲಾಗುವುದು.

ಭಗವದಪರೋಕ್ಷಜ್ಞಾನಕ್ಕೋಸ್ಕರ, ಆವೃತ್ತಿಃ - ಶ್ರವಣ ಮೊದಲಾದವುಗಳ ಆವೃತ್ತಿಯನ್ನು ಮಾಡತಕ್ಕದ್ದು. ಇಲ್ಲಿ 'ಮಾಡತಕ್ಕದ್ದು' ಎಂಬ ಪದ ಶೇಷ ಪೂರಣವಾಗಿದೆ. ಆವೃತ್ತಿಯನ್ನು ಮಾಡಬೇಕೇಕೆ ಎಂಬ ಶಂಕೆಗೆ ಉತ್ತರ — ಅಸಕೃದುಪದೇಶಾತ್ – 'ಸ ಆತ್ಮಾ ತತ್ತ್ವಮಸಿ' ಎಂದು ಉದ್ದಾಲಕರು ಶ್ವೇತ ಕೇತುವನ್ನು ಕುರಿತು ಅನೇಕಸಲ ತತ್ತ್ವೋಪದೇಶ ಮಾಡಿರುವುದರಿಂದ ಎಂದು ಅರ್ಥ. ಶಿಷ್ಯನು ಶ್ರವಣಾದಿಗಳ ಆವೃತ್ತಿಯನ್ನು ಮಾಡಬೇಕಿಲ್ಲವಾದಲ್ಲಿ ಅನೇಕಸಲ ಉಪ ದೇಶವು ವ್ಯರ್ಥವಾದೀತೆಂದು ಭಾವ.

ಈ ಮೇಲಿನ ಸೂತ್ರದಿಂದ ಶ್ರವಣದ ಆವೃತ್ತಿಯನ್ನು ಮಾಡತಕ್ಕದ್ದೆಂದು ಸಿದ್ಧವಾಯಿತು. ಶ್ರವಣ, ಮನನ, ನಿದಿಧ್ಯಾಸನ – ಈ ಮೂರರ ಆವೃತ್ತಿಯನ್ನೂ ಮಾಡತಕ್ಕದ್ದೆಂದು ಸಾಧಿಸುವ ಸೂತ್ರ—

ಓಂ ಲಿಂಗಾಚ್ಚ ಓಂ ೪.೧.೨

'स तपोऽतप्यत । पुनरेव वरुणं पितरमुपससार' इत्यादिना ताद् भृगोः श्रवणादेरावर्तनरूपलिङ्गाच्च श्रवणादीनामावृत्तिः कार्येत्यर्थः ॥ १ ॥

आत्माधिकरणम्—२

॥ ॐ आत्मेति तूपगच्छन्ति ग्राहयन्ति च ॐ ॥ ४.१.३

अत्रात्मत्वोपास्तेः नित्यशः कर्तव्यत्वं साध्यते । आत्मशब्दस्याऽवृत्तिः । आद्यो रूढया विष्णुपरः । अन्य आदत्ते भृत्यानिति

---

**ಸೂತ್ರಾರ್ಥ**

'ಸ ತಪೋಽತಪ್ಯತ । ಪುನರೇವ ವರುಣಂ ಪಿತರಮುಪಸಸಾರ' ಇತ್ಯಾದಿ ಶ್ರುತಿಯಿಂದ ತಿಳಿದುಬರುವ 'ಭೃಗುಋಷಿಯು ಮಾಡಿರುವ ಶ್ರವಣಾದಿಗಳ ಆವೃತ್ತಿ' ಎಂಬ ಲಿಂಗದಿಂದಲೂ ಶ್ರವಣ ಮೊದಲಾದವುಗಳ ಆವೃತ್ತಿಯನ್ನು ಮಾಡತಕ್ಕದ್ದೆಂದು ಅರ್ಥ.

ಆತ್ಮಾಧಿಕರಣ—೨

ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ
೪.೧.೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಆತ್ಮತ್ವೋಪಾಸನೆಯನ್ನು ನಿತ್ಯವೂ ಮಾಡತಕ್ಕದ್ದೆಂದು ಸಮರ್ಥಿಸಲಾಗುವುದು. 'ಆತ್ಮ' ಶಬ್ದದ ಆವೃತ್ತಿಯನ್ನು ಮಾಡಬೇಕು. ಮೊದಲನೆ ಆತ್ಮಶಬ್ದವು ರೂಢಿಯಿಂದ ವಿಷ್ಣುವನ್ನು ಹೇಳುವ ತಾತ್ಪರ್ಯವುಳ್ಳದ್ದು. ಇನ್ನೊಂದು ಆತ್ಮಶಬ್ದವು 'ಆದತ್ತೇ ಭೃತ್ಯಾನ್' – 'ಭೃತ್ಯರನ್ನು ಸ್ವೀಕರಿಸುವವನು' ಎಂಬ ವ್ಯುತ್ಪತ್ತ್ಯನುಸಾರವಾಗಿ 'ಸ್ವಾಮಿ' ಎಂಬ ಅರ್ಥವನ್ನು ಹೇಳುವುದು.

स्वामिवाची। आङ्पूर्वाद्दाञ आतो मनिन्निति मनिन्प्रत्यये दस्य तत्वे आतो लोपे चैवंरूपत्वात्। 'यच्चाप्नोति यदादत्ते' इति निरुक्तेः। तुरेव।

आत्मा विष्णुरात्मा मम स्वामीत्येवोपगच्छन्ति उपासते जानन्ति च सन्तः। ग्राहयन्ति च शिष्यान् शिष्येभ्य उपदिशन्ति यतोऽतो विष्णुर्मे स्वामीति सदोपास्तिः सर्वथा कार्येत्यर्थः।

---

ಏಕೆಂದರೆ 'ಆಙ್' ಎಂಬ ಉಪಸರ್ಗಸಹಿತವಾದ 'ದಾಞ್' ಧಾತುವಿಗೆ 'ಆತೋ ಮನಿನ್' (ಪಾ.ಸೂ. ೩.೨.೭೪) ಸೂತ್ರದ ಪ್ರಕಾರ 'ಮನಿನ್' ಪ್ರತ್ಯಯವನ್ನು ಸೇರಿಸಿದ ವೇಳೆ 'ದಾ ಧಾತುವಿನ ದಕಾರಕ್ಕೆ ತಕಾರವು ಆದೇಶವಾಗಿ ಬಂದಾಗ ಮತ್ತು 'ದಾ' ಎಂಬಲ್ಲಿರುವ ಆಕಾರವು ಲೋಪವಾದಾಗ 'ಆತ್ಮನ್' ಎಂದು ರೂಪ ವಾಗುವುದು. 'ಯಚ್ಚಾಪ್ನೋತಿ ಯದಾದತ್ತೇ' ಎಂಬ ನಿರುಕ್ತಿಯಿಂದಲೂ ಈ ಅರ್ಥವು ಲಭಿಸುವುದು. ಸೂತ್ರದಲ್ಲಿರುವ 'ತು' ಶಬ್ದಕ್ಕೆ 'ಏವ' ಎಂದು ಅರ್ಥ.

ಆತ್ಮಾ - ವಿಷ್ಣುವು, ಆತ್ಮಾ ತು - 'ನನ್ನ ಸ್ವಾಮಿ' ಎಂಬುದಾಗಿಯೇ, ಉಪ ಗಚ್ಛಂತಿ – ಸಜ್ಜನರು ಉಪಾಸನೆ ಮಾಡುವರು ಮತ್ತು ತಿಳಿಯುವರು. ಗ್ರಾಹಯಂತಿ ಚ - ಶಿಷ್ಯರನ್ನು ಕುರಿತು ಉಪದೇಶವನ್ನೂ ಮಾಡುವರು. ಆದಕಾರಣ 'ವಿಷ್ಣುವು ನನ್ನ ಸ್ವಾಮಿ, ಎಂಬುದಾಗಿ ಉಪಾಸನೆಯನ್ನು ಯಾವಾಗಲೂ ಸರ್ವಥಾ ಮಾಡ ತಕ್ಕದ್ದು ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

'[1]ವಿಷ್ಣು ಆತ್ಮನು' ಎಂಬ ಅರ್ಥ ಲಭಿಸುವುದಕ್ಕಾಗಿ ಸೂತ್ರದಲ್ಲಿ 'ಸ್ವಾಮೀ'

---

1. ಸೂತ್ರದಲ್ಲಿರುವ ಆತ್ಮಶಬ್ದವನ್ನು ಆವೃತ್ತಿಮಾಡಿಕೊಂಡು ಒಂದು ಆತ್ಮಶಬ್ದಕ್ಕೆ ವಿಷ್ಣುವೆಂದೂ ಮತ್ತೊಂದು ಆತ್ಮಶಬ್ದಕ್ಕೆ ಸ್ವಾಮಿಯೆಂದೂ ವ್ಯಾಖ್ಯಾನ ಮಾಡಿದಾಗ 'ವಿಷ್ಣುವು ಸ್ವಾಮಿ' ಎಂಬ ಅರ್ಥ ಲಭಿಸುವುದು. ಆತ್ಮಶಬ್ದದ ಬದಲು ಸೂತ್ರದಲ್ಲಿ 'ಸ್ವಾಮೀ' ಎಂಬ ಪದವನ್ನೇ ಪ್ರಯೋಗಿಸಿದ್ದರೆ 'ವಿಷ್ಣುವು ಸ್ವಾಮಿ' ಎಂಬ ಅರ್ಥ ಸೂತ್ರದ ಪದಗಳಿಂದ ಲಭಿಸು ತ್ತಿರಲಿಲ್ಲವೆಂದು ಭಾವ.

विष्णुरात्मेत्यर्थलाभाय स्वामीत्यनुक्तिः । 'आत्मानमेवाहं विजानीयाम्', 'आत्मेत्येवोपास्व', 'आत्मेत्युपासनं कार्यम्' इत्यादिवचनसूचनाय च । उपगच्छन्तीत्येवमुक्तिः ज्ञानार्थत्वस्यापि लाभाय । उपगच्छन्ति ग्राहयन्ति चेत्युक्तिर्द्वयोरप्यावश्यकत्वद्योतनाय। आनन्दादय इत्यत्रोक्तस्य आत्मत्वोपासनस्यात्यावश्यकत्वसूचनायात्र पुनरुक्तिः ॥ २ ॥

न प्रतीकाधिकरणम्—३

॥ ॐ न प्रतीके न हि सः ॐ ॥ ४.१.४

---

ಎಂದು ಹೇಳಿಲ್ಲ. 'ಆತ್ಮಾನಮೇವ ಅಹಂ ವಿಜಾನೀಯಾಂ' ಆತ್ಮೇತ್ಯೇವ ಉಪಾಸ್ವ', 'ಆತ್ಮೇತ್ಯುಪಾಸನಂ ಕಾರ್ಯಂ' ಇತ್ಯಾದಿ ವಚನಗಳನ್ನು ಸೂಚಿಸುವ ಸಲುವಾಗಿಯೂ ಸೂತ್ರದಲ್ಲಿ 'ಸ್ವಾಮಿ' ಎಂದು ಹೇಳದೆ 'ಆತ್ಮಾ' ಎಂದು ಹೇಳಲಾಗಿದೆ. [1]'ತಿಳಿಯುವರು' ಎಂಬ ಅರ್ಥವೂ ಲಭಿಸಲೆಂಬ ಉದ್ದೇಶದಿಂದ 'ಉಪಗಚ್ಛಂತಿ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಉಪಾಸನೆ ಮತ್ತು ಉಪದೇಶ ಎರಡೂ ಆವಶ್ಯಕವೆಂದು ಸೂಚಿಸಲು 'ಉಪಗಚ್ಛಂತಿ ಗ್ರಾಹಯಂತಿ ಚ' ಎಂದು ಹೇಳಲಾಗಿದೆ. 'ಆನಂದಾದಯಃ' (ಬ್ರ.ಸೂ. ೩.೩.೧೨) ಎಂಬಲ್ಲಿ ಹೇಳಲಾಗಿರುವ ಆತ್ಮತ್ವೋಪಾಸನೆಯು ಅತ್ಯಾವಶ್ಯಕವೆಂದು ಸೂಚಿಸಲು ಇಲ್ಲಿ ಪುನಃ ಹೇಳಲಾಗಿದೆ.

ನ ಪ್ರತೀಕಾಧಿಕರಣ—೩

ಓಂ ನ ಪ್ರತೀಕೇ ನ ಹಿ ಸಃ ಓಂ ೪.೧.೪

---

1. ಉಪಗಚ್ಛಂತಿ ಎಂಬ ಪದದ ಬದಲು 'ಉಪಾಸತೇ' ಎಂಬ ಪದವನ್ನು ಸೂತ್ರದಲ್ಲಿ ಪ್ರಯೋಗಿಸಿದ್ದರೆ 'ತಿಳಿಯುವರು' ಎಂಬ ಅರ್ಥ ಲಭಿಸದೆ 'ಉಪಾಸನೆ ಮಾಡುವರು' ಎಂಬ ಅರ್ಥ ಮಾತ್ರ ಲಭಿಸುತ್ತಿತ್ತು ಎಂದು ಭಾವ.

अत्र विष्णुप्रतीकयोरैक्योपास्तिः निवार्यते । 'आत्मेति' इति पदद्वयमनुवर्तते । 'प्रतीके' इति विषयसप्तमी । 'नाम ब्रह्मेत्युपासीत' इत्यादौ श्रुतनामादौ प्रतीके आत्मेत्युपास्तिर्न कार्या । नामादिकं ब्रह्मेति नोपास्यम् । कुतः ? न हि सः । हि यस्मात् स प्रस्तुतो विष्णुः प्रतीकं न भवति । अतस्तयोरैक्याभावात् न तथोपास्तिः कार्या । मिथ्योपास्तेर्निषेधादिति भावः ।

कथं तर्हि कार्येत्यतोऽपि — प्रतीके । अधिकरणसप्तमी ।

---

## ಅಧಿಕರಣದ ಉದ್ದೇಶ ಮತ್ತು ಸೂತ್ರಾರ್ಥ

ಈ ಅಧಿಕರಣದಲ್ಲಿ, ವಿಷ್ಣು ಮತ್ತು ಪ್ರತೀಕಗಳಿಗೆ ಐಕ್ಯೋಪಾಸನೆಯನ್ನು ನಿರಾಕರಿಸಲಾಗುವುದು ಹಿಂದಿನ ಸೂತ್ರದಿಂದ -ಆತ್ಮಾ', 'ಇತಿ' ಎಂಬ ಎರಡು ಪದಗಳು ಅನುವೃತ್ತವಾಗುವವು. 'ಪ್ರತೀಕೇ' ಎಂಬಲ್ಲಿರುವ ಸಪ್ತಮೀ ವಿಭಕ್ತಿಯು 'ವಿಷಯ' ಎಂಬ ಅರ್ಥವನ್ನು ಹೇಳುವುದು.

ಪ್ರತೀಕೇ - 'ನಾಮ ಬ್ರಹ್ಮೇತ್ಯುಪಾಸೀತ' (ಛಾಂ. ೭.೧.೫) ಮೊದಲಾದ ಶ್ರುತಿಯಲ್ಲಿ ಕೇಳಿಬರುವ ನಾಮ ಮೊದಲಾದ ಪ್ರತೀಕಗಳ ವಿಷಯದಲ್ಲಿ, ಆತ್ಮಾ ಇತಿ - ವಿಷ್ಣು ಎಂಬುದಾಗಿ, ನ – ಉಪಾಸನೆಯನ್ನು ಮಾಡತಕ್ಕದ್ದಲ್ಲ. ನಾಮ ಮೊದಲಾದವುಗಳನ್ನು ಬ್ರಹ್ಮನೆಂದು ಉಪಾಸನೆ ಮಾಡಬಾರದು. ಏಕೆಂದರೆ, ನ ಹಿ ಸಃ. ಹಿ - ಯಾವ ಕಾರಣದಿಂದ, ಸಃ – ಪ್ರಸ್ತುತನಾದ ವಿಷ್ಣುವು, ನ – ಪ್ರತೀಕನಲ್ಲವೋ ಆ ಕಾರಣದಿಂದ ಹಾಗೆ ಉಪಾಸನೆಯನ್ನು ಮಾಡತಕ್ಕದ್ದಲ್ಲ. ಮಿಥ್ಯೋಪಾಸನೆಯನ್ನು ನಿಷೇಧಿಸಿರುವುದರಿಂದ ಎಂದು ಭಾವ. ಹಾಗಾದರೆ ಉಪಾಸನೆಯನ್ನು ಹೇಗೆ ಮಾಡತಕ್ಕದ್ದು ಎಂಬ ಪ್ರಶ್ನೆಗೂ 'ಪ್ರತೀಕೇ' ಎಂದು ಉತ್ತರ. 'ಪ್ರತೀಕೇ' ಎಂಬಲ್ಲಿರುವ ಸಪ್ತಮೀವಿಭಕ್ತಿಯು ಅಧಿಕರಣ ಎಂಬ ಅರ್ಥವನ್ನು ಹೇಳುವುದು. 'ಆತ್ಮಾ' ಎಂಬ ಪದವು ಅನುವೃತ್ತವಾಗುವುದು. ಪ್ರತೀಕೇ–

आत्मेतीत्यस्ति । प्रतिमात्मके नामादौ आत्माऽस्तीत्युपास्तिः कार्येत्यर्थः ॥ ३ ॥

ब्रह्माधिकरणम् — ४

॥ ॐ ब्रह्मदृष्टिरुत्कर्षात् ॐ ॥ ४.१.५

अत्र ब्रह्मत्वोपास्तेरावश्यकत्वमुच्यते । आत्मेत्यत आत्मशब्दः सप्तम्यन्ततया विपरिणम्य वर्तते । आत्मनि ब्रह्मदृष्टिः ब्रह्मत्वोपासनं पूर्णत्वोपास्तिः सर्वथा कार्या । कुतः ? उत्कर्षात् सर्वगुणपूर्णत्व-रूपोत्कर्षस्य ब्रह्मपदप्रवृत्तिनिमित्तत्वादित्यर्थः । तथोपास्तेरेव प्रीति-हेतुत्वादिति भावः ।

---

ಪ್ರತಿಮಾರೂಪವಾದ ನಾಮಾದಿಗಳಲ್ಲಿ, 'ಆತ್ಮಾ - ವಿಷ್ಣುವಿದ್ದಾನೆ ಎಂಬುದಾಗಿ ಉಪಾಸನೆಯನ್ನು ಮಾಡತಕ್ಕದ್ದೆಂದು ಅರ್ಥ.

ಬ್ರಹ್ಮಾಧಿಕರಣ—೪

ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ೪.೧.೫

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಬ್ರಹ್ಮತ್ವೋಪಾಸನೆಯು ಅವಶ್ಯ ಕರ್ತವ್ಯವೆಂದು ಹೇಳಲಾಗುವುದು. 'ಆತ್ಮೇತಿ' - (ಬ್ರ.ಸೂ. ೪.೧.೩) ಎಂಬ ಸೂತ್ರದಿಂದ 'ಆತ್ಮ' ಶಬ್ದವು ಸಪ್ತಮೀವಿಭಕ್ತ್ಯಂತವಾಗಿ 'ಆತ್ಮನಿ' ಎಂದು ಬದಲಾವಣೆಗೊಂಡು ಅನುವೃತ್ತವಾಗುವುದು. ಆತ್ಮನಿ - ಪರಮಾತ್ಮನಲ್ಲಿ, ಬ್ರಹ್ಮದೃಷ್ಟಿಃ - ಬ್ರಹ್ಮತ್ವೋಪಾಸನೆಯು ಅಂದರೆ ಪೂರ್ಣತ್ವೋಪಾಸನೆಯು ಅವಶ್ಯ ಮಾಡಲ್ಪಡತಕ್ಕದ್ದು. ಏಕೆಂದರೆ, ಉತ್ಕರ್ಷಾತ್ - 'ಬ್ರಹ್ಮ' ಪದವನ್ನು ವ್ಯವಹರಿಸಲು ಸರ್ವಗುಣಪೂರ್ಣತ್ವರೂಪವಾದ ಉತ್ಕರ್ಷವು ನಿಮಿತ್ತವಾಗಿರುವುದರಿಂದ ಎಂದು ಅರ್ಥ. ಹಾಗೆ ಉಪಾಸನೆಯೇ ಭಗವಂತನ ಪ್ರೀತಿಗೆ ಕಾರಣವಾಗಿದೆ ಎಂದು ಭಾವ.

यद्वा तथोपास्तेः उपास्त्यन्तरादुत्कृष्टत्वादित्यर्थः । सर्वगुणपूर्णत्वरूपब्रह्मत्वस्य उत्कृष्टत्वरूपतया तथोपास्तेरन्योपासनादुत्कर्षादिति भावः । ब्रह्मदृष्टिरित्युक्त्या 'ब्रह्मदृष्ट्या सदोपास्यो विष्णुः' इति स्मृतिः सूचिता । भूम्न इत्यत्रोक्तस्यास्य अवश्यकार्यत्वाय पुनरिहोक्तिः ॥ ४ ॥

आदित्याधिकरणम्—५

॥ ॐ आदित्यादिमतयश्चाङ्ग उपपत्तेः ॐ ॥ ४.१.६

---

**'ಉತ್ಕರ್ಷಾತ್' ಎಂಬ ಪದಕ್ಕೆ ವ್ಯಾಖ್ಯಾನಾಂತರ ಮತ್ತು ಪೂರ್ಣತ್ವೋಪಾಸನೆಯನ್ನು ಪುನಃ ಹೇಳಿರುವುದರ ಕಾರಣ**

ಅಥವಾ, ಹಾಗೆ ಉಪಾಸನೆಯು ಬೇರೆ ಉಪಾಸನೆಗಿಂತ ಉತ್ಕೃಷ್ಟವಾಗಿರುವುದರಿಂದ ಎಂದು ಅರ್ಥ. ಸರ್ವಗುಣಪೂರ್ಣತ್ವರೂಪವಾದ ಬ್ರಹ್ಮತ್ವವು ಉತ್ಕೃಷ್ಟತ್ವರೂಪವಾಗಿದ್ದು ಬ್ರಹ್ಮತ್ವೋಪಾಸನೆಯು ಬೇರೆ ಉಪಾಸನೆಗಳಿಗಿಂತ ಉತ್ಕರ್ಷವನ್ನು ಪಡೆದಿದೆಯಾದ್ದರಿಂದ ಎಂದು ಭಾವ. 'ಬ್ರಹ್ಮದೃಷ್ಟಿಃ' ಎಂಬ ಪದದಿಂದ 'ಬ್ರಹ್ಮದೃಷ್ಟ್ಯಾ ಸದೋಪಾಸ್ಯೋ ವಿಷ್ಣುಃ' ಎಂಬ ಸ್ಮೃತಿಯು[1] ಸೂಚಿತವಾಗುವುದು. 'ಭೂಮ್ನಃ ಕ್ರತುವತ್....' (ಬ್ರ.ಸೂ. ೩.೩.೫೮) ಎಂಬ ಸೂತ್ರದಲ್ಲಿ ಬ್ರಹ್ಮತ್ವೋಪಾಸನೆಯನ್ನು ಮಾಡತಕ್ಕದ್ದೆಂದು ಈಗಾಗಲೇ ಹೇಳಿದ್ದರೂ ಅವಶ್ಯಕರ್ತವ್ಯವೆಂದು ಹೇಳಲು ಪುನಃ ಇಲ್ಲಿ ಹೇಳಲಾಗಿದೆ.

ಆದಿತ್ಯಾಧಿಕರಣ—೫

ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ
೪.೧.೬

---

1. ಬ್ರಹ್ಮದೃಷ್ಟ್ಯಾ ಸದೋಪಾಸ್ಯೋ ವಿಷ್ಣುಃ ಸರ್ವೈರಪಿ ಧ್ರುವಮ್ ।
ಮಹತ್ತ್ವವಾಚೀ ಶಬ್ದೋಽಯಂ ಮಹತ್ತ್ವಜ್ಞಾನಮೇವ ಹಿ ।
ಸರ್ವತಃ ಪ್ರೀತಿಜನಕಮತಃ ತತ್ಸರ್ವಥಾ ಭವೇತ್ ॥ (ಬ್ರಹ್ಮತರ್ಕವಚನ)

अत्राङ्गाश्रितत्वेन देवतोपासनस्यावश्यकत्वमुच्यते। अङ्गे प्रस्तुतब्रह्माङ्गे तत्र स्थितत्वेन आदित्यादिमतयः आदित्याद्युपासनाश्च, स्वस्वाश्रयाङ्गकत्वेनोपासना इति यावत्, आदित्यादिदेवैः सदा सर्वथा कार्या एव। कुतः ? उपपत्तेः। देवानाम् अङ्गजत्वेन मुक्तौ तत्र लयस्यापेक्षितत्वात्। उपासनस्य फलसाम्येन कार्यत्वात् रूपान्तरेण नित्यं तत्रावस्थित्या मिथ्योपासनाभावादित्युपपत्तेः सत्त्वादित्यर्थः।

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವಂತನ ಅಂಗಗಳಲ್ಲಿ ಆಶ್ರಿತರಾಗಿರುವರೆಂದು ದೇವತೆಗಳ ಉಪಾಸನೆಯನ್ನು ಮಾಡುವುದು ಆವಶ್ಯಕವೆಂದು ಹೇಳಲಾಗುವುದು.

ಅಂಗೇ - ಪ್ರಸ್ತುತನಾದ ಪರಮಾತ್ಮನ ಅಂಗಗಳಲ್ಲಿ ಇರುವರೆಂದು, ಆದಿತ್ಯಾದಿ ಮತಯಶ್ಚ - ಆದಿತ್ಯ ಮೊದಲಾದ ದೇವತೆಗಳ ಉಪಾಸನೆಗಳನ್ನೂ - ತಮಗೆ ಆಶ್ರಯವಾದ ಅಂಗಗಳುಳ್ಳವನೆಂದು ಭಗವಂತನ ಉಪಾಸನೆಯನ್ನೆಂದು ತಾತ್ಪರ್ಯ– ಆದಿತ್ಯಾದಿ ದೇವತೆಗಳು ಯಾವಾಗಲೂ ಮಾಡಿಯೇ ತೀರಬೇಕು. ಏಕೆಂದರೆ, ಉಪಪತ್ತೇಃ - ದೇವತೆಗಳು ಭಗವಂತನ ಅಂಗಗಳಿಂದ ಹುಟ್ಟಿದವರಾದ್ದರಿಂದ ಮೋಕ್ಷ ಸಮಯದಲ್ಲಿ ಆ ಅಂಗಗಳಲ್ಲೇ ಅವರಿಗೆ ಲಯವು ಅಪೇಕ್ಷಿತವಾಗಿದೆ. ಫಲಕ್ಕನುಗುಣವಾಗಿ ಉಪಾಸನೆಯನ್ನು ಮಾಡಬೇಕಾಗಿದೆ. ತಾವು ಜನಿಸಿದ ಭಗವದಂಗಗಳಲ್ಲಿ ದೇವತೆಗಳು ಮತ್ತೊಂದು ರೂಪದಿಂದ ಯಾವಾಗಲೂ ಇರುವುದರಿಂದ ತಾವು ಭಗವದಂಗಾಶ್ರಿತರೆಂದು ಅವರು ಮಾಡುವ ಉಪಾಸನೆಯು ಮಿಥ್ಯೋಪಾಸನೆಯಾಗುವುದಿಲ್ಲ – ಎಂಬ ಯುಕ್ತಿ ಇರುವುದರಿಂದ ಎಂದು ಅರ್ಥ.

---

ಬ್ರಹ್ಮಶಬ್ದವು ಮಹತ್ತ್ವವನ್ನು ಅಂದರೆ ಪೂರ್ಣತ್ವವನ್ನು ಹೇಳುವ ಶಬ್ದವಾಗಿದೆ. ಭಗವಂತನಲ್ಲಿ ಮಹತ್ತ್ವಜ್ಞಾನವೇ ಅವನ ಪ್ರೀತಿಗೆ ಕಾರಣವಾಗಿದೆ. ಆದ್ದರಿಂದ ಎಲ್ಲರೂ ಯಾವಾಗಲೂ ವಿಷ್ಣುವು ಬ್ರಹ್ಮನೆಂದು ಉಪಾಸನೆ ಮಾಡತಕ್ಕದ್ದೆಂದು ಭಾವ.

उपासनस्य ज्ञानविशेषत्वद्योतनाय दृष्टिर्मतय इत्याद्युक्तिः। तथा ज्ञानमप्यावश्यकमिति सूचयितुं चेति। बहुवचनं तु यद्यदङ्गे यस्य यस्य निवेशस्तेन तेन तथा मतिः कार्येत्यनेककर्तृकत्वद्योतनाय। चस्तु ब्रह्मदृष्ट्या समुच्चयार्थ इत्येके। अवधारण इत्यन्ये। अङ्ग इत्येकवचनं 'स्वोत्पत्त्यङ्गं च देवानां विष्णोश्चिन्त्यं सदैव तु' इति

---

**ಸೂತ್ರದ ಪದಗಳ ಸ್ವಾರಸ್ಯ**

ಉಪಾಸನೆಯು ಜ್ಞಾನವಿಶೇಷರೂಪವಾದುದೆಂದು ಸೂಚಿಸಲು ಸೂತ್ರಗಳಲ್ಲಿ 'ದೃಷ್ಟಿ', 'ಮತಿ' ಮೊದಲಾದ ಶಬ್ದಗಳಿಂದ ಉಪಾಸನೆಯನ್ನು ಹೇಳಲಾಗಿದೆ. ಯಾವುದರ ಉಪಾಸನೆಯನ್ನು ಮಾಡತಕ್ಕದ್ದೆಂದು ಹೇಳಲಾಗಿದೆಯೋ ಅದರ ಜ್ಞಾನವೂ ಆವಶ್ಯಕವೆಂದು ಸೂಚಿಸುವುದಕ್ಕಾಗಿಯೂ 'ದೃಷ್ಟಿ' ಮೊದಲಾದ ಶಬ್ದಗಳನ್ನು ಪ್ರಯೋಗಿಸಲಾಗಿದೆ. ಭಗವಂತನ ಯಾವ ಯಾವ ಅಂಗದಲ್ಲಿ ಯಾವ ಯಾವ ದೇವತೆ ಇರುವನೋ ಆಯಾಯಾ ದೇವತೆಯಿಂದ ಅಯಾಂಯಾ ಅಂಗದಲ್ಲಿ ತಾನು ಆಶ್ರಿತನೆಂದುಉಪಾಸನೆಮಾಡತಕ್ಕದ್ದೆಂದು, - ಹೀಗೆ ಈ ಉಪಾಸನೆಯು ಅನೇಕ ದೇವತೆಗಳು ಮಾಡುವ ಉಪಾಸನೆಯಾಗಿದೆಯೆಂದು ಸೂಚಿಸಲು 'ಆದಿತ್ಯಾದಿಮತಯಃ' ಎಂದು ಬಹುವಚನವನ್ನು ಪ್ರಯೋಗಿಸಲಾಗಿದೆ. ಸೂತ್ರದಲ್ಲಿರುವ 'ಚ' ಶಬ್ದವು ಬ್ರಹ್ಮತ್ವೋಪಾಸನೆ ಮಾತ್ರವಲ್ಲದೆ ಈ ಉಪಾಸನೆಯನ್ನೂ ಮಾಡತಕ್ಕದ್ದೆಂದು ಸಮುಚ್ಚಯವನ್ನು ಹೇಳುವುದೆಂದು ಕೆಲವರು ಹೇಳುವರು. ಈ ಉಪಾಸನೆಯನ್ನು ಮಾಡಲೇಬೇಕೆಂದು ಅವಧಾರಣವನ್ನು 'ಚ' ಶಬ್ದವು ಹೇಳುವುದೆಂದು ಇತರರು ಹೇಳುವರು. 'ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವ ತು' ಎಂಬ [1]ಸ್ಮೃತಿಯನ್ನನುಸರಿಸಿ 'ಅಂಗೇ' ಎಂದು ಏಕವಚನವನ್ನು ಸೂತ್ರದಲ್ಲಿ ಪ್ರಯೋಗಿಸಲಾಗಿದೆ ಎಂದು ಕೆಲವರು ಹೇಳುವರು.

---

1. ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವ ತು ।
ತೇಷಾಂ ತತ್ರ ಪ್ರವೇಶೋ ಹಿ ಮುಕ್ತಿರಿತ್ಯುಚ್ಯತೇ ಬುಧೈಃ ।
ತದಾಶ್ರಿತಾಶ್ಚ ತೇ ನಿತ್ಯಂ ತತಶ್ಚಿಂತ್ಯಂ ವಿಶೇಷತಃ ॥ (ನಾರಾಯಣತಂತ್ರ)

स्मृत्यनुरोधेन इत्येके। अङ्गानामभेदसूचनायेत्यन्ये। अङ्गेष्वित्यत्रोक्तस्यावश्यकत्वोक्तिरत्रेत्यदोषः ॥ ५ ॥

आसीनाधिकरणम्—६

॥ ॐ आसीनः सम्भवात् ॐ ॥ ४.१.७

अत्र ध्याने आसनादिनियमः साध्यते। आसीनः आसने उपविष्ट एव सदोपासनं कुर्यात्। कुतः? सम्भवात् आसीनस्यैव सम्भवात् अन्यस्यासम्भवादित्यर्थः।

---

ಭಗವಂತನ ಅಂಗಗಳಿಗೆ ಅಭೇದವಿದೆಯೆಂದು ಸೂಚಿಸಲು ಏಕವಚನಪ್ರಯೋಗವೆಂದು ಇತರರು ಹೇಳುವರು. 'ಅಂಗೇಷು ಯಥಾಽಽಶ್ರಯಭಾವಃ' (ಬ್ರ.ಸೂ. ೩.೩.೬೩) ಎಂಬ ಸೂತ್ರದಲ್ಲಿ ಭಗವದಂಗಾಶ್ರಿತರೆಂದು ದೇವತೋಪಾಸನೆಯನ್ನು ಮಾಡತಕ್ಕದ್ದೆಂದು ಹೇಳಲಾಗಿದ್ದರೂ ಅದು ಅವಶ್ಯಕವೆಂದು ಇಲ್ಲಿ ಹೇಳುವುದರಿಂದ ಪುನರುಕ್ತಿ ದೋಷವಿಲ್ಲ.

ಆಸೀನಾಧಿಕರಣ—೬

ಓಂ ಆಸೀನಃ ಸಂಭವಾತ್ ಓಂ ೪.೧.೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಧ್ಯಾನ ಮಾಡಲು ಆಸನ ಮೊದಲಾದವುಗಳ ನಿಯಮವಿದೆ ಎಂದು ಸಮರ್ಥಿಸಲಾಗುವುದು.

ಆಸೀನಃ – ಆಸನದಲ್ಲಿ ಕುಳಿತೇ ಯಾವಾಗಲೂ ಉಪಾಸನೆಯನ್ನು ಮಾಡತಕ್ಕದ್ದು. ಏಕೆಂದರೆ, ಸಂಭವಾತ್ ಆಸೀನನಾದವನಿಗೇ ಧ್ಯಾನಮಾಡಲು ಸಾಧ್ಯವಿರುವುದರಿಂದ, ಇತರರಿಗೆ ಸಾಧ್ಯವಿಲ್ಲದಿರುವುದರಿಂದ ಎಂದು ಅರ್ಥ.

आसनसदोपासनयोः द्वयोर्विरोधात् आसनं नावश्यकमित्यत आह—

॥ ॐ ध्यानाच्च ॐ ॥ ४.१.८

भावप्रधानम् । आसीनेन क्रियमाणस्य ध्यानरूपत्वादविरोधश्चेत्यर्थः । स्मरणध्यानभेदेन उपासनस्य द्वैविध्यात् नित्यं कार्यस्य स्मरणस्य तदनपेक्षत्वेऽपि ध्याने तदावश्यकम् । अन्यथा चित्तविक्षेपादिति भावः ।

प्रत्याहारादिनाऽपि विक्षेपनिरासात् किमासनेनेत्यत आह—

---

ಕುಳಿತಿರುವಿಕೆ ಮತ್ತು ಸರ್ವದಾ ಉಪಾಸನೆ ಇವೆರಡಕ್ಕೂ ವಿರೋಧವಿರುವುದರಿಂದ ಆಸನ ಆವಶ್ಯಕವಲ್ಲ ಎಂಬ ಶಂಕೆಗೆ ಸಮಾಧಾನ—

ಓಂ ಧ್ಯಾನಾಚ್ಚ ಓಂ ೪.೧.೮

**ಸೂತ್ರಾರ್ಥ**

ಧ್ಯಾನಶಬ್ದವು ಭಾವಪ್ರಧಾನವಾಗಿದೆ[1]. ಆಸೀನನಾದವನು ಮಾಡುವುದೇ ಧ್ಯಾನರೂಪವಾದುದರಿಂದ ವಿರೋಧವೂ ಇಲ್ಲವೆಂದು ಅರ್ಥ. ಉಪಾಸನೆಯು ಸ್ಮರಣೆ ಮತ್ತು ಧ್ಯಾನ ಎಂಬುದಾಗಿ ಎರಡು ವಿಧವಾಗಿದೆ. ನಿತ್ಯವೂ ಮಾಡುವ ಸ್ಮರಣೆಗೆ ಆಸನದ ಆವಶ್ಯಕತೆ ಇಲ್ಲದಿದ್ದರೂ ಧ್ಯಾನಕ್ಕೆ ಅದು ಆವಶ್ಯಕವಾಗಿದೆ. ಇಲ್ಲದಿದ್ದರೆ [2]ಚಿತ್ತವಿಕ್ಷೇಪವಾಗುವುದೆಂದು ಭಾವ.

ಪ್ರತ್ಯಾಹಾರ[3] ಮೊದಲಾದವುಗಳಿಂದ ಚಿತ್ತವಿಕ್ಷೇಪವನ್ನು ಪರಿಹರಿಸಬಹುದಾದ್ದರಿಂದ ಆಸನದಿಂದೇನು ಎಂಬ ಆಶಂಕೆಗೆ ಸಮಾಧಾನ—

---

1. ಧ್ಯಾನತ್ವ ಎಂಬ ಧರ್ಮವನ್ನು ಹೇಳುವುದು.
2. ಮನಸ್ಸಿನ ಚಂಚಲತೆ.
3. ವಿಷಯಪದಾರ್ಥಗಳೆಡೆ ಇಂದ್ರಿಯಗಳು ಹರಿಯದಂತೆ ಅವುಗಳನ್ನು ನಿಗ್ರಹಿಸುವುದು.

|| ॐ अचलत्वं चापेक्ष्य ॐ || ४.१.९

मनोविक्षेपाभाव इति शेषः । न केवलं प्रत्याहारादिना, किन्तु शरीराचलत्वं चापेक्ष्य मनोविक्षेपाभावो भवत्यत आसीन एव ध्यायीतेत्यर्थः । तत्त्वप्रदीपे तु अनिद्रत्वं चशब्दार्थ इत्युक्तम् ।

स्मृतिभिरप्यासनस्यावश्यकत्वमाह—

|| ॐ स्मरन्ति च ॐ || ४.१.१०

कृष्णादय उक्तमर्थे 'उपविश्यासने' 'समं कायशिरोग्रीवं'

---

ಓಂ ಅಚಲತ್ವಂ ಚಾಪೇಕ್ಷ್ಯ ಓಂ ೪.೧.೯

**ಸೂತ್ರಾರ್ಥ**

'ಮನೋವಿಕ್ಷೇಪಾಭಾವಃ' ಎಂಬ ಶೇಷವನ್ನು ಇಲ್ಲಿ ಸೇರಿಸಬೇಕು. ಪ್ರತ್ಯಾಹಾರ ಮೊದಲಾದವುಗಳಿಂದ ಮಾತ್ರವಲ್ಲದೆ, ಅಚಲತ್ವಂ ಚ ಅಪೇಕ್ಷ್ಯ – ಶರೀರದ ಅಚಲತೆಯನ್ನೂ ಅಪೇಕ್ಷಿಸಿಯೇ, ಮನೋವಿಕ್ಷೇಪಾಭಾವಃ – ಚಿತ್ತವಿಕ್ಷೇಪವಿಲ್ಲದಿರುವಿಕೆಯು ಉಂಟಾಗುವುದು. ಆದ್ದರಿಂದ ಆಸೀನನಾಗಿಯೇ ಧ್ಯಾನಮಾಡಬೇಕೆಂದು ಅರ್ಥ. ತತ್ತ್ವಪ್ರದೀಪದಲ್ಲಾದರೋ 'ನಿದ್ರೆ ಇಲ್ಲದಿರುವಿಕೆಯು' 'ಚ' ಶಬ್ದದ ಅರ್ಥವೆಂದು ಹೇಳಲಾಗಿದೆ.

ಸ್ಮೃತಿಗಳಿಂದಲೂ ಧ್ಯಾನಕ್ಕೆ ಆಸನವು ಆವಶ್ಯಕವೆಂದು ತಿಳಿಯುವುದೆಂದು ಹೇಳುವ ಸೂತ್ರ—

ಓಂ ಸ್ಮರಂತಿ ಚ ಓಂ ೪.೧.೧೦

**ಸೂತ್ರಾರ್ಥ**

ಕೃಷ್ಣ ಮೊದಲಾದವರು ಧ್ಯಾನಕ್ಕೆ ಆಸನ ಅಗತ್ಯವೆಂಬ ವಿಷಯವನ್ನು 'ಉಪವಿಶ್ಯಾಸನೇ', 'ಸಮಂ ಕಾಯಶಿರೋಗ್ರೀವಂ' ಇತ್ಯಾದಿ ವಾಕ್ಯಗಳಿಂದ ಸ್ಮರಿಸುವರು

इत्यादिना स्मरन्तीत्यर्थः । स्मृतिबहुत्वसूचनाय बहुवचनम् ।

'पर्वताग्रे नदीतीरे', 'ब्राह्मे मुहूर्ते उत्थाय' इत्यादेः देशकालयोरप्यासनवदावश्यकत्वं स्यादत आह— ।

॥ ॐ यत्रैकाग्रता तत्राविशेषात् ॐ ॥ ४.१.११

ध्यानस्येति विपरिणम्यास्ति । यत्र देशकालादौ ध्यानस्यैकाग्रता स्यात्तत्र ध्यानं कार्यम् । न तु देशविशेषनियतिः । कुतः ? किं ध्यानोपयोगितया आसनवत् तदावश्यकम् उत तज्ज्ञानोपयोगितया ।

---

ಎಂದು ಅರ್ಥ. ಸ್ಮೃತಿವಾಕ್ಯಗಳು ಅನೇಕವಾಗಿವೆ ಎಂಬುದನ್ನು ಸೂಚಿಸಲು 'ಸ್ಮರಂತಿ' ಎಂದು ಬಹುವಚನವನ್ನು ಪ್ರಯೋಗಿಸಲಾಗಿದೆ.

'ಪರ್ವತಾಗ್ರೇ ನದೀತೀರೇ', ಬ್ರಾಹ್ಮೇ ಮುಹೂರ್ತೇ ಉತ್ಥಾಯ' ಇತ್ಯಾದಿ ವಾಕ್ಯಗಳಿರುವುದರಿಂದ ಧ್ಯಾನಕ್ಕೆ ಆಸನದಂತೆ ದೇಶಕಾಲಗಳೂ ಆವಶ್ಯಕವೆಂದಾದೀತು ಎಂಬ ಶಂಕೆಗೆ ಸಮಾಧಾನ—

**ಓಂ ಯತ್ರೈಕಾಗ್ರತಾ ತತ್ರಾವಿಶೇಷಾತ್ ಓಂ ೪.೧.೧೧**

**ಸೂತ್ರಾರ್ಥ**

'ಧ್ಯಾನಾಚ್ಚ' (ಬ್ರ.ಸೂ. ೪.೧.೮) ಎಂಬ ಸೂತ್ರದಿಂದ 'ಧ್ಯಾನಾತ್' ಎಂಬ ಪದವನ್ನು 'ಧ್ಯಾನಸ್ಯ' ಎಂದು ಷಷ್ಠೀವಿಭಕ್ತ್ಯಂತವಾಗಿ ಬದಲಾಯಿಸಿ ಅನುವೃತ್ತಿ ಮಾಡಿಕೊಳ್ಳಬೇಕು.

ಯತ್ರ ಏಕಾಗ್ರತಾ ತತ್ರ - ಯಾವ ದೇಶಕಾಲಗಳಲ್ಲಿ ಧ್ಯಾನಕ್ಕೆ ಏಕಾಗ್ರತೆ ಲಭಿಸುವುದೋ ಅಲ್ಲಿ ಧ್ಯಾನವನ್ನು ಮಾಡತಕ್ಕದ್ದು ಹೊರತು ಇದೇ ದೇಶಕಾಲಗಳಲ್ಲಿ ಮಾಡಬೇಕೆಂಬ ನಿಯಮವಿಲ್ಲ. ಏಕೆಂದರೆ, ಧ್ಯಾನಕ್ಕೆ ಉಪಯುಕ್ತವಾಗಿರುವುದ

न द्वयमपि। अविशेषात् नियतदेशादिना ध्याने ज्ञाने वा तेन विशेषाभावादित्यर्थः। अविशेषादित्युक्त्या 'तमेव देशं सेवेत' इत्यादिस्मृतिः सूचिता ॥ ६ ॥

आप्रायणाधिकरणम्—७

॥ ॐ आप्रायणात्तत्रापि हि दृष्टम् ॐ ॥ ४.१.१२

अत्र ध्यानस्य प्रायणान्तत्वं साध्यते। आङ् मर्यादायाम्। प्रकर्षेण अयनं प्रायणं नारायणं प्रति प्रयाणरूपमोक्षः। आ प्रायणात्

---

ರಿಂದ ಆಸನದಂತೆ ದೇಶಕಾಲಗಳೂ ಆವಶ್ಯಕವೇ ಅಥವಾ ಜ್ಞಾನಕ್ಕೆ ಉಪಯುಕ್ತವಾಗುವುದರಿಂದಲೇ ? ಎರಡೂ ಸರಿಯಲ್ಲ. ಅವಿಶೇಷಾತ್ - ನಿಯತವಾದ ದೇಶದಿಂದಾಗಲಿ, ಕಾಲದಿಂದಾಗಲಿ, ಧ್ಯಾನದಲ್ಲಾಗಲಿ, ಜ್ಞಾನದಲ್ಲಾಗಲಿ ಯಾವ ವಿಶೇಷವೂ ಉಂಟಾಗುವುದಿಲ್ಲವಾದ್ದರಿಂದ ಎಂದು ಅರ್ಥ. 'ಅವಿಶೇಷಾತ್' ಎಂಬ ಪದದಿಂದ 'ತಮೇವ ದೇಶಂ ಸೇವೇತ' ಇತ್ಯಾದಿ ಸ್ಮೃತಿಯು[1] ಸೂಚಿತವಾಗುವುದು.

ಆಪ್ರಾಯಣಾಧಿಕರಣ--೭

## ಓಂ ಆಪ್ರಾಯಣಾತ್ತತ್ರಾಪಿ ಹಿ ದೃಷ್ಟಂ ಓಂ ೪.೧.೧೨

### ಅಧಿಕರಣದ ವಿಷಯ ಮತ್ತು ಸೂತ್ರಾರ್ಥ

ಮುಕ್ತಿಯಾಗುವವರೆಗೆ ಧ್ಯಾನವನ್ನು ಮಾಡತಕ್ಕದ್ದೆಂದು ಈ ಅಧಿಕರಣದಲ್ಲಿ ಸಮರ್ಥಿಸಲಾಗುವುದು. 'ಆಙ್' ಎಂಬ ಉಪಸರ್ಗವು ಮರ್ಯಾದೆ ಅಂದರೆ ಮಿತಿ

---

1. ತಮೇವ ದೇಶಂ ಸೇವೇತ ತಂ ಕಾಲಂ ತಾಮವಸ್ಥಿತಿಮ್ ।
ತಾನೇವ ಭೋಗಾನ್ ಭುಂಜೀತ ಮನೋ ಯತ್ರ ಪ್ರಸೀದತಿ ॥
ನ ಹಿ ದೇಶಾದಿಭಿಃ ಕಶ್ಚಿದ್ ವಿಶೇಷಸ್ಸಮುದೀರಿತಃ ।
ಮನಃಪ್ರಸಾದನಾರ್ಥಂ ಹಿ ದೇಶಕಾಲಾದಿಚಿಂತನಾ ॥ (ವಾರಾಹವಚನ)

मोक्षपर्यन्तं ध्यानमवश्यकमिति प्रस्तुतमन्वेति । कुतः ? दृष्टं हि । दृष्टं श्रुतिः । हि यस्मात् 'स यो ह वै तद्भगवन् मनुष्येषु प्रायणान्त-मोङ्कारमभिध्यायीत' इति श्रुतिरस्त्यत इत्यर्थः । कैमुत्येनाप्याह —तत्रापि । मुक्तावपि ध्यानं कुर्वते किमु ततः प्रागित्यर्थः । तदेव कुतः ?

---

ಯನ್ನು ಹೇಳುವುದು. [1]ಪ್ರಕರ್ಷೇಣ ಅಯನಂ ಪ್ರಾಯಣಂ' ಎಂಬ ವ್ಯುತ್ಪತ್ತಿ ಯನ್ನನುಸರಿಸಿ ಪ್ರಾಯಣವೆಂದರೆ ನಾರಾಯಣನನ್ನು ಕುರಿತು ಪ್ರಯಾಣರೂಪವಾದ ಮೋಕ್ಷವೆಂದರ್ಥವಾಗುವುದು. ಆಪ್ರಾಯಣಾತ್ - ಮೋಕ್ಷದವರೆಗೆ ಧ್ಯಾನವನ್ನು ಅವಶ್ಯ ಮಾಡತಕ್ಕದ್ದು. 'ಧ್ಯಾನವನ್ನು ಅವಶ್ಯ ಮಾಡತಕ್ಕದ್ದು' ಎಂಬ ಪ್ರಸ್ತುತ ವಾದ ಪದಗಳು ಇಲ್ಲಿ ಅನ್ವಿತವಾಗುವುವು. ಮೋಕ್ಷಪರ್ಯಂತ ಧ್ಯಾನ ಮಾಡತಕ್ಕದ್ದು ಎಂಬ ವಿಷಯದಲ್ಲಿ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ – 'ದೃಷ್ಟಂ ಹಿ', ದೃಷ್ಟವೆಂದರೆ ಶ್ರುತಿ. ಹಿ - ಯಾವ ಕಾರಣದಿಂದ [2]'ಸ ಯೋ ಹ ವೈ ಭಗವನ್ ಮನುಷ್ಯೇಷು ಪ್ರಾಯಣಾಂತಂ ಓಂಕಾರಂ ಅಭಿಧ್ಯಾಯಿತ' (ಪ್ರ. ೫.೧) ಎಂಬ ಶ್ರುತಿ ಇದೆಯಾದ್ದರಿಂದ ಎಂದು ಅರ್ಥ.

ಕೈಮುತ್ಯನ್ಯಾಯದಿಂದಲೂ ಮೋಕ್ಷಪರ್ಯಂತ ಧ್ಯಾನ ಮಾಡತಕ್ಕದ್ದೆಂದು ಸಮರ್ಥಿಸಲು 'ತತ್ರಾಪಿ' ಎಂದು ಹೇಳಲಾಗಿದೆ. ತತ್ರಾಪಿ - ಮೋಕ್ಷದಲ್ಲೂ ಧ್ಯಾನ ವನ್ನು ಮಾಡತಕ್ಕವನಿಗೆ ಅದಕ್ಕೆ ಮುಂಚೆ ಧ್ಯಾನವನ್ನು ಮಾಡತಕ್ಕದ್ದೆಂದು ಹೇಳುವು ದೇನು ಎಂದು ಅರ್ಥ. ಮೋಕ್ಷದಲ್ಲಿ ಧ್ಯಾನಮಾಡುವರೆಂಬ ವಿಷಯದಲ್ಲೇ ಆಧಾರ

---

1. ಅಯನ ಎಂದರೆ ಗಮನ. ಪ್ರಕರ್ಷ ಅಥವಾ ಅತಿಶಯವನ್ನು ಪಡೆದ ಗಮನವೆಂದರೆ ಭಗವಂತನೆಡೆಗೆ ಮಾಡುವ ಪ್ರಯಾಣರೂಪವಾದ ಮೋಕ್ಷ ಎಂದು ಭಾವ.

2. ಪೂಜ್ಯರೇ ; ಜ್ಞಾನಿಮನುಷ್ಯರಲ್ಲಿ ಮೋಕ್ಷಪರ್ಯಂತವಾಗಿ ಓಂಕಾರ ವಾಚ್ಯನಾದ ಪರಮಾತ್ಮನನ್ನು ಧ್ಯಾನಿಸುವ ಪುರುಷನು ಯಾವ ಲೋಕವನ್ನು ಪಡೆಯು ವನು ? ಎಂದು ಷಟ್‌ಪ್ರಶ್ನೋಪನಿಷತ್ತಿನಲ್ಲಿ ಶೈಬ್ಯನು ಪಿಪ್ಪಲಾದರನ್ನು ಕೇಳುವ ಪ್ರಶ್ನೆಯ ಭಾವವಾಗಿದೆ.

दृष्टं हि 'मुक्ता अपि ह्येनमुपासते' इति श्रुतिर्यतोऽस्त इत्यर्थः ।
आप्रायणादित्युक्तिः श्रुत्यनुरोधेन । आकडारादिवदयं निर्देशः ॥ ७ ॥

तदधिगमाधिकरणम् — ८

॥ ॐ तदधिगम उत्तरपूर्वाघयोरश्लेषविनाशौ
तद्व्यपदेशात् ॐ ॥ ४.१.१३

एवं प्रासङ्गिकं समाप्य अत्रेशज्ञानेन कर्मक्षयाख्यफलसिद्धिः

---

ವೇನು ? ಎಂಬ ಪ್ರಶ್ನೆಗೆ ಉತ್ತರವಾಗಿಯೂ 'ದೃಷ್ಟಂ ಹಿ' ಎಂದು ಹೇಳಲಾಗಿದೆ. 'ಮುಕ್ತಾ ಅಪಿ ಹ್ಯೇನಮುಪಾಸತೇ'[1] ಎಂಬ ಶ್ರುತಿ ಇರುವ ಕಾರಣದಿಂದ ಎಂದು ಅರ್ಥ. 'ಸ ಯೋ ಹ ವೈ ತದ್ ಭಗವನ್ಮನುಷ್ಯೇಷು ಪ್ರಾಯಣಾಂತಂ' ಎಂಬ ಶ್ರುತಿಯನ್ನನುಸರಿಸಿ ಸೂತ್ರದಲ್ಲಿ 'ಆಪ್ರಾಯಣಾತ್' ಎಂದು ಹೇಳಲಾಗಿದೆ. 'ಆಕಡಾರಾತ್' (ಪಾ.ಸೂ. ೧-೪-೧) ಮೊದಲಾದ ಪದದಂತೆ ಈ ಶಬ್ದವನ್ನು ಪ್ರಯೋಗಿಸಲಾಗಿದೆ.

ತದಧಿಗಮಾಧಿಕರಣ—೮

## ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ೪.೧.೧೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಹೀಗೆ ಪ್ರಸಂಗವಶಾತ್ ಪ್ರಾಪ್ತವಾದ ವಿಷಯವನ್ನು ಮುಗಿಸಿ ಈ ಅಧಿಕರಣದಲ್ಲಿ ಭಗವಂತನ ಅಪರೋಕ್ಷಜ್ಞಾನದಿಂದ ಕರ್ಮಕ್ಷಯರೂಪವಾದ ಫಲವು ಸಿದ್ಧಿಸುವುದೆಂದು ಸಮರ್ಥಿಸಲಾಗುವುದು.

---

1. 'ಸರ್ವದಾ ಏನಮುಪಾಸೀತ ಯಾವದ್ವಿಮುಕ್ತಿರ್ಮುಕ್ತಾ ಅಪಿ ಹ್ಯೇನಮುಪಾಸತೇ' ಎಂದು ಸೌಪರ್ಣಶ್ರುತಿ.

साध्यते । तदिति ब्रह्मदृष्टिरितिप्रकृतब्रह्मपरामर्शः । तदधिगमे ब्रह्मदर्शने सति उत्तरपूर्वाघयोरश्लेषविनाशौ उत्तराघस्याश्लेषः पूर्वाघस्य विनाशो भवतीत्यर्थः । 'नाभुक्तं क्षीयते कर्म' इति स्मृतेस्तु अकृतप्रायश्चित्तविषयत्वस्य वा, अज्ञविषयत्वस्य वा प्रारब्धविषयत्वस्य वा कल्पनादिति भावः । न च तत्र प्रायश्चित्तविधिवदिह बाधकं नेति शङ्क्यम् । तद्व्यपदेशात् 'तद्यथा पुष्करपलाश' इति श्रुतावश्लेषस्य, 'तद्यथैषीकातूलं' इति श्रुतौ नाशस्य च व्यपदेशादित्यर्थः ।

---

ಸೂತ್ರದಲ್ಲಿರುವ 'ತತ್' ಶಬ್ದವು 'ಬ್ರಹ್ಮದೃಷ್ಟಿರುತ್ಕರ್ಷಾತ್'' (ಬ್ರ.ಸೂ. ೪.೧.೫) ಎಂಬ ಸೂತ್ರದಲ್ಲಿ ಪ್ರಕೃತನಾದ ಬ್ರಹ್ಮನನ್ನು ಪರಾಮರ್ಶಿಸುವುದು. ತದಧಿಗಮೇ - ಬ್ರಹ್ಮಸಾಕ್ಷಾತ್ಕಾರವಾಗಲು, ಉತ್ತರಪೂರ್ವಾಘಯೋಃ ಅಶ್ಲೇಷವಿನಾಶೌ- ಜ್ಞಾನ ಲಭಿಸಿದ ನಂತರ ಮಾಡುವ ಪಾಪದ ಅಶ್ಲೇಷವೂ, ಹಿಂದೆ ಮಾಡಿದ ಪಾಪದ ವಿನಾಶವೂ ಉಂಟಾಗುವುದೆಂದು ಅರ್ಥ. 'ನಾಭುಕ್ತಂ ಕ್ಷೀಯತೇ ಕರ್ಮ' ಎಂಬ ಸ್ಮೃತಿಯು ಪ್ರಾಯಶ್ಚಿತ್ತ ಮಾಡಿಕೊಳ್ಳದಿರುವ ಕರ್ಮಕ್ಕೆ ಸಂಬಂಧಪಟ್ಟಿದ್ದೆಂದು ಹೇಳುವಂತೆ ಅಜ್ಞಾನಿಗಳು ಮಾಡುವ ಕರ್ಮಕ್ಕೆ ಸಂಬಂಧಪಟ್ಟಿದ್ದೆಂದು ಅಥವಾ ಫಲವನ್ನು ಅನುಭವಿಸಲು ಆರಂಭಿಸಿರುವ ಕರ್ಮಕ್ಕೆ ಸಂಬಂಧಪಟ್ಟಿದೆಂದು ಕಲ್ಪಿಸಲಾಗುವುದು ಎಂದು ಭಾವ.

ಕೆಲವು ಕರ್ಮಗಳಿಗೆ ಪ್ರಾಯಶ್ಚಿತ್ತವನ್ನು ವಿಧಿಸಿರುವುದರಿಂದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಆ ಕರ್ಮದ ಫಲವನ್ನು ಅನುಭವಿಸಲೇಬೇಕಾಗುವುದೆಂದು ತಿಳಿದುಬರುವುದು. ಆದ್ದರಿಂದ 'ನಾಭುಕ್ತಂ ಕ್ಷೀಯತೇ ಕರ್ಮ' ಎಂಬ ಸ್ಮೃತಿಯು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದ ಕರ್ಮಗಳನ್ನು ಕುರಿತದ್ದೆಂದು ಹೇಳದಿದ್ದರೆ ಪ್ರಾಯಶ್ಚಿತ್ತವಿಧಿಯು ಬಾಧಕವಾಗುವುದು. ಆದರೆ, ಆ ಸ್ಮೃತಿಯು ಅಜ್ಞಾನಿಗಳು ಮಾಡುವ ಕರ್ಮಕ್ಕೆ ಸಂಬಂಧಿಸಿದ್ದೆಂದು ಅಥವಾ ಪ್ರಾರಬ್ಧಕರ್ಮಗಳಿಗೆ ಸಂಬಂಧಿಸಿದ್ದೆಂದು ಹೇಳದಿದ್ದರೆ ಬಾಧಕವಿಲ್ಲವೆಂದು ಶಂಕಿಸತಕ್ಕದ್ದಲ್ಲ. ಏಕೆಂದರೆ,

अश्लेषो नाम इह जन्मन्यशुचित्वासम्भाष्यत्वाद्यभावः परत्र च नरकाद्यहेतुत्वम्। आनन्दह्रासकारकत्वाख्यश्लेषोऽस्त्येवेति बोध्यम्। दृष्टेरुपास्तिरूपत्वात् ज्ञानलाभायाधिगम इत्युक्तिः। पुण्यस्याप्येवंभावेन कर्मणोरिति वाच्ये अघयोरित्युक्तिः पुण्ये विशेषसूचनाय। स च

---

ತದ್ವ್ಯಪದೇಶಾತ್ - [1]'ತದ್ಯಥಾ ಪುಷ್ಕರಪಲಾಶೇ' ಎಂಬ ಶ್ರುತಿಯಲ್ಲಿ ಅಶ್ಲೇಷವನ್ನೂ [2]'ತದ್ಯಥಾ ಇಷೀಕಾತೂಲಂ' ಎಂಬ ಶ್ರುತಿಯಲ್ಲಿ ನಾಶವನ್ನೂ ಹೇಳಿರುವುದರಿಂದ ಎಂದು ಅರ್ಥ.

### ಸೂತ್ರದ ಪದಗಳ ಸ್ವಾರಸ್ಯ

'ಅಶ್ಲೇಷ' ಎಂದರೆ ಪಾಪಮಾಡಿದ ಜನ್ಮದಲ್ಲಿ ಅದರಿಂದಾಗಿ ಅಶುಚಿತ್ವ, ಅಸಂಭಾಷ್ಯತ್ವ[3] ಮೊದಲಾದವು ಇಲ್ಲದಿರುವುದು ಮತ್ತು ದೇಹತ್ಯಾಗಾನಂತರ ನರಕ ಮೊದಲಾದವುಗಳಿಗೆ ಕಾರಣವಾಗದಿರುವುದು. ಜ್ಞಾನಿಗೆ ಇಂತಹ ಪಾಪಗಳ ಅಶ್ಲೇಷ ಇರುವುದಾದರೂ ಆನಂದಹ್ರಾಸಕ್ಕೆ ಕಾರಣವಾಗುವಿಕೆ ಎಂಬ ಶ್ಲೇಷ ಇದ್ದೇ ಇರುವು

---

1. 'ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಲಿಪ್ಯತೇ' (ಛಾಂ. ೪.೧೪.೩) ಎಂದು ಛಾಂದೋಗ್ಯಶ್ರುತಿ. ಹೇಗೆ ಪದ್ಮಪತ್ರಕ್ಕೆ ನೀರಿನ ಲೇಪವಾಗಲಾರದೋ ಹಾಗೆ ಬ್ರಹ್ಮಜ್ಞಾನಿಗೆ ಪಾಪದ ಲೇಪವಾಗದು ಎಂದು ಶ್ರುತಿಯ ಭಾವ.

2. 'ತದ್ಯಥಾ ಇಷೀಕಾತೂಲಂ ಅಗ್ನೌ ಪ್ರೋತಂ ಪ್ರದೂಯತೇ ಏವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ' (ಛಾಂ. ೫.೨೪.೩) ಎಂದು ಇನ್ನೊಂದು ಛಾಂದೋಗ್ಯ ಶ್ರುತಿವಾಕ್ಯ. ಇಷೀಕಾ ಎನ್ನುವುದು ಒಂದು ಬಗೆಯ ಹುಲ್ಲು. ತೂಲವೆಂದರೆ ಹತ್ತಿ. ಹುಲ್ಲು, ಹತ್ತಿ ಮೊದಲಾದವುಗಳು ಅಗ್ನಿಯಲ್ಲಿ ಬಿದ್ದಾಗ ಹೇಗೆ ಕ್ಷಣಾರ್ಧದಲ್ಲಿ ದಹಿಸಿಹೋಗುವವೋ ಹಾಗೆ ಬ್ರಹ್ಮಜ್ಞಾನಿಯು ಜ್ಞಾನೋತ್ತರಕಾಲದಲ್ಲಿ ಮಾಡಿದ ಪಾಪಗಳೆಲ್ಲವೂ ದಹಿಸಿಹೋಗುವವು ಎಂದು ಭಾವ.

3. ಸಂಭಾಷಣೆಗೆ ಅನರ್ಹವಾಗುವಿಕೆ.

वक्ष्यते। 'उपमर्दं च' इत्यत्र प्रारब्धस्याल्पभोग उक्तः। इहाप्रारब्धस्य स्वरूपनाश इति भेदः।

ईशद्वेषिणो मिथ्याज्ञानेन पुण्यस्याप्येवमित्याह—

॥ ॐ इतरस्याप्येवमसंश्लेषः पाते तु ॐ ॥ ४.१.१४

---

ದೆಂದು ತಿಳಿಯಬೇಕು. [1]ದೃಷ್ಟಿಯು ಉಪಾಸನಾಸ್ವರೂಪವಾದುದರಿಂದ ಜ್ಞಾನವೆಂಬ ಅರ್ಥ ಲಭಿಸಲು 'ಅಧಿಗಮ' ಎಂದು ಸೂತ್ರದಲ್ಲಿ ಹೇಳಲಾಗಿದೆ. ಜ್ಞಾನಿಕೃತವಾದ ಪುಣ್ಯವೂ ಪಾಪದಂತೆ ಅಶ್ಲೇಷ–ವಿನಾಶಗಳನ್ನು ಪಡೆಯುವುದರಿಂದ ಪುಣ್ಯಪಾಪಗಳೆರಡನ್ನೂ ಸಂಗ್ರಹಿಸುವ ಸಲುವಾಗಿ ಸೂತ್ರದಲ್ಲಿ 'ಕರ್ಮಣೋಃ' ಎಂದು ಹೇಳಬೇಕಾಗಿದ್ದರೂ ಜ್ಞಾನಿಯು ಮಾಡುವ ಪುಣ್ಯವಿಶೇಷವೇ ಇಲ್ಲಿ ವಿವಕ್ಷಿತವಾಗಿದೆ ಎಂದು ಸೂಚಿಸಲು ಸೂತ್ರದಲ್ಲಿ 'ಅಘಯೋಃ' ಎಂದು ಹೇಳಲಾಗಿದೆ. ಪುಣ್ಯವಿಶೇಷ ಯಾವುದೆನ್ನುವುದನ್ನು ಮುಂದೆ ಹೇಳಲಾಗುವುದು. 'ಉಪಮರ್ದಂ ಚ' (ಬ್ರ. ಸೂ. ೩.೪.೧೬) ಎಂಬಲ್ಲಿ ಜ್ಞಾನಿಯು ಪ್ರಾರಬ್ಧಕರ್ಮದ ಅಲ್ಪಭೋಗವನ್ನು ಮಾತ್ರ ಮಾಡುವನೆಂದು ಹೇಳಲಾಗಿದೆ. ಈ ಸೂತ್ರದಲ್ಲಿ ಜ್ಞಾನಿಗೆ ಸಂಬಂಧಿಸಿದ ಅಪ್ರಾರಬ್ಧ ಕರ್ಮಕ್ಕೆ ಸ್ವರೂಪನಾಶವನ್ನು ಹೇಳಲಾಗಿದೆ ಎಂದು ಭೇದವಿದೆ.

ಮಿಥ್ಯಾಜ್ಞಾನದಿಂದಾಗಿ ಭಗವಂತನ ದ್ವೇಷಿಯ ಪುಣ್ಯಕ್ಕೂ ಹೀಗೆಯೇ ಅಶ್ಲೇಷ–ವಿನಾಶಗಳು ಉಂಟಾಗುವವೆಂದು ಹೇಳುವ ಸೂತ್ರ—

## ಓಂ ಇತರಸ್ಯಾಪ್ಯೇವಂ ಅಸಂಶ್ಲೇಷಃ ಪಾತೇ ತು ಓಂ ೪.೧.೧೪

---

1. 'ಬ್ರಹ್ಮದೃಷ್ಟಿರುತ್ಕರ್ಷಾತ್' (ಬ್ರ. ಸೂ. ೪.೧.೫) ಎಂಬ ಹಿಂದಿನ ಸೂತ್ರದಿಂದ ದೃಷ್ಟಿಪದವನ್ನು ಅನುವೃತ್ತಿಮಾಡಿಕೊಳ್ಳಲು ಸಾಧ್ಯವಿರುವಾಗ ಈ ಸೂತ್ರದಲ್ಲಿ 'ಅಧಿಗಮ' ಎಂಬ ಪದವೇಕೆ ? ಎಂದು ಶಂಕಿಸುವವನ ಭಾವ. ಹಿಂದಿನ ಸೂತ್ರದಲ್ಲಿ ದೃಷ್ಟಿಪದವು ಉಪಾಸನಾಪರವಾಗಿದೆ. ಈ ಸೂತ್ರದಲ್ಲಿ ಆ ಪದವನ್ನು ಅನುವೃತ್ತಿ ಮಾಡಿಕೊಂಡರೆ ಅದೇ ಅರ್ಥವನ್ನೇ ಗ್ರಹಿಸಬೇಕಾಗುವುದು. ಆದ್ದರಿಂದ ವಿವಕ್ಷಿತವಾದ 'ಜ್ಞಾನ' ಎಂಬ ಅರ್ಥವಿರುವ 'ಅಧಿಗಮ' ಪದವನ್ನು ಇಲ್ಲಿ ಉಪಯೋಗಿಸಲಾಗಿದೆ ಎಂದು ಉತ್ತರ.

इतरस्येति तन्त्रम् । पात इति सामीप्यसप्तमी । तादर्थ्ये वा । असंश्लेष इत्युपलक्षणम् । तुः अनुत्थानरूपविशेषवाची सन् पातविशेषणम् ।

इतरस्य प्रस्तुतज्ञानीतरस्येशद्वेषिणः पाते तु अनुत्थानपाते आसन्ने मिथ्याज्ञाने पूर्णे सति पुण्यस्यापि एवं ज्ञानिपापस्येव उत्तरपूर्वाघयोरश्लेषविनाशौ भवत इत्यर्थः ।

तमोभोगानन्तरं पुण्यभोगोऽस्तु किमश्लेषादिनेत्यतः तुरुक्तः ।

---

**ಸೂತ್ರಾರ್ಥ**

'ಇತರಸ್ಯ' ಎಂಬ ಸೂತ್ರದ ಪದವು ಅನೇಕರೀತ್ಯಾ ಉಪಕಾರಕವಾಗಿದೆ. 'ಪಾತೇ' ಎಂಬಲ್ಲಿರುವ ಸಪ್ತಮೀವಿಭಕ್ತಿಯು ಸಾಮೀಪ್ಯ ಎಂಬ ಅರ್ಥವನ್ನು ಹೇಳುವುದು. ಅಥವಾ 'ತಾದರ್ಥ್ಯ' ಅಂದರೆ 'ಅದಕ್ಕಾಗಿ' ಎಂಬ ಅರ್ಥವನ್ನು ಹೇಳುವುದು. 'ಅಸಂಶ್ಲೇಷ' ಪದವು ಉಪಲಕ್ಷಣವಾಗಿದೆ.[1] 'ತು' ಶಬ್ದವು ಅನುತ್ಥಾನರೂಪವಾದ ವಿಶೇಷವನ್ನು ಹೇಳತಕ್ಕದ್ದಾಗಿ 'ಪಾತೇ' ಎಂಬ ಪದಕ್ಕೆ ವಿಶೇಷಣವಾಗಿದೆ.

ಇತರಸ್ಯ – ಪ್ರಸ್ತುತನಾದ ಬ್ರಹ್ಮಜ್ಞಾನಿಗಿಂತ ಇತರನಾದ ಭಗವದ್ದ್ವೇಷಿಯ, ಪಾತೇ ತು – ಪುನಃ ಉತ್ಥಾನವಿಲ್ಲದಂತಹ ಪತನವು ಸಮೀಪಿಸಿದಾಗ, ಮಿಥ್ಯಾಜ್ಞಾನವು ಪರಿಪೂರ್ಣವಾದಾಗ ತಮಸ್ಸಿನಲ್ಲಿ ಉತ್ಥಾನವಿಲ್ಲದಂತಹ ಪತನ ಉಂಟಾಗುವುದಕ್ಕೋಸ್ಕರವೇ, ಇತರಸ್ಯಾಪಿ – ಪ್ರಸ್ತುತವಾದ ಪಾಪಕ್ಕಿಂತ ಭಿನ್ನವಾದ ಪುಣ್ಯಕ್ಕೂ, ಏವಂ – ಜ್ಞಾನಿಕೃತವಾದ ಪಾಪಕ್ಕೆ ಹೇಗೋ ಹಾಗೆ, ಅಸಂಶ್ಲೇಷಃ – ಅಶ್ಲೇಷ-ವಿನಾಶಗಳು ಉಂಟಾಗುವವೆಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

ಭಗವದ್ದ್ವೇಷಿಗಳಿಗೆ ತಮೋಭೋಗ ಮುಗಿದ ನಂತರ ಪುಣ್ಯಭೋಗವಾಗಲಿ,

---

1. ಅಸಂಶ್ಲೇಷವನ್ನು ಮಾತ್ರವಲ್ಲದೆ ವಿನಾಶವನ್ನೂ ತಿಳಿಸುವುದೆಂದು ಭಾವ.

एवमित्युक्त्यैव विनाशस्येवाश्लेषस्यापि लाभेऽपि पुनरुक्तिः ज्ञानिनोऽघेन आनन्दह्रास इवेशद्वेषिणः पुण्येन तमसि किञ्चित्सुखलेशोऽपि नेति सर्वथैवाश्लेष इति वक्तुम् । अत एव समित्युक्तम् ।

ज्ञानिद्वेषिणोः ज्ञानादिनैव पापपुण्ययोः क्षये सद्यो मोक्षादि स्यादित्यत आह—

॥ ॐ अनारब्धकार्ये एव तु पूर्वे तदवधेः ॐ ॥
४.१.१५

---

ಅವರು ಮಾಡಿದ ಪುಣ್ಯಕ್ಕೆ ಅಶ್ಲೇಷ-ವಿನಾಶಗಳಾಗುವುದೆಂದೇಕೆ ಹೇಳಬೇಕು ಎಂಬ ಶಂಕೆಯ ಪರಿಹಾರಕ್ಕಾಗಿ 'ತು' ಶಬ್ದವನ್ನು[1] ಹೇಳಲಾಗಿದೆ. 'ಏವಂ' ಎಂಬ ಸೂತ್ರದ ಪದದಿಂದಲೇ ಈಶದ್ವೇಷಿ ಮಾಡಿರುವ ಪುಣ್ಯಕ್ಕೆ ವಿನಾಶದಂತೆ ಅಶ್ಲೇಷವೂ ಲಭಿಸುವುದಾದರೂ, ಜ್ಞಾನೋತ್ತರಕಾಲದಲ್ಲಿ ಮಾಡಿದ ಪಾಪದಿಂದ ಬ್ರಹ್ಮಜ್ಞಾನಿಗೆ ಮೋಕ್ಷದಲ್ಲಿ ಆನಂದಹ್ರಾಸವಾಗುವಂತೆ ಈಶದ್ವೇಷಿಗೆ ಪುಣ್ಯಕರ್ಮದಿಂದಾಗಿ ತಮಸಿನಲ್ಲಿ ಅತ್ಯಲ್ಪ ಸುಖವೂ ಇಲ್ಲ ಎಂಬುದಾಗಿ ಸರ್ವಪ್ರಕಾರದಿಂದಲೂ ಭಗವದ್ದ್ವೇಷಿಗೆ ಪುಣ್ಯಕರ್ಮದ ಅಶ್ಲೇಷವಿದೆ ಎಂದು ತಿಳಿಸಲು 'ಅಸಂಶ್ಲೇಷಃ' ಇಂದು ಪುನಃ ಹೇಳಲಾಗಿದೆ. ಆದ್ದರಿಂದಲೇ 'ಅಸಂಶ್ಲೇಷಃ' ಎಂಬಲ್ಲಿ 'ಸಂ' ಎಂಬ ಪದವನ್ನು ಪ್ರಯೋಗಿಸಲಾಗಿದೆ.

ಭಗವಂತನ ಜ್ಞಾನಿ ಮತ್ತು ದ್ವೇಷಿಗಳಿಗೆ ಬ್ರಹ್ಮಜ್ಞಾನ ಮತ್ತು ಮಿಥ್ಯಾಜ್ಞಾನಗಳಿಂದಲೇ ಅವರ ಪಾಪ-ಪುಣ್ಯಗಳ ನಾಶವಾಗುವುದಾದರೆ ಕೂಡಲೇ ಅವರಿಗೆ ಮೋಕ್ಷವಾಗಬೇಕಾದೀತು ಎಂಬ ಆಶಂಕೆಗೆ ಸಮಾಧಾನ ಹೇಳುವ ಸೂತ್ರ—

ಓಂ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ಓಂ
೪.೧.೧೫

---

1. ಅನುತ್ಥಾನರೂಪವಾದ ವಿಶೇಷವನ್ನು ಹೇಳುವ 'ತು' ಶಬ್ದವು ಭಗವದ್ದ್ವೇಷಿಗಳಿಗೆ ತಮಸ್ಸಿನಿಂದ ಮೇಲೇಳುವ ಪ್ರಸಂಗವೇ ಇಲ್ಲದಿರುವುದರಿಂದ ಅನಂತರ ಪುಣ್ಯಭೋಗವಾಗುವ ಶಂಕೆಯೇ ಉದ್ಭವಿಸುವುದಿಲ್ಲವೆಂದು ತಿಳಿಸುವುದೆಂದು ಭಾವ.

**अनारब्धकार्ये भोक्तुम् अनुपक्रान्ते सुखदुःखरूपे कार्ये ययोस्ते तादृशे एव पूर्वे पूर्वोक्ते पुण्यपापे नश्यत इति शेषः। न तु प्रारब्धकार्ये येनोक्तदोषः स्यादित्यर्थः। ज्ञानानन्तरं प्रारब्धसत्त्वं कुतः? तदवधेः। श्रवणादिति शेषः। तदिति तन्त्रं श्रुतिस्थं परामृशति। तस्य मोक्षस्य तदवधेः प्रारब्धकर्मावसानावधिकत्वस्य 'तस्य तावदेव चिरं यावन्न विमोक्ष्येऽथ सम्पत्स्यते' इति श्रवणादित्यर्थः।**

---

**ಸೂತ್ರಾರ್ಥ**

ಅನಾರಬ್ಧಕಾರ್ಯೇ ಏವ ಪೂರ್ವೇ – ಭೋಗಿಸಲು ಅಂದರೆ ಅನುಭವಿಸಲು ಆರಂಭಿಸಲ್ಪಡದಿರುವ ಸುಖ-ದುಃಖ ರೂಪವಾದ ಫಲಗಳುಳ್ಳ ಪುಣ್ಯ-ಪಾಪಗಳು ಅನಾರಬ್ಧಕಾರ್ಯಗಳು, ಅಂತಹ ಹಿಂದೆ ಹೇಳಲಾಗಿರುವ ಪುಣ್ಯ-ಪಾಪಗಳು ಮಾತ್ರ ನಾಶ ಹೊಂದುತ್ತವೆ. ಇಲ್ಲಿ 'ನಾಶ ಹೊಂದುತ್ತವೆ' ಎಂಬ ಪದಗಳು ಶೇಷಪೂರಣ ವಾಗಿವೆ. ಈಗಾಗಲೇ ಸುಖ–ದುಃಖರೂಪವಾದ ಫಲವನ್ನು ಅನುಭವಿಸಲು ಆರಂಭಿಸ ಲಾಗಿರುವ ಪುಣ್ಯ-ಪಾಪಗಳು ಮಾತ್ರ ನಾಶವಾಗುವುದಿಲ್ಲ. ಹಾಗೆ ಅಂತಹ ಪುಣ್ಯ–ಪಾಪಗಳೂ ನಾಶವಾಗುವುದಿದ್ದರೆ ಹಿಂದೆ ಹೇಳಿದ ದೋಷವುಂಟಾಗುತ್ತಿತ್ತೆಂದು ಅರ್ಥ.

ಜ್ಞಾನ ಪಡೆದ ನಂತರವೂ ಪ್ರಾರಬ್ಧಕರ್ಮವಿರುವುದಕ್ಕೆ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ – 'ತದವಧೇಃ'. 'ಶ್ರವಣಾತ್' ಎಂಬ ಶೇಷವನ್ನು ಇಲ್ಲಿ ಸೇರಿಸ ಬೇಕು. 'ತತ್' ಶಬ್ದವು ಅನೇಕೋಪಕಾರಕವಾಗಿದ್ದು ಶ್ರುತಿಯಲ್ಲಿರುವ ವಿಷಯ ವನ್ನು ಪರಾಮರ್ಶಿಸುವುದು.[1] ತಸ್ಯ - ಮೋಕ್ಷಕ್ಕೆ, ತದವಧೇಃ - ಪ್ರಾರಬ್ಧಕರ್ಮದ ಅಂತ್ಯವೇ ಅವಧಿಯಾಗಿರುವುದೆಂದು 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯತೇ'[2] ಎಂದು ಶ್ರುತಿಯಲ್ಲಿ ಕೇಳಿಬರುವುದರಿಂದ ಎಂದು ಅರ್ಥ.

---

1. 'ತಸ್ಯ ತಾವದೇವ ಚಿರಂ' ಎಂಬ ಶ್ರುತಿಯಲ್ಲಿ ಮೋಕ್ಷವಾಗಲು ಪ್ರಾರಬ್ಧಕರ್ಮದ ಅವಸಾನವೆಂಬ ವಿಷಯವು ಪ್ರಸ್ತುತವಾಗಿದೆ. ಆ ವಿಷಯವನ್ನು 'ತದವಧೇಃ' ಎಂಬಲ್ಲಿರುವ 'ತತ್' ಶಬ್ದವು ಪರಾಮರ್ಶಿಸುವುದೆಂದು ಅಭಿಪ್ರಾಯ.

2. ಎಲ್ಲಿಯವರೆಗೆ ಅಪರೋಕ್ಷಜ್ಞಾನಿಯು ಪ್ರಾರಬ್ಧಕರ್ಮದಿಂದ ಬಿಡುಗಡೆ ಹೊಂದುವ ದಿಲ್ಲವೋ ಅಲ್ಲಿಯವರೆಗೆ ಮಾತ್ರ ಇವನಿಗೆ ಮುಕ್ತಿಯ ವಿಲಂಬವೆಂದು 'ತಸ್ಯ ತಾವದೇವ' (ಛಾಂ. ೬.೧೪.೨) ಎಂಬ ಶ್ರುತಿಯ ಭಾವ.

तुः चार्थः सन् 'यदनारब्धपापं स्यात्' इत्यादिस्मृतेश्चेति समुच्चिनोति । श्रुतौ प्रारब्धसत्त्वस्यास्फुटत्वात् स्मृत्युक्तिः ।

ज्ञानिनोऽघक्षयेऽपि तत्कृतपूर्वोत्तरपुण्यसत्त्वात् कथं मुक्तिरित्यत आह—

---

'ತು' ಶಬ್ದವು 'ಚ' ಶಬ್ದದ ಅರ್ಥವನ್ನು ಹೊಂದಿದ್ದು 'ಅನಾರಬ್ಧಪಾಪಂ ಸ್ಯಾತ್'[3] ಇತ್ಯಾದಿ ಸ್ಮೃತಿ ಇರುವುದರಿಂದಲೂ ಎಂಬುದಾಗಿ ಸ್ಮೃತಿಯು ಸಮುಚ್ಚಯವನ್ನು ಹೇಳುವುದು. ಪ್ರಾರಬ್ಧಕರ್ಮವು ಜ್ಞಾನಾನಂತರವೂ ಇರುವುದೆನ್ನುವುದು ಶ್ರುತಿಯಲ್ಲಿ ಸ್ಫುಟವಾಗಿಲ್ಲದ ಕಾರಣ ಸ್ಮೃತಿಯನ್ನು ಸೂತ್ರದಲ್ಲಿ ಹೇಳಲಾಗಿದೆ.

ಜ್ಞಾನದಿಂದ ಜ್ಞಾನಿಯ ಪಾಪನಾಶವಾಗುವುದಾದರೂ ಅವನು ಜ್ಞಾನಪೂರ್ವ ಕಾಲದಲ್ಲಿ ಮತ್ತು ಜ್ಞಾನೋತ್ತರಕಾಲದಲ್ಲಿ ಮಾಡಿರುವ ಪುಣ್ಯವು ಹಾಗೆಯೇ ಇರುವುದರಿಂದ ಅವನಿಗೆ ಮುಕ್ತಿಯಾಗುವುದು ಹೇಗೆ ಎಂಬ ಶಂಕೆಗೆ ಸಮಾಧಾನ—

---

3. 'ಯದನಾರಬ್ಧಪಾಪಂ ಸ್ಯಾತ್ ತದ್ವಿನಶ್ಯತಿ ನಿಶ್ಚಯಾತ್ ।
ಪಶ್ಯತೋ ಬ್ರಹ್ಮ ನಿರ್ದ್ವಂದ್ವಂ ಹೀನಂ ಚ ಬ್ರಹ್ಮ ಪಶ್ಯತಃ ।
ದ್ವಿಷತೋ ವಾ ಭವೇತ್ ಪುಣ್ಯನಾಶೋ ನಾಸ್ತ್ಯತ್ರ ಸಂಶಯಃ ॥
ತಸ್ಯಾಪ್ಯಾರಬ್ಧಕಾರ್ಯಸ್ಯ ನ ವಿನಾಶೋಽಸ್ತಿ ಕುತ್ರಚಿತ್ ।
ಆರಬ್ಧಯೋಶ್ಚ ನಾಶಃ ಸ್ಯಾದಲ್ಪಯೋಃ ಪುಣ್ಯಪಾಪಯೋಃ ॥'
-- ನಾರಾಯಣತಂತ್ರ ಸ್ಮೃತಿ.

ಸಮಾಧಿಕರಹಿತನಾದ ಪರಬ್ರಹ್ಮನ ಸಾಕ್ಷಾತ್ಕಾರವಾಗಿರುವ ಜ್ಞಾನಿಯ ಅಪ್ರಾರಬ್ಧಕರ್ಮವು ನಿಶ್ಚಯವಾಗಿಯೂ ವಿನಾಶವನ್ನು ಹೊಂದುವುದು. ಹಾಗೆಯೇ, ಪರಮಾತ್ಮನನ್ನು ಗುಣರಹಿತನೆಂದೂ, ಆಕಾರರಹಿತನೆಂದೂ ತಿಳಿಯುವ ದ್ವೇಷಿಯ ಮಿಥ್ಯಾಜ್ಞಾನಕ್ಕೂ ಹಿಂದಿನಕಾಲದ ಧರ್ಮವೂ ನಷ್ಟವಾಗುವುದು. ಈ ವಿಷಯದಲ್ಲಿ ಸಂಶಯವಿಲ್ಲ.

ಕೆಲವು ಸಂದರ್ಭಗಳಲ್ಲಿ ಜ್ಞಾನಿ-ದ್ವೇಷಿಗಳ ಪುಣ್ಯ-ಪಾಪಗಳೂ ನಾಶವಾಗಲಾರವು. ಕೆಲವೊಮ್ಮೆ, ಪ್ರಾರಬ್ಧಕರ್ಮಗಳ ಅಲ್ಪ ಪುಣ್ಯ-ಪಾಪಗಳಿಗೆ ಫಲಹ್ರಾಸರೂಪವಾದ ನಾಶವು ಉಂಟಾಗುವುದೆಂದು ಸಾರಾಂಶ,

॥ ॐ अग्निहोत्रादि तु तत्कार्यायैव तद्दर्शनात् ॐ ॥
४.१.१६

तुः ज्ञानिनस्तु न द्वेषिण इति विशेषार्थः । तत्कार्यमिति कर्मधारयस्तत्पुरुषश्च । तदिति प्रस्तुताधिगम उच्यते ।

ज्ञानिनोऽग्निहोत्राद्यकाम्यं कर्म तत्कार्यायैव ज्ञानाख्यकार्याय ज्ञानकार्यमोक्षातिशयानुभवायैव च । न तु नाशाश्लेषावाप्नोति । नापि बन्धकम् । ज्ञानात् पूर्वकृतं ज्ञानाय पाश्चात्यं तु अतिशयायेत्यर्थः ।

---

## ಓಂ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ಓಂ ೪.೧.೧೬

**ಸೂತ್ರಾರ್ಥ**

'ತು' ಶಬ್ದವು 'ಜ್ಞಾನಿಗೆ ಸಂಬಂಧಿಸಿರುವ, ಆದರೆ ದ್ವೇಷಿಗೆ ಸಂಬಂಧಿಸದಿರುವ' ಎಂಬ ವಿಶೇಷವನ್ನು ಹೇಳುವುದು. 'ತತ್ಕಾರ್ಯ' ಎಂಬ ಪದವು ಕರ್ಮಧಾರಯ ಸಮಾಸ ಮತ್ತು ತತ್ಪುರುಷ ಸಮಾಸ – ಎರಡೂ ಆಗಿದೆ. 'ತತ್ಕಾರ್ಯ' ಎಂಬಲ್ಲಿರುವ 'ತತ್' ಶಬ್ದವು ಪ್ರಸ್ತುತವಾದ ಬ್ರಹ್ಮಜ್ಞಾನವನ್ನು ಹೇಳುವುದು.

ಅಗ್ನಿಹೋತ್ರಾದಿ ತು – ಜ್ಞಾನಿಯು ಮಾಡುವ ಅಗ್ನಿಹೋತ್ರ ಮೊದಲಾದ ನಿಷ್ಕಾಮಕರ್ಮವು, ತತ್ಕಾರ್ಯಾಯೈವ - ಬ್ರಹ್ಮಜ್ಞಾನರೂಪವಾದ ಫಲಕ್ಕಾಗಿ ಹಾಗೂ ಬ್ರಹ್ಮಜ್ಞಾನದ ಕಾರ್ಯವಾದ ಮೋಕ್ಷದಲ್ಲಿ ಅತಿಶಯದ ಅನುಭವಕ್ಕೋಸ್ಕರವಾಗಿಯೇ ಇದೆ ಹೊರತು ನಾಶ ಮತ್ತು ಅಶ್ಲೇಷಗಳನ್ನು ಹೊಂದುವುದಿಲ್ಲ. ಆ ಕರ್ಮವು ಬಂಧಕವೂ ಆಗಿಲ್ಲ. ಜ್ಞಾನಪ್ರಾಪ್ತಿಯಾಗುವ ಮುಂಚೆ ಮಾಡಿದ ಕರ್ಮವು ಜ್ಞಾನಕ್ಕೋಸ್ಕರವಾಗಿಯೂ, ಜ್ಞಾನೋತ್ತರಕಾಲದಲ್ಲಿ ಮಾಡಿದ ಆ ನಿಷ್ಕಾಮಕರ್ಮವು ಮೋಕ್ಷದಲ್ಲಿ ಅತಿಶಯಕ್ಕೋಸ್ಕರವಾಗಿಯೂ ಇರುವುದೆಂದು ಅರ್ಥ.

कुतः ? तद्दर्शनात् । 'य आत्मानमेव लोकमुपास्ते न हास्य कर्म क्षीयते' इति श्रुतावुक्तार्थस्य दर्शनादित्यर्थः । यो जिज्ञासुरुपास्ते तस्य पुण्यं ज्ञानद्वारेणाक्षयमोक्षफलं भवतीति तथा य उपास्ते जानीते तस्य पुण्यम् अक्षयमोक्षातिशयायेति श्रुत्यर्थप्रतीतेरिति भावः ।

इतरस्येत्यस्य व्यवायादग्निहोत्रादीत्युक्तिः । पुण्यं त्विति

---

ಈ ವಿಷಯದಲ್ಲಿ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ - ತದ್ದರ್ಶನಾತ್. 'ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇ' (ಬೃ. ೩.೪.೧೫) ಎಂಬ ಶ್ರುತಿಯಲ್ಲಿ ಇಲ್ಲಿ ಹೇಳಿರುವ ವಿಷಯವು ದೃಷ್ಟವಾಗಿರುವುದರಿಂದ ಎಂದು ಅರ್ಥ. ಯಃ - ಯಾವ ಜಿಜ್ಞಾಸುವು ಪರಮಾತ್ಮನ ಉಪಾಸನೆಯನ್ನು ಮಾಡುವನೋ ಅವನ ಪುಣ್ಯವು ಜ್ಞಾನದ ಮೂಲಕ ಅಕ್ಷಯಮೋಕ್ಷರೂಪವಾದ ಫಲವುಳ್ಳದ್ದಾಗುವುದೆಂದೂ, ಹಾಗೆಯೇ ಯಃ ಉಪಾಸ್ತೇ – ಯಾರು ಪರಮಾತ್ಮನ ಜ್ಞಾನವನ್ನು ಹೊಂದಿರುವನೋ ಅವನ ಪುಣ್ಯವು ಅಕ್ಷಯವಾದ ಮೋಕ್ಷದಲ್ಲಿ ಅತಿಶಯಕ್ಕೆ ಕಾರಣವಾಗಿರುವುದೆಂದೂ ಶ್ರುತ್ಯರ್ಥವು ತಿಳಿದುಬರುವುದರಿಂದ ಎಂದು ಭಾವ.

### ಸೂತ್ರದ ಪದಗಳ ಸ್ವಾರಸ್ಯ

'ಇತರಸ್ಯಾಪ್ಯೇವಂ' (ಬ್ರ. ಸೂ. ೪.೧.೧೪) ಎಂಬ ಸೂತ್ರದಲ್ಲಿರುವ 'ಇತರಸ್ಯ' ಎಂಬ ಪದಕ್ಕೆ 'ಅನಾರಬ್ಧಕಾರ್ಯೇ' (ಬ್ರ.ಸೂ. ೪.೧.೧೫) ಎಂಬ ಸೂತ್ರದ ವ್ಯವಧಾನವಿರುವುದರಿಂದ ಪ್ರಕೃತಸೂತ್ರದಲ್ಲಿ 'ಅಗ್ನಿಹೋತ್ರಾದಿ' ಎಂದು ಹೇಳಲಾಗಿದೆ.[1] 'ಪುಣ್ಯಂ ತು' ಎಂದು ಹೇಳಬಹುದಾಗಿದ್ದರೂ ಅದರ ಬದಲು

---

1. ಪುಣ್ಯವಾಚಕವಾದ 'ಇತರ' ಶಬ್ದವು 'ಇತರಸ್ಯಾಪ್ಯೇವಂ' ಎಂಬ ಹಿಂದಿನ ಸೂತ್ರದಲ್ಲಿರುವುದರಿಂದ ಆ ಪದವನ್ನೇ ಇಲ್ಲಿಗೆ ಅನುವೃತ್ತಿ ಮಾಡಿಕೊಂಡು 'ಅಗ್ನಿಹೋತ್ರಾದಿ' ಎಂಬ ಶಬ್ದವನ್ನು ಈ ಸೂತ್ರದಲ್ಲಿ ಪ್ರಯೋಗಿಸದಿರಬಹುದಿತ್ತು ಎಂದು ಶಂಕೆ. ಪುಣ್ಯ-ಪಾಪಗಳೆರಡನ್ನೂ ಹೇಳುವ 'ಅನಾರಬ್ಧಕಾರ್ಯೇ' ಎಂಬ ಪದವಿರುವ ಸೂತ್ರ ಮಧ್ಯದಲ್ಲಿರುವುದರಿಂದ 'ಇತರಸ್ಯ' ಎಂಬ ಪದವು ಈ ಸೂತ್ರಕ್ಕೆ ಅನ್ವಯವನ್ನು ಪಡೆಯಲಾರದೆಂಬ ದೃಷ್ಟಿಯಿಂದ 'ಅಗ್ನಿಹೋತ್ರಾದಿ' ಎಂದು ಪ್ರತ್ಯೇಕ ಪದವನ್ನು ಪ್ರಯೋಗಿಸಲಾಗಿದೆ ಎಂದು ಸಮಾಧಾನ.

वाच्ये एवमुक्तिः विशिष्य प्रदर्शनायेति केचित् । अग्नये विष्णवे होत्रं हविर्यस्मिन् इत्यकामकर्मलाभायेत्यन्ये । एवेत्यघवद्विनाशादिकं नेति वक्तुम् । भाक्तं वेत्यत्र मुक्तेः कर्मसाध्यत्वश्रुतिगत्युक्त्यर्थं पूर्वोत्तरपुण्यस्य मुक्त्युपयोग उक्तः । अत्र तु प्रतिबन्धकत्वशङ्का-निरासायेति भेदः ।

---

'ಅಗ್ನಿಹೋತ್ರಾದಿ ತು' ಎಂದು ಹೇಳಿರುವುದು ಆ ಪುಣ್ಯಕರ್ಮವನ್ನು ಪ್ರತ್ಯೇಕವಾಗಿ ತೋರಿಸಲು ಎಂದು ಕೆಲವರು ಹೇಳುವರು. ಮತ್ತೆ ಕೆಲವರು 'ಅಗ್ನಯೇ ಹೋತ್ರಂ ಯಸ್ಮಿನ್' ಎಂಬ ವ್ಯುತ್ಪತ್ತಿಗನುಗುಣವಾಗಿ ವಿಷ್ಣುವನ್ನುದ್ದೇಶಿಸಿ ಹವಿಸ್ಸನ್ನು ಅರ್ಪಿಸುವ ನಿಷ್ಕಾಮಕರ್ಮದ ಲಾಭಕ್ಕಾಗಿ 'ಅಗ್ನಿಹೋತ್ರಾದಿ' ಎಂದು ಹೇಳಲಾಗಿದೆ ಎಂದು ಹೇಳುವರು. ಜ್ಞಾನಿಕೃತವಾದ ಪಾಪವು ನಾಶವಾಗುವಂತೆ ಅವರ ಪುಣ್ಯವು ನಾಶವಾಗುವುದಿಲ್ಲವೆಂದು ಹೇಳಲು 'ತತ್ಕಾರ್ಯಾಯೈವ' ಎಂಬಲ್ಲಿ ಏವಶಬ್ದವನ್ನು ಪ್ರಯೋಗಿಸಲಾಗಿದೆ.[1] 'ಭಾಕ್ತಂ ವಾ' (ಬ್ರ.ಸೂ. ೩.೧.೭) ಎಂಬ ಸೂತ್ರದಲ್ಲಿ ಮೋಕ್ಷವು ಕರ್ಮಸಾಧ್ಯವೆಂದು ಹೇಳುವ ಶ್ರುತಿಯು ತಾತ್ಪರ್ಯವನ್ನು ತಿಳಿಸುವ ಸಲುವಾಗಿ ಜ್ಞಾನಪೂರ್ವೋತ್ತರ ಕಾಲಗಳಲ್ಲಿ ಸಂಪಾದಿಸಿದ ಪುಣ್ಯವು ಮುಕ್ತಿಗೆ ಉಪಯೋಗಿಯೆಂದು ಹೇಳಲಾಗಿದೆ. ಈ ಸೂತ್ರದಲ್ಲಾದರೋ ಜ್ಞಾನಿಕೃತವಾದ ಪುಣ್ಯಕರ್ಮವು ಮುಕ್ತಿಗೆ ಪ್ರತಿಬಂಧಕವೆಂಬ ಶಂಕೆಯನ್ನು ನಿರಾಕರಿಸಲು ಆ ಪುಣ್ಯಕರ್ಮಗಳು ಮುಕ್ತಿಗೆ ಉಪಯೋಗಿಯಾಗಿವೆಯೆಂದು ಹೇಳಲಾಗಿದೆ ಎಂದು ಭೇದವಿದೆ.

---

1. ತತ್ಕಾರ್ಯಾಯೈವ ಎಂದರೆ ಜ್ಞಾನರೂಪವಾದ ಫಲಕ್ಕಾಗಿಯೇ ಮತ್ತು ಜ್ಞಾನದ ಫಲವಾದ ಮೋಕ್ಷಾತಿಶಯಕ್ಕಾಗಿಯೇ ಎಂದು ಅರ್ಥ. ಇದರಿಂದ ಜ್ಞಾನಿಕೃತವಾದ ಪಾಪವು ಯಾವ ಫಲವನ್ನೂ ಕೊಡದೆ ನಾಶವಾಗುವಂತೆ ಅವರ ಪುಣ್ಯವು ನಿಷ್ಫಲವಾಗಿ ನಾಶವಾಗುವದಿಲ್ಲವೆಂದು ಹೇಳಿದಂತಾಗುವುದೆಂದು ಭಾವ.

तथापि काम्यपुण्यसत्त्वात् कथं मुक्तिरित्यत आह—

॥ ॐ अतोऽन्यदपीत्येकेषामुभयोः ॐ ॥ ४.१.१७

अपीत्यतः अश्लेषविनाशावित्यस्ति । अनारब्धकार्यमिति च । अतः प्रस्तुतादकाम्यादन्यत् काम्यं पूर्वोत्तरपुण्यं चाप्रारब्धमनिष्टं चेति शेषः, नाशाश्लेषाववाप्नोति । न केवलमघमित्यपेरर्थः । कुतः ?

---

ಜ್ಞಾನಿಕೃತವಾದ ನಿಷ್ಕಾಮಕರ್ಮರೂಪವಾದ ಪುಣ್ಯವು ಮುಕ್ತಿಗೆ ಉಪಯೋಗಿಯಾಗುವುದಾದರೂ, ಮುಕ್ತಿಗೆ ಪ್ರತಿಬಂಧಕವಾದ ಕಾಮ್ಯಪುಣ್ಯವಿರುವುದರಿಂದ ಜ್ಞಾನಿಗಳಿಗೆ ಮುಕ್ತಿಯಾಗಲು ಹೇಗೆ ಸಾಧ್ಯ ? ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರ—

ಓಂ ಅತೋಽನ್ಯದಪೀತ್ಯೇಕೇಷಾಮುಭಯೋಃ ಓಂ
೪.೧.೧೭

**ಸೂತ್ರಾರ್ಥ**

ಸೂತ್ರದಲ್ಲಿರುವ 'ಅಪಿ' ಶಬ್ದದಿಂದಾಗಿ 'ಅಶ್ಲೇಷವಿನಾಶೌ' ಎಂಬ ಪದವು ಅನುವೃತ್ತವಾಗುವುದು. 'ಅನಾರಬ್ಧಕಾರ್ಯಂ' ಎಂಬ ಪದವೂ ಅನುವೃತ್ತವಾಗುವುದು. ಅತಃ ಅನ್ಯದಪಿ – ಪ್ರಸ್ತುತವಾದ ಅಕಾಮ್ಯಕರ್ಮಕ್ಕಿಂತ ಭಿನ್ನವಾದ ಅಂದರೆ ಕಾಮ್ಯವಾದ, ಜ್ಞಾನಿಯು ಜ್ಞಾನಪೂರ್ವೋತ್ತರ ಕಾಲದಲ್ಲಿ ಮಾಡಿದ ಪುಣ್ಯವೂ ಅಂತೆಯೇ ಅಪ್ರಾರಬ್ಧಪುಣ್ಯ ಮತ್ತು ಅನಿಷ್ಟಪುಣ್ಯವೂ ಕೂಡ, ಅಶ್ಲೇಷವಿನಾಶೌ - ನಾಶ ಮತ್ತು ಅಶ್ಲೇಷಗಳನ್ನು ಹೊಂದುವವು. ಇಲ್ಲಿ 'ಅಪ್ರಾರಬ್ಧ ಪುಣ್ಯ ಮತ್ತು ಅನಿಷ್ಟಪುಣ್ಯ' ಎಂಬ ಪದಗಳು ಶೇಷಪೂರಣವಾಗಿವೆ. ಜ್ಞಾನಿಕೃತವಾದ ಪಾಪವಷ್ಟೇ ಅಲ್ಲ ಎಂದು 'ಅಪಿ' ಶಬ್ದದ ಅರ್ಥ. ಇದಕ್ಕೆ ಆಧಾರವೇನು ? ಎಂಬ

इत्येकेषामुभयोः । इति एवं पूर्वोत्तरपुण्यपापयोस्त्यागेन एकेषां शाखिनां पाठोऽस्ति 'तस्य पुत्रा दायमुपयन्ति सुहृदः साधुकृत्यां द्विषन्तः पापकृत्याम्' इत्यत इत्यर्थः ।

तत्त्वप्रदीपे तु अघस्यैव नाशे कथं सुहृदः साधुकृत्यां इत्यवतार्य अतोऽन्यत् काम्यमप्रारब्धमनिष्टं च पुण्यं नश्यतीत्येवं भावाद्धि एकेषां शाखिनामयं पाठो न पुनरकाम्यपुण्यस्य नाशादिनेति इतिशब्दस्य हेत्वर्थत्वमुपेत्यार्थ उक्तः ।

---

ಪ್ರಶ್ನೆಗೆ ಉತ್ತರ – 'ಇತ್ಯೇಕೇಷಾಂ ಉಭಯೋಃ'. ಇತಿ - ಹೀಗೆ ಜ್ಞಾನಿಗಳ ಕಾಮ್ಯಪುಣ್ಯ ಮತ್ತು ಪಾಪಗಳ ತ್ಯಾಗವನ್ನು ತಿಳಿಸುವ, ಕೆಲ ಶಾಖಿಗಳ ವೇದಪಾಠ ವಿದೆ—[1]'ತಸ್ಯ ಪುತ್ರಾ ದಾಯಮುಪಯಂತಿ ಸುಹೃದಃ ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ' ಎಂಬುದಾಗಿ, ಆದ್ದರಿಂದ ಎಂದು ಅರ್ಥ.

**ತತ್ತ್ವಪ್ರದೀಪದ ವ್ಯಾಖ್ಯಾಂತರ**

ತತ್ತ್ವಪ್ರದೀಪದಲ್ಲಾದರೋ, ಜ್ಞಾನಿಕೃತವಾದ ಪುಣ್ಯ-ಪಾಪಗಳೇ ನಾಶವನ್ನು ಹೊಂದುವುದರಿಂದ 'ಸುಹೃದಃ ಸಾಧುಕೃತ್ಯಾಂ' ಎಂಬ ಶ್ರುತಿ ಹೇಗೆ ಯುಕ್ತವಾಗುವುದು ? ಎಂಬ ಅವತಾರಿಕೆಯನ್ನು ಕೊಟ್ಟು, ಅತಃ ಅನ್ಯತ್ - ಜ್ಞಾನಿಯ ನಿಷ್ಕಾಮಕರ್ಮಕ್ಕಿಂತ ಭಿನ್ನವಾದ ಕಾಮ್ಯಪುಣ್ಯಕರ್ಮ, ಅಪ್ರಾರಬ್ಧಪುಣ್ಯಕರ್ಮ ಮತ್ತು ಅನಿಷ್ಟಪುಣ್ಯಕರ್ಮಗಳು ನಾಶಹೊಂದುವವು ಎಂಬ ಅಭಿಪ್ರಾಯದಿಂದಲೇ ಕೆಲವು ಶಾಖಿಗಳ 'ಸುಹೃದಃ ಸಾಧು ಕೃತ್ಯಾಂ' ಇತ್ಯಾದಿ ಪಾಠವಿರುವುದು ಹೊರತು

---

1. 'ತಸ್ಯ ಪುತ್ರಾ' ಎಂಬ ವಾಕ್ಯವು ಶಾಟ್ಯಾಯನ ಎಂಬ ಸಾಮಶಾಖೆಗೆ ಸೇರಿದ ಶ್ರುತಿಯಾಗಿದೆ. ಜ್ಞಾನಿಯ ಪುತ್ರರು ಪಿತ್ರಾರ್ಜಿತ ದ್ರವ್ಯವನ್ನು ಪಡೆಯುವರು. ಪ್ರತ್ಯುಪಕಾರವನ್ನು ಅಪೇಕ್ಷಿಸದೆ ಉಪಕಾರ ಮಾಡುವ ವಿಷ್ಣುಭಕ್ತರು ಆ ಜ್ಞಾನಿಯ ಅಪ್ರಾರಬ್ಧವಾದ ಇಷ್ಟಪುಣ್ಯವನ್ನೂ ಕಾಮ್ಯಪುಣ್ಯವನ್ನೂ ಹೊಂದುವರು. ಭಗವದ್ದ್ವೇಷಿಗಳು ಅವನ ಪಾಪಕೃತ್ಯದ ಫಲವನ್ನು ಪಡೆಯುವರೆಂದು ಶ್ರುತಿಯ ಭಾವ.

नाशशिरस्काल्पफलस्य कर्मणो मुक्त्यनुप्रवेशः कथमित्यत आह—

॥ ॐ यदेव विद्ययेति हि ॐ॥ ४.१.१८

अग्निहोत्रादीति तत्कार्यायैवेति चास्ति। 'यदेव विद्यया करोति श्रद्धयोपनिषदा तदेव वीर्यवत्तरं भवति' इति श्रुतिर्हि यस्मादस्त्यतोऽकाम्यं ज्ञानिकर्म मोक्षोपयोगीति युक्तमित्यर्थः।

श्रुतेरिति वाच्ये प्रतीकग्रहणेन तदुक्तिरज्ञकृतकर्मणो नश्वराल्प-

---

ಜ್ಞಾನಿಯ ಅಕಾಮ್ಯಪುಣ್ಯದ ನಾಶಾದಿಗಳಾಗುವವೆಂಬ ಭಾವದಿಂದಲ್ಲ ಎಂಬುದಾಗಿ ಸೂತ್ರದಲ್ಲಿರುವ 'ಇತಿ' ಶಬ್ದಕ್ಕೆ 'ಹೇತು' ಎಂಬ ಅರ್ಥವನ್ನು ಸ್ವೀಕರಿಸಿ ಅರ್ಥವನ್ನು ಹೇಳಲಾಗಿದೆ.

ಕರ್ಮವು ನಶ್ವರವೂ, ಅಲ್ಪಫಲವುಳ್ಳದ್ದೂ ಆಗಿರುವುದರಿಂದ ಜ್ಞಾನಿಕೃತವಾದ ಕರ್ಮವು ಮುಕ್ತಿಗೆ ಉಪಯೋಗಿಯಾಗುವುದೆಂದು ಹೇಳಿದುದು ಹೇಗೆ ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರ—

ಓಂ ಯದೇವ ವಿದ್ಯಯೇತಿ ಹಿ ಓಂ ೪.೧.೧೮

**ಸೂತ್ರಾರ್ಥ**

'ಅಗ್ನಿಹೋತ್ರಾದಿ' ಮತ್ತು 'ತತ್ಕಾರ್ಯಾಯೈವ' ಎಂಬ ಪದಗಳು ಅನುವೃತ್ತವಾಗುವವು. ಯದೇವ ವಿದ್ಯಯೇತಿ - 'ಯದೇವ ವಿದ್ಯಯಾ ಕರೋತಿ ಶ್ರದ್ಧಯಾ ಉಪನಿಷದಾ ತದೇವ ವೀರ್ಯವತ್ತರಂ ಭವತಿ' (ಛಾಂ. ೧.೧.೧೦) ಎಂಬ ಶ್ರುತಿಯು, ಹಿ - ಇರುವುದರಿಂದ ಅಕಾಮ್ಯವಾದ ಜ್ಞಾನಿಕರ್ಮವು ಮೋಕ್ಷಕ್ಕೆ ಉಪಯೋಗಿಯಾಗುವುದೆಂದು ಹೇಳಿದುದು ಯುಕ್ತವೆಂದರ್ಥ.

**ಸೂತ್ರದ ಪದಗಳ ಸ್ವಾರಸ್ಯ ಮತ್ತು ಪುನರುಕ್ತಿಯ ಪರಿಹಾರ**

'ಶ್ರುತೇಃ' ಎಂದಿಷ್ಟೇ ಹೇಳಬಹುದಾಗಿದ್ದರೂ 'ಯದೇವ ವಿದ್ಯಯಾ' ಎಂಬ

फलकत्वेऽपि ज्ञानिकृतस्य न तथेति द्योतनाय। तच्छ्रुतेरित्यत्र विद्यया कृतं कर्म मुक्त्यन्यफलाय शक्तमित्युक्तम्। इह तु मोक्षगतातिशयायेति भेदः।

एतत्त्रिसूत्रीन्यायो द्वेषिणां पुण्ये पापे चानुसर्तव्यः।

---

ಪ್ರತೀಕವನ್ನು ಗ್ರಹಿಸುವ ಮೂಲಕ ಶ್ರುತಿಯನ್ನು ಹೇಳಿರುವುದು ಅಜ್ಞಾನಿಗಳು ಮಾಡುವ ಕರ್ಮ ನಶ್ವರವೂ ಅಲ್ಪಫಲವುಳ್ಳದ್ದೂ ಆಗಿದ್ದರೂ ಜ್ಞಾನಿಗಳು ಮಾಡುವ ಕರ್ಮ ಅಂತಹದಲ್ಲವೆಂದು ಸೂಚಿಸಲು.

'ತಚ್ಛ್ರುತೇಃ' (ಬ್ರ. ಸೂ. ೩.೪.೪) ಎಂಬಲ್ಲಿ ಜ್ಞಾನಪೂರ್ವಕವಾಗಿ ಮಾಡಿದ ಕರ್ಮವು ಮೋಕ್ಷಭಿನ್ನವಾದ ಫಲವನ್ನು ಕೊಡಲು ಸಮರ್ಥವೆಂದು ಹೇಳ ಹೇಳಲಾಗಿದೆ. ಈ ಸೂತ್ರದಲ್ಲಾದರೋ ಆ ಕರ್ಮವು ಮೋಕ್ಷದಲ್ಲಿ ಅತಿಶಯವನ್ನುಂಟುಮಾಡುವುದೆಂದು ಹೇಳುವುದೆಂದು ಭೇದವಿದೆ. [1]ಈ ಮೂರು ಸೂತ್ರಗಳ ನ್ಯಾಯವನ್ನು ಭಗವದ್ದ್ವೇಷಿಗಳು ಮಾಡುವ ಪುಣ್ಯಪಾಪಗಳ ವಿಷಯದಲ್ಲೂ ಅನುಸರಿಸಬೇಕು.

---

1. ಓಂ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ಓಂ (ಬ್ರ. ಸೂ. ೪.೧.೧೬), ಓಂ ಅತೋಽನ್ಯದಪೀತ್ಯೇಕೇಷಾಂ ಉಭಯೋಃ ಓಂ (ಬ್ರ.ಸೂ. ೪.೧.೧೭) ಮತ್ತು ಓಂ ಯದೇವ ವಿದ್ಯಯೇತಿ ಹಿ ಓಂ (ಬ್ರ.ಸೂ. ೪.೧.೧೮) ಈ ಮೂರು ಸೂತ್ರಗಳಲ್ಲಿ ಬ್ರಹ್ಮಜ್ಞಾನಿಗಳ ವಿಷಯದಲ್ಲಿ ಹೇಳಿರುವ ನ್ಯಾಯಗಳನ್ನು ಭಗವದ್ದ್ವೇಷಿಗಳ ವಿಷಯದಲ್ಲೂ ಅನುಸರಿಸಬೇಕು ಎಂದು ಅಭಿಪ್ರಾಯ. ಮೊದಲನೆ ಸೂತ್ರದಲ್ಲಿ, ಜ್ಞಾನಪೂರ್ವಕಾಲದಲ್ಲಿ ಮಾಡಿದ ಅಕಾಮ್ಯಪುಣ್ಯವು ಜ್ಞಾನಿಯ ಜ್ಞಾನೋತ್ಪತ್ತಿಗೂ, ಜ್ಞಾನೋತ್ತರಕಾಲದಲ್ಲಿ ಮಾಡಿದ ಅಕಾಮ್ಯಪುಣ್ಯವು ಜ್ಞಾನದ ಫಲವಾದ ಮೋಕ್ಷದಲ್ಲಿ ಅತಿಶಯವನ್ನುಂಟುಮಾಡತಕ್ಕದ್ದೆಂದೂ ಹೇಳಿದೆ. ದ್ವೇಷಿಗಳ ವಿಷಯದಲ್ಲಿ ಈ ನ್ಯಾಯವನ್ನು ವಿಪರೀತವಾಗಿ ಅನ್ವಯಿಸಬೇಕು. ಅಂದರೆ, ದ್ವೇಷವು ಪರಿಪಕ್ವಾವಸ್ಥೆಯನ್ನು ಪಡೆಯುವ ಮುಂಚೆ ಮಾಡಿದ ಅಪ್ರಾರಬ್ಧಪಾಪವು ದ್ವೇಷಾಭಿವೃದ್ಧಿಗೆ ಕಾರಣವಾಗುವುದು. ಉತ್ತರಕಾಲದಲ್ಲಿ ಮಾಡಿದ ಪಾಪವು ತಮಸ್ಸಿನ ಪ್ರವೇಶಕ್ಕೆ ಸಾಕ್ಷಾತ್ ಕಾರಣವಾಗುವುದು.

तथापि ज्ञानिद्वेषिणोः प्रारब्धपुण्यपापसत्त्वात् न मुक्तितमसी स्यातामित्यत आह—

॥ ॐ भोगेन त्वितरे क्षपयित्वाऽथ सम्पत्स्यते ॐ ॥
४.१.१९

---

ಆದರೂ ಬ್ರಹ್ಮಜ್ಞಾನಿ ಮತ್ತು ಭಗವದ್ದ್ವೇಷಿಗಳಿಗೆ ಪ್ರಾರಬ್ಧ ಪುಣ್ಯಪಾಪಗಳಿರುವುದರಿಂದ ಮೋಕ್ಷ–ತಮಸ್ಸುಗಳು ಆಗಲಾರವು ಎಂಬ ಶಂಕೆಯನ್ನು ಪರಿಹರಿಸುವ ಸೂತ್ರ—

**ಓಂ ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ ಓಂ**
**೪.೧.೧೯**

---

ಹಾಗೆಯೇ ಎರಡನೆ ಸೂತ್ರದಲ್ಲಿ, ಜ್ಞಾನಿಯು ಜ್ಞಾನಪೂರ್ವಕಾಲದಲ್ಲಿ ಮಾಡಿದ ಕಾಮ್ಯ ಪುಣ್ಯ, ಅಪ್ರಾರಬ್ಧಪುಣ್ಯ ಮತ್ತು ಅನಿಷ್ಟಪುಣ್ಯಗಳು ಜ್ಞಾನದಿಂದ ನಾಶವಾಗುತ್ತವೆ. ಜ್ಞಾನೋತ್ತರಕಾಲದಲ್ಲಿ ಮಾಡಿದ ಅಂತಹ ಪುಣ್ಯಕರ್ಮಗಳ ಸಂಶ್ಲೇಷವಾಗುವುದಿಲ್ಲ ಎಂದು ಹೇಳಿದೆ. ಇದೇ ನ್ಯಾಯವನ್ನು ದ್ವೇಷಿಗಳ ವಿಷಯದಲ್ಲಿ ವಿಪರೀತವಾಗಿ ಅನ್ವಯಿಸಬೇಕು. ಅಂದರೆ, ದ್ವೇಷಪರಿಪಾಕಕ್ಕಿಂತ ಮುಂಚೆ ಮಾಡಿದ ಕಾಮ್ಯ, ಅಪ್ರಾರಬ್ಧ ಮತ್ತು ಅನಿಷ್ಟ ಪುಣ್ಯಗಳು ನಾಶಹೊಂದುವುದಿಲ್ಲ. ದುರ್ಯೋಧನಾದಿಗಳ ಪುಣ್ಯವನ್ನು ಈ ವಿಷಯದಲ್ಲಿ ಉದಾಹರಣೆಗಾಗಿ ಕೊಡಬಹುದು. ಆ ಪುಣ್ಯದಿಂದ ಅವರು ಕುರುವಂಶದಲ್ಲಿ ಜನಿಸಿ, ರಾಜತ್ವವನ್ನು ಪಡೆದರು. ಆದರೆ ಈ ಪುಣ್ಯ ಕೃಷ್ಣ, ಭೀಮ ಮೊದಲಾದವರ ಮಹಾದ್ರೋಹಕ್ಕೆ ತನ್ಮೂಲಕ ಪರಿಪೂರ್ಣತಮಸ್ಸಿಗೆ ಕಾರಣವಾಯಿತು. ಆದರೆ, ದ್ವೇಷಪರಿಪಾಕಾವಸ್ಥೆಗಿಂತ ಮುಂಚೆ ಮಾಡಿದ 'ಪುಣ್ಯ' ಇಷ್ಟ ಪುಣ್ಯವಾಗಿದ್ದರೆ ಅದು ನಷ್ಟವಾಗುವುದು. ಹಾಗೆಯೇ, ದ್ವೇಷಪರಿಪಾಕೋತ್ತರ ಕಾಲದಲ್ಲಿ ಮಾಡಿದ ಕಾಮ್ಯ, ಅಪ್ರಾರಬ್ಧ ಮತ್ತು ಅನಿಷ್ಟಪುಣ್ಯಗಳು ಶ್ಲೇಷವನ್ನೂ, ಇಷ್ಟ ಪುಣ್ಯವಾಗಿದ್ದರೆ ಅಶ್ಲೇಷವನ್ನೂ ಪಡೆಯುವವು.

ಮೂರನೆ ಸೂತ್ರದಲ್ಲಿ, ಜ್ಞಾನಿಕೃತವಾದ ಜ್ಞಾನೋತ್ತರಕಾಲದ ಪುಣ್ಯವು ಮಹಾನಂತ ಫಲವನ್ನು ಕೊಡುವುದೆಂದು ಹೇಳಲಾಗಿದೆ. ಇದೇ ನ್ಯಾಯವನ್ನು ವಿಪರೀತವಾಗಿ ದ್ವೇಷಿಗಳ ವಿಷಯದಲ್ಲಿ ಅನುಸರಿಸಿದರೆ, ಭಗವದ್ದ್ವೇಷಿಗಳು ಮಾಡುವ ಪಾಪದ ಪ್ರಮಾಣವನ್ನನುಸರಿಸಿ ಅವರಿಗೆ ತಮಸ್ಸಿನ ಪ್ರಾಪ್ತಿಯಾಗುವುದೆಂದು ತಿಳಿಯಬೇಕು ಎಂದು ಭಾವ.

तुः ज्ञानिनः प्रारब्धभोगे उपमर्दं चेत्युक्तविशेषसूचकः। अथशब्दो नियमसूचकः ।

इतरे प्रस्तुतानारब्धादन्ये प्रारब्धपुण्यपापे भोगेन क्षपयित्वा, अथ प्रारब्धपुण्यपापक्षपणादन्वेव न तु ज्ञानोत्पत्त्यनन्तरमिव विलम्बः, सम्पत्स्यते । ब्रह्म वा तमो वा प्राप्नोतीत्यर्थः ।

इति श्रीराघवेन्द्रयतिकृतायां तन्त्रदीपिकायां
चतुर्थाध्यायस्य प्रथमः पादः सम्पूर्णः
॥ श्रीकृष्णार्पणमस्तु ॥

---

**ಸೂತ್ರಾರ್ಥ**

'ತು' ಶಬ್ದವು ಜ್ಞಾನಿಯು ಮಾಡುವ ಪ್ರಾರಬ್ಧಕರ್ಮದ ಭೋಗದ ವಿಷಯದಲ್ಲಿ 'ಉಪಮರ್ದಂ ಚ' (ಬ್ರ. ಸೂ. ೩.೪.೧೬) ಎಂಬಲ್ಲಿ ಹೇಳಿರುವ ವಿಶೇಷವನ್ನು ಸೂಚಿಸುವುದು. 'ಅಥ' ಶಬ್ದವು ನಿಯಮವನ್ನು ಸೂಚಿಸುವುದು. ಇತರೇ - ಪ್ರಸ್ತುತವಾದ ಅಪ್ರಾರಬ್ಧ ಪುಣ್ಯಪಾಪಗಳಿಗಿಂತ ವ್ಯತಿರಿಕ್ತವಾದ ಪ್ರಾರಬ್ಧ ಪುಣ್ಯಪಾಪಗಳನ್ನು, ಭೋಗೇನ ಕ್ಷಪಯಿತ್ವಾ - ಭೋಗದಿಂದ ನಷ್ಟಗೊಳಿಸಿ, ಅಥ - ಆ ಪ್ರಾರಬ್ಧ ಪುಣ್ಯಪಾಪಗಳ ನಾಶವಾದ ಕೂಡಲೇ, ಜ್ಞಾನ ಉತ್ಪನ್ನವಾದ ನಂತರದಂತೆ ವಿಲಂಬವಿಲ್ಲದೆ, ಸಂಪತ್ಸ್ಯತೇ – ಪರಮಾತ್ಮನನ್ನಾಗಲಿ, ತಮಸ್ಸನ್ನಾಗಲಿ ಹೊಂದುವನೆಂದು ಅರ್ಥ.

ಶ್ರೀ ರಾಘವೇಂದ್ರಯತಿಗಳು ರಚಿಸಿದ ತಂತ್ರದೀಪಿಕೆಯಲ್ಲಿ
ನಾಲ್ಕನೆ ಅಧ್ಯಾಯದ ಪ್ರಥಮಪಾದವು ಸಮಾಪ್ತವಾಯಿತು
ಶ್ರೀ ಕೃಷ್ಣಾರ್ಪಣಮಸ್ತು

# चतुर्थाध्यायस्य द्वितीयः पादः

## वाङ्मनसाधिकरणम् — १

एवं ज्ञानभोगाभ्यां कर्मक्षयमुक्त्वाऽत्र पादे देहत्यागाख्य-फलमुच्यते । तस्य देवतदन्यरूपाधिकारिभेदेन लयोत्क्रान्तिरूपेण भेदादादौ देवानां स्वोत्तमदेवेषु लय उच्यते ।

॥ ॐ वाङ्मनसि दर्शनाच्छब्दाच्च ॐ ॥ ४.२.१

अत्र वाचो मनसि लयः साध्यते । वाक् वागभिमानिनी

---

# ಚತುರ್ಥಾಧ್ಯಾಯ ದ್ವಿತೀಯ ಪಾದ

## ವಾಙ್ಮನಸಾಧಿಕರಣ—೧

**ಈ ಪಾದದ ಮತ್ತು ಮೊದಲ ಕೆಲವು ಅಧಿಕರಣಗಳ ವಿಷಯ**

ಹೀಗೆ ಬ್ರಹ್ಮಜ್ಞಾನ ಮತ್ತು ಕರ್ಮಫಲದ ಭೋಗ ಇವುಗಳಿಂದ ಕರ್ಮಕ್ಷಯ ವಾಗುವುದೆಂದು ಹೇಳಿದ ನಂತರ ಈ ಪಾದದಲ್ಲಿ ದೇಹತ್ಯಾಗರೂಪವಾದ ಫಲವನ್ನು ಹೇಳಲಾಗುವುದು. ದೇಹತ್ಯಾಗರೂಪವಾದ ಫಲವೂ ದೇವತೆಗಳು ಮತ್ತು ಇತರ ರೆಂಬ ಅಧಿಕಾರಿಗಳ ಭೇದದಿಂದ ಕ್ರಮವಾಗಿ ಲಯ ಮತ್ತು ಉತ್ಕ್ರಾಂತಿರೂಪವಾದ ಭೇದವನ್ನು ಪಡೆಯುವುದರಿಂದ, ಮೊದಲು ದೇವತೆಗಳಿಗೆ ಸ್ವೋತ್ತಮದೇವತೆಗಳಲ್ಲಿ ಲಯವನ್ನು ಹೇಳಲಾಗುವುದು.

ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ ೪.೨.೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ವಾಗಭಿಮಾನಿದೇವತೆಗೆ ಮನೋಽಭಿಮಾನಿದೇವತೆಯಲ್ಲಿ ಲಯವನ್ನು ಸಮರ್ಥಿಸಲಾಗುವುದು. ವಾಕ್ - ವಾಗಾಭಿಮಾನಿನಿಯಾದ ಶೇಷ

वारुणी सुपर्णी च मनसि मनोऽभिमानिनि शेषे च लीयत इति शेषः। अस्मिन्नेवार्थे सम्पत्स्यत इत्यनुवृत्तिर्वा। कुतः ? दर्शनात्। वाचो मनोवशत्वस्य प्रत्यक्षत एव दर्शनात्। मनसा सङ्कल्पितस्यैव वाचा व्याहरणात्। तस्य 'यावन्न वाङ् मनसि सम्पद्यते' इति शब्दाच्चेत्यर्थः।

वाचो मनोवशत्वदृष्टावपि कुतस्तत्र लय इत्यतः शब्दोक्तिः।

ಮತ್ತು ಸುಪರ್ಣನಲ್ಲಿ ಲಯವನ್ನು ಹೊಂದುವರು. ಇಲ್ಲಿ 'ಲಯವನ್ನು ಹೊಂದುವರು' ಎಂಬ ಪದಗಳು ಶೇಷಪೂರಣವಾಗಿವೆ. ಅಥವಾ, 'ಲಯ ಹೊಂದುವರು' ಎಂಬ ಅರ್ಥದಲ್ಲಿ ಹಿಂದಿನ ಸೂತ್ರದಿಂದ ಸಂಪತ್ಸ್ಯತೇ ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ವಾಗಭಿಮಾನಿದೇವತೆಗೆ ಮನೋಽಭಿಮಾನಿದೇವತೆಯಲ್ಲಿ ಲಯವಾಗುವ ವಿಷಯದಲ್ಲಿ ಪ್ರಮಾಣವೇನು ? ಎಂಬ ಶಂಕೆಗೆ ಉತ್ತರ— ದರ್ಶನಾತ್. ಮನಸ್ಸಿನಿಂದ ಸಂಕಲ್ಪಿಸಿದುದನ್ನೇ ವಾಕ್ಕಿಂದ ವ್ಯವಹಾರಮಾಡುವುದರಿಂದ ವಾಕ್ ಮನಸ್ಸಿಗೆ ಅಧೀನವಾದುದೆನ್ನುವುದು ಪ್ರತ್ಯಕ್ಷದಿಂದಲೇ ಕಂಡಿರುವುದರಿಂದ. [1]'ತಸ್ಯ ಯಾವನ್ನ ವಾಙ್ ಮನಸಿ ಸಂಪದ್ಯತೇ' ಎಂಬ ಶ್ರುತಿಯಿಂದಲೂ ವಾಗಭಿಮಾನಿ ದೇವತೆಗೆ ಮನೋಭಿಮಾನಿದೇವತೆಯಲ್ಲಿ ಲಯವೆಂದು ಸಿದ್ಧಿಸುವುದೆಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

ವಾಕ್ ಮನಸ್ಸಿಗೆ ಅಧೀನವಾದುದೆಂದು ಪ್ರತ್ಯಕ್ಷಸಿದ್ಧವಾದರೂ ವಾಕ್ಕಿಗೆ

1. ಮರಣ ಹೊಂದುತ್ತಿರುವ ಪುರುಷನ ವಾಕ್ಕಿನ ಅಭಿಮಾನಿದೇವತೆಯು ಮನೋಭಿಮಾನಿ ದೇವತೆಯಲ್ಲಿ ಪ್ರವೇಶಿಸುವವರೆಗೆ ಆ ಪುರುಷನು ತನ್ನ ಜ್ಞಾತಿಗಳು ಮೊದಲಾದವರನ್ನು ತಿಳಿಯುವನು. ಯಾವಾಗ ವಾಗಭಿಮಾನಿಯು ಮನೋಽಭಿಮಾನಿಯಲ್ಲಿ ಪ್ರವೇಶಿಸುವನೋ ಆಗ ಆ ಪುರುಷನು ಯಾರನ್ನೂ ತಿಳಿಯಲಾರ ಎಂದು 'ತಸ್ಯ ಯಾವನ್ನ' (ಛಾಂ. ೬.೧೫.೧) ಎಂಬ ಶ್ರುತಿಯ ಭಾವ. ಯದ್ಯಪಿ ಈ ಶ್ರುತಿಯು ಮರಣಕಾಲದಲ್ಲಿ ದೇವತೆಗಳ ಪ್ರವೇಶವನ್ನು ಹೇಳುವುದೇ ಹೊರತು ಮುಕ್ತಿಕಾಲದ ಲಯವನ್ನು ಹೇಳುವುದಿಲ್ಲ. ಆದರೂ ಮರಣಕಾಲದ ದೇವತಾಪ್ರವೇಶವು ಮುಕ್ತಿಕಾಲದ ದೇವತೆಗಳ ಲಯಕ್ರಮವನ್ನನುಸರಿಸಿ ನಡೆಯುವುದರಿಂದ ಈ ಶ್ರುತಿಯನ್ನು ಪ್ರಕೃತ ಸಂದರ್ಭದಲ್ಲಿ ಉದಾಹರಿಸಲಾಗಿದೆ.

'वाक् पूर्वरूपं मन उत्तररूपं', 'मनः पूर्वरूपं वागुत्तररूपं' इति व्यामिश्रोक्तिः वाङ्‌मनसयोः विष्णुनाम्नि पूर्वोत्तरवर्णदेवतात्वे गुण-प्रधानत्वे च मुनिमतविमतिपरेति भावः। वारुणी शेष इत्यादि-प्रसिद्धतत्तद्देवतावाचिपरे प्रयोज्ये वागित्याद्युक्तिः यथा मुच्यमानानां देवानामुत्तमेषु लयः एवं तदभिमन्यमानानां देहगानां वागादिवृत्तीनां मृतिकाले लयो भवतीति प्रसङ्गात् सूचयितुम्।

वाचो लयनिश्चयेऽपि सर्वदेवानां कथं लयनिश्चय इत्यत आह—

---

ಮನಸ್ಸಿನಲ್ಲಿ ಲಯವನ್ನೇಕೆ ಅಂಗೀಕರಿಸಬೇಕು ಎಂಬ ಆಶಂಕೆಯನ್ನು ಪರಿಹರಿಸಲು ಸೂತ್ರದಲ್ಲಿ ಶ್ರುತಿಪ್ರಮಾಣವನ್ನು ಹೇಳಲಾಗಿದೆ. ಶ್ರುತಿಯಲ್ಲಿ ಒಂದೆಡೆ 'ವಾಕ್ ಪೂರ್ವರೂಪಂ ಮನ ಉತ್ತರರೂಪಂ' ಎಂದೂ ಮತ್ತೊಂದು ಕಡೆ 'ಮನಃ ಪೂರ್ವ ರೂಪಂ ವಾಗುತ್ತರರೂಪಂ' ಎಂದೂ ವ್ಯತ್ಯಾಸವಾಗಿ ಹೇಳಿರುವುದು, ವಿಷ್ಣುನಾಮ ದಲ್ಲಿ ಪೂರ್ವವರ್ಣ ಮತ್ತು ಉತ್ತರವರ್ಣಗಳಿಗೆ ವಾಙ್ಮನಸಾಭಿಮಾನಿದೇವತೆಗಳಲ್ಲಿ ಯಾರು ಪೂರ್ವವರ್ಣಕ್ಕೆ ದೇವತೆ, ಯಾರು ಉತ್ತರವರ್ಣಕ್ಕೆ ದೇವತೆ ಎಂಬ ವಿಷಯ ದಲ್ಲಿ ಮತ್ತು ಅವರಿಬ್ಬರ ಮಧ್ಯೆ ಇರುವ ಪ್ರಾಧಾನ್ಯಾಪ್ರಾಧಾನ್ಯದ ವಿಷಯದಲ್ಲಿ ಮುನಿಗಳ ಅಭಿಪ್ರಾಯಗಳಲ್ಲಿರುವ ವಿರೋಧವನ್ನು ಸೂಚಿಸುವ ಅಭಿಪ್ರಾಯವುಳ್ಳದ್ದು ಎಂದು ಭಾವ. ಮುಕ್ತರಾಗುವ ದೇವತೆಗಳಿಗೆ ಹೇಗೆ ಉತ್ತಮದೇವತೆಗಳಲ್ಲಿ ಲಯವೋ ಹಾಗೆ ಆ ದೇವತೆಗಳಿಂದ ಅಭಿಮನ್ಯಮಾನವಾದ, ದೇಹದಲ್ಲಿರುವ ವಾಕ್ ಮೊದ ಲಾದ ವ್ಯಾಪಾರಗಳಿಗೂ ಮರಣಕಾಲದಲ್ಲಿ ಲಯವಾಗುವುದೆನ್ನುವುದನ್ನು ಪ್ರಾಸಂಗಿಕ ವಾಗಿ ಸೂಚಿಸುವ ಸಲುವಾಗಿ ವಾರುಣೀ, ಶೇಷ ಮೊದಲಾದ ಪ್ರಸಿದ್ಧವಾದ ಆಯಾಯಾ ದೇವತಾವಾಚಕಪದಗಳನ್ನು ಸೂತ್ರದಲ್ಲಿ ಪ್ರಯೋಗಿಸಬೇಕಾಗಿದ್ದರೂ ಅದರ ಬದಲು ವಾಕ್ ಮೊದಲಾದ ಪದಗಳನ್ನು ಪ್ರಯೋಗಿಸಲಾಗಿದೆ.

ವಾಗಭಿಮಾನಿದೇವತೆಗೆ ಲಯವಾಗುವುದನ್ನು ನಿರ್ಣಯಿಸಬಹುದಾದರೂ ಸಮಸ್ತದೇವತೆಗಳಿಗೆ ಲಯವನ್ನು ನಿರ್ಣಯಿಸುವುದು ಹೇಗೆ ಎಂಬ ಶಂಕೆಗೆ ಸಮಾಧಾನ ಹೇಳುವ ಸೂತ್ರ—

॥ ॐ अत एव च सर्वाण्यनु ॐ ॥ ४.२.२

अत इति प्रस्तुतशब्दपरामर्शः । सर्वाणि दैवतानि अनु स्वनियम्यनियामकानुसारेण लीयन्त इत्यनुषङ्गः । कुतः ? अत एव 'अग्नौ सर्वे देवा विलीयन्ते' इत्यादिशब्दादेवेत्यर्थः ।

चः सर्वाण्यपीत्यर्थ इति टीकायां भाति । तत्त्वप्रदीपे तु चशब्दादिन्द्रियाणि च यथानुकूलं विलीयन्त इत्युक्तम् । नियामकानां

---

ಓಂ ಅತ ಏವ ಚ ಸರ್ವಾಣ್ಯನು ಓಂ ೪.೨.೨

**ಸೂತ್ರಾರ್ಥ**

ಸೂತ್ರದಲ್ಲಿರುವ 'ಅತಃ' ಎಂಬ ಶಬ್ದವು ಹಿಂದಿನ ಸೂತ್ರದಲ್ಲಿ ಪ್ರಸ್ತುತವಾಗಿರುವ ಶ್ರುತಿಯನ್ನು ಪರಾಮರ್ಶಿಸುವುದು. ಸರ್ವಾಣಿ – ಸಮಸ್ತ ದೇವತೆಗಳೂ, ಅನು - ತಮ್ಮಲ್ಲಿರುವ ನಿಯಮ್ಯ – ನಿಯಾಮಕಭಾವವನ್ನನುಸರಿಸಿ ಲಯವನ್ನು ಹೊಂದುವರು. 'ಲಯವನ್ನು ಹೊಂದುವರು' ಎಂಬ ಪದಗಳು ಇಲ್ಲಿ ಅನುವೃತ್ತವಾಗಿವೆ. ಎಲ್ಲ ದೇವತೆಗಳು ನಿಯಮ್ಯ - ನಿಯಾಮಕಭಾವವನ್ನನುಸರಿಸಿ ಲಯವನ್ನು ಹೊಂದುವರು ಎಂಬ ವಿಷಯದಲ್ಲಿ ಪ್ರಮಾಣವೇನು ? ಎಂಬ ಪ್ರಶ್ನೆಗೆ ಉತ್ತರ— 'ಅತ ಏವ'. 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಯಿಂದಲೇ ಎಂದು ಅರ್ಥ.

**ಸೂತ್ರದ ಪದಗಳ ಅರ್ಥ**

'ಚ' ಶಬ್ದವು ಅಪಿ ಶಬ್ದದ ಅರ್ಥವುಳ್ಳದ್ದಾಗಿ 'ಸರ್ವಾಣ್ಯಪಿ' - 'ಎಲ್ಲ ದೇವತೆಗಳೂ' ಎಂದು ಅರ್ಥವನ್ನು ಹೇಳುವುದೆಂದು ತತ್ತ್ವಪ್ರಕಾಶಿಕೆಯಲ್ಲಿ ತೋರುವುದು. ತತ್ತ್ವಪ್ರದೀಪದಲ್ಲಾದರೋ 'ಚ' ಶಬ್ದದಿಂದ 'ಇಂದ್ರಿಯಾಭಿಮಾನಿ ದೇವತೆಗಳೂ ತಮ್ಮಲ್ಲಿರುವ ನಿಯಮ್ಯ-ನಿಯಾಮಕಭಾವವನ್ನನುಸರಿಸಿ ಲಯವನ್ನು ಹೊಂದು

बाहुल्याल्लयानिश्चय इत्यतः अत एवेति श्रुत्युक्तिः। एवेति निश्चय-माह। सर्वाणीति क्लीबोक्तिः 'अन्यानि दैवतानि यथानुकूलम्' इति श्रुत्यनुरोधेन ॥ १ ॥

मनःप्राणाधिकरणम्—२

॥ ॐ तन्मनः प्राण उत्तरात् ॐ ॥ ४.२.३

अत्र मनसः प्राणे लयः साध्यते। तत् 'तत्प्राक् श्रुतेः' इति

---

ವರು' ಎಂದು ಹೇಳಲಾಗಿದೆ. ಅನೇಕ ನಿಯಾಮಕದೇವತೆಗಳಿರುವುದರಿಂದ ಯಾರಲ್ಲಿ ಲಯುವೆನ್ನುವುದನ್ನು ನಿರ್ಣಯಿಸಲಾಗದು ಎಂಬ ಶಂಕೆಯನ್ನು ಪರಿಹರಿಸಲು ಸೂತ್ರದಲ್ಲಿ 'ಅತ ಏವ' ಎಂದು ಶ್ರುತಿಯನ್ನು ಹೇಳಲಾಗಿದೆ. 'ಏವ' ಶಬ್ದವು ಲಯದ ನಿಶ್ಚಯ ವನ್ನು ಹೇಳುವದು. [1]'ಅನ್ಯಾನಿ ದೈವತಾನಿ ಯಥಾನುಕೂಲಂ' ಎಂಬ ಶ್ರುತಿಯ ನ್ನನುಸರಿಸಿ 'ಸರ್ವಾಣಿ' ಎಂದು ನಪುಂಸಕಲಿಂಗವನ್ನು ಪ್ರಯೋಗಿಸಲಾಗಿದೆ.

ಮನಃಪ್ರಾಣಾಧಿಕರಣ—೨

ಓಂ ತನ್ಮನಃ ಪ್ರಾಣ ಉತ್ತರಾತ್ ಓಂ ೪.೨.೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮನೋಭಿಮಾನಿದೇವತೆಗೆ ಪ್ರಾಣಾಭಿಮಾನಿದೇವತೆಯಲ್ಲಿ ಲಯವನ್ನು ಸಮರ್ಥಿಸಲಾಗುವುದು.

ತತ್ - 'ತತ್ಪ್ರಾಕ್ ಶ್ರುತೇಃ' (ಬ್ರ.ಸೂ. ೨-೪-೪) ಎಂಬಲ್ಲಿ ಭಗವಂತ ನಿಂದ ಜನಿತವಾಗಿರುವುದೆಂದು ಹೇಳಲ್ಪಟ್ಟಿರುವ ಅಥವಾ ಹಿಂದಿನ ಸೂತ್ರದಲ್ಲಿ ವಾಗಭಿ

---

1. 'ಅಗ್ನೌ ಸರ್ವೇ ದೇವಾ ವಿಲಿಯಂತೇ ಅಗ್ನಿರಿಂದ್ರೇ ಇಂದ್ರ ಉಮಾಯಾಂ ಉಮಾ ರುದ್ರೇ ವಿಲೀಯತೇ ಏವಮನ್ಯಾನಿ ದೈವತಾನಿ ಯಥಾನುಕೂಲಂ' ಎಂದು ಗೌಪವನ ಶ್ರುತಿ.

ईशादुत्पन्नत्वेनोक्तं पूर्वयोगे वाङ्·नियामकत्वेन प्रस्तुतं वा मनः मनोऽभिमानी शेषः सुपर्णश्च प्राणे वाणीद्वारा चतुर्मुखे लीयत इत्यनुषङ्गः। कुतः? उत्तरात्। शब्दादित्यस्ति। पूर्वोक्तवाङ्·मनसीति शब्दात् मनः प्राण इत्युत्तराच्छब्दादित्यर्थः। मनः प्राण इत्येव पूर्तौ तदित्युक्तिः मनसः प्राणादनुत्पन्नत्वेन वागादिसर्वप्रवृत्तिहेतुत्वेन प्राणादनूनत्वाच्च न प्राणे लय इति शङ्कासूचनाय। समाधिस्तु

---

ಮಾನಿದೇವತೆಗೆ ನಿಯಾಮಕರೆಂದು ಪ್ರಸ್ತುತರಾಗಿರುವ, ಮನಃ-ಮನೋಭಿಮಾನಿಯಾದ ಶೇಷ ಮತ್ತು ಸುಪರ್ಣ ಇವರು, ಪ್ರಾಣೇ - ವಾಣೀ ಮುಖಾಂತರ ಚತುರ್ಮುಖನಲ್ಲಿ ಲಯವನ್ನು ಹೊಂದುವರು. 'ಲಯವನ್ನು ಹೊಂದುವರು' ಎಂಬ ಪದಗಳು ಇಲ್ಲಿ ಅನುವೃತ್ತವಾಗಿವೆ. ಶೇಷ–ಸುಪರ್ಣರಿಗೆ ಚತುರ್ಮುಖನಲ್ಲಿ ಲಯವಾಗುವುದೆನ್ನುವುದಕ್ಕೆ ಆಧಾರವೇನು ಎಂಬ ಪ್ರಶ್ನೆಗೆ ಉತ್ತರ— 'ಉತ್ತರಾತ್'. 'ಶಬ್ದಾತ್' ಎಂಬ ಪದವು ಅಧ್ಯಾಹೃತವಾಗುವುದು. ಉತ್ತರಾತ್ ಶಬ್ದಾತ್ – ಹಿಂದೆ ಹೇಳಿದ 'ವಾಙ್ ಮನಸಿ' ಎಂಬ ಶ್ರುತಿಗೆ ಮುಂದಿನ ವಾಕ್ಯವಾದ 'ಮನಃ ಪ್ರಾಣೇ' (ಛಾಂ. ೬.೧೫.೧) ಎಂಬ ಶ್ರುತಿಯಿಂದ ಎಂದು ಅರ್ಥ.

### ಸೂತ್ರದಲ್ಲಿ 'ತತ್' ಶಬ್ದದ ಪ್ರಯೋಜನ

'ಮನಃ ಪ್ರಾಣೇ' ಎಂದಿಷ್ಟೇ ಸಾಕಾಗಿದ್ದರೂ, ಮನಸ್ಸು ಪ್ರಾಣನಿಂದ ಜನಿಸಿಲ್ಲವಾದ್ದರಿಂದ ಮತ್ತು ವಾಗಾದಿ ಎಲ್ಲ ಅಭಿಮಾನಿದೇವತೆಗಳ ಪ್ರವೃತ್ತಿಗೆ ಕಾರಣವಾದುದರಿಂದ ಮನೋಭಿಮಾನಿಯು ಪ್ರಾಣಾಭಿಮಾನಿಗಿಂತ ಅಧಮನಾಗಿಲ್ಲ. ಆದ್ದರಿಂದ ಮನೋಭಿಮಾನಿಗೆ ಪ್ರಾಣನಲ್ಲಿ ಲಯವನ್ನು ಹೇಳಲಾಗದು ಎಂಬ ಶಂಕೆಯನ್ನು ಸೂಚಿಸುವ ಸಲುವಾಗಿ 'ತತ್' ಶಬ್ದವನ್ನು ಪ್ರಯೋಗಿಸಲಾಗಿದೆ. ಈ ಶಂಕೆಗೆ ಸಮಾಧಾನವಾದರೋ ಹೀಗಿದೆ— ಮನೋಭಿಮಾನಿಯು ಪ್ರಾಣದ್ವಾರಾ ಈಶನಿಂದ ಜನಿಸಿರುವುದರಿಂದ ಮತ್ತು 'ಮನ ಉದಕ್ರಾಮತ್, ಮೀಲಿತ ಇವ' 'ಪ್ರಾಣ ಉತ್ಕ್ರಾಂತೇ ಪದ್ಯತ' ಇತ್ಯಾದಿ ಶ್ರುತಿಗಳಿಂದ ಪ್ರಾಣನಿಗಿಂತಲೂ ಮನೋಭಿಮಾನಿ

प्राणद्वारा ईशजत्वात् 'मन उदक्रामत् मीलित इव प्राणे उत्क्रान्ते पद्यत' इत्यादेस्तत् ऊनत्वादिति प्रकृष्टाननवाचिप्राणपदात् सूचितः । ॥ २ ॥

अध्यक्षाधिकरणम्—३

॥ ॐ सोऽध्यक्षे तदुपगमादिभ्यः ॐ ॥ ४.२.४

अत्र चतुर्मुखस्येशे लय उच्यते। स प्राणः अध्यक्षे परमात्मनि लीयते। कुतः ? तदुपगमादिभ्यः। तदुपगमोऽध्यक्षप्राप्तिः। आदिपदात् अध्यक्षानुप्राणनतत्प्रवेशादि, तेन च तद्बोधकश्रुत्यादि

---

ದೇವತೆಯು ಊನನೆಂದು ತಿಳಿದುಬರುವುದರಿಂದ ಪ್ರಾಣನಲ್ಲಿ ಮನೋಭಿಮಾನಿಯು ಲಯವನ್ನು ಹೇಳುವುದು ಯುಕ್ತವಾಗಿದೆ. ಈ ವಿಷಯುವು 'ಪ್ರಕೃಷ್ಟ ಅನನ' ಅಂದರೆ ಅತಿಶಯ – ಚೇಷ್ಟಕತ್ವವನ್ನು ಹೇಳುವ 'ಪ್ರಾಣ' ಪದದಿಂದ ಸೂಚಿತ ವಾಗಿದೆ.

ಅಧ್ಯಕ್ಷಾಧಿಕರಣ—೩

ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ ೪.೨.೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಚತುರ್ಮುಖನಿಗೆ ಪರಮಾತ್ಮನಲ್ಲಿ ಲಯುವನ್ನು ಹೇಳಲಾಗುವುದು. ಸಃ - ಆ ಪ್ರಾಣನು, ಅಧ್ಯಕ್ಷೇ - ಪರಮಾತ್ಮನಲ್ಲಿ ಲಯವನ್ನು ಹೊಂದುವನು. ಇದಕ್ಕೆ ಆಧಾರವೇನು ಎಂಬ ಪ್ರಶ್ನೆಗೆ ಉತ್ತರ— ತದುಪಗಮಾಧಿಭ್ಯಃ. ಉಪಗಮವೆಂದರೆ ಪರಮಾತ್ಮನ ಪ್ರಾಪ್ತಿ. 'ಉಪಗಮಾದಿ' ಎಂಬಲ್ಲಿರುವ ಆದಿಪದದಿಂದ ಪರಮಾತ್ಮನನ್ನು ಅನುಸರಿಸಿ ಕ್ರಿಯಾಶೀಲನಾಗಿರುವುದು, ಪರಮಾತ್ಮನನ್ನು ಪ್ರವೇಶಿಸುವುದು ಮುಂತಾದವುಗಳನ್ನು ಗ್ರಹಿಸಬೇಕು. 'ಪರಮಾತ್ಮನ ಪ್ರಾಪ್ತಿ'

गृह्यते । 'प्राणः परमुपगच्छति प्राणः परमनुप्राणिति, प्राणः परस्यां देवतायाम्', 'मुक्ताः सन्तोऽग्निमाविश्य देवाः सर्वेऽपि भुञ्जते । अग्निरिन्द्रे तथेन्द्रश्च वायुमाविश्य सोऽपि तु । आविश्य परमात्मानं भुङ्क्ते भोगांश्च बाह्यकान् ॥' इत्यादितदुपगमादिश्रुतिस्मृतिभ्य इत्यर्थः । प्राणस्य तदधीनत्वात् तस्येशे लयो युक्त इति भावः ।

अध्यक्ष इत्युक्तिस्तस्य स्वामित्वात् प्राणस्य तदधीनत्वेन तत्र

---

ಮೊದಲಾದವುಗಳಿಂದ ಅವುಗಳನ್ನು ತಿಳಿಸುವ ಶ್ರುತಿ ಮೊದಲಾದವುಗಳನ್ನು ಗ್ರಹಿಸ ಬೇಕು. 'ಪ್ರಾಣಃ ಪರಮುಪಗಚ್ಛತಿ.... ಪ್ರಾಣಃ ಪರಮನುಪ್ರಾಣಿತಿ' 'ಪ್ರಾಣಃ ಪರಸ್ಯಾಂ ದೇವತಾಯಾಂ', '[1]ಮುಕ್ತಾಸ್ಸಂತೋಽಗ್ನಿಮಾವಿಶ್ಯ ದೇವಾಸ್ಸರ್ವೇಽಪಿ ಭುಂಜತೇ। ಅಗ್ನಿರಿಂದ್ರೇ ತಥೇಂದ್ರಶ್ಚ ವಾಯುಮಾವಿಶ್ಯ ಸೋಽಪಿ ತು। ಆವಿಶ್ಯ ಪರಮಾತ್ಮಾನಂ ಭುಂಕ್ತೇ ಭೋಗಾಂಶ್ಚ ಬಾಹ್ಯಕಾನ್ ॥' ಇತ್ಯಾದಿಯಾಗಿ ಪರ ಮಾತ್ಮನ ಪ್ರಾಪ್ತಿ ಮೊದಲಾದವುಗಳನ್ನು ತಿಳಿಸುವ ಶ್ರುತಿಸ್ಮೃತಿಗಳಿಂದ ಎಂದು ಅರ್ಥ. ವಿರಿಂಚನು ಭಗವದಧೀನನಾದ್ದರಿಂದ ಅವನಿಗೆ ಭಗವಂತನಲ್ಲಿ ಲಯವಾಗು ವುದು ಯುಕ್ತವೆಂದು ಭಾವ.

**ಸೂತ್ರದ ಪದಗಳ ಸ್ವಾರಸ್ಯ ಮತ್ತು ಸೂತ್ರದ ಸಾರ್ಥಕ್ಯ**

ಭಗವಂತನು ಸ್ವಾಮಿಯಾದ್ದರಿಂದ ಮತ್ತು ವಿರಿಂಚನು ಅವನಿಗೆ ಅಧೀನನಾದ್ದ

---

1. ಅಗ್ನಿಗಿಂತ ಅಧಮರಾದ ಲಯಯೋಗ್ಯರಾದ ಎಲ್ಲ ದೇವತೆಗಳೂ ತಮ್ಮ ಕರ್ಮಕ್ಷಯ ವಾದನಂತರ ಅಗ್ನಿಯನ್ನು ಪ್ರವೇಶಿಸಿ ಸ್ವಯೋಗ್ಯವಾದ ಆನಂದಾದಿಗಳನ್ನು ಅನುಭವಿಸುವರು. ಅಗ್ನಿಯೂ ಸ್ವೋತ್ತಮದೇವತೆಗಳನ್ನು ಪ್ರವೇಶಿಸುವ ಮೂಲಕ ಇಂದ್ರನನ್ನು ಪ್ರವೇಶಿಸುವನು. ಇಂದ್ರನೂ ಸೌಪರ್ಣೀ, ಸುಪರ್ಣ, ವಾಣೀ ಇವರ ಮೂಲಕ ವಿರಿಂಚನನ್ನು ಪ್ರವೇಶಿಸುವನು. ವಿರಿಂಚನೂ ಪರಮಾತ್ಮನನ್ನು ಪ್ರವೇಶಿಸಿ ಪರಮಾತ್ಮನ ಸ್ವರೂಪದಿಂದಲೂ ಇತರ ಮುಕ್ತರ ಸ್ವರೂಪದಿಂದಲೂ ಭಿನ್ನವಾದ ಸ್ವಯೋಗ್ಯವಾದ ಆನಂದಾದಿಗಳನ್ನು ಭುಜಿಸುವನು ಎಂದು ಸ್ಮೃತಿಯ ಭಾವ.

लयो युक्त इति युक्तिसूचनाय । चक्षुरादिवत्त्वित्यत्र ईशवशत्वोक्तावपि प्राणस्वातन्त्र्यश्रुतिबाहुल्येन तदयोगमाशङ्क्य निरवकाशेशवशत्वश्रुतिबाहुल्येन तद्वशत्वोक्त्यर्थमयं योगः । स्वातन्त्र्यश्रुतयस्तु 'सर्वे प्राणमुपगच्छन्ति', 'प्राणं देवा अनुप्राणन्ति' इत्याद्युक्त्या सर्वस्य प्राणोपगमादिना सावकाशा इति भावः । एतदर्थं तदुपगमेत्यस्य वृत्त्यन्तरं बोध्यम् । प्राणस्य तेजसि मार्गमात्रत्वस्योक्तस्मृतावेवोक्तेः लयाभावान्न 'प्राणस्तेजसि' इति श्रुतिविरोधः ॥ ३ ॥

---

ರಿಂದ ವಿರಿಂಚನಿಗೆ ಪರಮಾತ್ಮನಲ್ಲಿ ಲಯುವಾಗುವುದು ಯುಕ್ತವಾದುದು ಎಂಬ ಯುಕ್ತಿಯನ್ನು ಸೂಚಿಸಲು 'ಅಧ್ಯಕ್ಷ' ಎಂಬ ಪದವನ್ನು ಪ್ರಯೋಗಿಸಲಾಗಿದೆ. 'ಚಕ್ಷುರಾದಿವತ್ತು' (ಬ್ರ. ಸೂ. ೨-೪-೧೧) ಎಂಬ ಸೂತ್ರದಲ್ಲಿ ಪ್ರಾಣನು ಭಗವದಧೀನನೆಂದು ಹೇಳಿದ್ದರೂ, ಪ್ರಾಣನ ಸ್ವಾತಂತ್ರ್ಯವನ್ನು ಹೇಳುವ ಅನೇಕ ಶ್ರುತಿಗಳಿರುವುದರಿಂದ ಪ್ರಾಣನು ಭಗವಂತನ ಅಧೀನನೆಂದು ತಿಳಿಸಲು ಈ ಸೂತ್ರ ಬಂದಿದೆ. 'ಸರ್ವೇ ಪ್ರಾಣಮುಪಗಚ್ಛಂತಿ ಪ್ರಾಣಂ ದೇವಾ ಅನುಪ್ರಾಣಂತಿ' ಇತ್ಯಾದಿ ಶ್ರುತಿಗಳು ಹೇಳುವಂತೆ ಎಲ್ಲರೂ ಪ್ರಾಣನನ್ನು ಹೊಂದುವುದರಿಂದ ಆ ಅಭಿಪ್ರಾಯದಿಂದ ಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುವ ಶ್ರುತಿಗಳು ಸಾವಕಾಶಗಳೆಂದು ಭಾವ. ಇದಕ್ಕಾಗಿ 'ತದುಪಗಮ' ಎಂಬ ಪದಕ್ಕೆ ವ್ಯಾಖ್ಯಾಂತರವಿದೆಯೆಂದೂ ತಿಳಿಯತಕ್ಕದ್ದು. ಪ್ರಾಣನು ಪರಮಾತ್ಮನಲ್ಲಿ ಲಯವನ್ನು ಹೊಂದಲು ತೇಜಸ್ಸು ಕೇವಲ ಮಾರ್ಗವಾಗಿದೆ ಎಂದು ಮೇಲೆ ಉದಾಹರಿಸಿರುವ ಸ್ಮೃತಿಯಲ್ಲೇ[1] ಹೇಳಿರುವುದರಿಂದ ಪ್ರಾಣನಿಗೆ ತೇಜಸ್ಸಿನಲ್ಲಿ ಲಯವಿಲ್ಲದ ಕಾರಣ ಪ್ರಕೃತಸೂತ್ರಕ್ಕೆ 'ಪ್ರಾಣಸ್ತೇಜಸಿ' ಎಂಬ ಶ್ರುತಿಯ ವಿರೋಧವಿಲ್ಲ.

---

1. 'ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಮುದಾಹೃತಮ್' ಎಂಬ ಸ್ಮೃತಿಯಲ್ಲಿ.

भूताधिकरणम्—४

॥ ॐ भूतेषु तच्छ्रुतेः ॐ ॥ ४.२.५

अत्र प्राग् विशिष्योक्तान्यदेवानां भूतेषु लय उच्यते। प्रागुक्तेभ्योऽन्ये देवाः पञ्चसु भूतेषु भूताभिमानिषु लीयन्ते। न त्वेकस्मिन्नग्नाविति बहुवचनार्थः। कुतः? तच्छ्रुतेः। तस्य भूतेषु देवानां लयस्य 'भूतेषु देवा विलीयन्ते' इति श्रवणादित्यर्थः।

---

ಭೂತಾಧಿಕರಣ--೪

ಓಂ ಭೂತೇಷು ತಚ್ಛ್ರುತೇಃ ಓಂ ೪.೨.೫

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಹಿಂದೆ ಪ್ರತ್ಯೇಕವಾಗಿ ಹೇಳಿದ ದೇವತೆಗಳನ್ನು ಬಿಟ್ಟು ಉಳಿದ ದೇವತೆಗಳಿಗೆ ಭೂತಗಳಲ್ಲಿ ಲಯುವನ್ನು ಹೇಳಲಾಗುವುದು. ಹಿಂದೆ ಹೇಳಿದ ದೇವತೆಗಳಿಂದ ಭಿನ್ನರಾದ ದೇವತೆಗಳು, ಭೂತೇಷು - ಪಂಚಭೂತಾಭಿಮಾನಿಗಳಲ್ಲಿ ಲಯುವನ್ನು ಹೊಂದುವರು. ಅಗ್ನಿಯೊಬ್ಬನಲ್ಲಿ ಲಯುವನ್ನು ಹೊಂದುವುದಿಲ್ಲವೆಂದು 'ಭೂತೇಷು' ಎಂಬಲ್ಲಿರುವ ಬಹುವಚನದ ಅಭಿಪ್ರಾಯವಾಗಿದೆ. ಪಂಚಭೂತಾಭಿಮಾನಿಗಳಲ್ಲಿ ಲಯ ಹೊಂದುವರೆನ್ನಲು ಆಧಾರವೇನು ಎಂಬ ಪ್ರಶ್ನೆಗೆ ಉತ್ತರ— ತಚ್ಛ್ರುತೇಃ. ತಸ್ಯ - ಭೂತಗಳಲ್ಲಿ ದೇವತೆಗಳಿಗೆ ಲಯುವೆನ್ನುವುದು, ಶ್ರುತೇಃ – '[1]ಭೂತೇಷು ದೇವಾ ವಿಲೀಯಂತೇ' ಎಂಬ ಶ್ರುತಿಯಲ್ಲಿ ಕೇಳಿಬರುವುದರಿಂದ ಎಂದು

1. 'ಭೂತೇಷು ದೇವಾ ವಿಲಿಯಂತೇ ಭೂತಾನಿ ಪರೇ ನ ಪರ ಉದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಾತಾ' ಎಂದು ಬೃಹಚ್ಛ್ರುತಿ. ವಾರುಣೀ, ಸೌಪರ್ಣೀ, ಶೇಷ, ಸುಪರ್ಣ, ಚತುರ್ಮುಖರೆಂದು ಹಿಂದೆ ಹೇಳಿದ ದೇವತೆಗಳನ್ನು ಬಿಟ್ಟು ಉಳಿದ ದೇವತೆಗಳು ಪೃಥಿವ್ಯಾದಿ ಭೂತಾಭಿಮಾನಿದೇವತೆಗಳಲ್ಲಿ ಲಯವನ್ನು ಹೊಂದುವರು. ಭೂತಾಭಿಮಾನಿದೇವತೆಗಳು ಪರಂಪರಯಾ ಪರಮಾತ್ಮನಲ್ಲಿ ಲೀನವಾಗುವರು. ಸ್ವತಂತ್ರನೂ ದೇಹದ ಮಧ್ಯಭಾಗವಾದ ಹೃದಯದಲ್ಲಿರುವವನೂ ಆದ ಭಗವಂತನು ಉತ್ಪತ್ತಿಯನ್ನಾಗಲಿ ಲಯವನ್ನಾಗಲಿ ಹೊಂದುವುದಿಲ್ಲವೆಂದು ಶ್ರುತಿಯ ಭಾವ.

'अग्नौ देवा विलीयन्ते' इति श्रुतिस्तु अग्रे सावकाशयिष्यत इति भावः ॥ ४ ॥

### नैकस्मिन्नधिकरणम्—५

## ॥ ॐ नैकस्मिन् दर्शयतो हि ॐ ॥ ४.२.६

अत्र देवानां सर्वभूतेषु लयः समर्थ्यते । भूत इति विपरिणामेन वर्तते । देवानामग्नौ लयेऽपि तद्द्वारा वायावाकाशे च लयेन भूतेष्विति प्रागुक्तश्रुत्युपपत्तेः एकस्मिन्नग्नावेव भूते देवा विलीयन्त

---

ಅರ್ಥ. 'ಅಗ್ನೌ ದೇವಾ ವಿಲೀಯಂತೇ' ಎಂಬ ಶ್ರುತಿ ಸಾವಕಾಶವೆಂದು ಮುಂದೆ ಹೇಳಲಾಗುವುದೆಂದು ಭಾವ.

### ನೈಕಸ್ಮಿನ್ನಧಿಕರಣ—೫

## ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ೪.೨.೬

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ದೇವತೆಗಳಿಗೆ ಎಲ್ಲ ಭೂತಾಭಿಮಾನಿದೇವತೆಗಳಲ್ಲಿ ಲಯವನ್ನು ಸಮರ್ಥಿಸಲಾಗುವುದು. ಹಿಂದಿನ ಸೂತ್ರದಲ್ಲಿರುವ 'ಭೂತೇಷು' ಎಂಬ ಪದವು 'ಭೂತೇ' ಎಂದು ಬದಲಾವಣೆಯೊಂದಿಗೆ ಅನುವೃತ್ತವಾಗುವುದು.

ನ ಏಕಸ್ಮಿನ್ – ದೇವತೆಗಳಿಗೆ ಅಗ್ನಿಯಲ್ಲಿ ಲಯವಾದರೂ, ಅಗ್ನಿದ್ವಾರಾ ವಾಯು ಮತ್ತು ಆಕಾಶಗಳಲ್ಲೂ ಲಯವಾಗುವ ಕಾರಣ 'ಭೂತೇಷು' ಎಂದು ಹಿಂದೆ ಹೇಳಿದ ಶ್ರುತಿಯು ಉಪಪನ್ನವಾಗುವುದರಿಂದ ಅಗ್ನಿಯೆಂಬ ಭೂತಾಭಿಮಾನಿಯೊಬ್ಬನಲ್ಲಿ ಮಾತ್ರ ದೇವತೆಗಳು ಲಯವನ್ನು ಪಡೆಯುವರು ಎಂಬುದು ಯುಕ್ತವಲ್ಲ.

इति न भवति। कुतः ? हि यस्मात् 'पृथिव्यां ऋभवो विलीयन्ते वरुणेऽश्विनावग्नावग्नयः' इति, 'ऋभवः पृथिव्यां' इति, च श्रुती प्रत्येकं भूतेषु देवतालयं दर्शयतोऽत इत्यर्थः। 'अग्नौ देवा विलीयन्ते' इति श्रुतिस्तु उदाहृतश्रुतौ 'अग्नयः' इति निर्दिष्टसर्वाग्निपुत्रमात्रपरेति भावः ॥ ५ ॥

समनाधिकरणम् — ६

॥ ॐ समना चासृत्युपक्रमादमृतत्वं चानुपोष्य ॐ ॥

४.२.७

---

ಹಿ - ಏಕೆಂದರೆ, ದರ್ಶಯತಃ – '[1]ಪೃಥಿವ್ಯಾಂ ಋಭವೋ ವಿಲೀಯಂತೇ ವರುಣೇಽಶ್ವಿನಾವಗ್ನಾವಗ್ನಯಃ' ಎಂಬ ಮತ್ತು '[2]ಋಭವಃ ಪೃಥಿವ್ಯಾಂ' ಎಂಬ ಎರಡು ಶ್ರುತಿಗಳು ಪ್ರತ್ಯೇಕವಾಗಿ ಭೂತಾಭಿಮಾನಿಗಳಲ್ಲಿ ದೇವತೆಗಳ ಲಯವನ್ನು ತಿಳಿಸುವುದರಿಂದ ಎಂದು ಅರ್ಥ. 'ಅಗ್ನೌ ದೇವಾ ವಿಲೀಯಂತೇ' ಎಂಬ ಶ್ರುತಿಯು ಮೇಲೆ ಉದಾಹರಿಸಲಾದ ಶ್ರುತಿಯಲ್ಲಿ 'ಅಗ್ನಯಃ' ಎಂಬ ಪದದಿಂದ ನಿರ್ದಿಷ್ಟವಾಗಿರುವ ಎಲ್ಲ ಅಗ್ನಿಪುತ್ರರಿಗೆ ಮಾತ್ರ ಲಯವನ್ನು ಹೇಳುವ ಅಭಿಪ್ರಾಯವುಳ್ಳದ್ದೆಂದು ಭಾವ.

ಸಮನಾಧಿಕರಣ—೬

ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ೪.೨.೭

---

1. 'ಪೃಥಿವ್ಯಾಂ ಋಭವೋ ವಿಲೀಯಂತೇ ವರುಣೇಽಶ್ವಿನಾವಗ್ನಾವಗ್ನಯೋ ವಾಯಾವಿಂದ್ರಃ ಸೋಮ ಆದಿತ್ಯೋ ಬೃಹಸ್ಪತಿರಿತ್ಯಾಕಾಶ ಏವ ಸಾಧ್ಯಾ ವಿಲೀಯಂತೇ' ಎಂದು ಮಹೋಪನಿಷತ್ ಶ್ರುತಿ.

अत्र श्रियो विष्णौ लयाभावः साध्यते। आद्यश्चो नञोऽनुपकर्षकः। अन्त्योऽवधारणे।

न श्रीरीशे लीयते। कुतः? अनुपोष्य च अनुपास्यैव स्वत

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಲಕ್ಷ್ಮೀದೇವಿಗೆ ವಿಷ್ಣುವಿನಲ್ಲಿ ಲಯವಿಲ್ಲವೆಂಬುದನ್ನು ಸಮರ್ಥಿಸಲಾಗುವುದು. ಈ ಸೂತ್ರದಲ್ಲಿರುವ ಮೊದಲನೆ 'ಚ' ಶಬ್ದವು ಹಿಂದಿನ ಸೂತ್ರದಿಂದ, ನಞ್ ಪದದ ಅನುವೃತ್ತಿಯನ್ನು ಸೂಚಿಸುವುದು. ಕೊನೆಯ 'ಚ' ಶಬ್ದವು 'ಏವ' ಎಂಬ ಅರ್ಥವನ್ನು ಹೇಳುವುದು.

ನ - ಲಕ್ಷ್ಮಿಯು ಭಗವಂತನಲ್ಲಿ ಲಯವನ್ನು ಹೊಂದುವುದಿಲ್ಲ. ಏಕೆಂದರೆ, ಅನುಪೋಷ್ಯ ಚ - ಉಪಾಸನೆ ಇಲ್ಲದೆಯೇ, ಸ್ವಾಭಾವಿಕವಾಗಿಯೇ, ಅಮೃತತ್ವಂ -

---

ಪೃಥಿವ್ಯಭಿಮಾನಿ ಧರಾದೇವಿಯಲ್ಲಿ ಋಭು ಎಂಬ ಹೆಸರಿನ ದೇವತೆಗಳು ಲಯವನ್ನು ಹೊಂದುವರು. ಜಲಾಭಿಮಾನಿ ವರುಣನಲ್ಲಿ ಅಶ್ವಿನಿದೇವತೆಗಳು ಲೀನರಾಗುವರು. ಅಗ್ನಿಯಲ್ಲಿ ಅಗ್ನಿಪುತ್ರರು ಲಯವನ್ನು ಪಡೆಯುವರು. ಸೋಮ, ಆದಿತ್ಯ, ಬೃಹಸ್ಪತಿ ಮೊದಲಾದ ಇತರ ಎಲ್ಲ ದೇವತೆಗಳು ಪರಂಪರಯಾ ವಾಯ್ವಭಿಮಾನಿಯಾದ ಹಿರಣ್ಯಗರ್ಭನಲ್ಲಿ ಲಯಹೊಂದುವರು. ಆಕಾಶಾಭಿಮಾನಿಯಾದ ಗಣಪತಿಯಲ್ಲಿ ಸಾಧ್ಯರೆಂಬ ದೇವತೆಗಳಿಗೆ ಲಯವಾಗುವುದೆಂದು ಶ್ರುತಿಯ ಭಾವ.

2. (೨೬೩ನೇ ಪುಟದಲ್ಲಿದೆ) 'ಋಭವಃ ಪೃಥಿವ್ಯಾಂ ('ಮೃತ್ಯವಃ ಪೃಥಿವ್ಯಾಂ' ಎಂದೂ ಪಾಠವಿದೆ) ವರುಣ ಅಪೋsಗ್ನಯಸ್ತೇಜಸಿ ಮರುತೋ ಮಾರುತ ಆಕಾಶೇ ವಿನಾಯಕಾ ವಿಲೀಯಂತೇ' ಎಂದು ಚತುರ್ವೇದಶಿಖಾಶ್ರುತಿ.

ಋಭುನಾಮಕದೇವತೆಗಳು ಪೃಥಿವ್ಯಭಿಮಾನಿದೇವತೆಯಲ್ಲೂ, ವರುಣಭಿನ್ನರಾದ ಜಲಾಭಿಮಾನಿದೇವತೆಗಳು ವರುಣನಲ್ಲೂ, ಅಗ್ನಿಪುತ್ರರು ತೇಜೋಭೂತಕ್ಕೆ ಅಭಿಮಾನಿಯಾದ ಅಗ್ನಿಯಲ್ಲೂ ಲೀನರಾಗುವರು. ಹಾಗೆಯೇ ಮರುದ್ಗಣಗಳು ಹಿರಣ್ಯಗರ್ಭನಲ್ಲಿ ಪರಂಪರಯಾ ಲಯವನ್ನು ಪಡೆಯುವರು. ಗಣಪತಿಭೃತ್ಯರು ಆಕಾಶಾಭಿಮಾನಿ ವಿನಾಯಕನಲ್ಲಿ ಲಯವನ್ನು ಹೊಂದುವರೆಂದು ಭಾವ.

एवामृतत्वं नित्यमुक्तत्वमस्या इति यावत् । यतोऽत इति योज्यम् । तदेव कुतः ? असृत्युपक्रमात् । सृतिः संसारः । कदाऽपि संसारोपक्रमणाभावात् । तदपि कुतः ? समना देशकालाभ्यां व्याप्त्या समो ना परमपुरुषो विष्णुर्यस्याः सा । ङीबभावश्छान्दसः । हेतुगर्भम् । ईशवन्नित्यत्वात् सर्वगतत्वादित्युत्तरोत्तरं प्रति पूर्वपूर्वस्य हेतुत्वं बोध्यम् । 'तेजः परस्यां' इति श्रुतिस्तु 'हरेरत्यन्तसामीप्यं लयो लक्ष्म्याः' इत्युक्तेरतिसामीप्यपरेति भावः ।

---

ನಿತ್ಯಮುಕ್ತಿಯು ಲಕ್ಷ್ಮೀದೇವಿಗೆ ಇರುವುದೆಂದು ತಾತ್ಪರ್ಯ. 'ಈ ಕಾರಣದಿಂದ' ಎಂಬ ಅರ್ಥದ 'ಯತಃ ಅತಃ' ಎಂಬ ಪದಗಳನ್ನು ಇಲ್ಲಿ ಯೋಜಿಸಬೇಕು. ಲಕ್ಷ್ಮೀದೇವಿಯು ನಿತ್ಯಮುಕ್ತಳೆಂಬುದರಲ್ಲಿ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ— 'ಅಸೃತ್ಯುಪಕ್ರಮಾತ್'. ಸೃತಿ ಎಂದರೆ ಸಂಸಾರ. ಎಂದೂ ಸಂಸಾರದ ಆರಂಭವೇ ಇಲ್ಲದಿರುವುದರಿಂದ. ಸಂಸಾರವೇಕಿಲ್ಲ ಎಂಬ ಶಂಕೆಗೆ ಸಮಾಧಾನ – 'ಸಮನಾ'. ನಾ- ಪರಮಪುರುಷನಾದ ವಿಷ್ಣುವು, ಸಮಃ- ದೇಶಕಾಲಗಳ ವ್ಯಾಪ್ತಿಯಿಂದ ಯಾರಿಗೆ ಸಮನಾಗಿರುವನೋ ಆ ಲಕ್ಷ್ಮೀದೇವಿಯು ಎಂದು ಅರ್ಥ — 'ಸಮನಾ' ಎಂಬಲ್ಲಿ ಙೀಪ್ ಪ್ರತ್ಯಯವಿಲ್ಲದಿರುವುದು ಸೂತ್ರವು ವೇದತುಲ್ಯವಾದ್ದರಿಂದ ಯುಕ್ತವಾಗಿದೆ. 'ಸಮನಾ' ಎಂಬುದು ಹೇತುಗರ್ಭವಿಶೇಷಣವಾಗಿದೆ — ಭಗವಂತನಂತೆ ನಿತ್ಯಳಾದ್ದರಿಂದ ಮತ್ತು ಸರ್ವಗತಳಾದ್ದರಿಂದ ಎಂಬುದಾಗಿ ಮುಂದು ಮುಂದಿನದನ್ನು ಕುರಿತು ಹಿಂದು ಹಿಂದಿನದು ಹೇತುವಾಗಿದೆ[1] ಎಂದು ತಿಳಿಯಬೇಕು. 'ತೇಜಃ ಪರಸ್ಯಾಂ ದೇವತಾಯಾಂ' ಎಂಬ ಶ್ರುತಿಯಾದರೋ 'ಹರೇಃ ಅತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ' ಎಂದು ವಚನವಿರುವುದರಿಂದ ಲಕ್ಷ್ಮೀದೇವಿಗೆ ಶ್ರೀಹರಿಯ ಅತ್ಯಂತ ಸಾಮೀಪ್ಯವನ್ನು ಹೇಳುವ ಅಭಿಪ್ರಾಯವುಳ್ಳದ್ದೆಂದು ಭಾವ.

---

1. ಲಕ್ಷ್ಮೀದೇವಿಗೆ ಲಯವಿಲ್ಲದಿರಲು ನಿತ್ಯಮುಕ್ತತ್ವವೂ, ನಿತ್ಯಮುಕ್ತತ್ವಕ್ಕೆ ಅಸೃತ್ಯುಪಕ್ರಮವೂ, ಅದಕ್ಕೆ ಭಗವಂತನಂತೆ ನಿತ್ಯಳೂ, ಸರ್ವಗತಳೂ ಆಗಿರುವುದು ಹೇತುವೆಂದು ಭಾವ.

असृतेरित्येव पूर्तावुपक्रमेत्युक्तिः कदाऽपि संसारो नेति वक्तुम् । असृत्युपक्रमादित्युक्त्या 'द्वावसृत्यनुपक्रमौ प्रकृतिश्च परमश्च' इति श्रुतिः सूचिता । अनुपोष्येत्यकारस्योत्वं छान्दसम् । यद्वा — उपपूर्वस्य वसतेः सम्प्रसारणे रूपमेतत् । उपवासादि-क्लेशमकृत्वा अनुपास्येति यावत् । कामादित्यत्राबन्धो कावपीशेन

---

**ಸೂತ್ರದ ಪದಗಳ ಸ್ವಾರಸ್ಯ**

'ಅಸೃತೇಃ' ಎಂದಿಷ್ಟೇ ಸಾಕಾಗಿದ್ದರೂ ಶ್ರೀಲಕ್ಷ್ಮಿಗೆ ಎಂದೂ ಸಂಸಾರವಿಲ್ಲವೆಂದು ಹೇಳಲು 'ಉಪಕ್ರಮ' ಎಂದು ಹೇಳಲಾಗಿದೆ. 'ಅಸೃತ್ಯುಪಕ್ರಮಾತ್' ಎಂದು ಹೇಳಿದ್ದರಿಂದ [1]'ದ್ವಾ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ' ಎಂಬ ಶ್ರುತಿಯು ಸೂಚಿತವಾಗಿದೆ.

**'ಅನುಪೋಷ್ಯ' ಎಂಬ ರೂಪದ ಸಮರ್ಥನೆ**

'ಅನುಪಾಸ್ಯ' ಎಂದಿರಬೇಕಾಗಿದ್ದರೂ, ಪಕಾರದ ಮುಂದಿರುವ ಆಕಾರಕ್ಕೆ ಓಕಾರ ಬಂದಿರುವುದು ಛಾಂದಸವಾಗಿದೆ. ಅಥವಾ 'ಉಪ' ಎಂಬ ಉಪಸರ್ಗಸಹಿತವಾದ 'ವಸ್' ಧಾತುವಿನ ವಕಾರಕ್ಕೆ ಸಂಪ್ರಸಾರಣವಾದ ಉಕಾರ ಬಂದು 'ಅನುಪೋಷ್ಯ' ಎಂದು ರೂಪವಾಗಿದೆ.

'ಕಾಮಾತ್....' (ಬ್ರ.ಸೂ. ೩-೩-೪೦) ಎಂಬ ಸೂತ್ರದಲ್ಲಿ ಲಕ್ಷ್ಮೀದೇವಿಗೆ ಬಂಧವಿಲ್ಲವೆಂದು ಹೇಳಿದ್ದರೂ, ಭಗವಂತನಿಂದ ಲಕ್ಷ್ಮೀದೇವಿಗೆ ಸರ್ವಸಾಮ್ಯ ಉಂಟಾದೀತೆಂಬ ಕಾರಣದಿಂದ ಬಂಧವಿಲ್ಲದಿರುವುದು ಯುಕ್ತವಲ್ಲವೆಂದು ಆಕ್ಷೇಪಿಸಿ, ಭಗವಂತನಿಗೆ ಅಧೀನಳಾಗಿರುವಳೆಂಬ ಯುಕ್ತಿಯಿಂದ ಮತ್ತು 'ತೇಜಃ ಪರಸ್ಯಾಂ' ಎಂಬ

---

1. 'ದ್ವಾ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಚ ಸರ್ವಗತೌ ಚೈತೌ ಜ್ಞಾತ್ವಾ ವಿಮುಚ್ಯತೇ' ಎಂದು ಬೃಹಚ್ಛ್ರುತಿ.

सर्वसाम्यापत्तेरबन्धो न युक्त इति तदाक्षेपादीशाधीनत्वयुक्त्या श्रुत्या च लयशङ्कायामयमारम्भः ।

नित्यमुक्तत्वे सर्वसाम्यमीशेन स्यादत आह—

॥ ॐ तदपीतेः संसारव्यपदेशात् ॐ ॥ ४.२.८

तदपीतेः प्रस्तुतप्रकृतौ लयस्य संसारव्यपदेशात् ईशे लयस्य मुक्तिव्यपदेशाद् ' "विलीनो हि प्रकृतौ संसारमेति विलीनः परमे

---

ಶ್ರುತಿಯ ಆಧಾರದಿಂದ ಲಕ್ಷ್ಮೀದೇವಿಗೂ ಲಯವಿದೆ ಎಂದು ಶಂಕಿಸಿದಾಗ ಅದನ್ನು ಪರಿಹರಿಸಲು ಈ ಅಧಿಕರಣ ಆರಂಭವಾಗಿದೆ.

ಲಕ್ಷ್ಮೀದೇವಿಯು ನಿತ್ಯಮುಕ್ತಳಾಗಿರುವುದಾದಲ್ಲಿ ಸರ್ವರೀತಿಯಿಂದಲೂ ಭಗವಂತನಿಂದ ಸಾಮ್ಯ ಉಂಟಾಗಬೇಕಾದೀತು ಎಂಬ ಆಶಂಕೆಗೆ ಸಮಾಧಾನ—

ಓಂ ತದಪೀತೇಃ ಸಂಸಾರವ್ಯಪದೇಶಾತ್ ಓಂ ೪.೨.೮

**ಸೂತ್ರಾರ್ಥ**

'ತದಪೀತೇಃ - [1]'ವಿಲೀನೋ ಹಿ ಪ್ರಕೃತೌ ಸಂಸಾರಮೇತಿ ವಿಲೀನಃ ಪರಮೇ ಹ್ಯಮೃತತ್ವಮೇತಿ' ಎಂಬ ಶ್ರುತಿಯಲ್ಲಿ ಪ್ರಸ್ತುತವಾಗಿರುವ ಪ್ರಕೃತಿಯಲ್ಲಿ

---

1. 'ಸಮಾವೇತ್ ಪ್ರಕೃತಿಶ್ಚ ಪರಮಶ್ಚ ನಿತ್ಯೌ ಸರ್ವಗತೌ ಮುಕ್ತೌ ಅಸಮಾವೇತೌ ಪ್ರಕೃತಿಶ್ಚ ಪರಮಶ್ಚ ವಿಲೀನೋ ಹಿ ಪ್ರಕೃತೌ ಸಂಸಾರಮೇತಿ ವಿಲೀನಃ ಪರಮೇ ಹ್ಯಮೃತತ್ವಮೇತಿ' ಎಂದು ಸೌಪರ್ಣಶ್ರುತಿ.

ಚಿತ್ಪ್ರಕೃತಿ ಎಂದೆನಿಸುವ ಲಕ್ಷ್ಮೀದೇವಿ ಮತ್ತು ಪರಮಪುರುಷನಾದ ಭಗವಂತ - ಇವರಿಬ್ಬರೂ ನಿತ್ಯವಾದ ದೇಹವುಳ್ಳವರೂ, ಸರ್ವಗತರೂ, ನಿತ್ಯಮುಕ್ತರೂ ಆಗಿದ್ದು ಈ ವಿಷಯದಲ್ಲಿ ಸಮರಾಗಿದ್ದಾರೆ. ಆದರೆ ಪ್ರಕೃತಿ ಮತ್ತು ಪರಮಪುರುಷರು ಅಸಮರೂ ಹೌದು. ಪ್ರಕೃತಿಯಲ್ಲಿ ಲಯವನ್ನು ಹೊಂದಿದವನು ಸಂಸಾರಿಯಾಗುವನಾದರೆ ಪರಮನಲ್ಲಿ ವಿಲೀನನಾದವನು ಅಮೃತತ್ವವನ್ನು ಪಡೆಯುವನು ಎಂದು ಶ್ರುತಿಯ ಭಾವ.

ह्यमृतत्वमेति'' इति श्रुतौ' इत्युपलक्षणत्वेन योज्यम् — अतो न सर्वसाम्यमित्यर्थः ।

तत्त्वप्रदीपे तु—आ समन्तादपीतेरित्यविज्ञातत्वं प्रवेशस्योक्तम्। " 'अविज्ञातं प्रविष्टं यदपीतं' इति वचनस्य 'अप्ययोऽयं समुद्दिष्टस्तदन्येषामदर्शनम्' इति वचनात् सावकाशत्वशङ्का स्यादिति तदापीतेरित्युक्तम् । स्वस्याप्यविज्ञात एव तदा प्रकृतौ प्रवेशः'' इत्याद्युक्त्या तदापीतेरिति पाठोऽभिमत इति भाति ।

---

ಲಯಕ್ಕೆ, ಸಂಸಾರವ್ಯಪದೇಶಾತ್ – ಸಂಸಾರಕಾರಣತ್ವವಿರುವುದೆಂದು ಹೇಳಿರುವುದರಿಂದ ಮತ್ತು ಪರಮಾತ್ಮನಲ್ಲಿ ಲಯಕ್ಕೆ ಮುಕ್ತಿಕಾರಣತ್ವವಿರುವುದೆಂದು ಹೇಳಿರುವುದರಿಂದ ಲಕ್ಷ್ಮೀದೇವಿಗೆ ಭಗವಂತನಿಂದ ಸರ್ವಸಾಮ್ಯವಿಲ್ಲವೆಂದು ಅರ್ಥ. ಸೂತ್ರದಲ್ಲಿ 'ಪ್ರಕೃತಿಯಲ್ಲಿ ಲಯವು ಸಂಸಾರಕಾರಣವೆಂದು ಶ್ರುತಿಯಲ್ಲಿ ಹೇಳಲಾಗಿದೆ' ಎಂದಿಷ್ಟೇ ಹೇಳಿದ್ದರೂ 'ಪರಮಾತ್ಮನಲ್ಲಿ ಲಯವು ಮುಕ್ತಿಕಾರಣವೆಂದು ಶ್ರುತಿಯಲ್ಲಿ ಹೇಳಲಾಗಿರುವುದರಿಂದ' ಎಂಬ ಅಂಶವನ್ನೂ ಇಲ್ಲಿ ಉಪಲಕ್ಷಣವಾಗಿ ಯೋಜಿಸಬೇಕು.

**ತತ್ತ್ವಪ್ರದೀಪರೀತ್ಯಾ ಸೂತ್ರದ ಪಾಠ ಮತ್ತು ವ್ಯಾಖ್ಯಾನ**

ತತ್ತ್ವಪ್ರದೀಪದಲ್ಲಾದರೋ — ಆ ಸಮಂತಾತ್ ಅಂದರೆ ಎಲ್ಲ ರೀತಿಯಿಂದಲೂ, ಅಪೀತೇಃ - ಅಪೀತಿಯಿರುವುದರಿಂದ ಎಂದು ಪ್ರಕೃತಿಯಲ್ಲಿ ಉಂಟಾಗುವ ಪ್ರವೇಶವು ಸಂಪೂರ್ಣವಾಗಿ ಅರಿವಿಗೆ ಬರತಕ್ಕದ್ದಲ್ಲವೆಂದು ಹೇಳಲಾಗಿದೆ. 'ಅವಿಜ್ಞಾತಂ ಪ್ರವಿಷ್ಟಂ ಯದಪೀತಂ' ಎಂಬ ವಚನವು 'ಅಪ್ಯಯೋಽಯಂ ಸಮುದ್ದಿಷ್ಟಸ್ತದನ್ಯೇಷಾಮದರ್ಶನಂ' ಎಂಬ ವಚನದಿಂದ ಸಾವಕಾಶವೆಂದು ಸಂದೇಹ ಬರದಿರಲೆಂದು ಸೂತ್ರದಲ್ಲಿ 'ತದಾಪೀತೇಃ' ಎಂದು ಹೇಳಲಾಗಿದೆ. ಸಂಸಾರದಲ್ಲಿ ಆಗುವ ಪ್ರಕೃತಿಯಲ್ಲಿ ಪ್ರವೇಶವು ತನಗೂ ತಿಳಿಯದ್ದು ಎಂಬುದಾಗಿ ಅರ್ಥ ಇತ್ಯಾದಿ

इतश्च न सर्वसाम्यमित्याह—

॥ ॐ सूक्ष्मं प्रमाणतश्च तथोपलब्धेः ॐ ॥ ४.२.९

तदिति विभज्यास्ति। आवर्तते च। आद्यं पञ्चम्यन्तं

---

ಹೇಳಿರುವುದರಿಂದ ತತ್ತ್ವಪ್ರದೀಪಕಾರರಿಗೆ 'ತದಾಪೀತೇಃ' ಎಂಬ ಸೂತ್ರಪಾಠವು ಅಭಿಮತವೆಂದು ತೋರುವುದು.[1]

ಈ ಮುಂದಿನ ಕಾರಣದಿಂದಲೂ ಲಕ್ಷ್ಮೀದೇವಿಗೆ ಭಗವಂತನಿಂದ ಸರ್ವಸಾಮ್ಯ ವಿಲ್ಲವೆಂದು ಹೇಳುವ ಸೂತ್ರ—

## ಓಂ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ಓಂ ೪.೨.೯

**ಸೂತ್ರಾರ್ಥ**

ಹಿಂದಿನ ಸೂತ್ರದ 'ತದಪೀತೇಃ' ಎಂಬ ಪದದಿಂದ 'ತತ್' ಪದವು ವಿಭಾಗ ವನ್ನು ಪಡೆದು ಇಲ್ಲಿ ಅನುವೃತ್ತವಾಗುವುದು ಮತ್ತು ಆವೃತ್ತಿಯನ್ನು ಪಡೆಯುವುದು.

---

1. ತತ್ತ್ವಪ್ರದೀಪರೀತ್ಯಾ 'ತದಾ ಅಪೀತೇಃ' ಎಂದು ಸೂತ್ರಪಾಠ. 'ಅಪ್ಯಯೋಽಯಂ ಸಮುದ್ದಿಷ್ಟಃ' ಇತ್ಯಾದಿ ವಚನದ ಪ್ರಕಾರ ಅಪೀತಿಯೆಂದರೆ ಅನ್ಯರಿಗೆ ತಿಳಿಯದಿರುವ ಪ್ರವೇಶ ಎಂಬ ಅರ್ಥವಿದೆ. ಯದ್ಯಪಿ 'ಅವಿಜ್ಞಾತಂ ಪ್ರವಿಷ್ಟಂ' ಇತ್ಯಾದಿ ವಾಕ್ಯವನ್ನನುಸರಿಸಿ 'ಯಾರಿಗೂ ತಿಳಿಯದ ಪ್ರವೇಶ' ಎಂದೂ ಅಪೀತಿಶಬ್ದಕ್ಕೆ ಅರ್ಥವಾಗುವ ಸಾಧ್ಯತೆ ಇದೆ. ಆದರೆ ಮುಂಚೆ ಉಲ್ಲೇಖಿಸಿದ 'ಅಪ್ಯಯೋಽಯಂ ಸಮುದ್ದಿಷ್ಟಃ' ಇತ್ಯಾದಿ ವಾಕ್ಯಕ್ಕನುಸಾರ ವಾಗಿ 'ಅವಿಜ್ಞಾತಂ ಪ್ರವಿಷ್ಟಂ' ಎಂಬ ವಚನಕ್ಕೆ ಇತರರಿಗೆ ತಿಳಿಯದ ಪ್ರವೇಶ ಎಂದೇ ಅರ್ಥ ಮಾಡಬಹುದು. ಆ ರೀತಿಯ ಅಪ್ಯಯ ಇಲ್ಲಿ ವಿವಕ್ಷಿತವಲ್ಲವೆಂದು ತಿಳಿಸಲೆಂದೇ ಸೂತ್ರಕಾರರು 'ಅಪೀತೇಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆಂದು ತತ್ತ್ವಪ್ರದೀಪಕಾರರ ಅಭಿಪ್ರಾಯ. 'ಅಙ್' ಉಪಸರ್ಗದ ಮೂಲಕ 'ಸಮಂತಾತ್ ಅಪ್ಯಯ' ಅಂದರೆ ತನಗೂ ಇತರರಿಗೂ ತಿಳಿ ಯದ ಪ್ರವೇಶವೆಂದು ಅಪೀತಿಶಬ್ದದ ಅರ್ಥವಾಗುವುದೆಂದು ಭಾವ.

विपरिणाम्यम् । तस्याः प्रकृतेरपि तद् ब्रह्म सूक्ष्मं प्रमाणतश्च परिमाणतश्च ज्ञानानन्दादिगुणपरिमाणेन चाधिकमिति शेषः । कुतः ? 'सर्वतः प्रकृतिः सूक्ष्मा प्रकृतेः परमेश्वरः' इत्यादिश्रुतौ तथा दर्शनादित्यर्थः । अतोऽपि न सर्वसाम्यमिति भावः ।

एवं हि नित्यमुक्तत्वादिना साम्यमपि न स्याद्, ब्रह्मादिवदित्यत आह—

---

ಹೀಗೆ ಆವೃತ್ತಿ ಮೂಲಕ ಲಭಿಸಿದ ಎರಡು ತತ್‌ಪದಗಳಲ್ಲಿ ಮೊದಲನೆಯದನ್ನು ಪಂಚಮೀವಿಭಕ್ತ್ಯಂತವಾಗಿ 'ತಸ್ಯಾಃ' ಎಂದು ಬದಲಿಸಬೇಕು.

ತಸ್ಯಾಃ - ಪ್ರಕೃತಿ ಎಂದೆನಿಸುವ ಲಕ್ಷ್ಮೀದೇವಿಗಿಂತಲೂ, ತತ್ - ಆ ಬ್ರಹ್ಮನು, ಸೂಕ್ಷ್ಮಂ - ಸೂಕ್ಷ್ಮನಾಗಿದ್ದಾನೆ. ಪ್ರಮಾಣತಶ್ಚ ಅಧಿಕಂ – ಪರಿಮಾಣದಿಂದ ಅಂದರೆ ಜ್ಞಾನ, ಆನಂದ ಮೊದಲಾದ ಗುಣಗಳ ಪರಿಮಾಣದಿಂದ ಅಧಿಕನಾಗಿದ್ದಾನೆ. ಇಲ್ಲಿ 'ಅಧಿಕಂ' ಎಂಬ ಶೇಷವನ್ನು ಸೇರಿಸಲಾಗಿದೆ. ಭಗವಂತನು ಲಕ್ಷ್ಮೀದೇವಿಗಿಂತ ಸೂಕ್ಷ್ಮನೂ ಗುಣಗಳ ವಿಷಯದಲ್ಲಿ ಅಧಿಕನೂ ಆಗಿರುವನೆಂಬುದರಲ್ಲಿ ಆಧಾರವೇನು? ಎಂಬ ಪ್ರಶ್ನೆಗೆ ಉತ್ತರ – 'ತಥೋಪಲಬ್ಧೇಃ'. [1]'ಸರ್ವತಃ ಪ್ರಕೃತಿಃ ಸೂಕ್ಷ್ಮಾ ಪ್ರಕೃತೇಃ ಪರಮೇಶ್ವರಃ' ಇತ್ಯಾದಿ ಶ್ರುತಿಯಲ್ಲಿ ಹಾಗೆ ಕಂಡಿರುವುದರಿಂದ ಎಂದು ಅರ್ಥ. ಈ ಕಾರಣದಿಂದಲೂ ಲಕ್ಷ್ಮೀದೇವಿಗೆ ಭಗವಂತನಿಂದ ಸರ್ವಸಾಮ್ಯವಿಲ್ಲವೆಂದು ಭಾವ.

ಹಾಗಾದಲ್ಲಿ, ಚತುರ್ಮುಖಾದಿಗಳಿಗೆ ಭಗವಂತನಂತೆ ನಿತ್ಯಮುಕ್ತರಾಗಿರುವ ಸಾಮ್ಯವಿಲ್ಲದಿರುವಂತೆ, ಲಕ್ಷ್ಮೀದೇವಿಗೂ ಭಗವಂತನಿಂದ ನಿತ್ಯಮುಕ್ತತ್ವೇನ ಸಾಮ್ಯವಿಲ್ಲವೆಂದಾಗಲಿ ಎಂಬ ಶಂಕೆಗೆ ಸಮಾಧಾನ—

---

1. ಸರ್ವತಃ ಪ್ರಕೃತಿಃ ಸೂಕ್ಷ್ಮಾ ಪ್ರಕೃತೇಃ ಪರಮೇಶ್ವರಃ ।
ಜ್ಞಾನಾನಂದೌ ತಥೈಶ್ವರ್ಯಂ ಗುಣಶ್ಚಾನ್ಯೇಽಧಿಕಾಃ ಪ್ರಭೋಃ ॥
ಎಂದು ತುರಶ್ರುತಿ.

|| ॐ नोपमर्देनातः ॐ || ४.२.१०

अतः साम्यतदभावयोरेव साधितत्वात् स्वातन्त्र्यादीशगुणासाधारण्यानुपमर्देन नित्यमुक्तत्वादिना साम्यमित्यर्थः । नोपमर्देनेति नसमासः ।

इतश्च किञ्चित्साम्यमित्याह—

|| ॐ अस्यैव चोपपत्तेरूष्मा ॐ || ४.२.११

---

ಓಂ ನೋಪಮರ್ದೇನಾತಃ ಓಂ ೪.೨.೧೦

**ಸೂತ್ರಾರ್ಥ**

ಅತಃ - ಲಕ್ಷ್ಮೀದೇವಿಗೆ ಭಗವಂತನಿಂದ ಸಾಮ್ಯ ಮತ್ತು ಸಾಮ್ಯವಿಲ್ಲದಿರುವುದು ಇವೆರಡನ್ನೂ ಹೀಗೆ ಸಾಧಿಸಲಾಗಿರುವುದರಿಂದ, ಸ್ವಾತಂತ್ರ್ಯವೇ ಮೊದಲಾದ ಭಗವಂತನ ಗುಣಗಳಿಗೆ ಇರುವ ಅಸಾಧಾರಣತೆಯನ್ನು, ನೋಪಮರ್ದೇನ-ಬಾಧಿಸದೆ, ನಿತ್ಯಮುಕ್ತತ್ವಾದಿನಾ ಸಾಮ್ಯವಿರುವುದೆಂದು ಅರ್ಥ. 'ನೋಪಮರ್ದೇನ' ಎಂಬ ಸಮಾಸಪದವು ನಸಮಾಸವಾಗಿದೆ[1].

ಈ ಮುಂದಿನ ಕಾರಣದಿಂದಲೂ ಲಕ್ಷ್ಮೀದೇವಿಗೆ ಭಗವಂತನಿಂದ ಕಿಂಚಿತ್ ಸಾಮ್ಯವಿರುವುದೆಂದು ಹೇಳುವ ಸೂತ್ರ—

ಓಂ ಅಸ್ಯೈವ ಚೋಪಪತ್ತೇರೂಷ್ಮಾ ಓಂ ೪.೨.೧೧

---

1. ನ ಉಪಮರ್ದಃ, ತೇನ ಎಂದು ವಿಗ್ರಹ.

अस्येति प्रस्तुतं किञ्चित्साम्यमुच्यते । चः समुच्चये । उपपत्ते-
रिति षष्ठी । ऊष्मेति तत्पदोपेतश्रुतिरुच्यते ।

'द्विधा हीदमवदृश्यते ऊष्मावदनूष्मावच्च । तत्रोष्मावत् परंब्रह्म
यन्न' जिघ्रन्ति इत्यादिनेशस्योष्मावत्त्वं, देव्या ऊष्मावत्त्वमनूष्मावत्त्वं

---

**ಸೂತ್ರಾರ್ಥ**

'ಅಸ್ಯ' ಎಂಬ ಪದವು ಪ್ರಸ್ತುತವಾಗಿರುವ 'ಕಿಂಚಿತ್ ಸಾಮ್ಯ' ವನ್ನು ಹೇಳು ವುದು. 'ಚ' ಶಬ್ದವು ಸಮುಚ್ಚಯಾರ್ಥವನ್ನು ಹೊಂದಿದೆ. 'ಉಪಪತ್ತೇಃ' ಎಂಬ ಪದವು ಷಷ್ಠೀ ವಿಭಕ್ತ್ಯಂತವಾಗಿದೆ. ಸೂತ್ರದಲ್ಲಿರುವ 'ಊಷ್ಮಾ' ಎಂಬ ಪದವು 'ಊಷ್ಮಾ' ಪದಯುಕ್ತವಾದ ಶ್ರುತಿಯನ್ನು ಹೇಳುವುದು.

'ಊಷ್ಮಾ -[1]ದ್ವಿಧಾ ಹೀದಮವದೃಶ್ಯತೇ ಊಷ್ಮಾವದನೂಷ್ಮಾವಚ್ಚ। ತತ್ರೋ ಷ್ಮಾವತ್ ಪರಂಬ್ರಹ್ಮ ಯನ್ನ ಜಿಘ್ರಂತಿ' ಇತ್ಯಾದಿಯಾಗಿ ಭಗವಂತನಿಗೆ ಚಕ್ಷುರಾದಿ ಇಂದ್ರಿಯಗಳಿಗೆ ಗೋಚರನಾಗದಿರುವ ಸಾಮರ್ಥ್ಯವಿರುವುದನ್ನೂ, ಲಕ್ಷ್ಮೀದೇವಿಗೆ ಅಂತಹ ಸಾಮರ್ಥ್ಯವಿರುವುದು ಮತ್ತು ಇಲ್ಲದಿರುವುದು - ಇವೆರಡನ್ನೂ ಹೇಳುವ ಶ್ರುತಿಯು ದೇವದೇವಿಯರಾದ ಶ್ರೀಹರಿ-ಲಕ್ಷ್ಮೀದೇವಿ ಇವರಿಗೆ, ಅಸ್ಯೈವ-ಕಿಂಚಿತ್

---

1. 'ದ್ವಿಧಾ ಹೀದಮವದೃಶ್ಯತೇ ಊಷ್ಮಾವದನೂಷ್ಮಾವಚ್ಚ । ತತ್ರೋಷ್ಮಾವತ್ ಪರಂಬ್ರಹ್ಮ ಯನ್ನ ಜಿಘ್ರಂತಿ ನ ಪಶ್ಯಂತಿ ನ ಶೃಣ್ವಂತಿ ನ ವಿಜಾನಂತಿ । ಅಥಾನೂಷ್ಮಾವತ್ ಪ್ರಕೃತಿಶ್ಚ ಪ್ರಾಕೃತಂ ಚ ಯನ್ನ ಜಿಘ್ರಂತಿ ಜಿಘ್ರಂತಿ ಚ ಯನ್ನ ಪಶ್ಯಂತಿ ಪಶ್ಯಂತಿ ಚ ಯನ್ನ ಶೃಣ್ವಂತಿ ಶೃಣ್ವಂತಿ ಚ ಯನ್ನ ಜಾನಂತಿ ಜಾನಂತಿ ಚ' ಎಂದು ಸೌಪರ್ಣಶ್ರುತಿ.

ಚೇತನಸಮೂಹವು ಎರಡು ವಿಧವಾಗಿರುವುದೆಂದು ತಿಳಿದುಬರುವುದು. ಅವೆರಡರಲ್ಲಿ ಪರಬ್ರಹ್ಮನು ಊಷ್ಮಾವತ್ ಅಂದರೆ ಚಕ್ಷುರಾದಿ ಇಂದ್ರಿಯಗಳಿಗೆ ಪೂರ್ಣವಾಗಿ ಗೋಚರನಾಗ ದಿರುವ ಸಾಮರ್ಥ್ಯವುಳ್ಳವನು. ಏಕೆಂದರೆ, ಜನರು ಆ ಪರಬ್ರಹ್ಮನನ್ನು ಸಾಕಲ್ಯೇನ ಆಘ್ರಾ ಣಿಸಲಾರರು, ಕೇಳಲಾರರು, ನೋಡಲಾರರು ಮತ್ತು ಮನಸ್ಸಿನಿಂದ ತಿಳಿಯಲಾರರು. ಆದರೆ, ಪ್ರಕೃತಿ ಎಂದೆನಿಸುವ ಲಕ್ಷ್ಮೀದೇವಿ ಮತ್ತು ಪ್ರಾಕೃತರೆಂದು ಹೇಳಲ್ಪಡುವ ಬ್ರಹ್ಮಾದಿಗಳು -

च वदन्ती श्रुतिर्देवदेव्योरस्यैव किञ्चित्साम्यस्यैवोपपत्तेरर्थे भवति तस्योपपादिका भवति यतोऽस्तश्च किञ्चित्साम्यं तयोरित्यर्थः ।

उक्तमाक्षिप्याह—

॥ ॐ प्रतिषेधादिति चेन्न शारीरात् ॐ ॥ ४.२.१२

अस्येत्यस्ति । 'सर्वे ह्येतेऽणवो जायन्ते म्रियन्ते च' इत्यादिश्रुतौ

---

ಸಾಮ್ಯವಿರುವುದರ, ಉಪಪತ್ತೇರರ್ಥೇ ಭವತಿ – ಉಪಪಾದಕವಾಗುತ್ತವೆ ; ಆದ್ದರಿಂದಲೂ ದೇವ-ದೇವಿಯರಿಗೆ ಕಿಂಚಿತ್ ಸಾಮ್ಯವಿರುವುದೆಂದು ಅರ್ಥ.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

## ಓಂ ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಓಂ ೪.೨.೧೨

**ಸೂತ್ರಾರ್ಥ**

'ಅಸ್ಯ' ಎಂಬ ಪದವು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದು. '[1]ಸರ್ವೇ ಹ್ಯೇತೇಽಣವೋ ಜಾಯಂತೇ ಮ್ರಿಯಂತೇ ಚ' ಎಂಬ ಶ್ರುತಿಯಲ್ಲಿ ಭಗವಂತ

---

ಇವರು ಅನೂಷ್ಮಾವತ್ ಅಂದರೆ ಚಕ್ಷುರಾದಿ ಇಂದ್ರಿಯಗಳಿಗೆ ಗೋಚರವಾಗದಿರುವ ಸಾಮರ್ಥ್ಯ ಮತ್ತು ಅದರ ಅಭಾವ ಇವೆರಡನ್ನೂ ಪಡೆದಿದ್ದಾರೆ. ಏಕೆಂದರೆ, ಜನಗಳು ಪ್ರಕೃತಿ-ಪ್ರಾಕೃತರನ್ನು ಆಘ್ರಾಣಿಸಲಾರರು, ಆಘ್ರಾಣಿಸಬಲ್ಲರು, ನೋಡಲಾರರು - ನೋಡಬಲ್ಲರು, ಕೇಳಲಾರರು - ಕೇಳಬಲ್ಲರು ಮತ್ತು ಸಾಕಲ್ಯೇನ ತಿಳಿಯಬಲ್ಲರು ಮತ್ತು ತಿಳಿಯಲಾರರು - ಎಂದು ಶ್ರುತಿಯ ಭಾವ.

1. 'ಅಸನೋ ವಾ ಏಷ ಪರೋ ನ ಹಿ ಕಶ್ಚಿದೇವಂ ದೃಶ್ಯತೇ ಸರ್ವೇ ಹ್ಯೇತೇ ಅಣವೋ ಜಾಯಂತೇ ಚ ಮ್ರಿಯಂತೇ ಚ ಭಿದ್ರಾ ಹ್ಯೇತೇ ಭವಂತಿ । ಅಥ ಪರೋ ನ ಜಾಯತೇ ನ ಮ್ರಿಯತೇ ಪೂರ್ಣಶ್ಚೈಷ ಭವತಿ' ಎಂದು ಚತುರ್ವೇದಶಿಖಾಶ್ರುತಿ.

ಪರಮಾತ್ಮನು ಯಾರಿಗೂ ಯಾವ ರೀತಿಯಿಂದಲೂ ಸಮನಲ್ಲ. ಆ ಭಗವಂತನಂತೆ ಒಬ್ಬನೂ ಕಾಣಿಸುವುದಿಲ್ಲವಷ್ಟೇ. ಈ ಎಲ್ಲ ಜೀವರೂ ಅಪೂರ್ಣರೂ, ಜನನ-ಮರಣಗಳಿರುವ ಕಾರಣ ದೋಷಿಗಳೂ ಆಗಿದ್ದಾರೆ. ಯಾವ ವಿಧವಾದ ಜನನ-ಮರಣಗಳಿಲ್ಲದ ಆ ಪರಮಾತ್ಮನು ಸರ್ವಗತನೂ ನಿರ್ದೋಷನೂ ಆಗಿದ್ದಾನೆಂದು ಶ್ರುತಿಯ ಭಾವ.

ईशादन्येषु नित्यसर्वगतत्वाद्यभावस्य ईशे तद्भावस्य चोक्त्याऽस्य देशकालव्याप्त्यादिनाऽपि साम्यस्य प्रतिषेधात् न देवदेव्यो-र्देशादिव्याप्त्यादिनाऽपि साम्यमिति चेन्न । शारीरात् जीवात् साम्यस्यैवेशस्य श्रुतौ प्रतिषेधात् । प्रकृतेस्तत्प्रतिषेधाभावादित्यर्थः । शारीरादित्युक्तिस्तस्य शारीरत्वेन नित्यसर्वगतत्वायोगादिति सूच-यितुम् ।

कुतः सामान्यश्रुतेः शारीरसाम्याभावरूपविशेषपरत्वमित्यत आह—

॥ ॐ स्पष्टो ह्येकेषाम् ॐ ॥ ४.२.१३

---

ನಿಂದ ಇತರರಲ್ಲಿ ನಿತ್ಯತ್ವ, ಸರ್ವಗತತ್ವಗಳು ಇಲ್ಲದಿರುವುದನ್ನೂ, ಈಶ್ವರನಲ್ಲಿ ಅವು ಇರುವುದನ್ನೂ ಹೇಳಿ, ಅಸ್ಯ - ದೇಶಕಾಲಗಳಲ್ಲಿ ವ್ಯಾಪ್ತಿಯನ್ನು ಪಡೆದಿರುವ ಮೂಲಕ ಇರುವ ಸಾಮ್ಯವನ್ನೂ, ಪ್ರತಿಷೇಧಾತ್ ಇತಿ ಚೇನ್ನ - ನಿಷೇಧಿಸಿರುವುದ ರಿಂದ ದೇವ-ದೇವಿಯರಿಗೆ ದೇಶಾದಿವ್ಯಾಪ್ತಿ ಮೂಲಕ ಸಾಮ್ಯವೂ ಇಲ್ಲವೆಂದರೆ ಅದು ಸರಿಯಲ್ಲ. ಶಾರೀರಾತ್ – ಆ ಶ್ರುತಿಯಲ್ಲಿ ಈಶನಿಗೆ ಜೀವರಿಂದ ಸಾಮ್ಯವನ್ನು ಮಾತ್ರ ನಿಷೇಧಿಸಿರುವುದರಿಂದ, ಲಕ್ಷ್ಮೀದೇವಿಯಿಂದ ಅಂತಹ ಸಾಮ್ಯವನ್ನು ನಿಷೇಧಿ ಸಿಲ್ಲವಾದ್ದರಿಂದ ಎಂದು ಅರ್ಥ.

ಜೀವನು ಶರೀರಯುಕ್ತನಾದ ಕಾರಣ ನಿತ್ಯತ್ವ, ಸರ್ವಗತತ್ವಗಳು ಅವನಿಗಿಲ್ಲ ವೆಂದು ಸೂಚಿಸಲು 'ಶಾರೀರಾತ್' ಎಂದು ಹೇಳಲಾಗಿದೆ.

ಪರಮಾತ್ಮನಿಗೆ ಯಾರ ಸಾಮ್ಯವೂ ಇಲ್ಲವೆಂದು ಸಾಮಾನ್ಯವಾಗಿ ಹೇಳುವಂತೆ ತೋರುವ ಶ್ರುತಿಗೆ ಶರೀರಿಯಾದ ಜೀವನಿಂದ ಸಾಮ್ಯವಿಲ್ಲವೆಂಬ ವಿಶೇಷಾರ್ಥದಲ್ಲಿ ತಾತ್ಪರ್ಯವಿದೆಯೆಂದು ಹೇಳಲು ಆಧಾರವೇನು ? ಎಂಬ ಶಂಕೆಗೆ ಸಮಾಧಾನ ಹೇಳುವ ಸೂತ್ರ—

ಓಂ ಸ್ಪಷ್ಟೋ ಹ್ಯೇಕೇಷಾಂ ಓಂ ೪.೨.೧೩

एकेषां माध्यन्दिनानां 'अथासमा ब्रह्मेन्द्रो रुद्रः' इति श्रुतौ जीवानामेवासमत्वोक्तिपूर्वकं प्रकृतेः समासमत्ववादः स्पष्टोऽस्ति यतोऽत इत्यर्थः ।

---

**ಸೂತ್ರಾರ್ಥ**

ಏಕೇಷಾಂ - ಮಾಧ್ಯಂದಿನಶಾಖಿಗಳಿಗೆ, 'ಅಥಾಸಮಾಃ ಬ್ರಹ್ಮೇಂದ್ರೋ ರುದ್ರಃ'[1] ಎಂಬ ಶ್ರುತಿಯಲ್ಲಿ ಜೀವರಿಗೆ ಮಾತ್ರ ಭಗವಂತನು ಅಸಮನೆಂದು ಹೇಳಿ ಆ ಲಕ್ಷ್ಮೀದೇವಿಗೆ ಅವನು ಸಮನೂ ಅಸಮನೂ ಆಗಿರುವನೆಂದು ಹೇಳುವುದು, ಸ್ಪಷ್ಟೋ ಹಿ - ಸ್ಪಷ್ಟವಾಗಿದೆಯಾದ್ದರಿಂದ 'ಸರ್ವೇ ಹ್ಯೇತೇ' ಎಂಬ ಸಾಮಾನ್ಯಶ್ರುತಿಗೆ ಜೀವರಿಂದ ಭಗವಂತನು ಅಸಮನೆಂದು ವಿಶೇಷಾರ್ಥದಲ್ಲಿ ತಾತ್ಪರ್ಯವನ್ನು ಹೇಳಬೇಕಾಗುವುದು ಎಂದು ಅರ್ಥ.

---

1. 'ಅಥಾತಸ್ಸಮಾಶ್ಚಾಸಮಾಶ್ಚಾಭಿಧೀಯಂತೇ ಸಮಾಸಮಾಶ್ಚಾಥ ಸಮಾನಿ ಬ್ರಹ್ಮಣೋ ರೂಪಾಣಿ ಯೈರುತ್ಪತ್ತಿಃ ಸ್ಥಿತಿರ್ಲಯೋ ನಿಯತಿರಾಯತಿಶ್ಚೈಕಂ ಹ್ಯೇವೈತದ್ಭವತ್ಯಥಾಸಮಾಃ ಬ್ರಹ್ಮೇಂದ್ರೋ ರುದ್ರಃ ಪ್ರಜಾಪತಿರ್ಬೃಹಸ್ಪತಿರ್ಯೇ ಕೇ ಚ ದೇವಾ ಗಂಧರ್ವಾ ಮನುಷ್ಯಾಃ ಪಿತರೋಽಸುರಾ ಯತ್ಕಿಂಚೇದಂ ಚರಮಚರಂ ಚಾಥ ಸಮಾಽಸಮಾ ಪ್ರಕೃತಿರ್ವಾ ಸಮಾಽಸಮಾ ಸೈಷಾ ಹಿ ನಿತ್ಯಾ ಅಜರಾ ತದ್ವಶಾ ಚ' ಎಂದು ಮಾಧ್ಯಂದಿನ ಶ್ರುತಿ.

ಅನಂತರ ಶ್ರೀಹರಿಯ ಪ್ರಸಾದದಿಂದ ಎಲ್ಲ ಪ್ರಕಾರದಿಂದಲೂ ಸಮರಾದ, ಅಸಮರಾದ ಮತ್ತು ಸಮಾಸಮರಾದ ಚೇತನರನ್ನು ಹೇಳಲಾಗುವುದು. ಈ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ, ನಿಯಮನ ಮತ್ತು ಪ್ರವೃತ್ತಿಗಳು ಯಾರಿಂದಾಗುವುದೋ ಅಂತಹ ಭಗವಂತನ ಮತ್ಸ್ಯಾದಿ ಸಮಸ್ತರೂಪಗಳೂ ಸರ್ವಪ್ರಕಾರಗಳಿಂದಲೂ ಸಮವಾಗಿರತಕ್ಕವು. ಈ ಎಲ್ಲ ರೂಪಗಳೂ ಅಭಿನ್ನವಷ್ಟೆ. ಅನಂತರ ಅಸಮ ಚೇತನರನ್ನು ಹೇಳಲಾಗುವುದು. ಹಿರಣ್ಯಗರ್ಭ, ಇಂದ್ರ, ರುದ್ರ, ದಕ್ಷಪ್ರಜಾಪತಿ, ಬೃಹಸ್ಪತಿ ಮತ್ತುಳಿದ ದೇವತೆಗಳು, ಗಂಧರ್ವರು, ಮನುಷ್ಯರು, ಪಿತೃಗಳು, ಅಸುರರು ಇವರಲ್ಲದೆ ಇನ್ನೇನು ಚೇತನಾಚೇತನ ವಸ್ತುಗಳಿವೆಯೋ ಅವೆಲ್ಲವೂ ಪರಮಾತ್ಮನಿಗೆ ಅಸಮವಾಗಿರತಕ್ಕವು. ಅನಂತರ ಸಮಾಽಸಮಗಳನ್ನು ಹೇಳಲಾಗುವುದು. ನಿತ್ಯಳೂ, ಜರಾರಹಿತಳೂ, ಭಗವದಧೀನಳೂ ಆಗಿರುವ ಲಕ್ಷ್ಮೀದೇವಿಯು ಭಗವಂತನಿಗೆ ಸಮಳೂ ಅಸಮಳೂ ಆಗಿದ್ದಾಳೆ--ಎಂದು ಶ್ರುತಿಯ ಭಾವ.

न विशेषश्रुत्यैव सामान्यश्रुतेर्बाधः, विशेषस्मृत्या चेत्याह—

॥ ॐ स्मर्यते च ॐ ॥ ४.२.१४

'ब्रह्माद्यास्त्वसमाः प्रोक्ताः प्रकृतिश्च समासमा' इति स्मर्यते असमत्वं समासमत्वं चातश्चैवमित्यर्थः ॥ ६ ॥

परादिकरणम्—७

॥ ॐ तानि परे तथा ह्याह ॐ ॥ ४.२.१५

अत्र विरिञ्चेतरदेवानाम् ईशे लय उच्यते। 'तानि भूतेषु

---

ವಿಶೇಷಶ್ರುತಿಯಿಂದ ಮಾತ್ರ ಸಾಮಾನ್ಯಶ್ರುತಿಗೆ ಬಾಧವಲ್ಲ, ವಿಶೇಷಸ್ಮೃತಿಯಿಂದಲೂ ಬಾಧವಿದೆ ಎಂದು ಹೇಳುವ ಸೂತ್ರ—

ಓಂ ಸ್ಮರ್ಯತೇ ಚ ಓಂ ೪.೨.೧೪

**ಸೂತ್ರಾರ್ಥ**

'ಬ್ರಹ್ಮಾದ್ಯಾಸ್ತ್ವಸಮಾಃ ಪ್ರೋಕ್ತಾಃ ಪ್ರಕೃತಿಶ್ಚ ಸಮಾಸಮಾ[1]' ಎಂಬುದಾಗಿ ಭಗವಂತನಿಗೆ ಜೀವರಿಂದ ಅಸಮತ್ವವನ್ನೂ ಲಕ್ಷ್ಮೀದೇವಿಯಿಂದ ಸಮಾಸಮತ್ವವನ್ನೂ ಸ್ಮೃತಿಯಲ್ಲಿ ಹೇಳಲಾಗಿದೆ. ಆದ್ದರಿಂದಲೂ ಸಾಮಾನ್ಯಶ್ರುತಿಗೆ ವಿಶೇಷಾರ್ಥದಲ್ಲಿ ತಾತ್ಪರ್ಯವನ್ನು ಹೇಳಬೇಕಾಗುವುದು ಎಂದು ಭಾವ.

ಪರಾಧಿಕರಣ—೭

ಓಂ ತಾನಿ ಪರೇ ತಥಾ ಹ್ಯಾಹ ಓಂ ೪.೨.೧೫

**ಸೂತ್ರಾರ್ಥ**

ಈ ಅಧಿಕರಣದಲ್ಲಿ ಚತುರ್ಮುಖನಿಂದ ಇತರರಾದ ದೇವತೆಗಳಿಗೆ ಈಶನಲ್ಲಿ ಲಯವನ್ನು ಹೇಳಲಾಗುವುದು. ತಾನಿ—'ಭೂತೇಷು ಲೀಯಂತೇ' ಎಂಬಲ್ಲಿ ಲಯ

---

1. "ಮತ್ಸ್ಯಕೂರ್ಮವರಾಹಾದ್ಯಾಃ ಸಮಾ ವಿಷ್ಣೋರಭೇದತಃ ।
ಬ್ರಹ್ಮಾದ್ಯಾಸ್ತ್ವಸಮಾಃ ಪ್ರೋಕ್ತಾಃ ಪ್ರಕೃತಿಶ್ಚ ಸಮಾಽಸಮಾ ॥"
ಎಂದು ವಾರಾಹವಚನ.

लीयन्ते' इत्युक्तसर्वदेवतानि श्रुत्यन्तरोक्तद्वारान्तरप्रवेशपूर्वकविरिञ्च-द्वारा परे परमात्मनि लीयन्ते, न तु विरिञ्चादिस्वस्वबिम्ब एव। येन तेषां मुक्तिर्न स्यात्। कुतः? हि यस्मात् 'सर्वे देवाः प्राणमाविश्य देवे मुक्त्वा लयं परमे यान्ति' इति श्रुतिस्तथाऽह्यात इत्यर्थः ॥ ७ ॥

### अविभागाधिकरणम्—८

## ॥ ॐ अविभागो वचनात् ॐ ॥ ४.२.१६

---

ವನ್ನು ಹೊಂದುವರೆಂದು ಹೇಳಲಾಗಿರುವ ಸಮಸ್ತದೇವತೆಗಳೂ ಶ್ರುತ್ಯಂತರದಲ್ಲಿ ಹೇಳಿರುವಂತೆ ಮತ್ತೊಂದು ದ್ವಾರದಲ್ಲಿ ಪ್ರವೇಶಿಸಿ ಅನಂತರ ವಿರಿಂಚನ ಮೂಲಕ, ಪರೇ - ಪರಮಾತ್ಮನಲ್ಲಿ ಲಯುವನ್ನು ಹೊಂದುವರು ಹೊರತು ವಿರಿಂಚ ಮೊದಲಾದ ತಮ್ಮ ತಮ್ಮ ಬಿಂಬಗಳಲ್ಲಿ ಮಾತ್ರ ಲಯುವನ್ನು ಹೊಂದುವುದಿಲ್ಲ. ಹಾಗಿದ್ದಲ್ಲಿ ಅವರಿಗೆ ಮುಕ್ತಿ ಇಲ್ಲವೆಂದಾದೀತು. ದ್ವಾರಾಂತರವನ್ನು ಪ್ರವೇಶಿಸಿ ಅನಂತರ ವಿರಿಂಚನ ಮೂಲಕ ಪರಮಾತ್ಮನಲ್ಲಿ ಆ ದೇವತೆಗಳು ಲಯುವನ್ನು ಹೊಂದುವರೆಂಬ ವಿಷಯುದಲ್ಲಿ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ – 'ತಥಾ ಹ್ಯಾಹ'. ಹಿ - ಯಾವ ಕಾರಣ ದಿಂದ 'ಸರ್ವೇ ದೇವಾಃ ಪ್ರಾಣಮಾವಿಶ್ಯ ದೇವೇ ಮುಕ್ತ್ವಾ ಲಯಂ ಪರಮೇ ಯಾಂತಿ' ಎಂಬುದಾಗಿ ಶ್ರುತಿಯುು ಹಾಗೆ ಹೇಳುವುದೋ ಆದ್ದರಿಂದ ಎಂದು ಅರ್ಥ.

### ಅವಿಭಾಗಾಧಿಕರಣ--೮

## ಓಂ ಅವಿಭಾಗೋ ವಚನಾತ್ ಓಂ ೪.೨.೧೬

---

1. ವಿರಿಂಚಭಿನ್ನರಾದ ಎಲ್ಲ ದೇವತೆಗಳು ಕರ್ಮಕ್ಷಯುವನ್ನು ಪಡೆದನಂತರ ಪ್ರಾಣನನ್ನು ಪ್ರವೇಶಿಸಿ ಅನಂತರ ಅಚಿಂತ್ಯನಾದ ಪರಮಪುರುಷನನ್ನು ಪ್ರವೇಶಿಸುವರು ಎಂದು ಈ ಶೌಷಾಕವ ಶ್ರುತಿಯ ಭಾವ.

अत्र मुक्तानामीशाधीनत्वमुच्यते । प्रस्तुतदेवादिमुक्तानां सत्यकामादेरीशेच्छातः अविभागस्तादात्म्यम् । तेन विषयतादात्म्यं लक्ष्यते । इच्छयैकविषयत्वं तदिच्छानुसारित्वमिति यावत् । न स्वातन्त्र्यम् । कुतः ? वचनात् कामेन मे काम आगाद्धृदयाद्धृदयं मृत्योरिति वचनादित्यर्थः ॥ ८ ॥

तदोकोऽधिकरणम्—९

॥ ॐ तदोकोऽग्रज्वलनं तत्प्रकाशितद्वारो विद्यासामर्थ्यात् तच्छेषगत्यनुस्मृतियोगाच्च हार्दानुगृहीतः शताधिकया ॐ ॥

४.२.१७

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಕ್ತರು ಭಗವದಧೀನರೆಂದು ಹೇಳಲಾಗುವುದು. ಪ್ರಸ್ತುತರಾದ ದೇವತೆಗಳೇ ಮೊದಲಾದ ಮುಕ್ತರ ಸತ್ಯಕಾಮತ್ವ, ಮೊದಲಾದವುಗಳಿಗೆ ಭಗವದಿಚ್ಛೆಯಿಂದ, ಅವಿಭಾಗಃ - ತಾದಾತ್ಮ್ಯವಿದೆ. ಮುಕ್ತರ ಇಚ್ಛೆಗೆ ಭಗವದಿಚ್ಛೆಯ ತಾದಾತ್ಮ್ಯವೆಂದರೆ ಅವುಗಳ ವಿಷಯ ಒಂದೇ ಆಗಿರುವುದೆಂದು ವಿವಕ್ಷಿತವಾಗಿದೆ. ಭಗವದಿಚ್ಛೆಯ ವಿಷಯವನ್ನೇ ಪಡೆದಿರುವುದೆಂದರೆ ಭಗವದಿಚ್ಛಾನುಸಾರಿಯಾಗಿರುವುದು ಎಂದು ಭಾವ. ಹೀಗೆ ಮುಕ್ತರ ಇಚ್ಛೆಯು ಭಗವದಿಚ್ಛಾನುಸಾರಿಯಾಗಿರುವುದೇ ಹೊರತು ಅದಕ್ಕೆ ಸ್ವಾತಂತ್ರ್ಯವಿಲ್ಲ. ಏಕೆಂದರೆ, ವಚನಾತ್ – 'ಕಾಮೇನ ಮೇ ಕಾಮ ಆಗಾತ್ ಹೃದಯಾದ್ಧೃದಯಂ ಮೃತ್ಯೋಃ' ಎಂಬ ವಚನದ ಆಧಾರದಿಂದ ಎಂದು ಅರ್ಥ.

ತದೋಕೋಽಧಿಕರಣ—೯

ಓಂ ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ ೪.೨.೧೭

एवं देवानां मोक्षमुक्त्वाऽत्र मनुष्याणां मुक्त्यर्थं देहोत्क्रमणस्याज्ञमृतितो वैलक्षण्यं साध्यते । तदिति पर इति प्रकृतब्रह्मोच्यते ।

उत्क्रान्तिकाले तदोकसो भगवदोकसो हृदयस्याग्रे ज्वलनं प्रभा प्रादुर्भवति । तावताऽज्ञात् को विशेषः ? अत उक्तं तदिति । तेन प्रकाशेन प्रकाशितनाडीद्वारः सन् देहान्निर्यातीति शेषः । अज्ञस्तु नैवमिति ततोऽस्ति ज्ञानिनो विशेष इति भावः । ज्ञस्यापि प्रारब्धसत्त्वात् कथमयं विशेषोऽस्त उक्तं विद्येति । ईशापरोक्षशक्त्येत्यर्थः ।

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಹೀಗೆ ದೇವತೆಗಳ ಮೋಕ್ಷವನ್ನು ಹೇಳಿದನಂತರ ಈ ಅಧಿಕರಣದಲ್ಲಿ, ಮನುಷ್ಯರಿಗೆ ಮುಕ್ತಿಗೋಸ್ಕರ ಆಗುವ ದೇಹೋತ್ಕ್ರಮಣವು ಅಜ್ಞಾನಿಗಳ ಮರಣಕ್ಕಿಂತ ವಿಲಕ್ಷಣವಾದುದೆಂದು ಸಮರ್ಥಿಸಲಾಗುವುದು. ಸೂತ್ರದಲ್ಲಿರುವ 'ತತ್' ಶಬ್ದವು 'ತಾನಿ ಪರೇ ತಥಾ ಹ್ಯಾಹ' (ಬ್ರ.ಸೂ. ೪.೨.೧೫) ಎಂಬ ಸೂತ್ರದಲ್ಲಿ 'ಪರ' ಶಬ್ದದಿಂದ ಪ್ರಸ್ತುತನಾಗಿರುವ ಬ್ರಹ್ಮನನ್ನು ಹೇಳುವುದು.

ದೇಹೋತ್ಕ್ರಮಣಕಾಲದಲ್ಲಿ, ತದೋಕೋಽಗ್ರೇ – ತದೋಕಸಃ – ಭಗವಂತನ ನಿವಾಸವಾದ ಹೃದಯದ, ಅಗ್ರೇ - ಅಗ್ರಭಾಗದಲ್ಲಿ, ಜ್ವಲನಂ - ಪ್ರಭೆಯು ಪ್ರಾದುರ್ಭವಿಸುವುದು. ಇಷ್ಟು ಮಾತ್ರದಿಂದ ಜ್ಞಾನಿಗೆ ಅಜ್ಞಾನಿಗಿಂತ ಇರುವ ವಿಶೇಷವೇನು ಎಂಬ ಶಂಕೆಗೆ ಉತ್ತರವಾಗಿ 'ತತ್' ಎಂದು ಹೇಳಲಾಗಿದೆ. ತತ್ಪ್ರಕಾಶಿತದ್ವಾರಃ-ತತ್ಪ್ರಕಾಶಿತ - ಆ ಪ್ರಭೆಯಿಂದ ಪ್ರಕಾಶಗೊಂಡ ನಾಡೀದ್ವಾರವನ್ನು ಪಡೆದವನಾಗಿ ಜ್ಞಾನಿಯು ದೇಹದಿಂದ ಹೊರಡುವನು. ಇಲ್ಲಿ 'ದೇಹದಿಂದ ಹೊರಡುವನು' ಎಂಬ ಪದಗಳು ಶೇಷಪೂರಣವಾಗಿವೆ. ಅಜ್ಞಾನಿಯು ಈ ರೀತಿಯಾಗಿ ದೇಹೋತ್ಕ್ರಮಣ ಮಾಡುವುದಿಲ್ಲವಾದ ಕಾರಣ ಜ್ಞಾನಿಗೆ ವಿಶೇಷವಿದೆಯೆಂದು ಭಾವ. ಜ್ಞಾನಿಗೂ ಪ್ರಾರಬ್ಧಕರ್ಮ

ज्ञानस्य स्वोदयमारभ्य फलदातृत्वात् । 'स्वोदयात् फलदं ज्ञानं' इत्यादेरिति भावः ।

तर्हि ज्ञस्याऽदिमृतिरेवैवं किं नेत्यत उक्तं — तच्छेषगत्यनुस्मृतियोगाच्च । तस्या विद्यायाः शेषोऽङ्गं या हृदयमारभ्य ब्रह्मप्राप्तिपर्यन्ताया गतेरनुस्मृतिः तत्साहित्याच्च, न विद्यासामर्थ्यमात्रादित्यर्थः। सा च स्मृतिः स्वकर्मविराम एव न मृत्यन्तरे । 'ज्ञानिनां कर्मयुक्तानाम्' इत्यादेरिति भावः । किमुक्तरूपेण विद्यासामर्थ्येनैव निर्याति-

---

ವಿರುವುದರಿಂದ ಇಂತಹ ವಿಶೇಷವಾಗುವುದು ಹೇಗೆಂಬ ಆಶಂಕೆಗೆ ಉತ್ತರವಾಗಿ – 'ವಿದ್ಯಾ' ಎಂದು ಹೇಳಲಾಗಿದೆ. ಭಗವದಪರೋಕ್ಷಜ್ಞಾನದ ಸಾಮರ್ಥ್ಯದಿಂದ ಎಂದು ಅರ್ಥ. 'ಸ್ವೋದಯಾತ್ ಫಲದಂ ಜ್ಞಾನಂ' ಇತ್ಯಾದಿ ಪ್ರಮಾಣ ವಚನದಂತೆ ಜ್ಞಾನವು ತಾನು ಉದಿಸಿದಾರಭ್ಯ ಫಲವನ್ನು ನೀಡುವುದರಿಂದ ಎಂದು ಭಾವ.

ಹಾಗಾದರೆ ಜ್ಞಾನಿಗೆ ಜ್ಞಾನೋದಯದ ಅನಂತರ ಆಗುವ ಪ್ರಥಮ ಮರಣವೇ ಹೀಗೇಕಲ್ಲ ? ಎಂಬ ಶಂಕೆಗೆ ಉತ್ತರ— 'ತಚ್ಛೇಷಗತ್ಯನುಸ್ಮೃತಿಯೋಗಾಚ್ಚ'. ತಸ್ಯಾಃ – ಆ ವಿದ್ಯೆಗೆ ಅಂದರೆ ಭಗವದಪರೋಕ್ಷಜ್ಞಾನಕ್ಕೆ, ಶೇಷ – ಅಂಗವಾದ, ಗತೇಃ - ತನ್ನ ಹೃದಯವನ್ನು ಆರಂಭಿಸಿ ಬ್ರಹ್ಮಪ್ರಾಪ್ತಿಯವರೆಗೆ ಆಗುವ ಗಮನದ, ಅನುಸ್ಮೃತಿಯೋಗಾಚ್ಚ-ಸ್ಮರಣೆಯ ಸಂಬಂಧದಿಂದಲೂ, ಕೇವಲ ವಿದ್ಯೆಯ ಸಾಮರ್ಥ್ಯದಿಂದಲ್ಲ ಎಂದು ಅರ್ಥ. 'ಜ್ಞಾನಿನಾಂ ಕರ್ಮಯುಕ್ತಾನಾಂ' ಇತ್ಯಾದಿ ಪ್ರಮಾಣಾನುಸಾರ ಅಂತಹ ಅನುಸ್ಮೃತಿಯು ತನ್ನ ಪ್ರಾರಬ್ಧಕರ್ಮದ ಮುಕ್ತಾಯವಾದ ಮೇಲೆಯೇ ಉಂಟಾಗುವುದು ಹೊರತು ಮರಣಾನಂತರವೇ ಆಗುವುದಿಲ್ಲವೆಂದು ಭಾವ. ಈಗ ಹೇಳಲಾದ, ಗತ್ಯನುಸ್ಮರಣಸಹಿತವಾದ ವಿದ್ಯಾಸಾಮರ್ಥ್ಯದಿಂದಲೇ ಇಂತಹ ದೇಹದಿಂದ ನಿರ್ಗಮನವು ಉಂಟಾಗುವುದೇ ಎಂಬ ಪ್ರಶ್ನೆಗೆ ಇಲ್ಲವೆಂದು 'ಹಾರ್ದ' ಇತ್ಯಾದಿಯಿಂದ ಉತ್ತರವನ್ನು ಕೊಡಲಾಗಿದೆ ಹೃದಯಕ್ಕೆ ಸಂಬಂಧಿಸಿದ ಅಂದರೆ ಹೃದಯದಲ್ಲಿರುವ, ಅಪರೋಕ್ಷಜ್ಞಾನದಿಂದಾಗಿ ಪ್ರಸನ್ನನಾಗಿರುವ ಭಗವಂತ

नेत्याह — हार्देति । हृत्सम्बन्धिना हृदिस्थेन विद्याप्रसन्नेन ईशेनानुगृहीतः सन् निर्यातीत्यर्थः । कया नाड्येत्यत उक्तं शतेति । शताधिकया सुषुम्नाख्ययेत्यर्थः ।

गत्यनुस्मृतियोगादित्यनेनैव पूर्तौ तच्छेषेत्युक्तिः विद्याया गतिस्मृतिसापेक्षत्वे उत्क्रमणहेतुत्वं नेति न शङ्‌क्यम् । तस्यास्तच्छेषत्वात् । न हीतिकर्तव्यतामपेक्षमाणो हेतुरहेतुरिति द्योतनायेति ।

---

ನಿಂದ ಅನುಗೃಹೀತನಾಗಿ ದೇಹದಿಂದ ನಿರ್ಗಮಿಸುವನೆಂದು ಅರ್ಥ. ಯಾವ ನಾಡಿಯಿಂದ ನಿರ್ಗಮಿಸುವನು ? ಎಂಬ ಪ್ರಶ್ನೆಗೆ ಉತ್ತರ— 'ಶತ' ಎಂದು. ಹೃದಯದಲ್ಲಿರುವ ನೂರು ನಾಡಿಗಳಿಂದ ಅಧಿಕವಾದ 'ಸುಷುಮ್ನಾ' ಎಂಬ ಹೆಸರಿನ ನಾಡಿಯ ಮೂಲಕ ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

'ಗತ್ಯನುಸ್ಮೃತಿಯೋಗಾತ್' ಎಂದಿಷ್ಟೇ ಸಾಕಾಗಿದ್ದರೂ, ದೇಹೋತ್ಕ್ರಮಣವನ್ನುಂಟುಮಾಡಲು ವಿದ್ಯೆಯು ಗತ್ಯನುಸ್ಮೃತಿಯನ್ನು ಅಪೇಕ್ಷಿಸುವುದಾದರೆ ಅದು ಉತ್ಕ್ರಮಣಕ್ಕೆ ಕಾರಣವಾಗಲಾರದು ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ಗತಿಯ ಅನುಸ್ಮರಣವು ವಿದ್ಯೆಗೆ ಅಂಗವಾಗಿದೆ. [1] ಇತಿಕರ್ತವ್ಯತೆಯನ್ನು ಅಪೇಕ್ಷಿಸುವ ಕಾರಣವು

---

1. ಇತಿಕರ್ತವ್ಯತೆ ಎಂದರೆ ಮುಖ್ಯಕಾರಣ ಮತ್ತು ಕಾರ್ಯಗಳ ನಡುವಣ ಸಂಭವಿಸುವ, ಕಾರ್ಯದ ಉತ್ಪತ್ತಿಗೆ ಅವಶ್ಯಕವಾದ 'ಅವಾಂತರ ವ್ಯಾಪಾರ' ಎಂದು ಕರೆಯಲ್ಪಡುವ ಕ್ರಿಯೆ. ಅದರ ಮೂಲಕವೇ ಮುಖ್ಯಕಾರಣವು ಕಾರ್ಯವನ್ನುಂಟುಮಾಡುವುದಾದರೂ ಮುಖ್ಯಕಾರಣದ ಕಾರಣತ್ವಕ್ಕೆ ಚ್ಯುತಿಯಿಲ್ಲವೆಂದು ಭಾವ. ಪ್ರಕೃತ, ವಿದ್ಯೆಯು ಉತ್ಕ್ರಾಂತಿ ರೂಪವಾದ ಮೋಕ್ಷಕ್ಕೆ ಮುಖ್ಯಕಾರಣವಾಗಿದೆ. ಗತಿಯ ಅನುಸ್ಮರಣದ ಮೂಲಕ ವಿದ್ಯೆಯು ಉತ್ಕ್ರಾಂತಿಗೆ ಕಾರಣವಾಗಿರುವುದರಿಂದ ಗತ್ಯನುಸ್ಮರಣವು ಇತಿಕರ್ತವ್ಯತೆಯಾಗಿದೆ. ಇತಿಕರ್ತವ್ಯತೆಯ ಸಹಕಾರದಿಂದಲೇ ಮುಖ್ಯಕಾರಣವು ಕಾರ್ಯಜನಕವಾಗಿರುವುದರಿಂದ ಗತ್ಯನುಸ್ಮರಣವನ್ನು ಅಪೇಕ್ಷಿಸುವ ವಿದ್ಯೆಯು ಉತ್ಕ್ರಾಂತಿಗೆ ಕಾರಣವಲ್ಲವೆಂದಾಗುವುದಿಲ್ಲವೆಂದು ಭಾವ.

**तत्त्वप्रदीपे तु तदेति विच्छेदेनोत्क्रान्तिकाल इत्येकोऽर्थ उक्तः। तत्पक्षे ओमाङोश्चेति चकारादन्यत्रापीति सुधोक्तेस्तदोक इति साधु। तदिति च विच्छेदेन तस्य विदुषो जीवस्य हृदयाग्रज्वलनं भवतीत्यन्योऽर्थोऽभिमतः।**

---

ಕಾರಣವಲ್ಲವೆಂದಾಗುವುದಿಲ್ಲವಷ್ಟೇ ಎಂದು ಸೂಚಿಸಲು 'ತಚ್ಛೇಷ' ಎಂದು ಹೇಳಲಾಗಿದೆ.

**ತತ್ತ್ವಪ್ರದೀಪರೀತ್ಯಾ 'ತದೋಕಃ' ಎಂಬ ಪದಕ್ಕೆ ಎರಡು ವಿಧವಾದ ವ್ಯಾಖ್ಯಾನ**

ತತ್ತ್ವಪ್ರದೀಪದಲ್ಲಾದರೋ, 'ತದೋಕಃ' ಎಂಬಲ್ಲಿ 'ತದಾ' ಎಂದು ಪದವನ್ನು ವಿಭಜಿಸಿ 'ಉತ್ಕ್ರಮಣಕಾಲದಲ್ಲಿ' ಎಂಬ ಒಂದು ಅರ್ಥವನ್ನು ಹೇಳಲಾಗಿದೆ. ಆ ಪಕ್ಷದಲ್ಲಿ "'ಓಮಾಙೋಶ್ಚ' ಇತಿ ಚಕಾರಾದನ್ಯತ್ರಾಪಿ"[1] ಎಂಬುದಾಗಿ ಸುಧಾದಲ್ಲಿ ಹೇಳಿರುವುದರಿಂದ 'ತದೋಕಃ' ಎಂಬ ಪದವು ನಿರ್ದುಷ್ಟವಾಗಿದೆ. 'ತತ್' ಎಂದು ಪದವಿಭಾಗವನ್ನು ಮಾಡಿ 'ತಸ್ಯ – ಆ ಜ್ಞಾನಿಯಾದ ಜೀವನ, ಹೃದಯುದ ಅಗ್ರಭಾಗದಲ್ಲಿ ಜ್ವಲನವುಂಟಾಗುವುದು ಎಂಬ ಇನ್ನೊಂದು ಅರ್ಥವೂ ಇದೆಯೆಂದು ಸಮ್ಮತಿಸಲಾಗಿದೆ.

---

1. 'ತದಾ ಓಕಃ' ಎಂಬ ಪದಗಳಿದ್ದಲ್ಲಿ, ಅವರ್ಣದ ಮುಂದೆ ಏ, ಓ, ಐ, ಔ ವರ್ಣಗಳಿದ್ದಾಗ ವೃದ್ಧಿ ಬರುವುದೆಂದು ಹೇಳುವ 'ವೃದ್ಧಿರೇಚಿ' (ಪಾ.ಸೂ. ೬.೧.೮೮) ಎಂಬ ಸೂತ್ರದ ಪ್ರಕಾರ ವೃದ್ಧಿ ಬಂದು 'ತದೌಕಃ' ಎಂದಾಗಬೇಕಾಗಿತ್ತು. ಆದರೆ, ಮೇಲೆ ಉಲ್ಲೇಖಿಸಲಾದ 'ಓಮಾಙೋಶ್ಚ' (ಪಾ.ಸೂ. ೬.೧.೯೫) ಎಂಬ ಸೂತ್ರದಂತೆ ಪರರೂಪವುಂಟಾಗಿ ತದಾ + ಓಕಃ = 'ತದೋಕಃ' ಎಂದೇ ಆಗುವುದು. ಯದ್ಯಪಿ, 'ಓಮಾಙೋಶ್ಚ ಎಂಬ ಸೂತ್ರವು 'ಓಂ ಅಥವಾ ಆಙ್' ಪರವಾಗಿದ್ದಾಗ ಮಾತ್ರ ಪರರೂಪವನ್ನು ವಿಧಿಸುವುದರಿಂದ ಪ್ರಕೃತ 'ತದಾ' ಶಬ್ದದ ಮುಂದೆ ಓಂಕಾರವಾಗಲಿ, 'ಆಙ್' ಆಗಲಿ ಇಲ್ಲದಿರುವುದರಿಂದ ಈ ಸೂತ್ರದ ಪ್ರಕಾರ 'ತದೋಕಸಃ' ಎಂದಾಗುವುದು ಹೇಗೆ? ಎಂಬ ಪ್ರಶ್ನೆ ತಲೆದೋರುವುದು. ಆದರೆ ಮೇಲೆ ಉದಾಹರಿಸಲಾದ ಸುಧಾವಾಕ್ಯದಲ್ಲಿ – ಓಮಾಙೋಶ್ಚ ಎಂಬ ಸೂತ್ರದಲ್ಲಿ 'ಚ' ಶಬ್ದವು ಅನುಕ್ತ ಸಮುಚ್ಚಯವನ್ನು ಹೇಳುವುದಾಗಿದ್ದು 'ಓಂ' ಆಗಲಿ, 'ಆಙ್' ಆಗಲಿ ಇಲ್ಲದಿದ್ದರೂ ಬೇರೆ ನಿದರ್ಶನಗಳಲ್ಲೂ ಪರರೂಪವುಂಟಾಗುವುದೆಂದು ಹೇಳಿದ್ದರಿಂದ 'ತದೋಕಃ' ಎಂಬ ರೂಪವಾಗುವುದೆಂದು ಭಾವ.

द्वार इत्युक्त्या नाड्यन्तः अज्ञवत्तमसैव गमनं स्यात् । अन्यथा तत्पदवैय्यर्थ्यादित्यत आह—

॥ ॐ रश्म्यनुसारी ॐ ॥ ४.२.१८

'सहस्रं वा आदित्यस्य रश्मय आसु नाडीष्वातताः' इति श्रुत्या नाड्यन्तराततसौररश्म्यनुसारी सन् ज्ञानी निर्यातीत्यस्ति। द्वारप्रकाशस्य

---

'ತತ್ಪ್ರಕಾಶಿತದ್ವಾರಃ' ಎಂದು ನಾಡಿಯ ದ್ವಾರವು ಪ್ರಕಾಶಿತಗೊಳ್ಳುವುದೆಂದು ಹೇಳಿದ್ದರಿಂದ ನಾಡಿಯ ಒಳಗೆ ಜ್ಞಾನಿಗೂ ಅಜ್ಞಾನಿಯಂತೆ ಕತ್ತಲಿನಿಂದಲೇ ಗಮನವಿರುವುದು ಎಂದಾದೀತು. ನಾಡಿಯ ಒಳಗೂ ಪ್ರಕಾಶವಿರುವುದಾದರೆ 'ದ್ವಾರ' ಪದಕ್ಕೆ ವೈಯರ್ಥ್ಯ ಉಂಟಾದೀತು ಎಂಬ ಆಶಂಕೆಗೆ ಸಮಾಧಾನ—

ಓಂ ರಶ್ಮ್ಯನುಸಾರೀ ಓಂ ೪.೨.೧೮

**ಸೂತ್ರಾರ್ಥ**

'[1]ಸಹಸ್ರಂ ವಾ ಆದಿತ್ಯಸ್ಯ ರಶ್ಮಯಃ ಆಸು ನಾಡೀಷ್ವಾತತಾಃ' ಎಂಬ ಶ್ರುತಿಯಲ್ಲಿ ಹೇಳಿರುವಂತೆ ನಾಡಿಯ ಒಳಗೆ ವ್ಯಾಪಿಸಿರುವ ಸೂರ್ಯರಶ್ಮಿಯನ್ನು ಅನುಸರಿಸುತ್ತ ಜ್ಞಾನಿಯು ದೇಹದಿಂದ ನಿರ್ಗಮಿಸುವನು ಎಂದರ್ಥ. ಇಲ್ಲಿ 'ನಿರ್ಗಮಿಸುವನು' ಎಂಬ ಪದವು ಅಧ್ಯಾಹೃತವಾಗಿದೆ, 'ತದಾ ವಿಷ್ಣೋಃ ಸ್ವತೇಜಸಾ ದ್ಯೋತತೇ ಹೃದಯಾಗ್ರಂ' ಇತ್ಯಾದಿ ಪ್ರಮಾಣಾನುಸಾರ ನಾಡೀದ್ವಾರದಲ್ಲಿ ಉಂಟಾಗುವ

---

1. 'ಸಹಸ್ರಂ ವಾ ಆದಿತ್ಯಸ್ಯ ರಶ್ಮಯಃ ಆಸು ನಾಡೀಷ್ವಾತತಾಸ್ತತ್ರ ಶ್ವೇತಃ ಸುಷುಮ್ನೋ ಬ್ರಹ್ಮಯಾನಸ್ಸುಷುಮ್ನಾಯಾಮಾತತಸ್ತತ್ಪ್ರಕಾಶೇನೈಷ ನಿರ್ಗಚ್ಛತಿ' ಎಂದು ಪೌತ್ರಾಯಣಶ್ರುತಿ.

ಸೂರ್ಯನ ಸಹಸ್ರಕಿರಣಗಳು ದೇಹದೊಳಗಿನ ನಾಡಿಗಳಲ್ಲಿ ವ್ಯಾಪಿಸಿರುವವು. ಆ ಕಿರಣಗಳಲ್ಲಿ ಸುಷುಮ್ನ ಎಂಬ ಹೆಸರಿನ ಒಂದು ಕಿರಣವು ಶ್ವೇತವರ್ಣವುಳ್ಳದ್ದೂ, ಬ್ರಹ್ಮಪ್ರಾಪ್ತಿ ಕಾರಣವೂ ಆಗಿದೆ. ಆ ಕಿರಣವು ಸುಷುಮ್ನಾನಾಡಿಯೊಳಗೆ ವ್ಯಾಪ್ತವಾಗಿದೆ. ಅದರ ಪ್ರಕಾಶದಿಂದ ಜ್ಞಾನಿಯು ದೇಹದಿಂದ ನಿರ್ಗಮಿಸುವನು ಎಂದು ಶ್ರುತಿಯ ಭಾವ.

वैष्णवत्वादन्तः प्रकाशस्य सौरत्वात् द्वारपदमर्थवत्। 'तदा विष्णोः स्वतेजसा द्योतते हृदयाग्रं' इत्यादेरिति भावः।

उक्तमाक्षिप्याह—

॥ ॐ निशि नेति चेन्न सम्बन्धात् ॐ ॥ ४.२.१९

रात्रौ पर्यवसितकर्मणामुत्क्रान्तिर्न स्यात्तदा रश्म्यभावादिति चेन्न। संबन्धात्। रश्मीनामित्यनुषङ्गः। बाह्यादित्याभावेऽप्यन्तःस्यादित्यरश्मीनां सदा नाडीसम्बन्धादित्यर्थः।

यावद्देहभाविनि नाडीरश्मिसम्बन्धे मानाभाव इत्यत आह—

---

ಪ್ರಕಾಶವು ವಿಷ್ಣುವಿನದ್ದು. ನಾಡಿಯೊಳಗೆ ಅಗುವ ಪ್ರಕಾಶವು ಸೂರ್ಯನದ್ದು. ಆದ್ದರಿಂದ 'ದ್ವಾರ' ಪದವು ಸಾರ್ಥಕವಾಗಿದೆ ಎಂದು ಭಾವ.

ಹೇಳಿದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ನಿಶಿ ನೇತಿ ಚೇನ್ನ ಸಂಬಂಧಾತ್ ಓಂ ೪.೨.೧೯

**ಸೂತ್ರಾರ್ಥ**

ಪ್ರಾರಬ್ಧಕರ್ಮಗಳೆಲ್ಲವೂ ಮುಗಿದಿರುವ ಜ್ಞಾನಿಗಳಿಗೆ ನಾಡಿಗಳಲ್ಲಿ ಸೂರ್ಯರಶ್ಮಿಗಳಿಲ್ಲದ ಕಾರಣ ರಾತ್ರಿಕಾಲದಲ್ಲಿ ಉತ್ಕ್ರಮಣವಾಗದಿರಲಿ ಎಂದರೆ ಅದು ಸರಿಯಲ್ಲ. ಸಂಬಂಧಾತ್ - 'ರಶ್ಮೀನಾಂ' ಎಂಬ ಪದವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು– ಬಾಹ್ಯ ಸೂರ್ಯನಿಲ್ಲದಿದ್ದರೂ ಒಳಗಿರುವ ಸೂರ್ಯರಶ್ಮಿಗಳಿಗೆ ಯಾವಾಗಲೂ ನಾಡಿಗಳ ಸಂಬಂಧವಿರುವುದರಿಂದ ಎಂದು ಅರ್ಥ.

ದೇಹವಿರುವ ಕಾಲದಲ್ಲೆಲ್ಲ ನಾಡಿ–ರಶ್ಮಿಗಳ ಸಂಬಂಧವಿರುವುದು ಎಂಬ ವಿಷಯದಲ್ಲಿ ಪ್ರಮಾಣವಿಲ್ಲ ಎಂಬ ಆಶಂಕೆಗೆ ಉತ್ತರ—

॥ ॐ यावद्देहभावित्वाद्दर्शयति च ॐ ॥ ४.२.२०

सम्बन्धस्येत्यनुषङ्गः। नाडीरश्मिसम्बन्धस्य यावद्देहभावित्वात्। न चासिद्धमिदम्। 'संसृष्टा वा एते रश्मयश्च नाड्यश्च नैषां वियोगो यावदिदं शरीरं' इति श्रुतिर्दर्शयति यस्मात्तस्मादित्यर्थः। चो यत इत्यर्थे।

---

## ಓಂ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ಓಂ ೪.೨.೨೦

**ಸೂತ್ರಾರ್ಥ**

ಹಿಂದಿನ ಸೂತ್ರದಿಂದ 'ಸಂಬಂಧಸ್ಯ' ಎಂಬ ಪದವು ಅನುವೃತ್ತವಾಗುವುದು. ಸಂಬಂಧಸ್ಯ –ನಾಡಿ–ರಶ್ಮಿಗಳ ಸಂಬಂಧವು, ಯಾವದ್ದೇಹಭಾವಿತ್ವಾತ್ – ದೇಹವಿರುವ ಎಲ್ಲ ಕಾಲದಲ್ಲೂ ಇರುವುದರಿಂದ. ಆ ರೀತಿ ನಾಡಿ-ರಶ್ಮಿಗಳ ಸಂಬಂಧವಿರುವುದು ಪ್ರಮಾಣಸಿದ್ಧವಲ್ಲ ಎಂದು ಹೇಳತಕ್ಕದ್ದಲ್ಲ. ಏಕೆಂದರೆ ದರ್ಶಯತಿ ಚ ಯಾವ ಕಾರಣ ದಿಂದ 'ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ನೈಷಾಂ ವಿಯೋಗೋ ಯಾವದಿದಂ ಶರೀರಂ'[1] ಎಂಬ ಶ್ರುತಿಯು ಈ ವಿಷಯವನ್ನು ತಿಳಿಸುವುದೋ ಆದ್ದರಿಂದ ಎಂದು ಅರ್ಥ. 'ದರ್ಶಯತಿ ಚ' ಎಂಬಲ್ಲಿ 'ಚ' ಶಬ್ದವು 'ಯಾವ ಕಾರಣದಿಂದ' ಎಂಬ ಅರ್ಥವನ್ನು ಹೇಳುವುದು.

---

1. 'ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ನೈಷಾಂ ವಿಯೋಗೋ ಯಾವದಿದಂ ಶರೀರಮತ ಏತೈಃ ಪಶ್ಯತ್ಯೇತೈರುತ್ಕ್ರಾಮತ್ಯೇತೈಃ ಪ್ರವರ್ತತೇ' ಎಂದು ಮಾಧ್ಯಂದಿನಾಯನ ಶ್ರುತಿ.

ಸೂರ್ಯರಶ್ಮಿಗಳು ಮತ್ತು ನಾಡಿಗಳು ಸಂಬಂಧವನ್ನು ಹೊಂದಿವೆ. ಈ ಸ್ಥೂಲಶರೀರ ವಿರುವವರೆಗೆ ಇವುಗಳಿಗೆ ವಿಯೋಗವಿಲ್ಲ. ಜ್ಞಾನಿಯು ಈ ರಶ್ಮಿಗಳ ಮೂಲಕ ನಾಡಿಯೊಳಗಿನ ಮಾರ್ಗವನ್ನು ನೋಡುವನು. ಇವುಗಳ ಸಹಾಯದಿಂದ ಉತ್ಕ್ರಮಣಕ್ಕಾಗಿ ಪ್ರಯತ್ನಿಸುವನು ಮತ್ತು ಉತ್ಕ್ರಮಣಕಾಲದಲ್ಲಿ ಉತ್ಕ್ರಾಂತಿಯನ್ನು ಪಡೆಯುವನು ಎಂದು ಶ್ರುತಿಯ ಭಾವ.

यावद्देहभावित्वं दर्शयति चेति वाच्ये पञ्चम्युक्तिः नाडीरश्मिसम्बन्धः सदातनोऽथ देहपातपूर्वकालीनः ? नाद्यः । सदा नाडीनामभावात् । नान्त्यः । कदाचिदज्ञानिनस्तमसोत्क्रान्तिप्रसङ्गादिति नाशङ्क्यम् । यावद्देहभावित्वोपगमात् । तस्य च श्रुतिसिद्धत्वादिति सूचयितुम् ।

"दक्षिणे मरणाद्याति स्वर्गं ब्रह्मोत्तरायणे" इत्युक्त्या ज्ञानिनो

---

## 'ಯಾವದ್ದೇಹಭಾವಿತ್ವಾತ್' ಎಂಬಲ್ಲಿ ಪಂಚಮೀವಿಭಕ್ತಿಯ ಪ್ರಯೋಜನ

ನಾಡಿ ಮತ್ತು ರಶ್ಮಿಗಳ ಸಂಬಂಧ ಯಾವಾಗಲೂ ಇರತಕ್ಕದ್ದೋ ಅಥವಾ ದೇಹಪತನವಾಗುವ ಮುಂಚೆ ಮಾತ್ರ ಇರತಕ್ಕದ್ದೋ ? ಯಾವಾಗಲೂ ನಾಡಿಗಳು ಇಲ್ಲದಿರುವ ಕಾರಣ ಮೊದಲನೆ ಪಕ್ಷ ಯುಕ್ತವಲ್ಲ. ಎಂದಾದರೊಮ್ಮೆ ಜ್ಞಾನಿಗೆ ಕತ್ತಲಿನಲ್ಲೇ ಉತ್ಕ್ರಮಣವಾಗುವ ಸಂದರ್ಭ ಒದಗಬಹುದಾದ್ದರಿಂದ ಎರಡನೆ ಪಕ್ಷವೂ ಸರಿಯಲ್ಲ— ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ ದೇಹವಿರುವವರೆಗೆ ನಾಡಿ-ರಶ್ಮಿಗಳ ಸಂಬಂಧವಿರುವುದನ್ನು ಅಂಗೀಕರಿಸಲಾಗಿದೆ. ಹಾಗೆ ಸಂಬಂಧವಿರುವುದು ಶ್ರುತಿಸಿದ್ಧವೂ ಆಗಿದೆ ಎಂದು ಸೂಚಿಸಲು 'ಯಾವದ್ದೇಹಭಾವಿತ್ವಂ ದರ್ಶಯತಿ ಚ' ಎಂದೇ ಸೂತ್ರವಿರಬಹುದಾದರೂ 'ಯಾವದ್ದೇಹಭಾವಿತ್ವಾತ್' ಎಂದು ಪಂಚಮೀವಿಭಕ್ತಿಯನ್ನು ಪ್ರಯೋಗಿಸಲಾಗಿದೆ.

'ದಕ್ಷಿಣೇ ಮರಣಾದ್ಯಾತಿ ಸ್ವರ್ಗಂ ಬ್ರಹ್ಮೋತ್ತರಾಯಣೇ'[1] ಎಂದು ಹೇಳಿರುವುದರಿಂದ ಜ್ಞಾನಿಗೆ ದಕ್ಷಿಣಾಯನದಲ್ಲಿ ಉತ್ಕ್ರಮಣ ಹೇಗೆ ಆಗಲಾರದೋ ಹಾಗೆ ರಾತ್ರಿಯಲ್ಲೂ ಉತ್ಕ್ರಮಣವಿಲ್ಲದಿರುವುದು ಯುಕ್ತವಾದ್ದರಿಂದ ರಾತ್ರಿಕಾಲದಲ್ಲಿ

---

1. ದಕ್ಷಿಣಾಯನದಲ್ಲಿ ಮರಣದಿಂದ ಸ್ವರ್ಗವನ್ನೂ ಉತ್ತರಾಯಣದಲ್ಲಿ ಮರಣದಿಂದ ಬ್ರಹ್ಮನನ್ನೂ ಪಡೆಯುವನೆಂದು ಸ್ಮೃತಿವಾಕ್ಯದ ಭಾವ,

दक्षिणायन उत्क्रान्त्ययोगवत् रात्रावप्युत्क्रान्त्यभावोपपत्त्या रात्रावुत्क्रान्त्युपपादनायासो व्यर्थ इत्यत आह—

॥ ॐ अतश्चायनेऽपि हि दक्षिणे ॐ ॥ ४.२.२१

साध्यसमुच्चये चः । हिर्हेतौ । अपिः स्मृतिसमुच्चये । 'दक्षिणे मरणात्' इति स्मृतिवचनेन ज्ञानिनो दक्षिणायनोत्क्रान्त्ययोगदृष्टान्तेन रात्रावपि तदभावो न वाच्यः । 'दक्षिणे मरणात्' इति स्मृतिसत्त्वेऽपि

---

ಉತ್ಕ್ರಮಣವನ್ನು ವಿವರಿಸುವ ಪ್ರಯಾಸ ವ್ಯರ್ಥವೆಂಬ ಶಂಕೆಯನ್ನು ಪರಿಹರಿಸುವ ಸೂತ್ರ—

ಓಂ ಅತಶ್ಚಾಯನೇಽಪಿ ಹಿ ದಕ್ಷಿಣೇ ಓಂ ೪.೨.೨೧

**ಸೂತ್ರಾರ್ಥ**

ಸೂತ್ರದಲ್ಲಿರುವ 'ಚ' ಶಬ್ದವು ಸಾಧ್ಯದ ಸಮುಚ್ಚಯವನ್ನು[1] ಹೇಳುವುದು. 'ಹಿ' ಶಬ್ದವು ಹೇತ್ವರ್ಥಕವಾಗಿದೆ. 'ಅಪಿ' ಶಬ್ದವು ಸ್ಮೃತಿಯ ಸಮುಚ್ಚಯವನ್ನು ಹೇಳುವುದು.

'ದಕ್ಷಿಣೇ ಮರಣಾತ್' ಎಂಬ ಸ್ಮೃತಿವಚನದ ಆಧಾರದಿಂದ ಜ್ಞಾನಿಗೆ ದಕ್ಷಿಣಾಯನದಲ್ಲಿ ಉತ್ಕ್ರಮಣವಿಲ್ಲವೆಂಬ ದೃಷ್ಟಾಂತವನ್ನಿಟ್ಟುಕೊಂಡು ರಾತ್ರಿಕಾಲದಲ್ಲೂ ಜ್ಞಾನಿಗೆ ಉತ್ಕ್ರಮಣವಿಲ್ಲವೆಂದು ಹೇಳತಕ್ಕದ್ದಲ್ಲ. 'ದಕ್ಷಿಣೇ ಮರಣಾತ್' ಎಂಬ ಸ್ಮೃತಿ ಇದ್ದರೂ ದಕ್ಷಿಣಾಯನದಲ್ಲಿ ಜ್ಞಾನಿಗೆ ಉತ್ಕ್ರಮಣವು ಯುಕ್ತವೇ ಆಗಿದೆ. ಏಕೆಂದರೆ, ಅತಃ - ಸೂರ್ಯನ ಸಹಸ್ರರಶ್ಮಿಗಳಿಗೆ ನಾಡೀಸಂಬಂಧವಿರುವುದ

---

1. 'ದಕ್ಷಿಣಾಯನದಲ್ಲೂ ಜ್ಞಾನಿಗೆ ಉತ್ಕ್ರಾಂತಿಯಾಗುವುದು ಯುಕ್ತವಾಗಿದೆ' ಎಂಬ ಸಾಧ್ಯದ ಸಮುಚ್ಚಯವನ್ನು ಹೇಳುವುದು.

दक्षिणायने ज्ञानिन उत्क्रान्तिर्युक्ता। कुतः ?। अतः सौररश्मिसहस्रस्य नाडीसम्बन्धसत्त्वादित्यर्थः। स्मृतौ दक्षिणोत्तरायणशब्देन देहव्याप्तसौररश्मीनामेवाभिधानं न तु कालस्येति भावः। 'शतं पञ्चैव सूर्यस्य दक्षिणायनरश्मयः' इत्यादिस्मृतेरित्यप्याहुः ॥ ९ ॥

---

ರಿಂದ ಎಂದು ಅರ್ಥ. 'ದಕ್ಷಿಣೇ ಮರಣಾತ್' ಎಂಬ ಸ್ಮೃತಿಯಲ್ಲಿ ದಕ್ಷಿಣಾಯನ-ಉತ್ತರಾಯಣ ಶಬ್ದಗಳು ದೇಹದಲ್ಲಿ ವ್ಯಾಪಿಸಿರುವ ಸೂರ್ಯ-ರಶ್ಮಿಗಳನ್ನೇ ಹೇಳುವವು ಹೊರತು ಕಾಲವನ್ನಲ್ಲವೆಂದು ಭಾವ.[1] 'ಶತಂ ಪಂಚೈವ ಸೂರ್ಯಸ್ಯ ದಕ್ಷಿಣಾಯನರಶ್ಮಯಃ' ಇತ್ಯಾದಿ ಸ್ಮೃತಿಯಿರುವುದರಿಂದ ಎಂದೂ ಹೇಳುವರು.

---

1. ಶತಂ ಪಂಚೈವ ಸೂರ್ಯಸ್ಯ ದಕ್ಷಿಣಾಯನರಶ್ಮಯಃ ।
ತಾವಂತ ಏವ ನಿರ್ದಿಷ್ಟಾ ಉತ್ತರಾಯಣರಶ್ಮಯಃ ॥
ತೇ ಸರ್ವೇ ದೇಹಸಂಬದ್ಧಾಃ ಸರ್ವದಾ ಸರ್ವದೇಹಿನಾಂ ।
ಮಹರ್ಲೋಕಾದಿಗಂತಾರ ಉತ್ತರಾಯಣರಶ್ಮಿಭಿಃ ॥
ನಿರ್ಗಚ್ಛಂತೀತರೈಶ್ಚಾಪಿ ಯೈರೇಷ್ವನ್ಯೇತರಾ ಗತಿಃ ।
ಉತ್ತರಂ ದಕ್ಷಿಣಮಿತಿ ತ ಏವ ತು ನಿಗದ್ಯತೇ ॥
ನ ತು ಕಾಲವಿಶೇಷೋಽಸ್ತಿ ಜ್ಞಾನಿನಾಂ ನಿಯಮಾತ್ ಫಲಂ ।
ದದಾತಿ ಕಾಲೇಽನುಗುಣೇ ಫಲಂ ಕಿಂಚಿದ್ವಿಶಿಷ್ಯತೇ ॥
ಅತ್ಯುತ್ತಮಾನಾಂ ಕೇಷಾಂಚಿತ್ ನ ವಿಶೇಷೋಽಸ್ತಿ ಕಾಲತಃ ।
-- ನಾರಾಯಣಾಧ್ಯಾತ್ಮೆ

ಸೂರ್ಯನ ಐನೂರು ದಕ್ಷಿಣಾಯನರಶ್ಮಿಗಳು ಮತ್ತು ಅಷ್ಟೇ ಸಂಖ್ಯೆಯ ಉತ್ತರಾಯಣ ರಶ್ಮಿಗಳು ಇರುವುವು. ಎಲ್ಲ ದೇಹಿಗಳಿಗೂ ಈ ಎಲ್ಲ ರಶ್ಮಿಗಳು ಯಾವಾಗಲೂ ದೇಹ ಸಂಬಂಧವನ್ನು ಪಡೆದಿರುವವು. ಪ್ರತೀಕಾಲಂಬನರು ಉತ್ತರಾಯಣರಶ್ಮಿಗಳಿಂದ ಜನಲೋಕವೇ ಮೊದಲಾದ ಬ್ರಹ್ಮಲೋಕಗಳನ್ನು ಹೊಂದುವರು. ಇತರರು ದಕ್ಷಿಣಾಯನರಶ್ಮಿಗಳಿಂದ ಸ್ವರ್ಗಾದಿ ಲೋಕಗಳನ್ನು ಪಡೆಯುವರು. 'ದಕ್ಷಿಣೇ ಮರಣಾತ್' ಇತ್ಯಾದಿ ಸ್ಮೃತಿಗಳಲ್ಲಿ, 'ದಕ್ಷಿಣ', 'ಉತ್ತರ' ಶಬ್ದಗಳಿಂದ ಸೂರ್ಯನ ದಕ್ಷಿಣಾಯನರಶ್ಮಿ, ಉತ್ತರಾಯಣರಶ್ಮಿಗಳನ್ನೇ ಹೇಳಲಾಗಿದೆ. ಆದ್ದರಿಂದ ಜ್ಞಾನಿಗಳ ಉತ್ಕ್ರಮಣಕ್ಕಾಗಿ ಕಾಲನಿಯಮವೇನಿಲ್ಲ. ಯದ್ಯಪಿ

योग्यधिकरणम्—१०

॥ ॐ योगिनः प्रति स्मर्येते स्मार्ते चैते ॐ ॥ ४.२.२२

अत्र विद्यागत्यनुस्मृत्योरावश्यकत्वं साध्यते। योगिन इति द्वितीयान्तम्। एते ब्रह्मचन्द्रगती योगिनः ज्ञानकर्मयोगिनः प्रति स्मर्येते "अग्निर्ज्योतिरहःशुक्लः" 'धूमो रात्रिस्तथा कृष्णः'

---

ಯೋಗ್ಯಧಿಕರಣ—೧೦

ಓಂ ಯೋಗಿನಃ ಪ್ರತಿ ಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ ೪.೨.೨೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಗತಿಗಾಗಿ ಬ್ರಹ್ಮಜ್ಞಾನ ಮತ್ತು ಗತಿಯ ಸ್ಮರಣೆ– ಇವೆರಡೂ ಆವಶ್ಯಕವೆಂದು ಸಮರ್ಥಿಸಲಾಗುವುದು.

'ಯೋಗಿನಃ' ಎಂಬ ಈ ಪದವು ದ್ವಿತೀಯಾವಿಭಕ್ತ್ಯಂತವಾಗಿದೆ. ಏತೇ – ಬ್ರಹ್ಮನನ್ನು ಕುರಿತು ಗಮನ ಮತ್ತು ಚಂದ್ರನನ್ನು ಕುರಿತು ಗಮನಗಳು, ಯೋಗಿನಃ- ಜ್ಞಾನಯೋಗಿ ಮತ್ತು ಕರ್ಮಯೋಗಿಗಳನ್ನು ಕುರಿತು, ಸ್ಮರ್ಯೇತೇ - '[1]ಅಗ್ನಿರ್ಜ್ಯೋತಿರಹಃ ಶುಕ್ಲಃ' 'ಧೂಮೋ ರಾತ್ರಿಸ್ತಥಾ ಕೃಷ್ಣಃ' ಇತ್ಯಾದಿ ಸ್ಮೃತಿಗಳಲ್ಲಿ

---

ಭೀಷ್ಮ ಮೊದಲಾದ ಜ್ಞಾನಿಗಳು ಉತ್ಕ್ರಮಣಕ್ಕಾಗಿ ಉತ್ತರಾಯಣಕಾಲವನ್ನು ಪ್ರತೀಕ್ಷೆ ಮಾಡಿದ್ದುಂಟು. ಆದರೆ ಉತ್ತರಾಯಣ, ಶುಕ್ಲಪಕ್ಷ ಮೊದಲಾದ ಅನುಕೂಲ ಕಾಲದಲ್ಲಿ ಉತ್ಕ್ರಮಣವಾದಲ್ಲಿ ಕಿಂಚಿದತಿಶಯವನ್ನು ಪಡೆದ ಫಲವು ಲಭಿಸುವುದರಿಂದ ಅವರು ಆ ರೀತಿ ಕಾಲಪ್ರತೀಕ್ಷೆಯನ್ನು ಮಾಡಿದರು ಹೊರತು ವಾಸ್ತವಿಕವಾಗಿ ಜ್ಞಾನಿಗಳ ಉತ್ಕ್ರಮಣಕ್ಕೆ ಕಾಲನಿಯಮವಿಲ್ಲ. ಭೀಷ್ಮಾದಿಗಳಿಗಿಂತಲೂ ಉತ್ತಮರಾದ ಕೆಲವು ಜ್ಞಾನಿಗಳಿಗೆ ಸರ್ವಕಾಲವು ಅತಿಶಯಯುಕ್ತವಾದ ಕಾಲವಾದದ್ದರಿಂದ ಕಾಲವಿಶೇಷದಿಂದ ಯಾವ ಅತಿಶಯವೂ ಇಲ್ಲವೆಂದು ಸ್ಮೃತಿಯ ಭಾವ.

1. ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥

इत्यादिस्मृत्योरुच्येते । ज्ञानादिसाध्यतया स्मर्येते इति यावत् । न तु कालादिकृते इत्यर्थः । अनेन ब्रह्मगतेर्विद्यासाध्यत्वमुक्तम् ।

गत्यनुस्मृतिसाध्यत्वं चाऽह — स्मार्ते चेति । स्मृतेरिमे स्मार्ते । गत्यनुस्मृतिसाध्ये एवेत्यर्थः । स्मर्येते इत्यन्वयः । "अग्निर्ज्योतिः" इति स्मृतौ ब्रह्मविद इति विशेषणात्, गत्यनुस्मरणाद्

ಹೇಳಲ್ಪಟ್ಟಿವೆ. ಜ್ಞಾನಾದಿಗಳಿಂದ ಲಭಿಸತಕ್ಕವೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ ಎಂದು ಭಾವ. ಹೀಗೆ ಬ್ರಹ್ಮ-ಚಂದ್ರಗತಿಗಳು ಜ್ಞಾನಾದಿಗಳಿಂದ ಹೊಂದಲ್ಪಡತಕ್ಕವೇ ಹೊರತು ಕೇವಲ ಕಾಲಾದಿಗಳಿಂದ ಅಲ್ಲವೆಂದು ಅರ್ಥ. ಇದರಿಂದ ಬ್ರಹ್ಮಪ್ರಾಪ್ತಿಯು ವಿದ್ಯೆಯಿಂದ ಲಭಿಸತಕ್ಕದ್ದೆಂದು ಹೇಳಲಾಯಿತು. ಗತಿಯ ಅನುಸ್ಮರಣೆಯೂ ಅದಕ್ಕೆ ಸಾಧನವಾಗಿದೆ ಎಂದು ಹೇಳುವ ಸೂತ್ರದ ಅಂಶ- 'ಸ್ಮಾರ್ತೇ ಚ' ಎಂದು. 'ಸ್ಮೃತೇಃ ಇಮೇ ಸ್ಮಾರ್ತೇ' ಎಂಬ ವ್ಯುತ್ಪತ್ತಿಯನ್ನನುಸರಿಸಿ 'ಸ್ಮಾರ್ತೇ' ಎಂದರೆ ಗತಿಯ ಅನುಸ್ಮರಣದಿಂದ ಲಭಿಸಲ್ಪಡತಕ್ಕವುಗಳೇ ಆಗಿವೆ ಎಂದು ಅರ್ಥ. 'ಸ್ಮರ್ಯೇತೇ' ಎಂಬ ಪದವು ಇಲ್ಲಿ ಅನ್ವಿತವಾಗುವುದು. 'ಅಗ್ನಿರ್ಜ್ಯೋತಿಃ' ಎಂಬ ಸ್ಮೃತಿಯಲ್ಲಿ 'ಬ್ರಹ್ಮವಿದಃ' ಎಂದು ವಿಶೇಷಣವಿರುವುದರಿಂದ

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥
(ಗೀ. ೮-೨೪,೨೫)

ಯಾವ ಮಾರ್ಗದಲ್ಲಿ ಮೊದಲು ಅಗ್ನ್ಯಭಿಮಾನಿದೇವತಾಲೋಕ, ಅನಂತರ ಅರ್ಚಿರ್ಲೋಕ, ಅಹರ್ದೇವತಾಲೋಕ, ಶುಕ್ಲಪಕ್ಷದೇವಲೋಕ, ಪೂರ್ಣಮಾದೇವಲೋಕ, ಷಣ್ಮಾಸಾಭಿಮಾನಿದೇವತಾಲೋಕಗಳು ಮತ್ತು ಉತ್ತರಾಯಣಾಭಿಮಾನಿದೇವತಾಲೋಕಗಳು, ಮೇಷ, ತುಲಾದಿ ವಿಷ್ವಭಿಮಾನಿದೇವತಾಲೋಕಗಳಿರುವವೋ ಆ ಮಾರ್ಗದ ಮೂಲಕ ಹೋಗುವ ಬ್ರಹ್ಮಜ್ಞಾನಿಗಳು ಪರಬ್ರಹ್ಮನನ್ನು ಹೊಂದುವರು. ಅವರಿಗೆ ಪುನರಾವೃತ್ತಿ ಇಲ್ಲ.

ಆದರೆ, ಧೂಮಾಭಿಮಾನಿದೇವತಾಲೋಕ, ರಾತ್ರಿದೇವಲೋಕ, ಕೃಷ್ಣಪಕ್ಷದೇವಲೋಕ, ಷಣ್ಮಾಸಾಭಿಮಾನಿದೇವಲೋಕ, ದಕ್ಷಿಣಾಭಿಮಾನಿದೇವಲೋಕ - ಇವುಗಳಿರುವ ಮಾರ್ಗದಿಂದ ತೆರಳುವ ಕಾಮ್ಯಕರ್ಮಿಯು ಚಂದ್ರಸಂಬಂಧಿಯಾದ ಜ್ಯೋತಿರ್ಲೋಕವನ್ನು ಪಡೆದು ಪುನಃ ಭೂಮಿಯಲ್ಲಿ ಜನಿಸುವನು ಎಂದು ಗೀತಾಶ್ಲೋಕಗಳ ಭಾವ.

'ब्रह्म चन्द्रं वा गच्छति' इति वचनाच्च विद्यानुस्मृतिसाध्यत्वं गतेरिति भावः ।

योगिन इत्युक्तिर्ब्रह्मचन्द्रगत्योर्ज्ञानकर्मणी एवोपायौ, न तु तत्कालस्मृतिरिति सूचयितुमिति तत्त्वप्रदीपाद्भाति । योगशब्दस्योपायार्थत्वात् ॥ १० ॥

इति श्रीराघवेन्द्रयतिकृतायां तन्त्रदीपिकायां
चतुर्थाध्यायस्य द्वितीयः पादः सम्पूर्णः ।
॥ श्रीकृष्णार्पणमस्तु ॥

---

ಮತ್ತು 'ಗತ್ಯನುಸ್ಮರಣಾದ್ ಬ್ರಹ್ಮ ಚಂದ್ರಂ ವಾ ಗಚ್ಛತಿ'[1] ಎಂಬ ವಚನದ ಆಧಾರದಿಂದ ಗತಿಯುು ವಿದ್ಯೆ ಮತ್ತು ಗತಿಯ ಅನುಸ್ಮರಣೆಗಳಿಂದ ಲಭಿಸತಕ್ಕದ್ದೆಂದು ಭಾವ.

ಬ್ರಹ್ಮ-ಚಂದ್ರಗತಿಗಳಿಗೆ ಜ್ಞಾನ-ಕರ್ಮಗಳೇ ಸಾಧನಗಳು ಹೊರತು ಉತ್ಕ್ರಮಣಕಾಲದಲ್ಲಾಗುವ ಸ್ಮರಣೆಯಲ್ಲ ಎಂದು ಸೂಚಿಸಲು 'ಯೋಗಿನಃ' ಎಂದು ಹೇಳಲಾಗಿದೆ ಎಂದು ತತ್ತ್ವಪ್ರದೀಪದಿಂದ ತಿಳಿದುಬರುವುದು. 'ಯೋಗ' ಶಬ್ದವು ಉಪಾಯ ಎಂಬ ಅರ್ಥವನ್ನು ಪಡೆದಿರುವುದರಿಂದ ಜ್ಞಾನ-ಕರ್ಮಗಳು ಗತಿಗಳಿಗೆ ಸಾಧನಗಳು ಎಂಬ ಅರ್ಥವು ಲಭಿಸುವುದು.

ಶ್ರೀ ರಾಘವೇಂದ್ರಯತಿಗಳು ರಚಿಸಿದ ತಂತ್ರದೀಪಿಕೆಯಲ್ಲಿ
ನಾಲ್ಕನೆ ಅಧ್ಯಾಯದ ದ್ವಿತೀಯಪಾದವು ಸಮಾಪ್ತವಾಯಿತು.
ಶ್ರೀ ಕೃಷ್ಣಾರ್ಪಣಮಸ್ತು

---

1. ಗತ್ಯನುಸ್ಮರಣಾದ್ ಬ್ರಹ್ಮ ಚಂದ್ರಂ ವಾ ಗಚ್ಛತಿ ಧ್ರುವಮ್ ।
ಅನನುಸ್ಮೃತಿತಃ ಕಾಲೇ ಸ್ಮರಣಂ ಪ್ರಾಪ್ಯ ವೈ ಗತಿಃ ॥ -- ಅಧ್ಯಾತ್ಮವಚನ.

ಯೋಗಿಗಳು ತಾವು ತೆರಳುವ ಗತಿಯ ರೀತಿಯನ್ನು ಸ್ಮರಿಸಿಯೇ ಬ್ರಹ್ಮನನ್ನು ಅಥವಾ ಚಂದ್ರನನ್ನು ಕುರಿತು ಹೋಗುವರು; ಗತಿಪ್ರಕಾರದ ಸ್ಮರಣೆ ಇಲ್ಲದಿದ್ದವರೂ ಭಗವಂತನ ಅನುಗ್ರಹದಿಂದ ಉತ್ಕ್ರಮಣಕಾಲದಲ್ಲಿ ಗತಿಪ್ರಕಾರವನ್ನು ಸ್ಮರಿಸಿಯೇ ಗತಿಯನ್ನು ಹೊಂದುವರು ಎಂದು ಭಾವ.

## ॥ अथ चतुर्थाध्यायस्य तृतीयः पादः ॥

ब्रह्मनाड्योत्क्रान्तानां यो ब्रह्मप्राप्तौ मार्गः, यच्च तेन पथा गतानामन्येषां देवानां च गम्यं तद्द्वयमत्र पादे कथ्यते ।

अर्चिराद्यधिकरणम् — १

॥ ॐ अर्चिरादिना तत्प्रथितेः ॐ ॥ ४.३.१

अत्रेशप्राप्तिमार्गेऽर्चिष आदित्वं साध्यते । ब्रह्म गच्छन् ज्ञानी

---

## ಚತುರ್ಥಾಧ್ಯಾಯ ತೃತೀಯ ಪಾದ

**ಈ ಪಾದವು ಪ್ರತಿಪಾದಿಸುವ ವಿಷಯ**

ಬ್ರಹ್ಮನಾಡಿಯ ಮೂಲಕ ಉತ್ಕ್ರಮಣವನ್ನು ಪಡೆದವರಿಗೆ ಬ್ರಹ್ಮಪ್ರಾಪ್ತಿಯಾಗಲು ಯಾವ ಮಾರ್ಗವೋ, ಮತ್ತು ಆ ಮಾರ್ಗದಿಂದ ತೆರಳುವ ಇತರ ದೇವತೆಗಳಿಗೆ ಯಾವುದು ಗಮ್ಯಸ್ಥಾನವೋ ಅವೆರಡನ್ನೂ ಈ ಪಾದದಲ್ಲಿ ನಿರೂಪಿಸಲಾಗುವುದು.

**ಅರ್ಚಿರಾದ್ಯಧಿಕರಣ--೧**

ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ ೪.೩.೧

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವಂತನ ಪ್ರಾಪ್ತಿಗಾಗಿ ತೆರಳುವ ಮಾರ್ಗದಲ್ಲಿ ಮೊದಲು 'ಅರ್ಚಿಃ' ಎಂಬ ಹೆಸರಿನ ದೇವತೆಯು ಪ್ರಾಪ್ತಿಯಾಗುವುದೆಂದು ಹೇಳಲಾಗುವುದು.

'तेऽर्चिषमभिसंविशन्त्यर्चिषोऽहः' इत्युक्तार्चिरादिना पथा गच्छति न तु 'स वायुमागच्छति' इत्युक्तवाय्वादिना । कुतः ? तत्प्रथितेः । तस्योक्तार्थस्य 'तेऽर्चिषमेवाभिसम्भवन्ति' इति श्रुतौ 'द्वावेव मार्गौ प्रथितावर्चिरादिर्विपश्चिताम्' इति स्मृतौ च प्रसिद्धेरित्यर्थः । 'स वायुम्' इत्यस्य तु गतिर्वक्ष्यते ॥ १ ॥

---

ಅರ್ಚಿರಾದಿನಾ - ಬ್ರಹ್ಮನನ್ನು ಹೊಂದುತ್ತಿರುವ ಜ್ಞಾನಿಯು [1]'ತೇಽರ್ಚಿಷ ಮಭಿಸಂವಿಶಂತ್ಯರ್ಚಿಷೋಽಹಃ' ಎಂಬಲ್ಲಿ ಹೇಳಿರುವ ಅರ್ಚಿರಾದಿ ಮಾರ್ಗದಿಂದ ಹೋಗುವವನು ಹೊರತು[2] 'ಸವಾಯುಮಾಗಚ್ಛತಿ' ಎಂಬಲ್ಲಿ ಹೇಳಿರುವ ವಾಯ್ವಾದಿ ಮಾರ್ಗದಿಂದಲ್ಲ. ಏಕೆಂದರೆ, ತತ್ಪ್ರಥಿತೇಃ. ತಸ್ಯ - ಅರ್ಚಿರಾದಿ ಮಾರ್ಗದಿಂದಲೇ ಬ್ರಹ್ಮಜ್ಞಾನಿಯು ತೆರಳುವನೆಂದು ಹೇಳಲಾದ ವಿಷಯವು, ಪ್ರಥಿತೇಃ - 'ತೇಽರ್ಚಿಷ ಮಭಿಸಂವಿಶಂತಿ' ಎಂಬ ಶ್ರುತಿಯಲ್ಲಿ ಮತ್ತು [3]'ದ್ವಾವೇವ ಮಾರ್ಗೌ ಪ್ರಥಿತೌ ಅರ್ಚಿರಾದಿರ್ವಿಪಶ್ಚಿತಾಂ' ಎಂಬ ಸ್ಮೃತಿಯಲ್ಲಿ ಪ್ರಸಿದ್ಧವಾಗಿರುವುದರಿಂದ ಎಂದು ಅರ್ಥ. 'ಸ ವಾಯುಂ' ಎಂಬ ಶ್ರುತಿಗೆ ಅರ್ಥಾಂತರವನ್ನು ಮುಂದೆ ಹೇಳಲಾಗುವುದು.

---

1. 'ತೇಽರ್ಚಿಷಮಭಿಸಂವಿಶಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮ್' (ಛಾಂ. ೫.೧೦.೧)

ಅರಣ್ಯದಲ್ಲಿ ಶ್ರದ್ಧೆಯಿಂದ ತಪಃಶಬ್ದವಾಚ್ಯನಾದ ಬ್ರಹ್ಮನ ಉಪಾಸನೆ ಮಾಡಿದವರು ದೇಹೋತ್ಕ್ರಮಣದ ನಂತರ ಮೊದಲು 'ಅರ್ಚಿಃ ಎಂಬ ಹೆಸರಿನ ಅಗ್ನಿಪುತ್ರನನ್ನು ಪಡೆಯು ವರು. ಅನಂತರ ಹಗಲಿಗೆ ಅಭಿಮಾನಿಯಾದ ದೇವತೆಯನ್ನೂ ತದನಂತರ ಶುಕ್ಲಪಕ್ಷಾಭಿಮಾನಿ ದೇವತೆಯನ್ನೂ ಪಡೆಯುವರು ಎಂದು ಶ್ರುತಿಯ ಭಾವ.

2. 'ಯದಾ ಹ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ' (ಬೃ. ೭.೧೦.೧)

ಬ್ರಹ್ಮಜ್ಞಾನಿಯಾದ ಪುರುಷನು ಈ ಶರೀರದಿಂದ ಉತ್ಕ್ರಾಂತನಾಗಿ ಪ್ರವಹಾಖ್ಯವಾಯು ವನ್ನು ಹೊಂದುವನೆಂದು ಈ ಶ್ರುತಿಯ ಭಾವ. ಛಾಂದೋಗ್ಯ ಮತ್ತು ಬೃಹದಾರಣ್ಯಕದಲ್ಲಿ ಬರುವ ಈ ವಾಕ್ಯಗಳಿಂದ ಉಂಟಾಗುವ 'ಮೊದಲು ಅರ್ಚಿಃಪ್ರಾಪ್ತಿಯೋ ಅಥವಾ ವಾಯು ಪ್ರಾಪ್ತಿಯೋ' ಎಂಬ ಸಂಶಯದ ಪರಿಹಾರಕ್ಕಾಗಿಯೆ ಈ ಅಧಿಕರಣ.

3. ದ್ವಾವೇವ ಮಾರ್ಗೌ ಪ್ರಥಿತೌ ಅರ್ಚಿರಾದಿರ್ವಿಪಶ್ಚಿತಾಮ್ ।
ಧೂಮಾದಿಃ ಕರ್ಮಿಣಾಂ ಚೈವ ಸರ್ವವೇದವಿನಿರ್ಣಯಾತ್ ॥

वायुशब्दाधिकरणम् -- २

## ॥ ॐ वायुशब्दादविशेषविशेषाभ्याम् ॐ ॥ ४.३.२

अत्र वायोरर्चिरनन्तरप्राप्यत्वं साध्यते। अविशेषविशेषाभ्यां

---

ವಾಯುಶಬ್ದಾಧಿಕರಣ—೨

## ಓಂ ವಾಯುಶಬ್ದಾದವಿಶೇಷವಿಶೇಷಾಭ್ಯಾಂ ಓಂ ೪.೩.೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಅರ್ಚಿಸ್ಸಿನ ಅನಂತರ ವಾಯುವು ಬ್ರಹ್ಮಜ್ಞಾನಿಗೆ ಪ್ರಾಪ್ಯನೆಂದು ಸಾಧಿಸಲಾಗುವುದು.

ಅವಿಶೇಷವಿಶೇಷಾಭ್ಯಾಂ – ಸಾಮಾನ್ಯವಿಶೇಷಭಾವವನ್ನು ಪಡೆದ, ವಾಯುಶಬ್ದಾತ್ – ವಾಯುವು ಬ್ರಹ್ಮಜ್ಞಾನಿಗೆ ಪ್ರಾಪ್ಯನೆಂದು ಹೇಳುವ ಶ್ರುತಿಗಳಿಂದ ವಾಯುವಿಗೆ ದ್ವಿತೀಯಪ್ರಾಪ್ಯತ್ವವಿದೆಯೆಂದು ಅರ್ಥ. 'ವಾಯುವಿಗೆ ದ್ವಿತೀಯ

---

ಅಗ್ನಿರ್ಜ್ಯೋತಿರಿತಿ ದ್ವೇಧೈವಾರ್ಚಿಷಸ್ಸಂಪ್ರತಿಷ್ಠಿತಿಃ ।
ಅಗ್ನಿಂ ಗತ್ವಾ ಜ್ಯೋತಿರಿತಿ ಪ್ರಥಮಂ ಬ್ರಹ್ಮ ಸಂವ್ರಜನ್ ॥
ಏಕಸ್ಮಿಂಸ್ತು ಪುರೇ ಸಂಸ್ಥೋ ದ್ವಿರೂಪೋಽಗ್ನೇಃ ಸುತೋ ಮಹಾನ್ ।
--ಬ್ರಹ್ಮತರ್ಕ

ದೇಹೋತ್ಕ್ರಮಣವಾಗುವವರಿಗೆ ಎರಡೇ ಮಾರ್ಗಗಳಿರುವುದು. ಒಂದು ಬ್ರಹ್ಮಜ್ಞಾನಿಗಳ ಮಾರ್ಗವಾದ ಅರ್ಚಿರಾದಿ ಮಾರ್ಗ. ಇನ್ನೊಂದು ಕಾಮ್ಯಕರ್ಮಿಗಳ ಮಾರ್ಗವಾದ ಧೂಮಾದಿಮಾರ್ಗ. ಸರ್ವವೇದಗಳನ್ನೂ ವಿಚಾರಿಸಿ ಮಾರ್ಗಗಳ ಬಗ್ಗೆ ಈ ನಿರ್ಣಯವನ್ನು ಮಾಡಲಾಗಿದೆ. ಅಗ್ನಿಪುತ್ರನಾದ ಅರ್ಚಿಸ್ಸೇ ಅಗ್ನಿ, ಜ್ಯೋತಿ ಎಂಬ ಎರಡು ರೂಪದಿಂದ ಇರುವನು. ಬ್ರಹ್ಮನನ್ನು ಪಡೆಯಲು ತೆರಳುವ ಜ್ಞಾನಿಯು ಮೊದಲು ಅಗ್ನಿಯನ್ನು ಹೊಂದಿ ಅನಂತರ ಜ್ಯೋತಿಸ್ಸನ್ನು ಪಡೆಯುವನು. ಪೂಜ್ಯನಾದ 'ಅರ್ಚಿಃ' ಎಂಬ ಹೆಸರಿನ ದೇವತೆಯು ಅಗ್ನಿ, ಜ್ಯೋತಿಃ ಎಂಬ ಎರಡು ರೂಪಗಳನ್ನು ಹೊಂದಿದವನಾದರೂ ಒಂದೇ ಪುರದಲ್ಲಿ ಇರುವ ಕಾರಣ 'ತೇರ್ಚಿಷಂ' ಎಂಬ ಶ್ರುತಿಯಲ್ಲಿ ಪೃಥಕ್ಕಾಗಿ ಹೇಳಲ್ಪಟ್ಟಿಲ್ಲ ಎಂದು ಸ್ಮೃತಿಯ ಭಾವ.

वायुशब्दाद्वायोः प्राप्यत्वश्रुतेः वायोर्द्वितीयप्राप्यत्वमिति शेषः । 'यदा ह वै पुरुषोऽस्माल्लोकात् प्रैति स वायुमागच्छति' इति सामान्यतो वायोः प्रथमप्राप्यत्वोक्तेः तस्याश्च पूर्वोक्ताविशेषवचनबाधेनार्चिषोऽनन्तरप्राप्यत्वार्थत्वस्य न्याय्यत्वात् । 'स इतो गतो द्वितीयां गतिं वायुमागच्छति' इति विशेषोक्त्या च तथैवावगतेरिति भावः ॥ २ ॥

### तटिदधिकरणम्—३

## ॥ ॐ तटितोऽधि वरुणस्सम्बन्धात् ॐ ॥ ४.३.३

---

ಪ್ರಾಪ್ಯತ್ವವಿದೆ' ಎಂಬ ಪದಗಳು ಇಲ್ಲಿ ಶೇಷಪೂರಣವಾಗಿವೆ. 'ಯದಾ ಹ ವೈ ಪುರುಷೋऽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ' ಎಂದು ಸಾಮಾನ್ಯತಃ ವಾಯುವು ಪ್ರಥಮಪ್ರಾಪ್ಯನೆಂದು ಹೇಳಲಾಗಿದೆ. ಆದರೆ, ಹಿಂದೆ ಉದಾಹರಿಸಲಾದ 'ತೇऽರ್ಚಿಷಮೇವ ಅಭಿಸಂವಿಶಂತಿ' ಇತ್ಯಾದಿ ವಿಶೇಷವಚನದ ಬಾಧವಿರುವುದರಿಂದ ಅರ್ಚಿಸ್ಸಿನ ಅನಂತರವೇ ವಾಯುವು ಪ್ರಾಪ್ಯನೆಂಬ ಅರ್ಥವನ್ನೇ 'ಸ ವಾಯುಮಾಗಚ್ಛತಿ' ಎಂಬ ಶ್ರುತಿಗೆ ಹೇಳುವುದು ನ್ಯಾಯವಾಗಿದೆ. [1]'ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ' ಎಂಬ ವಿಶೇಷವಚನದಿಂದಲೂ ವಾಯುವು ದ್ವಿತೀಯ ಪ್ರಾಪ್ಯನೆಂದೇ ತಿಳಿದುಬರುವುದೆಂದು ಭಾವ.

### ತಟಿದಧಿಕರಣ—೩

## ಓಂ ತಟಿತೋऽಧಿ ವರುಣಸ್ಸಂಬಂಧಾತ್ ಓಂ ೪.೩.೩

---

1. ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ ವಾಯೋರಹರಹಃ ಆಪೂರ್ಯಮಾಣಪಕ್ಷಂ' ಎಂಬ ಶ್ರುತಿ.

ಶರೀರದಿಂದ ನಿರ್ಗಮಿಸಿದ ಜ್ಞಾನಿಯು ಪ್ರವಹಾಖ್ಯ ವಾಯುವನ್ನು ಎರಡನೆಯವನನ್ನಾಗಿ ಹೊಂದುವನು. ವಾಯುವಿನಿಂದ ಹೊರಟು ಅಹರಭಿಮಾನಿದೇವತೆಯನ್ನೂ ಅವನ ಅನಂತರ ಶುಕ್ಲಪಕ್ಷಾಭಿಮಾನಿದೇವತೆಯನ್ನೂ ಪಡೆಯುವನು ಎಂದು ಶ್ರುತಿಯ ಭಾವ.

अत्र तटिल्लोकस्य संवत्सरलोकादनन्तरप्राप्यत्वं साध्यते। तटितस्तल्लोकादधि उपरि तटिल्लोकप्राप्त्यनन्तरं वरुणः प्राप्यो न तु 'संवत्सराद्वरुणलोकं' इति श्रुत्या तदनन्तरमेव। कुतः? सम्बन्धात्। 'तटितो ह्यूह्यते वरुणलोकः' इति तस्य तटितोऽधिसम्बन्धश्रवणादित्यर्थः ॥ ३ ॥

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ತಟಿದಭಿಮಾನಿಲೋಕವು ಸಂವತ್ಸರಾಭಿಮಾನಿಲೋಕದ ಅನಂತರ ಹೊಂದಲ್ಪಡತಕ್ಕದ್ದೆಂದು ಸಮರ್ಥಿಸಲಾಗುವುದು[1]

ತಟಿತಃ ಅಧಿ – ತಟಿದಭಿಮಾನಿಲೋಕವನ್ನು ಪಡೆದ ನಂತರ, ವರುಣಃ – ವರುಣಲೋಕವು ಹೊಂದಲ್ಪಡತಕ್ಕದ್ದು ಹೊರತು 'ಸಂವತ್ಸರಾದ್ ವರುಣಲೋಕಂ' ಎಂಬ ಶ್ರುತಿಯಂತೆ ಸಂವತ್ಸರಲೋಕವನ್ನು ಹೊಂದಿದ ನಂತರವೇ ಅಲ್ಲ. ಏಕೆಂದರೆ, ಸಂಬಂಧಾತ್ - [2]'ತಟಿತಾ ಹಿ ಊಹ್ಯತೇ ವರುಣಲೋಕಃ' ಎಂದು ವರುಣಲೋಕಕ್ಕೆ ತಟಿಲ್ಲೋಕದ ಮೇಲೆ ಸಂಬಂಧವು ಶ್ರುತವಾಗಿರುವುದರಿಂದ ಎಂದು ಅರ್ಥ.

---

1. 'ಮಾಸೇಭ್ಯಃ ಸಂವತ್ಸರಂ ಸಂವತ್ಸರಾದ್ವರುಣಲೋಕಂ ವರುಣಲೋಕಾತ್ ಪ್ರಜಾಪತಿಲೋಕಂ' ಎಂಬ ಕೌಂಡಿನ್ಯಶ್ರುತಿಯಲ್ಲಿ ಜ್ಞಾನಿಯು ಸಂವತ್ಸರಲೋಕದಿಂದ ವರುಣಲೋಕಕ್ಕೆ ಹೋಗುವನೆಂದು ಹೇಳಿದೆ. ಆದರೆ, 'ಸಂವತ್ಸರಾತ್ತಟಿತಮಾಗಚ್ಛತಿ ತಟಿತಃ ಪ್ರಜಾಪತಿಲೋಕಂ' ಎಂಬ ಗೌಪವನಶ್ರುತಿಯಲ್ಲಿ ಸಂವತ್ಸರಲೋಕದಿಂದ ತಟಿಲ್ಲೋಕಕ್ಕೆ ಹೋಗುವನೆಂದು ಹೇಳಿದೆ. ಹೀಗೆ ಪರಸ್ಪರವಿರೋಧವಿರುವಂತೆ ತೋರುವ ಶ್ರುತಿಗಳಿಂದ ಸಂವತ್ಸರಲೋಕದ ಅನಂತರ ಹೊಂದಲ್ಪಡತಕ್ಕದ್ದು ವರುಣಲೋಕವೋ ತಟಿಲ್ಲೋಕವೋ ಎಂಬ ಸಂಶಯ ಬರುವುದರಿಂದ ಅದನ್ನು ಪರಿಹರಿಸಲು ಸಂವತ್ಸರಲೋಕದ ಅನಂತರ ಜ್ಞಾನಿಯು ತಟಿಲ್ಲೋಕವನ್ನೇ ಪಡೆಯುವನು ಎಂದು ಸಮರ್ಥಿಸಲಾಗುವುದು ಎಂದು ಭಾವ.

2. 'ತತ್ರ ತಟಿತೋ ವರುಣಂ ಗಚ್ಛತಿ। ತಟಿತೋ ಹಿ ಊಹ್ಯತೇ ವರುಣಲೋಕಸ್ತಟಿದುಪರಿ ಮುಕ್ತಾಮಯೋ ರಾಜತೇ ತತ್ರಾಸೌ ವರುಣೋ ರಾಜಾ ಸತ್ಯಾನೃತೇ ವಿವಿಂಚತಿ' ಎಂದು ಶ್ರುತಿ.

## आतिवाहिकाधिकरणम्—४

## ॥ ॐ आतिवाहिकस्तल्लिङ्गात् ॐ ॥ ४.३.४

अत्रार्चिषोऽनन्तरं प्राप्यवायोरातिवाहिकत्वं साध्यते । द्वितीय-प्राप्यतया प्रागुक्तो वायुरातिवाहिकाख्यो मुख्यवायुपुत्रः कश्चित्, न मुख्यवायुः । कुतः ? पूर्वप्राप्यत्वरूपतल्लिङ्गादित्यर्थः ।

---

## ಅತಿವಾಹಿಕಾಧಿಕರಣ—೪

## ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ೪.೩.೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಜ್ಞಾನಿಯು ಅರ್ಚಿಸ್ಸನ್ನು ಪಡೆದ ನಂತರ ಹೊಂದುವ ವಾಯುವು ಆತಿವಾಹಿಕವಾಯುವೆಂದು ಸಾಧಿಸಲಾಗುವುದು.

ಎರಡನೆಯದಾಗಿ ಹೊಂದಲ್ಪಡುವನೆಂದು ಹಿಂದೆ ಹೇಳಲಾಗಿರುವ ವಾಯುವು '[1]ಆತಿವಾಹಿಕನೆಂಬ ಹೆಸರುಳ್ಳ ಒಬ್ಬ ಮುಖ್ಯವಾಯುಪುತ್ರನೇ ಹೊರತು ಮುಖ್ಯ ವಾಯುವೇ ಅಲ್ಲ. ಮುಂಚೆಯೇ ಪ್ರಾಪ್ಯನಾಗುವನೆಂಬ ಲಿಂಗವಿರುವುದರಿಂದ ಎಂದು ಅರ್ಥ.

---

ಜ್ಞಾನಿಯು ದೇಹೋತ್ಕ್ರಮಣವಾದ ನಂತರ ತಾನು ಕ್ರಮಿಸುವ ಮಾರ್ಗದಲ್ಲಿ ತಟಿದಭಿಮಾನಿದೇವತೆಯ ಲೋಕವನ್ನು ಹೊಂದಿ ಅನಂತರ ಅಲ್ಲಿಂದ ವರುಣಲೋಕಕ್ಕೆ ತೆರಳುವನು. ತಟಿಲ್ಲೋಕವು ವರುಣಲೋಕವನ್ನು ಧರಿಸಿರುವುದು. ತಟಿಲ್ಲೋಕದ ಮೇಲಿರುವ ತನ್ನ ಲೋಕದಲ್ಲಿ ರಾಜನಾದ ವರುಣನು ರೋಗರಹಿತನಾಗಿ ವಿರಾಜಿಸುತ್ತಿರುವನು. ಅವನು ತನ್ನ ಪ್ರಜೆಗಳಿಗಾಗಿ ಸತ್ಯ-ಅನೃತಗಳ ವಿವೇಚನೆಯನ್ನು ಮಾಡುವನು ಎಂದು ಶ್ರುತಿಯ ಭಾವ.

1. 'ಅತಿಶಯಿತಂ ವಿಷ್ಣುಂ ವಹತಿ'- 'ಸರ್ವೋತ್ಕೃಷ್ಟನಾದ ವಿಷ್ಣುವನ್ನು ಕರೆದೊಯ್ಯುವವನು' ಎಂಬ ವಿವರಣೆಯಂತೆ ಮುಖ್ಯವಾಯುವು ಅತಿವಹನೆಂದೆನಿಸುವನು. ಅವನ ಪುತ್ರ ಆತಿವಾಹಿಕ.

नन्वथापि न मुख्यः कुतः ? अन्यथा तत्प्राप्त्यनापत्तेः। 'विद्युतमेवान्तत उपगच्छति द्यौर्वाव विद्युत्तत्पतिं वायुमुपगम्य' इत्यग्रे वाय्वन्तरप्राप्त्युक्तावपि सन्देहानिरासादित्यत आह—

॥ ॐ उभयव्यामोहात्तत्सिद्धेः ॐ ॥ ४.३.५

---

ಮುಂಚೆಯೇ ಹೊಂದಲ್ಪಡುವ ಮಾತ್ರದಿಂದ ಆ ವಾಯುವು ಮುಖ್ಯವಾಯು ವೇಕಾಗಬಾರದು. ಮೊದಲು ಪ್ರಾಪ್ಯನಾದವನು ಮುಖ್ಯವಾಯುವಲ್ಲದಿದ್ದಲ್ಲಿ ಮುಖ್ಯ ವಾಯುವಿನ ಪ್ರಾಪ್ತಿಯೇ ಇಲ್ಲವೆಂದಾದೀತು. 'ವಿದ್ಯುತಮೇವ ಅಂತತ ಉಪಗಚ್ಛತಿ ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ[1]' ಎಂದು ಮುಂದೆ ಇನ್ನೊಬ್ಬ ವಾಯುವಿನ ಪ್ರಾಪ್ತಿಯಾಗುವುದೆಂದು ಹೇಳಿದ್ದರೂ ಆ ವಾಯುವು ಮುಖ್ಯ ವಾಯುವೋ ಆತಿವಾಹಿಕವಾಯುವೋ ಎಂಬ ಸಂದೇಹದ ನಿವಾರಣೆಯಾಗಲಾರದು ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರ—

ಓಂ ಉಭಯವ್ಯಾಮೋಹಾತ್ತತ್ಸಿದ್ಧೇಃ ಓಂ ೪.೩.೫

---

1. 'ಉತ್ಕ್ರಾಂತೋ ವಿದ್ವಾನ್ ಪರಮಭಿಗಚ್ಛನ್ ವಿದ್ಯುತಮೇವ ಅಂತತ ಉಪಗಚ್ಛತಿ ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ' ಎಂದು ಶ್ರುತಿ.

ದೇಹದಿಂದ ಉತ್ಕ್ರಮಣಮಾಡಿದ ಜ್ಞಾನಿಯು ಬ್ರಹ್ಮನನ್ನು ಪಡೆಯಲು ಹೋಗುತ್ತ ಕೊನೆಗೆ ವಿದ್ಯುತ್ತನ್ನು ಹೊಂದುವನು. ವಿದ್ಯುತ್ ಎಂದರೆ ದ್ಯುಶಬ್ದವಾಚ್ಯಳಾದ ಭಾರತಿಯಾಗಿದ್ದಾಳೆ. ಅವಳ ಪತಿಯಾದ ವಾಯುವನ್ನು ಹೊಂದಿ ಅವನ ಮೂಲಕ ಜ್ಞಾನಿಯು ಬ್ರಹ್ಮನನ್ನು ಪಡೆಯುವನು ಎಂದು ಶ್ರುತಿಯ ಭಾವ.

'ಸ ವಾಯುಮಾಗಚ್ಛತಿ' (ಬೃ. ೭-೧೦.೧) ಎಂಬ ಶ್ರುತಿವಾಕ್ಯದಲ್ಲಿ ಮೊದಲು ವಾಯುಪ್ರಾಪ್ತಿಯಾಗುವುದೆಂದು ಹೇಳಿದ್ದರೂ ಆ ವಾಯು ಮುಖ್ಯವಾಯುವೆನ್ನಲು ಯಾವ ಆಧಾರವೂ ಇಲ್ಲ. ಆದರೆ, ಅನಂತರ ವಾಯುಪ್ರಾಪ್ತಿಯನ್ನು ಹೇಳುವ 'ಉತ್ಕ್ರಾಂತೋ ವಿದ್ವಾನ್' ಎಂಬ ಮೇಲೆ ಉದಾಹರಿಸಿರುವ ಶ್ರುತಿಯಲ್ಲಿ ವಾಯುವನ್ನು ದಿವಸ್ಪತಿ ಅಂದರೆ ಭಾರತೀಪತಿಯೆಂದು ಹೇಳಲಾಗಿದೆ. ಈ ಲಿಂಗದಿಂದ ಅನಂತರ ಪ್ರಾಪ್ಯನಾಗುವ ವಾಯುವು ಮುಖ್ಯವಾಯುವೆಂದು ಸಿದ್ಧಿಸುವುದೆಂದು ಭಾವ.

सप्तम्यर्थे पञ्चमी । उभयस्मिन् वायुशब्दे आतिवाहिको मुख्यो वेति व्यामोहे सन्देहेऽपि तत्सिद्धेः । पूर्वोक्त आतिवाहिकः पश्चादुक्तो मुख्य इत्यस्यार्थस्य सिद्धेः । पश्चात्तनस्य दिवस्पतित्व-लिङ्गादिति भावः ।

उत्क्रान्तस्तु शरीरात् स्वात् गच्छत्यर्चिषमेव तु ।
ततो हि वायोः पुत्रं च योऽसौ नाम्नाऽऽतिवाहिकः ॥

**ಸೂತ್ರಾರ್ಥ**

'ಉಭಯ ವ್ಯಾಮೋಹಾತ್. ಎಂಬಲ್ಲಿರುವ ಪಂಚಮೀವಿಭಕ್ತಿಯು ಸಪ್ತಮೀ ವಿಭಕ್ತಿಯ ಅರ್ಥವನ್ನು ಹೇಳುವುದು. ಉಭಯವ್ಯಾಮೋಹಾತ್ - ಎರಡು ವಾಯು ಶಬ್ದಗಳ ವಿಷಯದಲ್ಲೂ ಆತಿವಾಹಿಕವಾಯುವನ್ನು ಹೇಳುವ ಶಬ್ದವೋ ಅಥವಾ ಮುಖ್ಯವಾಯುವನ್ನು ಹೇಳುವ ಶಬ್ದವೋ ಎಂದು ಸಂದೇಹ ಉಂಟಾಗುವುದಾದರೂ, ತತ್ಸಿದ್ಧೇಃ – ಮೊದಲು ಪ್ರಾಪ್ಯನೆಂದು ಹೇಳಲ್ಪಟ್ಟಿರುವ ವಾಯುವು ಆತಿವಾಹಿಕನು, ಅನಂತರ ಹೇಳಲ್ಪಟ್ಟವನು ಮುಖ್ಯವಾಯು ಎಂಬ ವಿಷಯವು ಸಿದ್ಧವಾಗುವುದರಿಂದ. ಅನಂತರ ಹೇಳಲಾಗಿರುವ ವಾಯುವಿನ ವಿಷಯದಲ್ಲಿ ದಿವಸ್ಪತಿತ್ವವೆಂಬ ಲಿಂಗವಿರುವುದರಿಂದ ಆ ವಾಯುವು ಮುಖ್ಯವಾಯುವೆಂದು ನಿಶ್ಚಿತವಾಗುವುದೆಂದು ಭಾವ.

[1]'ಉತ್ಕ್ರಾಂತಸ್ತು ಶರೀರಾತ್ ಸ್ವಾತ್ ಗಚ್ಛತ್ಯರ್ಚಿಷಮೇವ ತು ।
ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾಽಽತಿವಾಹಿಕಃ ॥

1. ಈ ಬ್ರಹ್ಮತರ್ಕವಚನಗಳ ಭಾವ ಹೀಗಿದೆ--

ತಾನು ಅಭಿಮಾನಿಯಾಗಿರುವ ಜಡದೇಹದಿಂದ ಉತ್ಕ್ರಮಣಮಾಡಿದ ಬ್ರಹ್ಮಜ್ಞಾನಿಯು ಮೊದಲು 'ಅರ್ಚಿಷ್' ಎಂಬ ಹೆಸರಿನ ಅಗ್ನಿಪುತ್ರನನ್ನು ಪಡೆಯುವನು. ಅನಂತರ ಆತಿವಾಹಿಕನೆಂಬ ಹೆಸರಿನ ವಾಯುಪುತ್ರನನ್ನು ಹೊಂದುವನು. ಅನಂತರ ಕ್ರಮವಾಗಿ ಹಗಲು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ತಟಿತ್ ಇವುಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ಸೇರುವನು. ಅನಂತರ ವರುಣ, ಪ್ರಜಾಪತಿ, ಸೂರ್ಯ, ಚಂದ್ರ, ವೈಶ್ವಾನರಾಗ್ನಿ, ಇಂದ್ರ, ಧ್ರುವ, ಭಾರತೀದೇವಿ ಇವರನ್ನು ಕ್ರಮವಾಗಿ ಹೊಂದಿ ಅನಂತರ ಮುಖ್ಯವಾಯುವನ್ನು ಸೇರುವನು. ಕೊನೆಗೆ ಅವನ ಮೂಲಕ ಪುರುಷೋತ್ತಮನಾದ ಶ್ರೀಹರಿಯನ್ನು ಹೊಂದುವನು.

ततोऽहः पूर्वपक्षं चाप्युदक्संवत्सरं तथा ।
तटितं वरुणं चैव प्रजापं सूर्यमेव च ॥
सोमं वैश्वानरं चेन्द्रं ध्रुवं देवीं दिवं तथा ।
ततो वायुं परं प्राप्य तेनैति पुरुषोत्तमम् ॥'

इति स्मृत्योक्तार्थः सर्वो ध्येयः ॥ ४ ॥

### वैद्युताधिकरणम्—५

॥ ॐ वैद्यतेनैव ततस्तच्छ्रुतेः ॐ ॥ ४.३.६

अत्रेशप्राप्तिमार्गे मुख्यवायोरन्तिमत्वं साध्यते । तत इत्यनन्तरमन्यः प्राप्योऽस्तीति न शङ्क्यमिति शेषः । विद्युतोऽयं वैद्युतः । तेन विद्युत्पतिना वायुनैव ब्रह्मगमनश्रवणात् 'स एनान् ब्रह्म गमयति' इति श्रवणादित्यर्थः ।

---

ತತೋಽಹಃ ಪೂರ್ವಪಕ್ಷಂ ಚಾಪ್ಯುದಕ್‌ಸಂವತ್ಸರಂ ತಥಾ ।
ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ॥
ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ ।
ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಮ್ ॥'

ಎಂಬ ಸ್ಮೃತಿಯಿಂದ ಇಲ್ಲಿ ಹೇಳಿರುವ ಎಲ್ಲ ವಿಷಯಗಳನ್ನು ತಿಳಿಯತಕ್ಕದ್ದು.

### ವೈದ್ಯುತಾಧಿಕರಣ—೫

ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ ೪.೩.೬

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಭಗವಂತನನ್ನು ಹೊಂದುವ ಮಾರ್ಗದಲ್ಲಿ ಮುಖ್ಯ ವಾಯುವೇ ಕೊನೆಯವನೆಂದು ಸಮರ್ಥಿಸಲಾಗುವುದು. ಸೂತ್ರದಲ್ಲಿರುವ '**ತತಃ**' ಎಂಬ ಪದದ ನಂತರ 'ಅನ್ಯಃ ಪ್ರಾಪ್ಯೋಽಸ್ತಿ ಇತಿ ನ ಶಂಕ್ಯಂ' ಎಂಬ ಪದಗಳನ್ನು ಶೇಷವನ್ನಾಗಿ ಸೇರಿಸಬೇಕು.

यद्वा वैद्युतेनैव ब्रह्मप्राप्तिर्यतस्तस्माद्धेतोः स एवान्तिमप्राप्य इति शेषः। तच्छ्रुतेः वैद्युतेनैव ब्रह्मगमनस्य श्रवणादित्यर्थः। अन्यस्यान्तिमप्राप्यत्वे तस्य ब्रह्मप्रापकत्वं स्यात्। तच्च नास्तीति भावः। वैद्युतेनेत्युक्त्या 'विद्युत्पतिर्वायुरेव नयेद् ब्रह्म न चापरः' इति स्मृतिः सूचिता ॥५॥

---

ತತಃ - ಬ್ರಹ್ಮಪ್ರಾಪ್ತಿಯ ಮಾರ್ಗದಲ್ಲಿ ತಾರತಮ್ಯಕ್ರಮವನ್ನು ಬಿಟ್ಟು ಪ್ರಾಪ್ಯರಾದ ದೇವತೆಗಳನ್ನು ಹೇಳಿರುವುದರಿಂದ ಮುಖ್ಯವಾಯುವಿನ ಅನಂತರ ಭಗವಂತನಿಗಿಂತ ಮುಂಚೆ, ಅನ್ಯಃ ಪ್ರಾಪ್ಯೋಽಸ್ತಿ ಇತಿ ನ ಶಂಕ್ಯಂ – ಮತ್ತೊಬ್ಬ ದೇವತೆಯು ಪ್ರಾಪ್ಯನಾಗಿದ್ದಾನೆ ಎಂದು ಶಂಕಿಸತಕ್ಕದ್ದಲ್ಲ. ಏಕೆಂದರೆ, ವೈದ್ಯುತೇನೈವ ತಚ್ಛ್ರುತೇಃ – 'ವಿದ್ಯುತಃ ಅಯಂ ವೈದ್ಯುತಃ' ಎಂಬ ವಿವರಣೆಯನ್ನನುಸರಿಸಿ ವಿದ್ಯುತ್ ಅಂದರೆ ಭಾರತೀದೇವಿಯ ಪತಿಯಾದುದರಿಂದ ವೈದ್ಯುತನೆಂದೆನಿಸುವ ಮುಖ್ಯವಾಯುವಿನ ಮೂಲಕವೇ ಬ್ರಹ್ಮಪ್ರಾಪ್ತಿಯು ಶ್ರುತವಾಗಿರುವುದರಿಂದ. 'ಸ ಏನಾನ್ ಬ್ರಹ್ಮ ಗಮಯತಿ' ಎಂದು ಶ[illegible]ರುವುದರಿಂದ ಎಂದು ಭಾವ.

**'ವೈದ್ಯುತೇನೈವ ತಚ್ಛ್ರುತೇಃ' ಎಂ[illegible]ೂತ್ರಾಂಶಕ್ಕೆ ವ್ಯಾಖ್ಯಾನಾಂತರ**

ಅಥವಾ, 'ವೈದ್ಯುತೇನೈವ' ಎಂಬ ಪದಗಳ ನಂತರ 'ಬ್ರಹ್ಮಪ್ರಾಪ್ತಿಃ ಯತಃ ತಸ್ಮಾದ್ಧೇತೋಃ ಸ ಏವ ಅಂತಿಮಪ್ರಾಪ್ಯಃ' ಎಂಬ ಪದಗಳನ್ನು ಶೇಷವನ್ನಾಗಿ ಸೇರಿಸಬೇಕು. ಭಾರತೀಪತಿಯಾದ ಮುಖ್ಯವಾಯುವಿನಿಂದಲೇ ಬ್ರಹ್ಮಪ್ರಾಪ್ತಿಯಾಗುವುದರಿಂದ ಅವನೇ ಅಂತಿಮವಾಗಿ ಪ್ರಾಪ್ಯನು. ತಚ್ಛ್ರುತೇಃ – ವೈದ್ಯುತನಾಮಕನಾದ ಮುಖ್ಯವಾಯುವಿನಿಂದಲೇ ಬ್ರಹ್ಮಪ್ರಾಪ್ತಿಯು ಶ್ರುತವಾಗಿರುವುದರಿಂದ ಎಂದು ಅರ್ಥ. ಮತ್ತೊಬ್ಬ ದೇವತೆಯು ಅಂತಿಮಪ್ರಾಪ್ಯನಾಗಿದ್ದರೆ ಅವನೇ ಬ್ರಹ್ಮಪ್ರಾಪ್ತಿಗೆ ಕಾರಣನಾಗಬೇಕಾಗುವುದು. ಆದರೆ ಬ್ರಹ್ಮಪ್ರಾಪಕನಾದ ಮತ್ತೊಬ್ಬ ದೇವತೆ ಇಲ್ಲವೆಂದು ಭಾವ. 'ವೈದ್ಯುತೇನ' ಎಂದು ಹೇಳಿರುವುದರಿಂದ 'ವಿದ್ಯುತ್ಪತಿರ್ವಾಯು

कार्याधिकरणम्—६

॥ ॐ कार्यं बादरिरस्य गत्युपपत्तेः ॐ ॥ ४.३.७

एवं मार्गं विचार्य गम्यमत्र निरूप्यते। कार्यमुत्पत्तिमत्। तद् ब्रह्मेत्यन्वेति। 'स एनान् ब्रह्म' इति श्रुतौ कार्यं ब्रह्म चतुर्मुखाख्यमेव वायुर्नयतीति बादरिर्मन्यते। ब्रह्मशब्दस्येशे मुख्यत्वात्

---

ರೇವ ನಯೇದ್ ಬ್ರಹ್ಮ ನ ಚಾಪರಃ'[1] ಎಂಬ ಸ್ಮೃತಿಯು ಸೂಚಿತವಾಗುವುದು.

ಕಾರ್ಯಾಧಿಕರಣ—೬

ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ ೪.೩.೭

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಹೀಗೆ ಮಾರ್ಗವನ್ನು ವಿಚಾರಿಸಿದ ನಂತರ ಈ ಅಧಿಕರಣದಲ್ಲಿ ಗಮ್ಯವನ್ನು ನಿರೂಪಿಸಲಾಗುವುದು.

ಕಾರ್ಯವೆಂದರೆ ಉತ್ಪತ್ತಿಯುಳ್ಳದ್ದು. 'ತದ್ ಬ್ರಹ್ಮ' ಎಂಬ ಪದಗಳು ಇಲ್ಲಿ ಅನ್ವಯವನ್ನು ಪಡೆಯುವವು. 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯಲ್ಲಿ, ಕಾರ್ಯಂ ಬ್ರಹ್ಮ - ಉತ್ಪತ್ತಿಯುಳ್ಳ ಚತುರ್ಮುಖನಾಮಕನಾದ ಬ್ರಹ್ಮನನ್ನೇ ಕುರಿತು ವಾಯುವು ಕರೆದೊಯ್ಯುವನು ಎಂಬುದಾಗಿ, ಬಾದರಿಃ – ಬಾದರಾಯಣರ ಪುತ್ರರಾದ ಶುಕಾಚಾರ್ಯರು ತಿಳಿಯುವರು.

---

1. ವಿದ್ಯುತ್ಪತಿರ್ವಾಯುರೇವ ನಯೇದ್ ಬ್ರಹ್ಮ ನ ಚಾಪರಃ ।
   ಕುತೋಽನ್ಯಸ್ಯ ಭವೇಚ್ಛಕ್ತಿಃ ತಮೃತೇ ಪ್ರಾಣನಾಯಕಮ್ ॥
   -- ಬೃಹತ್ತಂತ್ರ.

• ಭಾರತೀಪತಿಯಾದ ವಾಯುವೇ ಜೀವರನ್ನು ಪರಬ್ರಹ್ಮನ ಬಳಿಗೆ ಕರೆದೊಯ್ಯುವವನು; ಬೇರೆಯವರಲ್ಲ. ಇಂದ್ರಿಯಗಳಿಗೆ ಸ್ವಾಮಿಯಾದ ವಾಯುದೇವರನ್ನುಳಿದು ಇತರ ಜೀವರಿಗೆ ಪರಬ್ರಹ್ಮನಲ್ಲಿಗೆ ಜೀವರನ್ನೊಯ್ಯುವ ಸಾಮರ್ಥ್ಯವೆಲ್ಲಿದೆ ? – ಎಂದು ಸ್ಮೃತಿಯ ಭಾವ.

कथमेवमित्यत उक्तम् — अस्येति । 'तथापि प्रकृतेर्बन्धो ब्रह्मणा सह भिद्यते' इत्युक्त्या चतुर्मुखमुक्तिपर्यन्तं बन्धस्य सन्ततत्वेन ततोऽर्वाग् अस्यैव गत्युपपत्तेरित्यर्थः । बद्धत्वेन परप्राप्त्ययोगरूपयुक्तिबलाद् ब्रह्मश्रुतेरमुख्यार्थत्वमिति भावः ।

विशेषश्रुतिबलाच्चामुख्यार्थत्वमित्याह—

॥ ॐ विशेषितत्वाच्च ॐ ॥ ४.३.८

'यदि वाव परमभिपश्यति प्राप्नोति ब्रह्माणं चतुर्मुखम्'

---

ಬ್ರಹ್ಮಶಬ್ದವು ಪರಬ್ರಹ್ಮನನ್ನೇ ಮುಖ್ಯವಾಗಿ ಹೇಳುವುದರಿಂದ 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯಲ್ಲಿ ಬ್ರಹ್ಮನೆಂದರೆ ಕಾರ್ಯಬ್ರಹ್ಮನೆಂದು ಅರ್ಥ ಹೇಳುವುದು ಹೇಗೆ ಎಂಬ ಶಂಕೆಗೆ ಉತ್ತರ— 'ಅಸ್ಯ' ಎಂದು. 'ತಥಾಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ' ಎಂದು ವಚನವಿರುವುದರಿಂದ ಚತುರ್ಮುಖನ ಮುಕ್ತಿಯವರೆಗೆ ಜೀವರಿಗೆ ಬಂಧವು ವ್ಯಾಪಿಸಿರುವುದರಿಂದ ಅದಕ್ಕೆ ಮುಂಚೆ ಚತುರ್ಮುಖನನ್ನು ಹೊಂದುವುದೇ ಯುಕ್ತವಾದದ್ದರಿಂದ ಎಂದು ಅರ್ಥ. 'ಜೀವರು ಬದ್ಧರಾಗಿರುವುದರಿಂದ ಪರಮಾತ್ಮನನ್ನು ಸಾಕ್ಷಾತ್ತಾಗಿ ಹೊಂದಲಾಗದು' ಎಂಬ ಯುಕ್ತಿಯ ಬಲದಿಂದ 'ಸ ಏನಾನ್' ಎಂಬ ಶ್ರುತಿಯಲ್ಲಿರುವ ಬ್ರಹ್ಮಪದಕ್ಕೆ ಅಮುಖ್ಯಾರ್ಥವನ್ನು ಹೇಳಬೇಕಾಗುವುದೆಂದು ಭಾವ.

ವಿಶೇಷಶ್ರುತಿಯ ಆಧಾರದಿಂದಲೂ 'ಸ ಏನಾನ್' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದವು ಅಮುಖ್ಯಾರ್ಥವುಳ್ಳದ್ದು ಎಂದು ಹೇಳುವ ಸೂತ್ರ—

ಓಂ ವಿಶೇಷಿತತ್ವಾಚ್ಚ ಓಂ ೪.೩.೮

**ಸೂತ್ರಾರ್ಥ**

'ಯದಿ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ'

इति श्रुतौ चतुर्मुखत्वेन ब्रह्मणो विशेषितत्वाच्च कार्यमेव ब्रह्मपदार्थ इत्यर्थः ।

'ब्रह्मविदाप्नोति परं' इति ज्ञानिनः परप्राप्त्युक्तेः कथं कार्यमित्यत आह—

॥ ॐ सामीप्यात्तु तद्व्यपदेशः ॐ ॥ ४.३.९

तुरेव । ज्ञानिनः परप्राप्तिव्यपदेशः परप्राप्तेः कालतः सामीप्यादेव हेतोर्न तु कार्यस्याप्राप्यत्वान्न परस्य प्रथमप्राप्यत्वादित्यर्थः ।

---

ಎಂಬ ಶ್ರುತಿಯಲ್ಲಿ ಬ್ರಹ್ಮನಿಗೆ ಚತುರ್ಮುಖನೆಂದು ವಿಶೇಷಣವನ್ನು ಕೊಟ್ಟಿರುವ ಕಾರಣದಿಂದಲೂ 'ಸ ಏನಾನ್' ಎಂಬ ಶ್ರುತಿಯಲ್ಲಿ ಕಾರ್ಯಬ್ರಹ್ಮನೇ ಬ್ರಹ್ಮಪದದ ಅರ್ಥವಾಗಿರುವನು ಎಂದು ಅರ್ಥ.

'ಬ್ರಹ್ಮವಿದಾಪ್ನೋತಿ ಪರಂ' ಎಂಬುದಾಗಿ ಜ್ಞಾನಿಗೆ ಪರಬ್ರಹ್ಮನ ಪ್ರಾಪ್ತಿಯನ್ನು ಹೇಳಿರುವುದರಿಂದ ಜ್ಞಾನಿಯು ಕಾರ್ಯಬ್ರಹ್ಮನನ್ನು ಹೊಂದುವನೆಂದು ಹೇಳುವುದು ಹೇಗೆ ಎಂಬ ಆಕ್ಷೇಪಕ್ಕೆ ಉತ್ತರ—

## ಓಂ ಸಾಮೀಪ್ಯಾತ್ತು ತದ್ವ್ಯಪದೇಶಃ ಓಂ ೪.೩.೯

**ಸೂತ್ರಾರ್ಥ**

'ತು' ಶಬ್ದಕ್ಕೆ ಏವ ಎಂದು ಅರ್ಥ. ತದ್ವ್ಯಪದೇಶಃ - ಜ್ಞಾನಿಗೆ ಪರಬ್ರಹ್ಮನ ಪ್ರಾಪ್ತಿಯಾಗುವುದೆಂದು ಹೇಳಿರುವುದು, ಸಾಮೀಪ್ಯಾತ್ತು - ಪರಮಾತ್ಮನ ಪ್ರಾಪ್ತಿಗೆ ಕಾಲಸಾಮೀಪ್ಯವಿರುವುದರಿಂದಲೇ ಹೊರತು ಕಾರ್ಯಬ್ರಹ್ಮನು ಪ್ರಾಪ್ಯನಲ್ಲವೆಂದಾಗಲಿ, ಪರಬ್ರಹ್ಮನು ಮೊದಲೇ ಪ್ರಾಪ್ಯನೆಂಬ ಕಾರಣದಿಂದಾಗಲಿ ಅಲ್ಲವೆಂದರ್ಥ. ಅಥವಾ, 'ತು' ಶಬ್ದವು 'ತದ್ವ್ಯಪದೇಶಸ್ತು' ಎಂದು ಅನ್ವಿತವಾಗಿ 'ಬ್ರಹ್ಮವಿದಾಪ್ನೋತಿ ಪರಂ' ಎಂಬ ಶ್ರುತಿಯ ವ್ಯಾಖ್ಯಾನಕ್ರಮವನ್ನು ಸೂಚಿಸುವುದು.

'तद्व्यपदेशस्तु' इत्यन्वितः सन् 'ब्रह्मवित्' इति श्रुतिगतिसूचनार्थो वा तुशब्दः ।

सामीप्यादिति कोऽर्थः ? लयादर्वाग् उत लय एव वा ? नाद्यः । बद्धत्वरूपप्रागुक्तयुक्तिसाम्यात् । नान्त्यः । मानाभावादित्यत आह—

॥ ॐ कार्यात्यये तदध्यक्षेण सहातः परमभिधानात् ॐ ॥
४.३.१०

कार्याणामत्यये नाशरूपप्रलये तदध्यक्षेण कार्याणां स्वामिना

---

ಕಾರ್ಯಬ್ರಹ್ಮನ ಪ್ರಾಪ್ತಿಯಾದ ನಂತರ ಸಮೀಪಕಾಲದಲ್ಲಿಯೇ ಪರಮಾತ್ಮನ ಪ್ರಾಪ್ತಿಯಾಗುವುದೆನ್ನುವುದರ ಅರ್ಥವೇನು ? ಪ್ರಲಯಕ್ಕಿಂತ ಮುಂಚೆಯೇ ಪರಮಾತ್ಮನ ಪ್ರಾಪ್ತಿಯಾಗುವುದೆಂದೇ ಅಥವಾ ಪ್ರಲಯಕಾಲದಲ್ಲಿ ಪರಮಾತ್ಮನ ಪ್ರಾಪ್ತಿಯಾಗುವುದೆಂದೇ ? ಮೊದಲನೆಯದು ಯುಕ್ತವಲ್ಲ. ಏಕೆಂದರೆ, ಜೀವನು ಬದ್ಧನಾಗಿರುವುದರಿಂದ ಪರಮಾತ್ಮನ ಪ್ರಾಪ್ತಿಯಾಗಲಾರದು ಎಂಬ ಹಿಂದೆ ಹೇಳಿದ ಯುಕ್ತಿ ಈಗಲೂ ಸಮಾನವಾಗಿದೆ. ಎರಡನೆಯದೂ ಸಮಂಜಸವಲ್ಲ. ಪ್ರಲಯುಕಾಲದಲ್ಲಿ ಪರಮಾತ್ಮನ ಪ್ರಾಪ್ತಿಯಾಗುವುದೆನ್ನಲು ಪ್ರಮಾಣವಿಲ್ಲದಿರುವುದರಿಂದ ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರ—

ಓಂ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ
ಪರಮಭಿಧಾನಾತ್ ಓಂ ೪.೩.೧೦

**ಸೂತ್ರಾರ್ಥ**

ಕಾರ್ಯಾತ್ಯಯೇ – ಎಲ್ಲ ಜನ್ಯಪದಾರ್ಥಗಳ ಅತ್ಯಯು ಅಂದರೆ ನಾಶರೂಪವಾದ ಪ್ರಳಯದಲ್ಲಿ, ತದಧ್ಯಕ್ಷೇಣ - ಎಲ್ಲ ಜನ್ಯಪದಾರ್ಥಗಳಿಗೆ ಸ್ವಾಮಿಯಾದ ಚತು-

चतुर्मुखेन सह अतश्चतुर्मुखात् परं ब्रह्म ज्ञानी गच्छति । कुतः ? 'ते ह ब्रह्माणमभिपद्य यदैतद्विलीयतेऽथ सह ब्रह्मणा परमभिगच्छन्ति' इति श्रुतौ तदभिधानादित्यर्थः ।

कार्येत्याद्युक्तिः लयस्वरूपोक्त्यर्था । तदध्यक्षेणेत्युक्तिः ईशनियोगात्तस्य कार्याधिकृतत्वेन तदपगमे तस्यापीशप्राप्तिर्युक्तेति सूचयितुम् ।

इतश्चैवमित्याह—

---

ಮುಖನೊಂದಿಗೆ, ಅತಃ - ಚತುರ್ಮುಖನ ಮೂಲಕ, ಪರಂ - ಪರಬ್ರಹ್ಮನನ್ನು ಜ್ಞಾನಿಯು ಹೊಂದುವನು. ಏಕೆಂದರೆ, ಅಭಿಧಾನಾತ್ – '[1]ತೇ ಹ ಬ್ರಹ್ಮಾಣಮಭಿಸಂಪದ್ಯ ಯದ್ವೈತದ್ವಿಲೀಯತೇऽಥ ಸಹ ಬ್ರಹ್ಮಣಾ ಪರಮಭಿಗಚ್ಛಂತಿ' ಎಂಬ ಶ್ರುತಿಯಲ್ಲಿ ಹಾಗೆ ಹೇಳಿರುವುದರಿಂದ ಎಂದು ಅರ್ಥ.

**ಸೂತ್ರದ ಪದಗಳ ಸ್ವಾರಸ್ಯ**

ಪ್ರಲಯದ ಸ್ವರೂಪವನ್ನು ತಿಳಿಸಲು 'ಕಾರ್ಯಾತ್ಯಯೇ' ಎಂದು ಹೇಳಲಾಗಿದೆ. ಭಗವಂತನ ಆದೇಶದಂತೆ ಚತುರ್ಮುಖನು ತನ್ನ ಕಾರ್ಯದಲ್ಲಿ ನಿಯುಕ್ತನಾಗಿರುವುದರಿಂದ ಆ ಅಧಿಕಾರವು ಮುಗಿದ ಮೇಲೆ ಅವನಿಗೂ ಭಗವಂತನ ಪ್ರಾಪ್ತಿಯಾಗುವುದು ಯುಕ್ತವೆಂದು ಸೂಚಿಸಲು 'ತದಧ್ಯಕ್ಷೇಣ' ಎಂದು ಹೇಳಲಾಗಿದೆ.

ಈ ಮುಂದೆ ಹೇಳುವ ಪ್ರಮಾಣದಿಂದಲೂ ಚತುರ್ಮುಖನೊಂದಿಗೆ ಜ್ಞಾನಿಗಳು ಪರಮಾತ್ಮನನ್ನು ಹೊಂದುವರು ಎಂದು ಹೇಳುವ ಸೂತ್ರ—

---

1. ದೇವತೆಗಳಲ್ಲದ ಬ್ರಹ್ಮಜ್ಞಾನಿಗಳು ಚತುರ್ಮುಖನನ್ನು ಹೊಂದಿ ಯಾವಾಗ ಈ ಕಾರ್ಯಪ್ರಪಂಚವು ಲಯವನ್ನು ಹೊಂದುವುದೋ ಆಗ ಚತುರ್ಮುಖನೊಂದಿಗೆ ಪರಬ್ರಹ್ಮನನ್ನು ಪಡೆಯುವರು ಎಂದು ಈ ಸೌಪರ್ಣಶ್ರುತಿಯ ಭಾವ.

॥ ॐ स्मृतेश्च ॐ ॥ ४.३.११

ब्रह्मणा सह ते सर्वे सम्प्राप्ते प्रतिसञ्चरे ।
परस्यान्ते परात्मानः प्रविशन्ति परं पदम् ॥

इति स्मृतेश्च कार्यात्यय इत्युक्त एवार्थो ज्ञायत इत्यर्थः ।

प्राप्ये पक्षान्तरमाह—

॥ ॐ परं जैमिनिर्मुख्यत्वात् ॐ ॥ ४.३.१२

---

ಓಂ ಸ್ಮೃತೇಶ್ಚ ಓಂ ೪.೩.೧೧

**ಸೂತ್ರಾರ್ಥ**

[1]"ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಪರಾತ್ಮಾನಃ ಪ್ರವಿಶಂತಿ ಪರಂ ಪದಮ್ ॥"

ಎಂಬ ಸ್ಮೃತಿಯಿಂದಲೂ 'ಕಾರ್ಯಾತ್ಯಯೇ' ಇತ್ಯಾದಿ ಸೂತ್ರದಲ್ಲಿ ಹೇಳಿದ ವಿಷಯವೇ ತಿಳಿದುಬರುವುದು ಎಂದು ಅರ್ಥ.

ಜ್ಞಾನಿಗಳಿಂದ ಪ್ರಾಪ್ಯನು ಯಾರೆಂಬ ವಿಷಯದಲ್ಲಿ ಪಕ್ಷಾಂತರವನ್ನು ಹೇಳುವ ಸೂತ್ರ—

ಓಂ ಪರಂ ಜೈಮಿನಿರ್ಮುಖ್ಯತ್ವಾತ್ ಓಂ ೪.೩.೧೨

---

1. ಪರಮಾತ್ಮನಲ್ಲೇ ನೆಲೆಸಿದ ಚಿತ್ತವುಳ್ಳ ಜ್ಞಾನಿಗಳೆಲ್ಲರೂ ಚತುರ್ಮುಖನ ನೂರು ವರ್ಷಗಳ ಆಯುಷ್ಯ ಮುಗಿದ ಮೇಲೆ ಪ್ರಲಯಕಾಲ ಪ್ರಾಪ್ತವಾದಾಗ ಆ ಚತುರ್ಮುಖನೊಂದಿಗೇ ಪರಮಾತ್ಮನನ್ನು ಪ್ರವೇಶಿಸುವರು ಎಂದು ಸ್ಮೃತಿವಾಕ್ಯದ ಭಾವ.

'स एनान् ब्रह्म' इति श्रुतौ परं ब्रह्म वायुर्गमयति न कार्यमित्यर्थ इति जैमिनिर्मन्यते । कुतः ? ब्रह्मशब्दस्य तत्र मुख्यत्वादित्यर्थः ।

मुख्यत्वे तदनुपपत्तिः प्रागुक्तेत्यत आह—

॥ ॐ दर्शनाच्च ॐ ॥ ४.३.१३

परस्येत्यनुवर्त्यम् । श्रवणादिसाधनैरपरोक्षतया परस्यैव ब्रह्मणो दर्शनाचान्यस्य तदभावाद्युक्त एवात्र मुख्यार्थस्वीकार इत्यर्थः ।

---

**ಸೂತ್ರಾರ್ಥ**

'ಸ ಏನಾನ್ ಬ್ರಹ್ಮ' ಎಂಬ ಶ್ರುತಿಯಲ್ಲಿ, ಪರಂ – ವಾಯುವು ಜ್ಞಾನಿಗಳನ್ನು ಪರಬ್ರಹ್ಮನ ಬಳಿಗೆ ಕೊಂಡೊಯ್ಯುವನು ಹೊರತು ಕಾರ್ಯಬ್ರಹ್ಮನ ಬಳಿಗಲ್ಲವೆಂದು ಹೇಳಲಾಗಿದೆ ಎಂದು ಜೈಮಿನಿಋಷಿಗಳು ಅಭಿಪ್ರಾಯಪಡುವರು. ಏಕೆಂದರೆ, ಮುಖ್ಯತ್ವಾತ್ – ಬ್ರಹ್ಮಶಬ್ದವು ಪರಬ್ರಹ್ಮನಲ್ಲೀ ಮುಖ್ಯವಾಗಿರುವುದರಿಂದ ಎಂದು ಅರ್ಥ.

'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದವು ಮುಖ್ಯಾರ್ಥವನ್ನು ಹೇಳುವುದಾದರೆ ಹಿಂದೆ ಅನುಪಪತ್ತಿಯನ್ನು ಹೇಳಲಾಗಿದೆ ಎಂಬ ಆಶಂಕೆಗೆ ಸಮಾಧಾನ—

ಓಂ ದರ್ಶನಾಚ್ಚ ಓಂ ೪.೩.೧೩

**ಸೂತ್ರಾರ್ಥ**

ಹಿಂದಿನ ಸೂತ್ರದಿಂದ 'ಪರಂ' ಎಂಬ ಪದವನ್ನು ಅನುವೃತ್ತಿ ಮಾಡಬೇಕು. ಶ್ರವಣ ಮೊದಲಾದ ಸಾಧನಗಳಿಂದ ಪರಬ್ರಹ್ಮನನ್ನು ಪ್ರತ್ಯಕ್ಷವಾಗಿ ನೋಡಿರುವುದರಿಂದ, ಮತ್ತೊಬ್ಬರನ್ನು ನೋಡಿಲ್ಲದಿರುವುದರಿಂದ 'ಸ ಏನಾನ್' ಎಂಬ ಶ್ರುತಿಯಲ್ಲಿ

इतश्चैवमित्याह—

॥ ॐ न च कार्ये प्रतिपत्त्यभिसन्धिः ॐ ॥ ४.३.१४

प्रतिपत्तिरुपास्तिः। तत्सहितोऽभिसन्धिरिच्छा प्रतिपत्त्यभिसन्धिः। कार्ये ब्रह्मणि प्रतिपत्तिः कार्यं प्राप्नवानीत्यभिसन्धिश्च नास्ति यतोऽतश्च परमेव प्राप्यं, न कार्यमित्यर्थः। हेतुसमुच्चये चः।

एवं बादरिजैमिनिमतभेदोक्त्या विरुद्धवत् प्रतीयमानानां

---

ಬ್ರಹ್ಮಶಬ್ದಕ್ಕೆ ಮುಖ್ಯಾರ್ಥವನ್ನು ಸ್ವೀಕರಿಸುವುದು ಯುಕ್ತವೇ ಆಗಿದೆ ಎಂದು ಅರ್ಥ.

ಈ ಮುಂದಿನ ಕಾರಣದಿಂದಲೂ ಜ್ಞಾನಿಗಳು ಪರಮಾತ್ಮನನ್ನು ನೇರವಾಗಿ ಪಡೆಯುವರು ಎಂದು ಹೇಳುವುದೇ ಯುಕ್ತವೆಂದು ಹೇಳುವ ಸೂತ್ರ—

**ಓಂ ನ ಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ಓಂ ೪.೩.೧೪**

**ಸೂತ್ರಾರ್ಥ**

ಪ್ರತಿಪತ್ತಿ ಎಂದರೆ ಉಪಾಸನೆ. ಅದರಿಂದ ಸಹಿತವಾದ ಅಭಿಸಂಧಿ ಅಂದರೆ ಇಚ್ಛೆ ಎಂದು 'ಪ್ರತಿಪತ್ತ್ಯಭಿಸಂಧಿ' ಪದದ ಅರ್ಥ. ಕಾರ್ಯಬ್ರಹ್ಮನ ಉಪಾಸನೆಯಾಗಲಿ, ಕಾರ್ಯಬ್ರಹ್ಮನನ್ನು ಹೊಂದುವನೆಂಬ ಇಚ್ಛೆಯಾಗಲಿ ಇಲ್ಲದಿರುವ ಕಾರಣ ಜ್ಞಾನಿಗಳಿಗೆ ಪರಬ್ರಹ್ಮನೇ ಪ್ರಾಪ್ಯನು ಹೊರತು ಕಾರ್ಯಬ್ರಹ್ಮನಲ್ಲವೆಂದು ಅರ್ಥ. ಸೂತ್ರದಲ್ಲಿರುವ 'ಚ' ಶಬ್ದವು ಹೇತುವಿನ ಸಮುಚ್ಚಯವನ್ನು ಹೇಳುವುದು.

ಹೀಗೆ, ಬಾದರಿ–ಜೈಮಿನಿಗಳ ಮತಭೇದವನ್ನು ಹೇಳಿದ್ದರಿಂದ ವಿರೋಧವಿರುವಂತೆ ತೋರುವ, ಕಾರ್ಯಬ್ರಹ್ಮನ ಪ್ರಾಪ್ತಿ - ಪರಬ್ರಹ್ಮನ ಪ್ರಾಪ್ತಿಯನ್ನು ಹೇಳುವ ಶ್ರುತಿಸ್ಮೃತಿಗಳಿಗೆ ವಿರೋಧವನ್ನು ಪರಿಹರಿಸಲು ಎರಡು ವಿಧವಾದ ಶ್ರುತಿಸ್ಮೃತಿ

कार्यपरगतिविषयश्रुतिस्मृतीनां विरोधं परिहरन् विषयविभागसत्तां सूचयित्वा उभयत्र च गन्तॄणां सहेतुकं विभागज्ञापनाय स्वमतमाह—

॥ ॐ अप्रतीकालम्बनान्नयतीति बादरायण उभयथा च दोषात् तत्क्रतुश्च ॐ॥ ४.३.१५

प्रतीकं देहः। उपलक्षणमेतत्। तत्रैव देहादावेव ब्रह्म पश्यन्तः प्रतीकालम्बनाः। तदन्येऽप्रतीकालम्बनाः। व्याप्ततया ब्रह्म पश्यन्त इत्यर्थः। तान् परं नयति, न तु सर्वान्। अन्यानेव च

---

ಗಳಿಗೆ ವಿಷಯಭೇದವಿರುವುದನ್ನು ಸೂಚಿಸಿ ಎರಡೂ ಕಡೆ ಹೋಗುವವರ ವಿಭಾಗವನ್ನು ಯುಕ್ತಿಸಹಿತವಾಗಿ ತಿಳಿಸಲು ಸೂತ್ರಕಾರರು ತಮ್ಮ ಅಭಿಪ್ರಾಯವನ್ನು ಹೇಳುವ ಸೂತ್ರ—

ಓಂ ಅಪ್ರತೀಕಾಲಂಬನಾನ್ ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ ತತ್ಕ್ರತುಶ್ಚ ಓಂ ೪.೩.೧೫

**ಸೂತ್ರಾರ್ಥ**

ಪ್ರತೀಕವೆಂದರೆ ದೇಹ. ದೇಹವೆನ್ನುವುದು ಇಲ್ಲಿ ಉಪಲಕ್ಷಣವಾಗಿದೆ[1]. ದೇಹ ಮೊದಲಾದವುಗಳಲ್ಲೇ ಬ್ರಹ್ಮನನ್ನು ನೋಡತಕ್ಕವರು ಪ್ರತೀಕಾಲಂಬನರು. ಇತರರು ಅಪ್ರತೀಕಾಲಂಬನರು. ಸರ್ವತ್ರ ಶ್ರೀಹರಿಯನ್ನು ನೋಡಬಲ್ಲವರೆಂದು ಅರ್ಥ. ಅಪ್ರತೀಕಾಲಂಬನರನ್ನು ವಾಯುವು ಪರಮಾತ್ಮನ ಬಳಿಗೆ ಕರೆದೊಯ್ಯುವನು ಹೊರತು ಎಲ್ಲರನ್ನೂ ಅಲ್ಲ. ಇತರರನ್ನು ಮಾತ್ರ ಕಾರ್ಯಬ್ರಹ್ಮನೆಡೆಗೆ ವಾಯುವು

---

1. ದೇಹ ಮಾತ್ರವಲ್ಲದೆ ಚಕ್ಷುರಾದಿ ಇಂದ್ರಿಯಗಳನ್ನೂ ಪ್ರತೀಕವೆಂದು ಗ್ರಹಿಸಬೇಕೆಂದು ಭಾವ.

कार्यमिति श्रुत्यर्थ इति बादरायणो मन्यते। कुतः ? उभयथा च दोषात्। कांश्चित् कार्यं, कांश्चित् परमित्यन ीकृत्य सर्वान् कार्यमेव नयति न परं, परमेव न कार्यमित्यङ्गीकारे दोषसत्त्वादित्यर्थः। आद्ये ब्रह्मशब्दस्य तत्र मुख्यत्वं, तद्दर्शनं तत्रैवोपास्त्यादिसत्त्वमिति परप्राप्तिपक्षे यत्साधकमुक्तं तदयुक्तं स्यात्। अन्त्ये कार्यस्यैव गम्यत्वोपपत्तिः, 'ब्रह्माणं चतुर्मुखं' इति विशेषितत्वमित्यादि यत् कार्यप्राप्तिपक्षे साधक-

---

ಕರೆದೊಯ್ಯುವನೆಂದು 'ಸ ಏನಾನ್'' ಎಂಬ ಶ್ರುತಿಯು ಅರ್ಥವೆಂದು ಬಾದರಾಯಣರು ಅಭಿಪ್ರಾಯಪಡುವರು. ಏಕೆಂದರೆ, ಉಭಯಥಾ ಚ ದೋಷಾತ್ - ಕೆಲವರನ್ನು ಕಾರ್ಯಬ್ರಹ್ಮನ ಬಳಿಗೆ, ಕೆಲವರನ್ನು ಪರಬ್ರಹ್ಮನ ಬಳಿಗೆ ಕೊಂಡೊಯ್ಯುವನೆಂದು ಅಂಗೀಕರಿಸದೆ ಎಲ್ಲರನ್ನೂ ಕಾರ್ಯಬ್ರಹ್ಮನ ಬಳಿಗೇ ಕರೆದೊಯ್ಯುವನು ಪರಬ್ರಹ್ಮನ ಬಳಿಗಲ್ಲವೆಂದಾಗಲೀ, ಎಲ್ಲರನ್ನೂ ಪರಬ್ರಹ್ಮನ ಬಳಿಗೇ ಕೊಂಡೊಯ್ಯುವನು ಹೊರತು ಕಾರ್ಯಬ್ರಹ್ಮನ ಬಳಿಗಲ್ಲ ಎಂದಾಗಲೀ ಒಪ್ಪಿದರೆ ದೋಷವಿರುವುದರಿಂದ ಎಂದು ಅರ್ಥ. ಎಲ್ಲರನ್ನೂ ಕಾರ್ಯಬ್ರಹ್ಮನ ಬಳಿಗೆ ಕರೆದೊಯ್ಯುವನೆಂಬ ಮೊದಲನೇ ಪಕ್ಷದಲ್ಲಿ – ಬ್ರಹ್ಮಶಬ್ದಕ್ಕೆ ಪರಬ್ರಹ್ಮನಲ್ಲಿ ಮುಖ್ಯತ್ವವಿರುವುದು, ಪರಮಾತ್ಮನ ದರ್ಶನವಾಗಿರುವುದು, ಪರಮಾತ್ಮನ ವಿಷಯದಲ್ಲೇ ಉಪಾಸನಾದಿಗಳಿರುವುದು ಎಂಬುದಾಗಿ ಪರಮಾತ್ಮನ ಪ್ರಾಪ್ತಿಯಾಗುವುದೆಂಬ ಪಕ್ಷದಲ್ಲಿ ಯಾವ ಸಾಧಕಗಳನ್ನು ಹೇಳಲಾಗಿದೆಯೋ ಅವು ಅಯುಕ್ತವಾದೀತು. ಎಲ್ಲರಿಗೂ ಪರಬ್ರಹ್ಮನ ಪ್ರಾಪ್ತಿಯಾಗುವದೆಂಬ ಎರಡನೆ ಪಕ್ಷದಲ್ಲಿ–ಕಾರ್ಯಬ್ರಹ್ಮನೇ ಪ್ರಾಪ್ಯನಾಗಿರುವುದರಲ್ಲಿರುವ ಯುಕ್ತತೆ, 'ಬ್ರಹ್ಮಾಣಂ ಚತುರ್ಮುಖಂ' ಎಂಬ ಪ್ರಮಾಣವಚನದಲ್ಲಿ ಚತುರ್ಮುಖನೆಂಬ ವಿಶೇಷಣವನ್ನು ಬ್ರಹ್ಮನಿಗೆ ಕೊಟ್ಟಿರುವುದು ಇತ್ಯಾದಿಯಾದ ಕಾರ್ಯಬ್ರಹ್ಮನ ಪ್ರಾಪ್ತಿಯಾಗುವುದೆಂದು ಹೇಳುವ ಪಕ್ಷಕ್ಕೆ ಯಾವ ಸಾಧಕಪ್ರಮಾಣಗಳನ್ನು ಹೇಳಲಾಗಿದೆಯೋ ಅದು ಅಯುಕ್ತವಾದೀತೆಂದು ಭಾವ. ಜ್ಞಾನಿಗಳು ಕಾರ್ಯಬ್ರಹ್ಮ–ಪರಬ್ರಹ್ಮ ಈ ಇಬ್ಬರನ್ನೂ ಪಡೆಯುವರೆಂಬ ಪಕ್ಷದಲ್ಲಿ

मुक्तं तदयुक्तं स्यादिति भावः । उभयप्राप्तिपक्षे दोषद्वयापात इत्येतट्टीकायामेव परिहृतम् ।

'यत्प्राप्तुमभिवाञ्छति तत्प्राप्नोति' इति वचनात् इच्छानुसारेण किं तयोः प्राप्तिरित्यत उक्तं — तत्क्रतुश्चेति । श्रुतिग्रहणमेतत् । 'स यथाकामो भवति तत्क्रतुर्भवति यत्क्रतुर्भवति तत्कर्म कुरुते तदभिसम्पद्यते' इति श्रुतिर्यतोऽतो नेच्छानुसारेण तत्प्राप्तिः, किन्तु

---

ಎರಡೂ ದೋಷಗಳು ಬರಬೇಕಾದೀತು ಎಂಬ ಶಂಕೆಯನ್ನು ತತ್ತ್ವಪ್ರಕಾಶಿಕೆಯಲ್ಲೇ ಪರಿಹರಿಸಲಾಗಿದೆ.

## 'ತತ್ಕ್ರತುಶ್ಚ' ಎಂಬ ಸೂತ್ರಾಂಶದ ವ್ಯಾಖ್ಯಾನ

[1]'ಯತ್ಪ್ರಾಪ್ತುಮಭಿವಾಂಛತಿ ತಮಾಪ್ನೋತಿ' ಎಂಬ ವಚನವಿರುವುದರಿಂದ ಜ್ಞಾನಿಗಳಿಗೆ ಅವರ ಇಚ್ಛಾನುಸಾರ ಕಾರ್ಯಬ್ರಹ್ಮನ ಅಥವಾ ಪರಬ್ರಹ್ಮನ ಪ್ರಾಪ್ತಿಯಾಗುವುದೇನು ? ಎಂಬ ಆಶಂಕೆಗೆ ಉತ್ತರವಾಗಿ 'ತತ್ಕ್ರತುಶ್ಚ' ಎಂದು ಹೇಳಲಾಗಿದೆ. ಈ ಪದವು ಶ್ರುತಿಯನ್ನು ಸೂಚಿಸುವ ಶಬ್ದವಾಗಿದೆ. 'ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ'[2] (ಬೃ. ೬-೪-೫) ಎಂಬ ಶ್ರುತಿ ಇರುವುದರಿಂದ ಇಚ್ಛಾನುಸಾರ

---

1. ಯದುಪಾಸ್ತೇ ಪುಮಾನ್ ಜೀವನ್ ಯತ್ಪ್ರಾಪ್ತುಮಭಿವಾಂಛತಿ ।
ಯಚ್ಚ ಪಶ್ಯತಿ ತೃಪ್ತಸ್ಸನ್ ತತ್ಪ್ರಾಪ್ನೋತಿ ಮೃತೇರನು ॥
-- ಪಾದ್ಮವಚನ

2. ಆ ಭಗವಂತನು ಯಾವ ಇಚ್ಛೆಯನ್ನು ಹೊಂದಿರುವನೋ, 'ಹಾಗೆಯೇ ಮಾಡುವೆನು' ಎಂದು ಅದೇ ರೀತಿಯ ಇಚ್ಛೆಯನ್ನು ಜ್ಞಾನಿಯಾದ ಜೀವನೂ ಪಡೆಯುವನು. ಜೀವನು ಯಾವ ಬಗೆಯ ಇಚ್ಛೆಯನ್ನು ಪಡೆಯುವನೋ ಅದಕ್ಕನುಗುಣವಾಗಿ ಉಪಾಸನಾದಿ ಕರ್ಮಗಳನ್ನು ಮಾಡುವನು. ಯಾರ ಉಪಾಸನಾದಿಗಳನ್ನು ಮಾಡುವನೋ ಅವರ ಅಪರೋಕ್ಷವನ್ನೂ ಅನಂತರ ಅವರ ಪ್ರಾಪ್ತಿರೂಪವಾದ ಫಲವನ್ನು ಹೊಂದುವನೆಂದು ಶ್ರುತಿಯ ಭಾವ.

केनचित् क्रमेणैवेत्यर्थः। अत्र श्रुतौ यत्प्राप्तीच्छा तज्ज्ञानोपासना-परोक्षैरेव तत्प्राप्तेरुक्तत्वादिति भावः।

कांश्चिदिति वाच्ये अप्रतीकेत्याद्युक्तिः क्रमेऽपि न सौकर्य-क्रमेणोभयप्राप्तिः 'सप्रतीकाश्चतुर्मुखमप्रतीकाः परमिहैते गच्छन्ति', 'प्रतीकं देह उद्दिष्टः' इत्यादिश्रुतिस्मृत्यनुरोधेन प्रतीकालम्बनान् कार्यम्, अन्यान् परमिति क्रम इति सूचयितुम्।

---

ಕಾರ್ಯಬ್ರಹ್ಮನ ಅಥವಾ ಪರಬ್ರಹ್ಮನ ಪ್ರಾಪ್ತಿಯಾಗಲಾರದು. ಅದರ ಬದಲು ಒಂದು ಕ್ರಮದಿಂದಲೇ ಪ್ರಾಪ್ತಿಯಾಗುವುದೆಂದು ಅರ್ಥ. ಈ ಶ್ರುತಿಯಲ್ಲಿ, ಯಾರನ್ನು ಹೊಂದುವ ಇಚ್ಛೆ ಇರುವುದೋ ಅವರ ಜ್ಞಾನ, ಉಪಾಸನೆ ಮತ್ತು ಅಪರೋಕ್ಷ ಗಳಿಂದಲೇ ಅವರ ಪ್ರಾಪ್ತಿಯಾಗುವುದೆಂದು ಹೇಳಿರುವುದರಿಂದ ಎಂದು ಭಾವ.

**ಸೂತ್ರದಲ್ಲಿ 'ಅಪ್ರತೀಕಾಲಂಬನ' ಎಂಬ ಪದಪ್ರಯೋಗದ ಉದ್ದೇಶ**

ಜ್ಞಾನಿಗಳಿಗೆ ಒಂದು ಕ್ರಮದಿಂದಲೇ ಕಾರ್ಯಬ್ರಹ್ಮನ ಅಥವಾ ಪರಬ್ರಹ್ಮನ ಪ್ರಾಪ್ತಿಯಾಗುವುದಾದರೂ ಸೌಕರ್ಯಕ್ರಮವನ್ನನುಸರಿಸಿ ಇಬ್ಬರ ಪ್ರಾಪ್ತಿಯಾಗ ಲಾರದು. ಏಕೆಂದರೆ, 'ಸಪ್ರತೀಕಾಶ್ಚತುರ್ಮುಖಂ ಅಪ್ರತೀಕಾಃ ಪರಮಿಹೈತೇ ಗಚ್ಛಂತಿ', 'ಪ್ರತೀಕಂ ದೇಹ ಉದ್ದಿಷ್ಟಃ[1]' ಇತ್ಯಾದಿ ಶ್ರುತಿ-ಸ್ಮೃತ್ಯನುಸಾರವಾಗಿ ಪ್ರತೀಕಾಲಂಬನರನ್ನು ಕಾರ್ಯಬ್ರಹ್ಮನ ಬಳಿಗೆ ಕೊಂಡೊಯ್ಯುವನು, ಅಪ್ರತೀ ಕಾಲಂಬನರನ್ನು ಪರಮಾತ್ಮನ ಬಳಿಗೇ ಕರೆದೊಯ್ಯುವನು ಎಂಬ ಕ್ರಮವೇ ಇರು ವುದು ಎಂದು ಸೂಚಿಸಲು ಸೂತ್ರದಲ್ಲಿ 'ಕಾಂಶ್ಚಿತ್' ಎಂದು ಹೇಳಬಹುದಾಗಿದ್ದರೂ ಅದರ ಬದಲು ಅಪ್ರತೀಕಾಲಂಬನಾನ್ ಎಂದು ಹೇಳಲಾಗಿದೆ.

---

1. ಪ್ರತೀಕಂ ದೇಹ ಉದ್ದಿಷ್ಟೋ ಯೇಷಾಂ ತತ್ರೈವ ದರ್ಶನಮ್ ।
ನ ತು ವ್ಯಾಪ್ತತಯಾ ಕ್ವಾಪಿ ಪ್ರತೀಕಾಲಂಬನಾಸ್ತು ತೇ ॥
ಅಪ್ರತೀಕಾ ದೇವತಾಸ್ತು ಋಷೀಣಾಂ ಶತಮೇವ ಚ ।
ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾದಿಶತಂ ತಥಾ ॥

अप्रतीकालम्बनाः केचित् केचिन्नेवमिति नियमाभाव इत्यत आह—

---

ಕೆಲವರು ಅಪ್ರತೀಕಾಲಂಬನರು, ಕೆಲವರಲ್ಲ ಎಂಬ ನಿಯಮವಿಲ್ಲ ಎಂಬ ಶಂಕೆಯನ್ನು ಪರಿಹರಿಸುವ ಸೂತ್ರ—

---

ಏತೇಽಧಿಕಾರಿಣೋ ವ್ಯಾಪ್ತದರ್ಶಿನೋಽನ್ಯೇ ನ ತು ಕ್ವಚಿತ್ ।
ಅಯೋಗ್ಯದರ್ಶನೇ ಯತ್ನಾದ್ ಭ್ರಂಶಃ ಪೂರ್ವಸ್ಯ ಚಾಪಿ ತು ॥
ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು ।
ಸ್ವದೇಹೇ ಬ್ರಹ್ಮದೃಷ್ಟ್ಯೈವ ಗಚ್ಛೇದ್ ಬ್ರಹ್ಮಸಲೋಕತಾಮ್ ।
ಬ್ರಹ್ಮಣಾ ಸಹ ಸಂಪ್ರಾಪ್ತೇ ಸಂಹಾರೇ ಪರಮಂ ಪದಮ್ ॥

-- ಗಾರುಡವಚನ

ಪ್ರತೀಕವೆಂದರೆ ದೇಹ ಮತ್ತು ಚಕ್ಷುರಾದಿ ಇಂದ್ರಿಯಗಳು. ಯಾರು ತಮ್ಮ ದೇಹಾದಿಗಳಲ್ಲೇ ಶ್ರೀಹರಿಯ ದರ್ಶನವನ್ನು ಮಾಡುವರೋ, ಎಂದೂ ಸರ್ವತ್ರ ಭಗವಂತನ ದರ್ಶನವನ್ನು ಮಾಡಲಾರರೋ ಅವರು ಪ್ರತೀಕಾಲಂಬನರು. ನೂರು ಮಂದಿ ದೇವತೆಗಳು, ನೂರು ಮಂದಿ ಋಷಿಗಳು, ನೂರು ಮಂದಿ ರಾಜರು. ನೂರು ಮಂದಿ ಗಂಧರ್ವರು, ಅಪ್ಸರೆಯರು ಮೊದಲಾದವರು - ಈ ಅಧಿಕಾರಿಗಳು ಅಪ್ರತೀಕಾಲಂಬನರು. ಇವರು ಮಾತ್ರ ಭಗವಂತನನ್ನು ಸರ್ವತ್ರ ನೋಡಬಲ್ಲರು ಹೊರತು ಇತರರೆಂದೂ ನೋಡಲಾರರು. ಯಾರಾದರೂ ಶ್ರವಣ ಮೊದಲಾದ ಪ್ರಯತ್ನಗಳಿಂದ ತಮಗೆ ಯೋಗ್ಯವಲ್ಲದ ಭಗವದ್ದರ್ಶನವನ್ನು ಪಡೆದರೆ ಅವರು ಹಿಂದೆ ಪಡೆದಿದ್ದ ಭಗವದ್ದರ್ಶನವೂ ನಿಷ್ಫಲವಾಗುವುದು.

ಎರಡು ಬಗೆಯ ಈ ಅಧಿಕಾರಿಗಳಲ್ಲಿ ಅಪ್ರತೀಕಾಲಂಬನರು ವೈಕುಂಠಲೋಕದಲ್ಲಿರುವ ಪರಮಾತ್ಮನನ್ನೇ ಹೊಂದುವರು. ತಮ್ಮ ದೇಹಾದಿಗಳಲ್ಲಿ ಮಾತ್ರ ಪರಮಾತ್ಮನನ್ನು ನೋಡುವ ಪ್ರತೀಕಾಲಂಬನರು ಪ್ರಲಯಕ್ಕೆ ಮುಂಚೆ ಭಗವಂತನೂ ಸನ್ನಿಹಿತನಾಗಿರುವ ಮಹರಾದಿಲೋಕಗಳಲ್ಲಿ ಚತುರ್ಮುಖನನ್ನು ಪಡೆದು ಅವನ ಉಪದೇಶದಿಂದ ತಮ್ಮ ಜ್ಞಾನವನ್ನು ಉಜ್ಜ್ವಲಗೊಳಿಸುವರು. ಅನಂತರ ಪ್ರಲಯಕಾಲ ಬಂದಾಗ ಚತುರ್ಮುಖನೊಂದಿಗೆ ಪರಮಾತ್ಮನನ್ನು ಪಡೆಯುವರು ಎಂದು ಈ ಸ್ಮೃತಿವಚನಗಳ ಸಾರವಾಗಿದೆ.

## ॥ ॐ विशेषं च दर्शयति ॐ ॥ ४.३.१६

अप्रतीकालम्बनत्वादिविशेषं च 'देवा वाव सर्वप्रकाशा ऋषयोऽन्तःप्रकाशा मनुष्या एव बहिःप्रकाशाः' इति श्रुतिर्दर्शयतीत्यर्थः ॥ ६ ॥

इति श्रीराघवेन्द्रयतिकृतायां तन्त्रदीपिकायां
चतुर्थाध्यायस्य तृतीयः पादः सम्पूर्णः
॥ श्रीकृष्णार्पणमस्तु ॥

---

## ಓಂ ವಿಶೇಷಂ ಚ ದರ್ಶಯತಿ ಓಂ ೪.೩.೧೬

**ಸೂತ್ರಾರ್ಥ**

ಅಪ್ರತೀಕಾಲಂಬನತ್ವ ಮೊದಲಾದ ವಿಶೇಷವಿರುವುದೆನ್ನುವುದನ್ನು ಕೂಡ 'ದೇವಾ ವಾವ ಸರ್ವಪ್ರಕಾಶಾ ಋಷಯೋಽಂತಃ ಪ್ರಕಾಶಾ ಮನುಷ್ಯಾ ಏವ ಬಹಿಃ ಪ್ರಕಾಶಾಃ' ಎಂಬ ಶ್ರುತಿಯು ತಿಳಿಸುವುದು ಎಂದು ಅರ್ಥ.

ಶ್ರೀ ರಾಘವೇಂದ್ರಯತಿಗಳು ರಚಿಸಿದ ತಂತ್ರದೀಪಿಕೆಯಲ್ಲಿ
ಚತುರ್ಥಾಧ್ಯಾಯದ ತೃತೀಯಪಾದವು ಸಮಾಪ್ತವಾಯಿತು.
ಶ್ರೀಕೃಷ್ಣಾರ್ಪಣಮಸ್ತು

## अथ चतुर्थाध्यायस्य चतुर्थः पादः

हरिः ॐ ॥ अत्र पादे चतुर्मुखेन सह परब्रह्मप्राप्तानां यस्तत्र भोगः स उच्यते ।

### सम्पद्याधिकरणम्—१

**॥ ॐ सम्पद्याविहाय स्वेन शब्दात् ॐ ॥ ४.४.१**

अत्र मुक्तस्य ब्रह्मानतिक्रमेणैव भोगानुभवः साध्यते । परमित्यस्ति ।

ज्ञानी परं ब्रह्म सम्पद्य प्राप्याविहाय परं ब्रह्मानतिक्रम्य स्वेन रूपेणावस्थितः सन् भोगान् भुङ्क्त इति शेषः । 'एतं सेतुं

---

## ಚತುರ್ಥಾಧ್ಯಾಯ ಚತುರ್ಥ ಪಾದ

**ಈ ಪಾದವು ಪ್ರತಿಪಾದಿಸುವ ವಿಷಯ**

ಈ ಪಾದದಲ್ಲಿ, ಚತುರ್ಮುಖನೊಂದಿಗೆ ಪರಬ್ರಹ್ಮನನ್ನು ಪಡೆದವರಿಗೆ ಮುಕ್ತಿಯಲ್ಲಿ ಎಂತಹ ಭೋಗವುಂಟಾಗುವುದೋ ಅದನ್ನು ಹೇಳಲಾಗುವುದು.

### ಸಂಪದ್ಯಾಧಿಕರಣ—೧

**ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ ೪.೪.೧**

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಮುಕ್ತನಿಗೆ ಬ್ರಹ್ಮನನ್ನು ಅತಿಕ್ರಮಿಸದೇ ಭೋಗ ಉಂಟಾಗುವುವೆಂದು ಸಾಧಿಸಲಾಗುವುದು. 'ಪರಂ' ಎಂಬ ಪದವು ಅಧ್ಯಾಹೃತವಾಗುವುದು.

ಜ್ಞಾನಿಯು, ಪರಂ - ಪರಬ್ರಹ್ಮನನ್ನು, ಸಂಪದ್ಯ - ಪಡೆದು, ಅವಿಹಾಯ - ಪರಬ್ರಹ್ಮನನ್ನು ಮೀರದೆ, ಸ್ವೇನ - ಸ್ವಸ್ವರೂಪದಿಂದಿದ್ದು, ಭೋಗಗಳನ್ನು ಅನುಭವಿಸುವನು. 'ಭೋಗಗಳನ್ನು ಅನುಭವಿಸುವನು' ಎಂಬ ಪದಗಳು ಇಲ್ಲಿ ಶೇಷಪೂರಣ

तीर्त्वाऽन्धः सन्नन्धो भवति' इति श्रुतिविरोध इत्यत उक्तं — शब्दादिति । 'इमां घोरामशिवां नदीं तीर्त्वैतं सेतुमाप्यैतेनैव सेतुना मोदते' इत्यादिश्रुतेरित्यर्थः । एतच्छ्रुत्यनुरोधेन प्रागुक्तसामान्यश्रुतेरर्थो वाच्य इति भावः ।

सम्पद्येत्युक्त्या 'स एवंविदेवं मन्वान एवं पश्यन्नात्मान-

ವಾಗಿವೆ. ಪರಬ್ರಹ್ಮನನ್ನು ಅತಿಕ್ರಮಿಸದೆ ಜ್ಞಾನಿಯು ಸ್ವರೂಪಾವಿರ್ಭಾವವನ್ನು ಪಡೆಯುವುದಾದಲ್ಲಿ [1]'ಏತಂ ಸೇತುಂ ತೀರ್ತ್ವಾ ಅಂಧಃ ಸನ್ನನಂಧೋ ಭವತಿ' (ಛಾಂ. ೮.೪.೨) ಎಂಬ ಶ್ರುತಿಯ ವಿರೋಧ ಬರುವುದು ಎಂಬ ಶಂಕೆಯನ್ನು ನಿವಾರಿಸಲು –'ಶಬ್ದಾತ್' ಎಂದು ಹೇಳಲಾಗಿದೆ. [2]'ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ ಏತಂ ಸೇತುಮಾಪ್ಯ ಏತೇನೈವ ಸೇತುನಾ ಮೋದತೇ' ಇತ್ಯಾದಿ ಶ್ರುತಿಯಿಂದ ಎಂದು ಅರ್ಥ. ಈ ಶ್ರುತಿಯನ್ನನುಸರಿಸಿ ಹಿಂದೆ ಹೇಳಿದ 'ಏತಂ ಸೇತುಂ' ಇತ್ಯಾದಿ ಸಾಮಾನ್ಯಶ್ರುತಿಗೆ ಅರ್ಥವನ್ನು ಹೇಳತಕ್ಕದ್ದೆಂದು ಭಾವ.

### ಸೂತ್ರದ ಪದಗಳ ಸ್ವಾರಸ್ಯ

ಸೂತ್ರದಲ್ಲಿರುವ 'ಸಂಪದ್ಯ' ಎಂಬ ಪದದಿಂದ [3]'ಸ ಏವಂವಿದೇವಂ ಮನ್ವಾನ

1. ಜಗದಾಧಾರನಾದ ಪರಮಾತ್ಮನನ್ನೂ ದಾಟಿ, ಸಂಸಾರದಲ್ಲಿ ಬಂಧನಕ್ಕೊಳಗಾಗಿರುವ ಜೀವನು ತನ್ನ ದುಃಖಾದಿದೋಷಗಳನ್ನು ಕಳೆದುಕೊಳ್ಳುವನೆಂದು ಶ್ರುತಿಯ ಅರ್ಥವಾಗಿದೆ ಎಂಬ ತಪ್ಪು ಕಲ್ಪನೆಯು ಆಶಂಕೆಗೆ ಮೂಲವಾಗಿದೆ. ಆದರೆ, 'ಇಮಾಂ ಘೋರಾಮಶಿವಾಂ' ಇತ್ಯಾದಿಯಾಗಿ ಮುಂದೆ ಉಲ್ಲೇಖಿಸಲಾಗಿರುವ ಶ್ರುತಿಯನ್ನನುಸರಿಸಿ – ಪರಮಾತ್ಮನ ಅನುಗ್ರಹವನ್ನು ಪಡೆಯುವ ಮುಂಚೆ ಅವಿದ್ಯೆಯ ಬಂಧನಕ್ಕೊಳಗಾಗಿ ಅಂಧನಾಗಿರುವ ಜೀವನು ಜಗದಾಧಾರನಾದ ಆ ಭಗವಂತನನ್ನು ಹೊಂದಲು ಅವಿದ್ಯಾದಿಗಳನ್ನು ದಾಟಿ ದುಃಖಾದಿದೋಷ ಮುಕ್ತನಾಗುವನು ಎಂದು 'ಏತಂ ಸೇತುಂ' ಎಂಬ ಶ್ರುತಿಯನ್ನು ವಿವರಿಸಬೇಕೆಂದು ಸ್ಪಷ್ಟಪಡಿಸಲಾಗಿದೆ.

2. ಸಂಸಾರಿಜೀವನು ಅಮಂಗಲವಾದ ಮತ್ತು ಘೋರವಾದ ಈ ಸಂಸಾರರೂಪವಾದ ನದಿಯನ್ನು ದಾಟಿ ಜಗದಾಶ್ರಯನಾದ ಪರಮಾತ್ಮನನ್ನು ಹೊಂದಿ ಅವನನ್ನು ಬಿಡದೆ ಅವನೊಂದಿಗೆಯೇ ಸುಖಿಸುವನು ಎಂದು ಈ ಮೌದ್ಗಲ್ಯಶ್ರುತಿಯ ಭಾವ.

3. ಆ ಅಧಿಕಾರಿಯು ಹಿಂದೆ ಈ ಶ್ರುತಿಯಲ್ಲಿ ಹೇಳಿರುವಂತೆ ಪರಮಾತ್ಮನನ್ನು ತಿಳಿದು

मभिसम्पद्यैतेनात्मना यथाकामं सर्वान् कामाननुभवति' इति श्रुतिः सूच्यते। स्वेनेति 'परं ज्योतिरुपसम्पद्य स्वेन रूपेणाभिनिष्पद्यते' इति श्रुतिः सूचिता। परानतिक्रमे ह्यमुक्तत्वं स्यात्, 'एतं सेतुं तीर्त्वा' इति तदतिक्रम एव मुक्तत्वोक्तेरिति शङ्कां व्युदसितुं स्वेनेत्युक्तम्। स्वरूपाविर्भावस्यैव मुक्तित्वादिति। शब्दादित्युक्तिः श्रुतिविरोधनिरासार्था ॥ १ ॥

मुक्ताधिकरणम्—२

## ॥ ॐ मुक्तः प्रतिज्ञानात् ॐ ॥ ४.४.२

ಏವಂ ಪಶ್ಯನ್ನಾತ್ಮಾನಮಭಿಸಂಪದ್ಯ ಏತೇನಾತ್ಮಾನಾ ಯಥಾಕಾಮಂ ಸರ್ವಾನ್ ಕಾಮಾನ್ ಅನುಭವತಿ' ಎಂಬ ಶ್ರುತಿಯು ಸೂಚಿತವಾಗುವುದು. 'ಸ್ವೇನ' ಎಂಬ ಪದದಿಂದ 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' (ಛಾಂ. ೮.೩.೪) ಎಂಬ ಶ್ರುತಿಯು ಸೂಚಿತವಾಗುವುದು. 'ಏತಂ ಸೇತುಂ ತೀರ್ತ್ವಾ' ಎಂದು ಭಗವಂತನನ್ನು ಅತಿಕ್ರಮಿಸಿದಾಗಲೇ ಮುಕ್ತಿಯೆಂದು ಹೇಳಿರುವುದರಿಂದ ಜೀವನು ಪರಮಾತ್ಮನನ್ನು ಅತಿಕ್ರಮಿಸದಿರುವುದಾದಲ್ಲಿ ಮುಕ್ತನಾಗಲಾರ ಎಂಬ ಶಂಕೆಯನ್ನು ನಿವಾರಿಸಲು 'ಸ್ವೇನ' ಎಂದು ಸೂತ್ರದಲ್ಲಿ ಹೇಳಲಾಗಿದೆ. ಸ್ವಸ್ವರೂಪಾವಿರ್ಭಾವೇ ಮುಕ್ತಿಯಾಗಿರುವುದರಿಂದ ಈ ಶಂಕೆಗೆ ಅವಕಾಶವಿಲ್ಲವೆಂದು ಭಾವ. 'ಏತಂ ಸೇತುಂ ತೀರ್ತ್ವಾ' ಎಂಬ ಶ್ರುತಿಯ ವಿರೋಧವನ್ನು ಪರಿಹರಿಸಲು 'ಶಬ್ದಾತ್' ಎಂದು ಹೇಳಲಾಗಿದೆ.

ಮುಕ್ತಾಧಿಕರಣ—೨

## ಓಂ ಮುಕ್ತಃ ಪ್ರತಿಜ್ಞಾನಾತ್ ಓಂ ೪.೪.೨

---

ಹಾಗೆಯೇ ಮನನವನ್ನು ಮಾಡಿ ಅನಂತರ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಅವನನ್ನು ಪಡೆದು ಆ ಪರಮಾತ್ಮನೊಂದಿಗೇ ಎಲ್ಲ ಭೋಗಗಳನ್ನು ತಾನು ಬಯಸಿದಂತೆ ಅನುಭವಿಸುವನು ಎಂದು ಈ ಸೌಪರ್ಣಶ್ರುತಿವಾಕ್ಯದ ಭಾವ.

अत्र ब्रह्म प्राप्य तदविहाय भोगान् भुञ्जानस्य मुक्तत्वं साध्यते । 'स तत्र पर्येति जक्षन् क्रीडन्' इत्यत्र मुक्त उच्यते । न तु क्रियाप्रतीत्या संसारी । कुतः ? 'अथ यदैनं मुक्तोऽनुप्रविशति मोदते प्रमोदते' इति श्रुत्यन्तरे मुक्तस्यैवैवंविधभोगप्रतिज्ञानादित्यर्थः । 'स्वेन रूपेणाभिनिष्पद्यते' इत्युपक्रमे स्पष्टं मुक्तत्वस्य प्रतिभानादिति चार्थः । श्रुतिविरोधात् मुक्तस्याक्रियत्वं बाधितमिति भावः ॥ २ ॥

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಪರಮಾತ್ಮನನ್ನು ಪಡೆದು ಅವನನ್ನು ತ್ಯಜಿಸದೆ ಭೋಗಗಳನ್ನು ಅನುಭವಿಸುವವನು ಮುಕ್ತನೆಂದು ಸಮರ್ಥಿಸಲಾಗುವುದು. 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್' ಎಂಬ ಶ್ರುತಿಯಲ್ಲಿ ಮುಕ್ತನನ್ನು ಹೇಳಲಾಗಿದೆ – ಹೊರತು ಪರ್ಯಟನ ಮೊದಲಾದ ಕ್ರಿಯೆಗಳು ತೋರುವುದರಿಂದ ಸಂಸಾರಿಯನ್ನು ಹೇಳಲಾಗಿದೆ ಎಂದು ಹೇಳತಕ್ಕದ್ದಲ್ಲ. ಏಕೆಂದರೆ, [1]'ಅಥ ಯದ್ಯೈನಂ ಮುಕ್ತೋಽನು ಪ್ರವಿಶತಿ ಮೋದತೇ ಪ್ರಮೋದತೆ' ಎಂಬ ಮತ್ತೊಂದು ಶ್ರುತಿಯಲ್ಲಿ ಮುಕ್ತನಿಗೇ ಇಂತಹ ಭೋಗಗಳಿರುವವೆಂದು ಪ್ರತಿಪಾದಿಸಲಾಗಿದೆಯಾದ್ದರಿಂದ ಎಂದು ಅರ್ಥ.

---

1. ಅಹರಹರೇನಂ ಅನುಪ್ರವಿಶತ್ಯುಪಸಂಕ್ರಮೇ ಚ ನ ತತ್ರ ಮೋದತೇ ನ ಪ್ರಮೋದತೇ ನ ಕಾಮಾನನುಭವತಿ ಬದ್ಧೋ ಹ್ಯೇಷ ತದಾ ಭವತಿ ಅಥ ಯದ್ಯೈನಂ ಮುಕ್ತೋನು ಪ್ರವಿಶತಿ ಮೋದತೇ ಚ ಪ್ರಮೋದತೇ ಚ ಕಾಮಾಂಶ್ಚೈವಾನುಭವತಿ. --ಬೃಹಚ್ಛ್ರುತಿ.

ಜೀವನು ಪ್ರತಿದಿನವೂ ಸುಷುಪ್ತಿಯಲ್ಲಿ ಭಗವಂತನನ್ನು ಪ್ರವೇಶಿಸುವನು. ಆದರೂ ಬದ್ಧನಾಗಿರುವ ಕಾರಣ ಮೋದ-ಪ್ರಮೋದಗಳನ್ನು ಹೊಂದಲಾರ. ಬಯಸಿದ ಭೋಗಗಳನ್ನು ಅನುಭವಿಸಲಾರ. ಆದರೆ, ದೇಹನಾಶವಾದ ನಂತರ ಮುಕ್ತನಾಗಿ ಯಾವಾಗ ಪರಮಾತ್ಮನನ್ನು ಪ್ರವೇಶಿಸುವನೋ ಆಗ ಮೋದ-ಪ್ರಮೋದಗಳನ್ನು ಹೊಂದುವನು. ಬಯಸಿದ ಭೋಗಗಳನ್ನು ಅನುಭವಿಸುವನೆಂದು ಶ್ರುತಿಯ ಭಾವ.

आत्माधिकरणम्—३

॥ ॐ आत्मा प्रकरणात् ॐ ॥ ४.४.३

अत्र मुक्तप्राप्यज्योतिषो ब्रह्मत्वं साध्यते । 'परं ज्योतिरुपसम्पद्य' इति श्रुतं मुक्तप्राप्यं ज्योतिरात्मा परमात्मैव । न तु 'सूर्यमगन्म ज्योतिः', 'स तेजसि सूर्ये सम्पन्नः' इत्यादिश्रुत्या सूर्यः । कुतः ? 'य आत्मा अपहतपाप्मा' इति परमात्मप्रकरणादित्यर्थः ॥ ३ ॥

---

**ಸೂತ್ರದ ಮತ್ತೊಂದು ವ್ಯಾಖ್ಯಾನ**

'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂದು ಆರಂಭದಲ್ಲಿ[1] ಸ್ಪಷ್ಟವಾಗಿ ಮುಕ್ತಿಯನ್ನು ಹೇಳಿರುವುದು ತೋರುವುದರಿಂದ ಎಂದೂ ಸೂತ್ರದ ಅರ್ಥವಾಗಿದೆ. ಮುಕ್ತನು ನಿಷ್ಕ್ರಿಯನೆಂಬುದು ಶ್ರುತಿವಿರುದ್ಧವಾದುದರಿಂದ ಬಾಧಿತವೆಂದು ಭಾವ.

ಆತ್ಮಾಧಿಕರಣ—೩

ಓಂ ಆತ್ಮಾ ಪ್ರಕರಣಾತ್ ಓಂ ೪.೪.೩

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಕ್ತನು ಹೊಂದುವ ಜ್ಯೋತಿಯು ಪರಬ್ರಹ್ಮನೆಂದು ಸಾಧಿಸಲಾಗುವುದು.

'ಪರಂ ಜ್ಯೋತಿರುಪಸಂಪದ್ಯ' ಎಂಬ ಶ್ರುತಿಯಲ್ಲಿ ಹೇಳಲಾಗಿರುವ ಮುಕ್ತಪ್ರಾಪ್ಯನಾದ ಜ್ಯೋತಿಯು, ಆತ್ಮಾ–ಪರಮಾತ್ಮನೇ ಹೊರತು 'ಸೂರ್ಯಮಗನ್ಮ ಜ್ಯೋತಿಃ', 'ಸ ತೇಜಸಿ ಸೂರ್ಯೇ ಸಂಪನ್ನಃ' ಇತ್ಯಾದಿ ಶ್ರುತಿಯಲ್ಲಿ ಹೇಳಿರುವಂತೆ ಸೂರ್ಯನಲ್ಲ. ಏಕೆಂದರೆ, ಪ್ರಕರಣಾತ್ – 'ಯ ಆತ್ಮಾ ಅಪಹತಪಾಪ್ಮಾ' ಎಂದು ಪರಮಾತ್ಮನ ಪ್ರಕರಣವಾದುದರಿಂದ ಎಂದು ಅರ್ಥ.

1. 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್' ಎಂಬ ವಾಕ್ಯವಿರುವ ಪ್ರಕರಣದ ಆರಂಭದಲ್ಲಿ.

## अविभागाधिकरणम्—४

## ॥ ॐ अविभागेन दृष्टत्वात् ॐ ॥ ४.४.४

अत्र सायुज्यभाजाम् ईशभुक्तभोगवत्त्वं साध्यते। अविभागेन परमात्मभोगाविभागेन सायुज्यभाजो भोगान् भुञ्जते। तद्भागानेव कांश्चिद्भुञ्जते, न पार्थक्येनेति यावत्। कुतः? दृष्टत्वात्। 'यानेवाहं शृणोमि यान् पश्यामि' इत्यादिश्रुतौ तथा दृष्टत्वादित्यर्थः। श्रुतिरिति

---

## ಅವಿಭಾಗಾಧಿಕರಣ--೪

## ಓಂ ಅವಿಭಾಗೇನ ದೃಷ್ಟತ್ವಾತ್ ಓಂ ೪.೪.೪

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಸಾಯುಜ್ಯಮೋಕ್ಷವನ್ನು ಪಡೆದಿರುವ ಮುಕ್ತರು ಭಗವಂತನು ಭುಜಿಸುವ ಭೋಗವನ್ನನುಭವಿಸುವರೆಂದು ಸಮರ್ಥಿಸಲಾಗುವುದು.

**ಅವಿಭಾಗೇನ** – ಪರಮಾತ್ಮನು ಭುಜಿಸುವ ಭೋಗಗಳು ಬೇರೆಯೆಂಬ ವಿಭಾಗವಿಲ್ಲದೆ ಸಾಯುಜ್ಯಮುಕ್ತಿಯನ್ನು ಪಡೆದಿರುವವರು ಭೋಗಗಳನ್ನು ಅನುಭವಿಸುವರು. ಪರಮಾತ್ಮನು ಭುಜಿಸುವ ಭೋಗದ ಕೆಲವು ಭಾಗಗಳನ್ನೇ ಭುಜಿಸುವರು ಹೊರತು ಪ್ರತ್ಯೇಕಭೋಗಗಳನ್ನು ಭುಜಿಸುವುದಿಲ್ಲವೆಂದು ಭಾವ. ಪರಮಾತ್ಮನ ಭೋಗಗಳನ್ನೇ ಆ ಮುಕ್ತರು ಭುಜಿಸುವರೆನ್ನಲು ಆಧಾರವೇನು ? ಎಂಬ ಶಂಕೆಗೆ ಉತ್ತರ— ದೃಷ್ಟತ್ವಾತ್. [1]'ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ' ಇತ್ಯಾದಿ ಶ್ರುತಿಯಲ್ಲಿ ಹಾಗೆ ಕಂಡಿರುವುದರಿಂದ ಎಂದು ಅರ್ಥ.

---

1. 'ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ ಯಾನ್ ಜಿಘ್ರಾಮಿ ತಾನೇವೈತೇ ಇದಂ ಶರೀರಂ ವಿಮುಚ್ಯಾನುಭವಂತಿ' – ಚತುರ್ವೇದಶಿಖಾಶ್ರುತಿ. ನಾನು (ಪರಮಾತ್ಮನು) ಯಾವುದನ್ನು ಕೇಳುವೆನೋ, ಯಾವುದನ್ನು ನೋಡುವೆನೋ ಯಾವುದನ್ನು ಆಘ್ರಾಣಿಸುವೆನೋ ಅವುಗಳನ್ನೇ ಈ ಜಡಶರೀರವನ್ನು ತೊರೆದ ಮುಕ್ತರು ಅನುಭವಿಸುವರು ಎಂದು ಶ್ರುತಿಯ ಭಾವ.

बाच्ये दृष्टत्वादित्युक्तिः मन्त्र्यादौ राजभोग्यगानलास्यादिकिञ्चिद्भो-क्तृत्वस्य लोके दृष्टत्वादिति सूचयितुम् ॥ ४ ॥

ब्राह्माधिकरणम् — ५

॥ ॐ ब्राह्मेण जैमिनिरुपन्यासादिभ्यः ॐ ॥ ४.४.५

अत्र मुक्तस्य देहाभावप्रयुक्ताभोक्तृत्वं निरस्य भोक्तृत्वं साध्यते । मुक्तस्य स्वदेहाभावेऽपीशप्रविष्टस्य ब्राह्मेण ब्रह्मसम्बन्धिना

---

**'ದೃಷ್ಟತ್ವಾತ್' ಎಂಬ ಪದದ ಸ್ವಾರಸ್ಯ**

ಮಂತ್ರಿ ಮೊದಲಾದವರು ರಾಜನು ಅನುಭವಿಸುವ ಗಾನ, ನೃತ್ಯ ಮೊದಲಾದ ಭೋಗಗಳಲ್ಲಿ ಸ್ವಲ್ಪ ಭಾಗವನ್ನು ಅನುಭವಿಸುವುದು ಲೋಕದಲ್ಲೂ ಕಂಡಿದೆ ಎಂದು ಸೂಚಿಸಲು ಸೂತ್ರದಲ್ಲಿ 'ಶ್ರುತೇಃ' ಎಂದು ಹೇಳಬಹುದಾಗಿದ್ದರೂ ಅದರ ಬದಲು 'ದೃಷ್ಟತ್ವಾತ್' ಎಂದು ಹೇಳಲಾಗಿದೆ.

ಬ್ರಾಹ್ಮಾಧಿಕರಣ--೫

**ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ೪.೪.೫**

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ, ಮುಕ್ತನಿಗೆ ದೇಹವಿಲ್ಲದ ಪ್ರಯುಕ್ತ ಭೋಕ್ತೃತ್ವವಿಲ್ಲವೆನ್ನುವುದನ್ನು ನಿರಾಕರಿಸಿ ಭೋಕ್ತೃತ್ವವನ್ನು ಸಮರ್ಥಿಸಲಾಗುವುದು.

ತನ್ನ ದೇಹವಿಲ್ಲದಿದ್ದರೂ, ಭಗವಂತನನ್ನು ಪ್ರವೇಶಿಸಿದ ಮುಕ್ತನಿಗೆ, ಬ್ರಾಹ್ಮೇಣ-ಪರಮಾತ್ಮನಿಗೆ ಸಂಬಂಧಿಸಿದ ದೇಹದಿಂದ, ಮತ್ತೊಂದು ದೇಹವನ್ನು ಪ್ರವೇಶಿಸಿದ ಪಿಶಾಚಾದಿಗ್ರಹಗಳಿಗೆ ಆ ದೇಹದಿಂದ, ಭೋಗವಿರುವಂತೆ ಭೋಗವಿರುವುದೆಂದು ಜೈಮಿನಿಋಷಿಗಳು ಅಭಿಪ್ರಾಯಪಡುತ್ತಾರೆ. ಜೈಮಿನಿಋಷಿಗಳು ಹಾಗೆ ಅಭಿಪ್ರಾಯ

देहेन ग्रहणाद्भोगोऽस्तीति जैमिनिर्मन्यते । कुतः ? 'ब्रह्मणा पश्यति ब्रह्मणा शृणोति' इति श्रुतौ तथोपन्यासात् । आदिपदस्य 'आदत्ते हरिहस्तेन हरिदृष्ट्यैव पश्यति' इत्यादिस्मृतेः, 'गच्छामि विष्णुपादाभ्यां विष्णुदृष्ट्या च दर्शनम् । इत्यादिपूर्वस्मरणान्मुक्तस्यैतद्भ-

ಪಡಲು ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ– ಉಪನ್ಯಾಸಾದಿಭ್ಯಃ. [1]'ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ' ಎಂಬ ಶ್ರುತಿಯಲ್ಲಿ ಹಾಗೆ ಹೇಳಿರುವುದರಿಂದ. 'ಉಪನ್ಯಾಸಾದಿ' ಎಂಬಲ್ಲಿರುವ ಆದಿಪದಕ್ಕೆ [2]'ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ' ಇತ್ಯಾದಿ ಸ್ಮೃತಿಯಿಂದ ಮತ್ತು [3]'ಗಚ್ಛಾಮಿ ವಿಷ್ಣುಪಾದಾಭ್ಯಾಂ ವಿಷ್ಣುದೃಷ್ಟ್ಯಾ ಚ ದರ್ಶನಂ । ಇತ್ಯಾದಿ ಪೂರ್ವಸ್ಮರಣಾತ್ ಮುಕ್ತಸ್ಯೈತದ್ಭವಿಷ್ಯತಿ ॥'

1. 'ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಾಹ್ಮೇಣೈವೇದಂ ಸರ್ವಮನುಭವತಿ'

-- ಮಾಧ್ಯಂದಿನಾಯನಶ್ರುತಿ.

ಬ್ರಹ್ಮಜ್ಞಾನಿಯು ನಾಶಹೊಂದುವ, ಪ್ರತ್ಯಕ್ಷಸಿದ್ಧವಾದ ಈ ಸ್ಥೂಲ-ಸೂಕ್ಷ್ಮದೇಹಗಳನ್ನು ತ್ಯಜಿಸಿ ಪರಬ್ರಹ್ಮನನ್ನು ಹೊಂದಿ ಅವನ ದೇಹದಿಂದಲೇ ನೋಡುವನು, ಕೇಳುವನು ಮತ್ತು ಎಲ್ಲ ಭೋಗಗಳನ್ನು ಅನುಭವಿಸುವನು ಎಂದು ಶ್ರುತಿಯ ಭಾವ.

2. ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿಪಾದಾಭ್ಯಾಂ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥'

ಮುಕ್ತನು ಶ್ರೀಹರಿಯ ಹಸ್ತದಿಂದಲೇ ಸ್ವೀಕರಿಸುವನು. ಶ್ರೀಹರಿಯ ಚಕ್ಷುಗಳಿಂದ ನೋಡುವನು. ಶ್ರೀಹರಿಯ ಪಾದಗಳಿಂದ ನಡೆಯುವನು. ಮುಕ್ತನಿಗೆ ಮೋಕ್ಷದಲ್ಲಿ ಇಂತಹ ಸ್ಥಿತಿಯು ಲಭಿಸುವುದು ಎಂದು ಸ್ಮೃತಿಯ ಭಾವ.

3. ಹಿಂದೆ ಸಂಸಾರಸಮಯದಲ್ಲಿ 'ವಿಷ್ಣುಪಾದಗಳಿಂದ ನಡೆಯುವೆನು, ವಿಷ್ಣುವಿನ ಚಕ್ಷುಗಳಿಂದ ನೋಡುವೆನು' ಇತ್ಯಾದಿಯಾಗಿ ಉಪಾಸನೆ ಮಾಡಿದ್ದರಿಂದ ಮುಕ್ತನಿಗೆ ಮೋಕ್ಷದಲ್ಲಿ ಭಗವದ್ದೇಹದಿಂದ ಭೋಗಗಳುಂಟಾಗುವವು ಎಂದು ಈ ಬೃಹತ್ತಂತ್ರಸ್ಮೃತಿಯ ಭಾವ. ಹಿಂದೆ ಮಾಡಿದ ಉಪಾಸನೆಯ ಬಲದಿಂದ ಸ್ವಯಂ ದೇಹವಿಲ್ಲದ ಮುಕ್ತನಿಗೆ ಅನ್ಯದೇಹದಿಂದ ಭೋಗವುಂಟಾಗುವುದೆಂಬ ಯುಕ್ತಿಯನ್ನು ಈ ಸ್ಮೃತಿ ಸೂಚಿಸುವುದು.

विष्यति' इति स्मृत्युक्तयुक्तेश्चेत्यर्थः । श्रुतौ ब्रह्मदेहानुक्तेः स्मृत्युक्तिः । स्वयं देहहीनस्य कथमन्यदेहेन भोग इत्यतो युक्त्युक्तिः।

देहाभावमुपेत्य भोगं प्रसाध्य तत्सत्त्वमुपेत्यापि तथाह—

॥ ॐ चितिमात्रेण तदात्मकत्वादित्यौडुलोमिः ॐ ॥

४.४.६

चितिमात्रेण चिन्मात्ररूपेण देहेन मुक्तो भोगान् भुङ्क्ते । न चैवं देहित्वे संसारिसमानत्वम् । चिन्मात्रदेहस्य तदात्मकत्वात्

---

ಎಂಬ ಸ್ಮೃತಿಯಲ್ಲಿ ಹೇಳಿರುವ ಯುಕ್ತಿಯಿಂದ ಎಂದು ಅರ್ಥ. 'ಬ್ರಹ್ಮಣಾ ಸಹ' ಇತ್ಯಾದಿ ಶ್ರುತಿಯಲ್ಲಿ ಪರಮಾತ್ಮನಿಗೆ ದೇಹವಿದೆಯೆಂದು ಹೇಳದಿರುವುದರಿಂದ ಸ್ಮೃತಿಯನ್ನು ಹೇಳಲಾಗಿದೆ. ತನಗೆ ದೇಹವಿಲ್ಲದಿರುವಾಗ ಇನ್ನೊಂದು ದೇಹದಿಂದ ಭೋಗವಾಗುವುದು ಹೇಗೆ ಎಂಬ ಶಂಕೆಯನ್ನು ಪರಿಹರಿಸಲು ಯುಕ್ತಿಯನ್ನು ಹೇಳಲಾಗಿದೆ.

ಮುಕ್ತನಿಗೆ ದೇಹವಿಲ್ಲವೆಂಬ ವಾದವನ್ನೊಪ್ಪಿ ಆದರೂ ಅವನಿಗೆ ಭೋಗವಿದೆ ಎಂದು ಸಾಧಿಸಿದ ನಂತರ ಮುಕ್ತನಿಗೆ ದೇಹವಿರುವುದನ್ನು ಅಂಗೀಕರಿಸಿ ಭೋಗವನ್ನು ಹೇಳುವ ಸೂತ್ರ—

ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ

೪.೪.೬

**ಸೂತ್ರಾರ್ಥ**

ಚಿತಿಮಾತ್ರೇಣ - ಕೇವಲ ಚಿದ್ರೂಪವಾದ ದೇಹದಿಂದ ಮುಕ್ತನು ಭೋಗಗಳನ್ನು ಅನುಭವಿಸುವನು. ಹೀಗೆ ಮುಕ್ತನು ದೇಹವನ್ನು ಪಡೆದಿದ್ದರೂ ಸಂಸಾರಿಯಂತಲ್ಲ. ಏಕೆಂದರೆ, ತದಾತ್ಮಕತ್ವಾತ್ - ಚಿನ್ಮಾತ್ರದೇಹವು ಮುಕ್ತನ ಸ್ವರೂಪವೇ

मुक्तस्वरूपत्वात् । तस्याकृत्रिमत्वेन कृत्रिमदेहस्यैव तत्साम्यापादकत्व-मित्यौडुलोमिर्मन्यत इत्यर्थः । 'चिन्मात्र एवैष भवति' इति श्रुत्या मुक्तस्य तदात्मकत्वात् चिन्मात्रात्मकत्वादित्यप्यर्थः । तेन मुक्तस्य कुतश्चिद्रूपत्वमिति निरस्तम् ।

देहभावाभावयोर्विरोधात् समाधिद्वयमयुक्तमित्यत आह—

---

ಆಗಿರುವುದರಿಂದ. ಚಿನ್ಮಾತ್ರದೇಹವು ಅಕೃತ್ರಿಮವಾಗಿದೆ. ಕೃತ್ರಿಮವಾದ ಅಂದರೆ ಉತ್ಪನ್ನವಾಗುವ ದೇಹವೇ ಸಂಸಾರಿಯ ಸಾಮ್ಯವನ್ನುಂಟುಮಾಡುವುದೆಂದು ಔಡುಲೋಮಿಗಳು ಅಭಿಪ್ರಾಯಪಡುತ್ತಾರೆ.

**'ತದಾತ್ಮಕತ್ವಾತ್' ಎಂಬ ಪದಕ್ಕೆ ಇನ್ನೊಂದು ವ್ಯಾಖ್ಯಾನ**

'[1]ಚಿನ್ಮಾತ್ರ ಏವ ಏಷ ಭವತಿ' ಎಂಬ ಶ್ರುತಿಯಿಂದ ಮುಕ್ತನು, ತದಾತ್ಮಕತ್ವಾತ್ - ಚಿನ್ಮಾತ್ರಸ್ವರೂಪನಾಗಿರುವುದರಿಂದ ಎಂದೂ 'ತದಾತ್ಮಕತ್ವಾತ್' ಎಂಬ ಪದದ ಅರ್ಥವಾಗಿದೆ. ಇದರಿಂದ ಮುಕ್ತನು ಚಿತ್ಸ್ವರೂಪನಾಗಿರುವನೆಂಬ ವಿಷಯದಲ್ಲಿ ಆಧಾರವೇನು ? ಎಂಬ ಶಂಕೆಯೂ ಪರಿಹೃತವಾಗುವುದು.

ಮುಕ್ತನಿಗೆ ದೇಹವಿರುವುದು ಮತ್ತು ಇಲ್ಲದಿರುವುದು ವಿರುದ್ಧವಾದುದರಿಂದ ಮೇಲೆ ಹೇಳಿದ ಎರಡು ಸಮಾಧಾನಗಳು ಯುಕ್ತವಲ್ಲವೆಂಬ ಆಕ್ಷೇಪವನ್ನು ನಿರಾಕರಿಸುವ ಸೂತ್ರ—

---

1. 'ಸರ್ವಂ ವಾ ಏತದಚಿತ್ ಪರಿತ್ಯಜ್ಯ ಚಿನ್ಮಾತ್ರ ಏವೈಷ ಭವತಿ ಚಿನ್ಮಾತ್ರ ಏವಾವತಿಷ್ಠತೇ ತಾಮೇತಾಂ ಮುಕ್ತಿರಿತ್ಯಾಚಕ್ಷತೇ' —ಉದ್ದಾಲಕಶ್ರುತಿ.

ಪ್ರತ್ಯಕ್ಷಸಿದ್ಧವಾದ ಮತ್ತು ಜಡವಾದ ಸ್ಥೂಲ-ಸೂಕ್ಷ್ಮ ಶರೀರವನ್ನು ಪರಿತ್ಯಜಿಸಿ ಮುಕ್ತನು ಕೇವಲ ಚಿತ್ಸ್ವರೂಪನಾಗುವನು. ಆ ಮುಕ್ತನು ಎಂದೆಂದಿಗೂ ಚಿನ್ಮಾತ್ರನಾಗಿಯೇ ಉಳಿಯುವನು. ಈ ದಶೆಯನ್ನು ಮುಕ್ತಿಯೆಂದು ಹೇಳುವರು ಎಂದು ಶ್ರುತಿಯ ಭಾವ.

॥ ॐ एवमप्युपन्यासात् पूर्वभावादविरोधं बादरायणः ॐ ॥

४.४.७

एवमपि चिन्मात्रदेहेन भोगान् भुञ्जत इत्येवंप्रकारेणापि 'स वा एष एतस्मान्मर्त्याद्विमुक्तश्चिन्मात्री भवत्यथ तेनैव रूपेणा-भिपश्यत्यभिशृणोति' इति श्रुतावुपन्यासात् पूर्वभावात् पूर्वस्य

---

ಓಂ ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ ಓಂ ೪.೪.೭

**ಸೂತ್ರಾರ್ಥ**

ಏವಮಪಿ - ಕೇವಲ ಚಿದಾತ್ಮಕವಾದ ದೇಹದಿಂದ ಮುಕ್ತನು ಭೋಗಗಳನ್ನು ಅನುಭವಿಸುವನು ಎಂಬ ರೀತಿಯಿಂದಲೂ [1]'ಸ ವಾ ಏಷ ಏತಸ್ಮಾತ್ ಮರ್ತ್ಯಾದ್ವಿಮುಕ್ತಶ್ಚಿನ್ಮಾತ್ರೀ ಭವತಿ ಅನೇನೈವ ರೂಪೇಣ ಅಭಿಪಶ್ಯತ್ಯಭಿಶೃಣೋತಿ' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ, ಪೂರ್ವಭಾವಾತ್ - ಪೂರ್ವಸ್ಯ - ಜೈಮಿನಿಗಳು ಹಿಂದೆ ಹೇಳಿದ ಮುಕ್ತರಿಗೆ ದೇಹವಿಲ್ಲದಿರುವಿಕೆಯು, ಭಾವಾತ್ – ಅಲ್ಲೇ ಹೇಳಿರುವ ಶ್ರುತಿಯಿಂದ ಸತ್ಯವೆಂದು ತಿಳಿಯುವುದರಿಂದ - ಎರಡೂ ಮತಗಳು ಪ್ರಾಮಾಣಿಕ

---

1. 'ಸ ವಾ ಏಷ ಏತಸ್ಮಾತ್ ಮರ್ತ್ಯಾದ್ವಿಮುಕ್ತಶ್ಚಿನ್ಮಾತ್ರೀ ಭವತ್ಯಥ ತೇನೈವ ರೂಪೇಣಾಭಿಪಶ್ಯತ್ಯಭಿಶೃಣೋತ್ಯಭಿಮನುತೇಽಭಿವಿಜಾನಾತಿ ತಾಮಾಹುರ್ಮುಕ್ತಿಃ ।'

— ಸೌಪರ್ಣಶ್ರುತಿ.

ಮುಕ್ತನು ವಿನಾಶಶೀಲವಾದ. ಕರ್ಮಜನ್ಯವಾದ ಜಡಶರೀರದಿಂದ ವಿಮುಕ್ತನಾಗಿ ಚಿನ್ಮಾತ್ರ ರೂಪವಾದ ತನ್ನ ಸ್ವರೂಪದ ಅಭಿವ್ಯಕ್ತಿಯನ್ನು ಪಡೆಯುವನು. ಅನಂತರ ಆ ಚಿತ್ಸ್ವರೂಪ ವಾದ ಇಂದ್ರಿಯಗಳಿಂದಲೇ ರೂಪಾದಿಗಳನ್ನು ನೋಡುವನು, ಶಬ್ದಗಳನ್ನು ಕೇಳುವನು. ತನ್ನ ಯೋಗ್ಯತಾನುಗುಣವಾಗಿ ಎಲ್ಲವನ್ನೂ ಸಾಮಾನ್ಯ - ವಿಶೇಷಸ್ವರೂಪದಿಂದ ತಿಳಿಯುವನು. ಇಂತಹ ಸ್ಥಿತಿಯನ್ನು ಮುಕ್ತಿಯೆನ್ನುವರು ಎಂದು ಶ್ರುತಿಯ ಭಾವ.

जैमिन्युक्तदेहाभावस्यापि भावात् तत्रोकश्रुत्या सत्त्वावगमात्–द्वयोरपि प्रामाणिकत्वादिति यावत् — अविरोधं जैमिन्यौडुलोमिमतयोर्मर्त्यामर्त्यदेहाभावभावाभ्युपगमेनाविरोधं बादरायणो मन्यत इत्यर्थः। अविरोधप्रकारश्च 'मर्त्यदेहं परित्यज्य चितिमात्रात्मदेहिनः' इत्यादिस्मृत्यनुसारेण चिन्मात्रकेण स्वदेहेन ब्रह्मदेहेन च साहित्येन

---

ವಾಗಿರುವುದರಿಂದ ಎಂದು ಭಾವ. ಅವಿರೋಧಂ - ಜೈಮಿನಿ ಮತ್ತು ಔಡುಲೋಮಿಗಳ ಮತಗಳಿಗೆ, ಕ್ರಮವಾಗಿ ಮರ್ತ್ಯದೇಹವಿಲ್ಲದಿರುವುದು - ಅಮರ್ತ್ಯದೇಹವಿರುವುದು ಸಮ್ಮತವೆಂದು ಹೇಳುವ ಮೂಲಕ ಅವಿರೋಧವೆಂದು ಬಾದರಾಯಣರು ಅಭಿಪ್ರಾಯ ಪಡುತ್ತಾರೆಂದು ಅರ್ಥ.

**ಜೈಮಿನಿ-ಔಡುಲೋಮಿ ಮತಗಳಿಗೆ ವಿರೋಧಪರಿಹಾರದ ರೀತಿ**

ಈ ಎರಡೂ ಮತಗಳಿಗೆ ವಿರೋಧವನ್ನು ಪರಿಹರಿಸುವ ರೀತಿ ಹೀಗಿದೆ— 'ಮರ್ತ್ಯಂ ದೇಹಂ ಪರಿತ್ಯಜ್ಯ ಚಿತಿಮಾತ್ರಾತ್ಮದೇಹಿನಃ'[1] ಇತ್ಯಾದಿ ಸ್ಮೃತಿಯನ್ನನುಸರಿಸಿ ಕೇವಲ ಚಿದ್ರೂಪವಾದ ತನ್ನ ದೇಹದಿಂದ ಮತ್ತು ಬ್ರಹ್ಮದೇಹದಿಂದಲೂ ಒಟ್ಟಿಗೆ ಭೋಗವಾಗುವುದರಿಂದ ವಿರೋಧವಿಲ್ಲವೆಂದು ಬಾದರಾಯಣರು ಅಭಿಪ್ರಾಯ ಪಡುವರು. ಬ್ರಹ್ಮದೇಹದಿಂದ ಒಟ್ಟಿಗೇ ಎಂದರೆ ಬ್ರಹ್ಮದೇಹದಿಂದಲೇ ಮುಕ್ತನಿಗೆ ದರ್ಶನ - ಶ್ರವಣಾದಿಗಳನ್ನು ಹೇಳಿರುವುದರಿಂದ ಚಿನ್ಮಾತ್ರನಾದ ಮುಕ್ತನಿಗೂ-

---

1. ಮರ್ತ್ಯಂ ದೇಹಂ ಪರಿತ್ಯಜ್ಯ ಚಿತಿಮಾತ್ರಾತ್ಮದೇಹಿನಃ ।
ಚಿತಿಮಾತ್ರೇಂದ್ರಿಯಾಶ್ಚೈವ ಪ್ರವಿಷ್ಟಾ ವಿಷ್ಣುಮವ್ಯಯಮ್ ।
ತದಂಗಾನುಗ್ರಹೀತೈಶ್ಚ ಸ್ವಾಂಗೈರೇವ ಪ್ರವರ್ತನಮ್ ।
ಕುರ್ವಂತಿ ಭುಂಜತೇ ಭೋಗಾನ್ ತದಂತರ್ಬಹಿರೇವ ವಾ ।
ಯಥೇಷ್ಟಂ ಪರಿವರ್ತಂತೇ ತಸ್ಯೈವಾನುಗ್ರಹೇರಿತಾಃ ॥

-- ನಾರಾಯಣಾಧ್ಯಾತ್ಮಸ್ಮೃತಿ

भोगाविरोधं बादरायणो मन्यते। साहित्यं च तत एव दर्शन-श्रवणाद्युक्तेः तदनुग्राह्यानुग्राहकभावेनेति तत्त्वप्रदीपोक्तरीत्या ध्येयम्। औडलोमिमते प्राङ्मानानुक्तेरिहोपन्यासादित्युक्तिः ॥ ५ ॥

सङ्कल्पाधिकरणम्—६

॥ ॐ सङ्कल्पादेव च तच्छ्रुतेः ॐ ॥ ४.४.८

अत्र मुक्तस्य सङ्कल्पमात्रसाध्यभोगवत्त्वं साध्यते। मुक्तानां सङ्कल्पादेव भोगसिद्धिः। कुतः? तच्छ्रुतेः। 'सङ्कल्पादेवास्य पितरः

---

ಭಗವಂತನ ದೇಹಕ್ಕೂ ಅನುಗ್ರಾಹ್ಯ-ಅನುಗ್ರಾಹಕಭಾವ ಸಂಬಂಧವಿದ್ದು ಭಗವಂತನ ಅನುಗ್ರಹದಿಂದ ಮುಕ್ತನು ದರ್ಶನಾದಿಗಳನ್ನು ಮಾಡುವನೆಂದು ತತ್ತ್ವಪ್ರದೀಪದಲ್ಲಿ ಹೇಳಿರುವಂತೆ ತಿಳಿಯಬೇಕು. ಔಡುಲೋಮಿಮತದ ವಿಷಯದಲ್ಲಿ ಹಿಂದೆ ಪ್ರಮಾಣವನ್ನು ಹೇಳದಿರುವುದರಿಂದ ಇಲ್ಲಿ 'ಉಪನ್ಯಾಸಾತ್' ಎಂಬ ಪದದಿಂದ ಪ್ರಮಾಣವನ್ನು ಹೇಳಲಾಗಿದೆ.

ಸಂಕಲ್ಪಾಧಿಕರಣ—೬

ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ ೪.೪.೮

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಕ್ತನಿಗೆ ಕೇವಲ ಸಂಕಲ್ಪದಿಂದ ಭೋಗಗಳು ಸಿದ್ಧಿಸುವವೆಂದು ಸಮರ್ಥಿಸಲಾಗುವುದು.

ಸಂಕಲ್ಪಾದೇವ - ಮುಕ್ತರಿಗೆ ಸಂಕಲ್ಪದಿಂದಲೇ ಭೋಗಗಳು ಸಿದ್ಧಿಸುವವು. ಇದಕ್ಕೆ ಆಧಾರವೇನೆಂಬ ಪ್ರಶ್ನೆಗೆ ಉತ್ತರ - ತಚ್ಛ್ರುತೇಃ. [1]'ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ' ಎಂದು ಸಂಕಲ್ಪದಿಂದಲೇ ಮುಕ್ತರಿಗೆ ಭೋಗಗಳು ಸಿದ್ಧಿಸು

---

1. ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ। (ಛಾಂ. ೮.೨.೧)

समुत्तिष्ठन्ति' इति तस्य श्रवणादित्यर्थः । चशब्दस्तु लोके भोगस्य कर्मसाध्यत्वात् मुक्तभोगस्यापि प्रयत्नापेक्षेति न वाच्यमिति शङ्काव्यावृत्त्यर्थ इति टीका । चकारादनिष्टभोगोपरमश्चेति तत्त्वप्रदीपोक्तिः ॥ ६ ॥

### अनन्याधिपत्यधिकरणम्—७

॥ ॐ अत एव चानन्याधिपतिः ॐ ॥ ४.४.९

अत्र मुक्तानामनियम्यत्वराहित्येन भोगः साध्यते । अत एव

---

ವುದು ಶ್ರುತವಾಗಿರುವುದರಿಂದ ಎಂದು ಅರ್ಥ. 'ಲೋಕದಲ್ಲಿ ಭೋಗವು ಕರ್ಮಸಾಧ್ಯವಾದುದರಿಂದ ಮುಕ್ತರ ಭೋಗಕ್ಕೂ ಪ್ರಯತ್ನದ ಆವಶ್ಯಕತೆ ಇದೆ ಎಂದು ಹೇಳತಕ್ಕದ್ದಲ್ಲ ಎಂಬುದಾಗಿ ಸೂತ್ರದಲ್ಲಿರುವ 'ಚ' ಶಬ್ದವು ಶಂಕೆಯ ನಿರಾಕರಣೆಯನ್ನು ಸೂಚಿಸುವುದೆಂದು ತತ್ತ್ವಪ್ರಕಾಶಿಕೆಯಲ್ಲಿ ಹೇಳಿದೆ. 'ಚ' ಶಬ್ದವು ಮುಕ್ತಿಯಲ್ಲಿ ಅನಿಷ್ಟಭೋಗದ ನಿವೃತ್ತಿಯನ್ನು ಹೇಳುವುದೆಂದು ತತ್ತ್ವಪ್ರದೀಪದಲ್ಲಿ ಹೇಳಿದೆ.

### ಅನನ್ಯಾಧಿಪತ್ಯಾಧಿಕರಣ—೭

## ಓಂ ಅತ ಏವ ಚಾನನ್ಯಾಧಿಪತಿಃ ಓಂ ೪.೪.೯

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಕ್ತರು ತಮಗಿಂತ ಅಧಮರಾದವರಿಂದ ನಿಯಮನಕ್ಕೊಳಪಡದೆ ಭೋಗವನ್ನು ಪಡೆಯುವರೆಂದು ಸಮರ್ಥಿಸಲಾಗುವುದು.

ಅತ ಏವ - ಹಿಂದೆ ಹೇಳಿದ 'ನಾನು ಇಷ್ಟು ಜನರಿಗೆ ಮಾತ್ರ ನಿಯಮ್ಯನಾಗು

---

ತನ್ನ ಪಿತೃಗಳಿಗೆ ವಿಷ್ಣುಲೋಕಪ್ರಾಪ್ತಿಯಾಗಲಿ ಮತ್ತು ಅವರ ದರ್ಶನವಾಗಲಿ ಎಂದು ಮುಕ್ತಜೀವನು ಬಯಸಿದರೆ ಅದಕ್ಕನುಸಾರವಾಗಿ ಅವನ ಪಿತೃಗಳು ಸ್ವಯೋಗ್ಯಸಾಧನಾನುಷ್ಠಾನವನ್ನು ಮಾಡಿ ಸಂಸಾರದಿಂದ ಮುಕ್ತರಾಗಿ ಅವನೆದುರು ನಿಲ್ಲುವರು ಎಂದು ಶ್ರುತಿಯ ಭಾವ.

प्रागुक्तादहमियतामेव नियम्यः स्यामिति सत्यसङ्कल्पादेव मुक्तोऽनन्याधिपतिः क्लृप्तस्वोत्तमेभ्योऽन्याधिपतिहीन इत्यर्थः । चस्तु राजगृहं प्रविष्टस्य प्रतिहारपालादिनियतत्ववत् मुक्तस्यापीशगृहं प्रविष्टस्यावरनियम्यता स्यादिति शङ्कानिवृत्त्यर्थेति टीका । 'परमोऽधिपतिस्त्वेषां' इत्यादिप्रमाणसमुच्चय इति तत्त्वप्रदीपोक्तिः । अनधिपति-

---

ವೆನು' ಎಂಬ ಸತ್ಯಸಂಕಲ್ಪದಿಂದಲೇ ಮುಕ್ತನು, ಅನನ್ಯಾಧಿಪತಿಃ – ಕ್ಲೃಪ್ತರಾದ ತನ್ನ ಉತ್ತಮರನ್ನು ಬಿಟ್ಟು ಬೇರೆ ಅಧಿಪತಿಗಳಿಲ್ಲದೇ ಇರುವನು ಎಂದು ಅರ್ಥ. ರಾಜಭವನವನ್ನು ಪ್ರವೇಶಿಸಿದವನು ಅಲ್ಲಿರುವ ದ್ವಾರಪಾಲಕರೇ ಮೊದಲಾದವರ ನಿಯಂತ್ರಣಕ್ಕೊಳಪಡುವಂತೆ ಭಗವಂತನ ಮಂದಿರವನ್ನು ಪ್ರವೇಶಿಸಿದ ಮುಕ್ತರೂ ತಮಗಿಂತ ಅಧಮರಾದವರ ನಿಯಂತ್ರಣಕ್ಕೆ ಒಳಪಡಬೇಕಾಗುವುದೆಂಬ ಶಂಕೆಯನ್ನು ಪರಿಹರಿಸಲು ಸೂತ್ರದಲ್ಲಿ 'ಚ' ಶಬ್ದವನ್ನು ಪ್ರಯೋಗಿಸಲಾಗಿದೆ ಎಂದು ತತ್ತ್ವಪ್ರಕಾಶಿಕೆಯಲ್ಲಿ ಹೇಳಲಾಗಿದೆ. [1]'ಪರಮೋಧಿಪತಿಸ್ತ್ವೇಷಾಂ' ಇತ್ಯಾದಿ

---

1. ಪರಮೋಽಧಿಪತಿಸ್ತ್ವೇಷಾಂ ವಿಷ್ಣುರೇವ ನ ಸಂಶಯಃ ।
ಬ್ರಹ್ಮಾದಿಮಾನುಷಾಂತಾನಾಂ ಸರ್ವೇಷಾಮವಿಶೇಷತಃ ॥
ತತಃ ಪ್ರಾಣಾದಿನಾಮಾಂತಾಃ ಸರ್ವೇಽಪಿ ಪತಯಃ ಕ್ರಮಾತ್ ।
ಆಚಾರ್ಯಾಶ್ಚೈವ ಸರ್ವೇಽಪಿ ಯೈರ್ಜ್ಞಾನಂ ಸುಪ್ರತಿಷ್ಠಿತಮ್ ॥
ಏತೇಭ್ಯೋಽನ್ಯಃ ಪತಿರ್ನೈವ ಮುಕ್ತಾನಾಂ ನಾತ್ರ ಸಂಶಯಃ ॥
— ವಾರಾಹವಚನ.

ಚತುರ್ಮುಖನನ್ನಾರಂಭಿಸಿ ಮನುಷ್ಯರವರೆಗೆ ಎಲ್ಲ ಮುಕ್ತರಿಗೂ ಲಕ್ಷ್ಮೀದೇವಿಯೂ, ಲಕ್ಷ್ಮೀಪತಿಯಾದ ವಿಷ್ಣುವೂ ಅಧಿಪತಿಗಳಾಗಿರುವರು. ಇದರಲ್ಲಿ ಸಂಶಯವಿಲ್ಲ. ಅನಂತರ ಚತುರ್ಮುಖಬ್ರಹ್ಮನನ್ನಾರಂಭಿಸಿ ನಾಮಾಭಿಮಾನಿನಿಯಾದ ಉಷೆಯವರೆಗೆ ಎಲ್ಲರೂ ತಮಗೆ ಅಧಮರಾದ ಜೀವರಿಗೆ ನಿಯಾಮಕರಾಗಿರುವರು. ಯಾರಿಂದ ಮುಕ್ತಜೀವರಿಗೆ ತತ್ತ್ವಜ್ಞಾನವು ಸ್ಥಿರವಾಗಿ ನೆಲೆಗೊಂಡಿದೆಯೋ ಆ ಎಲ್ಲ ಆಚಾರ್ಯರೂ ಮುಕ್ತರಿಗೆ ನಿಯಾಮಕರು. ಹೀಗೆ ಕ್ಲೃಪ್ತರಾದ ಅಧಿಪತಿಗಳನ್ನು ಬಿಟ್ಟು ಬೇರೆ ಯಾರೂ ಮುಕ್ತಜೀವರಿಗೆ ಅಧಿಪತಿಗಳಲ್ಲವೆಂಬುದು ನಿಸ್ಸಂದಿಗ್ಧವಾದುದು ಎಂದು ಈ ಪ್ರಮಾಣವಚನದ ಭಾವ.

रित्युक्तौ स्वोत्तमानां पतित्वं वारितं स्यादित्यतोऽनन्याधिपति-रित्युक्तम् ॥ ७ ॥

अभावाधिकरणम्—८

॥ ॐ अभावं बादरिराह ह्येवम् ॐ ॥ ४.४.१०

अत्र मुक्तस्य भोगानुपपत्तिर्निरस्यते। अभावं चिन्मात्र-देहान्यप्राकृतदेहस्याभावं मुक्तानां बादरिर्मन्यते, येन दुःखित्वादिक-माशङ्क्यं स्यात्। कुतः? 'अशरीरो बाव तदा भवति' इति श्रुति-रेवमाह हि यस्मात्तस्मादित्यर्थः।

---

ಪ್ರಮಾಣದ ಸಮುಚ್ಚಯವನ್ನು 'ಚ' ಶಬ್ದವು ಹೇಳುವುದೆಂದು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ.

ಅಭಾವಾಧಿಕರಣ--೮

ಓಂ ಅಭಾವಂ ಬಾದರಿರಾಹ ಹ್ಯೇವಂ ಓಂ ೪.೪.೧೦

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಕ್ತರಿಗೆ ಭೋಗವನ್ನೊಪ್ಪಿದರೆ ಬರಬಹುದಾದ ಅನುಪಪತ್ತಿಯನ್ನು ನಿರಾಕರಿಸಲಾಗುವುದು.

ಅಭಾವಂ ಬಾದರಿಃ – ಕೇವಲ ಚಿತ್ಸ್ವರೂಪವಾದ ದೇಹವನ್ನು ಬಿಟ್ಟು ಬೇರೆ ಯಾವ ದೇಹವನ್ನು ಮುಕ್ತರಿಗೊಪ್ಪಿದರೆ ಅವರು ದುಃಖ ಮೊದಲಾದವುಗಳನ್ನು ಹೊಂದಬೇಕಾಗುವುದು ಇತ್ಯಾದಿಯಾಗಿ ಶಂಕಿಸಬಹುದೋ ಅಂತಹ ಪ್ರಾಕೃತದೇಹವು ಮುಕ್ತರಿಗಿಲ್ಲವೆಂದು ಬಾದರಾಯಣರ ಪುತ್ರರಾದ ಶುಕಾಚಾರ್ಯರು ಅಭಿಪ್ರಾಯಪಡುತ್ತಾರೆ. ಆ ಅಭಿಪ್ರಾಯಕ್ಕೆ ಆಧಾರವೇನು ? ಎಂಬ ಪ್ರಶ್ನೆಗೆ ಉತ್ತರ– ಆಹ ಹಿ- 'ಅಶರೀರೋ ವಾವ ತದಾ ಭವತಿ' ಎಂಬ ಶ್ರುತಿಯು ಹಾಗೆ ಹೇಳುವುದರಿಂದ ಎಂದು ಅರ್ಥ.

देहसद्भावमप्याह—

॥ ॐ भावं जैमिनिर्विकल्पाम्नानात् ॐ ॥ ४.४.११

कदाचिद् भोगार्थं मुक्तानां चिन्मात्रदेहान्यप्राकृतदेहस्य भावं सत्त्वं जैमिनिर्मन्यते । कुतः ? 'चिता वा अचिता वा' इति श्रुतौ विकल्पाम्नानादित्यर्थः ।

---

ಮುಕ್ತರಿಗೆ ದೇಹವಿದೆಯೆಂದೂ ಹೇಳುವ ಸೂತ್ರ—

## ಓಂ ಭಾವಂ ಜೈಮಿನಿರ್ವಿಕಲ್ಪಾಮ್ನಾನಾತ್ ಓಂ ೪.೪.೧೧

**ಸೂತ್ರಾರ್ಥ**

ಕೆಲವೊಮ್ಮೆ ಭೋಗಕ್ಕೋಸ್ಕರ ಮುಕ್ತರಿಗೆ ಕೇವಲ ಚಿತ್ಸ್ವರೂಪವಾದ ದೇಹಕ್ಕಿಂತ ಭಿನ್ನವಾದ ಪ್ರಾಕೃತದೇಹದ, ಭಾವಂ ಜೈಮಿನಿಃ – ಇರುವಿಕೆಯನ್ನು ಜೈಮಿನಿಋಷಿಗಳು ಅಂಗೀಕರಿಸುವರು. ಏಕೆಂದರೆ, ವಿಕಲ್ಪಾಮ್ನಾನಾನ್ - [1]'ಚಿತಾ ವಾ ಅಚಿತಾ ವಾ ಎಂಬ ಶ್ರುತಿಯಲ್ಲಿ ಚಿತ್ಸ್ವರೂಪದೇಹದಿಂದಾಗಲಿ ಜಡದೇಹದಿಂದಾಗಲಿ ಮುಕ್ತನು ಭೋಗವನ್ನು ಪಡೆಯುವನೆಂದು ಎರಡೂ ಪ್ರಕಾರಗಳನ್ನು ಹೇಳಿರುವುದರಿಂದ ಎಂದು ಅರ್ಥ.

---

1. ಸ ವಾ ಏಷ ಏವಂಏತ್ ಪರಮುಭಿಪಶ್ಯತ್ಯಭಿಶೃಣೋತಿ ಜ್ಯೋತಿಷೈವ ರೂಪೇಣ ಚಿತಾ ವಾಽಚಿತಾ ವಾ ನಿತ್ಯೇನ ವಾಽನಿತ್ಯೇನ ವಾಽಥಾನಂದೀ ಹ್ಯೇವೈಷ ಭವತಿ ನಾನಾನಂದಂ ಕಂಚಿದುಪಸ್ಪೃಶತಿ — ಔದ್ದಾಲಕಶ್ರುತಿ.

ಈ ಶ್ರುತಿಯಲ್ಲಿ ಹಿಂದೆ ಹೇಳಿದಂತೆ ಪರಮಾತ್ಮನ ಅಪರೋಕ್ಷಜ್ಞಾನವನ್ನು ಹೊಂದಿರುವ ಮುಕ್ತನು ನಿತ್ಯವೂ ಅಪ್ರಾಕೃತಚೈತನ್ಯಾತ್ಮಕವೂ ಆದ ಶರೀರದಿಂದ ಅಥವಾ ಶುದ್ಧಸತ್ತ್ವಾತ್ಮಕವಾಗಿದ್ದು ಪ್ರಾಕೃತವಾದ ಆದರೆ ಕರ್ಮಜನ್ಯವಲ್ಲದ ಜಡಶರೀರದಿಂದ ದರ್ಶನ, ಶ್ರವಣಾದಿರೂಪವಾದ ಅಪೇಕ್ಷಿತವಾದ ಸಕಲಭೋಗಗಳನ್ನು ಹೊಂದುವನು. ಈ ಭೋಗದಿಂದ ಅವನು ಆನಂದವನ್ನೇ ಹೊಂದುವನು. ಏಕೆಂದರೆ, ಯಾವ ಮುಕ್ತನನ್ನೂ ದುಃಖವು ಸ್ಪರ್ಶಿಸಲಾರದಷ್ಟೆ ಎಂದು ಶ್ರುತಿಯ ಭಾವ.

उक्तमतयोर्विरुद्धत्वात् स्वमतं किमित्यत आह—

॥ ॐ द्वादशाहवदुभयविधं बादरायणोऽतः ॐ ॥ ४.४.१२

अत इति मतद्वयोक्तप्रमाणपरामर्शः। उभयविधं मुक्तानां देहभावाभावाख्यं प्रागुक्तमुभयविधं बादरायणः स्वमतं मन्यते। कुतः? अतः उभयोरपि प्रमाणवत्त्वादित्यर्थः।

विरुद्धं कथं स्वमतम्? अत उक्तं — द्वादशेति। यथा द्वादशाहाख्ययागस्य क्रतुत्वं सत्रत्वं च यजमानेच्छया एकानेक-

---

ಹೇಳಲಾದ ಎರಡೂ ಮತಗಳು ವಿರುದ್ಧವಾದುದರಿಂದ ಸೂತ್ರಕಾರರ ಮತ ವೇನು ? ಎಂಬ ಪ್ರಶ್ನೆಗೆ ಉತ್ತರ—

ಓಂ ದ್ವಾದಶಾಹವದುಭಯವಿಧಂ ಬಾದರಾಯಣೋಽತಃ
ಓಂ ೪.೪.೧೨

**ಸೂತ್ರಾರ್ಥ**

ಸೂತ್ರದಲ್ಲಿರುವ 'ಅತಃ' ಶಬ್ದವು ಎರಡೂ ಮತಗಳಲ್ಲಿ ಹೇಳಿದ ಪ್ರಮಾಣ ಗಳನ್ನು ಪರಾಮರ್ಶಿಸುವುದು.

ಉಭಯವಿಧಂ ಬಾದರಾಯಣಃ – ಮುಕ್ತರಿಗೆ ದೇಹವಿದೆ – ಇಲ್ಲ ಎಂಬುದಾಗಿ ಹಿಂದೆ ಹೇಳಿದ ಎರಡು ಪ್ರಕಾರಗಳನ್ನೂ ಬಾದರಾಯಣರು ತಮ್ಮ ಮತವೆಂದು ಅಭಿ ಪ್ರಾಯಪಡುತ್ತಾರೆ. ಏಕೆಂದರೆ, ಅತಃ – ಎರಡೂ ಮತಗಳು ಪ್ರಮಾಣಸಿದ್ಧವಾಗಿ ರುವುದರಿಂದ ಎಂದು ಅರ್ಥ.

ವಿರುದ್ಧವಾದ ಎರಡು ಮತಗಳು ಸ್ವಮತವಾಗುವುದು ಹೇಗೆ ಎಂಬ ಶಂಕೆಗೆ ಉತ್ತರ— 'ದ್ವಾದಶ' ಎಂಬುದಾಗಿ. ಹೇಗೆ ದ್ವಾದಶಾಹ ಎಂಬ ಯಾಗವು ಯಜ ಮಾನನ ಇಚ್ಛೆಯಂತೆ ಒಬ್ಬನೇ ಯಜಮಾನನಿದ್ದಾಗ ಕ್ರತುವೂ, ಅನೇಕ ಯಜಮಾನ

यजमानकत्वाभ्यामविरुद्धं तथा मुक्तानामिच्छया देहभावाभावौ न विरुद्धाविति ।

अत्र भाष्ये क्रतुशब्दोऽहर्गणाख्याहीनपर इति गुरुपादाः । तदुक्तं तत्त्वप्रदीपे — क्रतुरित्यहीनो विवक्ष्यते । अहीनैकाहेष्वस्य श्रेष्ठत्वात् अत्र क्रतुशब्दः प्रयुक्तः । तथाच श्रुतिः —श्रेष्ठयज्ञो वा एष यत् द्वादशाहः इत्यादि । तेन कस्यचिन्मीमांसाविरोधापलापानवकाशः ।

नन्वेवमविरोधेऽपि देहाभावे कथं भोग इत्यत आह—

---

ರಿದ್ದಾಗ ಸತ್ರವೂ ಆಗಿರುವುದು ವಿರುದ್ಧವಲ್ಲವೋ ಹಾಗೆ ಮುಕ್ತರಿಗೂ ತಮ್ಮ ಇಚ್ಛಾನುಸಾರ ದೇಹವಿರುವುದೂ ಇಲ್ಲದಿರುವುದೂ ವಿರುದ್ಧವಲ್ಲ.

**ಭಾಷ್ಯದಲ್ಲಿ ದ್ವಾದಶಾಹವನ್ನು ಕ್ರತುವೆಂದು ಹೇಳಿರುವುದು ಮೀಮಾಂಸಾ ಶಾಸ್ತ್ರವಿರುದ್ಧವಲ್ಲ.**

ಈ ಅಧಿಕರಣದ ಭಾಷ್ಯದಲ್ಲಿ 'ಕ್ರತು' ಶಬ್ದವು ಅಹರ್ಗಣವೆಂದು ಕರೆಯಲ್ಪಡುವ 'ಅಹೀನ' ಎಂಬ ಯಾಗವನ್ನು ಹೇಳುವ ತಾತ್ಪರ್ಯವುಳ್ಳದ್ದೆಂದು ಗುರುಪಾದರು ಹೇಳಿರುವರು. ಈ ವಿಷಯವನ್ನು ತತ್ತ್ವಪ್ರದೀಪದಲ್ಲಿ ಹೀಗೆ ಹೇಳಲಾಗಿದೆ– ಕ್ರತುಶಬ್ದದಿಂದ ಇಲ್ಲಿ ಅಹೀನವೆಂಬ ಯಾಗವು ವಿವಕ್ಷಿತವಾಗಿದೆ. ಅಹೀನವೆಂದು ಕರೆಯಲ್ಪಡುವ ಏಕಾಹಯಾಗಗಳಲ್ಲಿ ದ್ವಾದಶಾಹವು ಶ್ರೇಷ್ಠವಾದುದರಿಂದ ಭಾಷ್ಯದಲ್ಲಿ ದ್ವಾದಶಾಹವನ್ನು ಕುರಿತು ಕ್ರತು ಶಬ್ದವನ್ನು ಪ್ರಯೋಗಿಸಲಾಗಿದೆ. 'ಶ್ರೇಷ್ಠ ಯಜ್ಞೋ ವಾ ಏಷ ಯತ್ ದ್ವಾದಶಾಹಃ' ಇತ್ಯಾದಿ ಶ್ರುತಿಯು ದ್ವಾದಶಾಹವು ಶ್ರೇಷ್ಠವಾದ ಯಜ್ಞವೆಂಬ ವಿಷಯದಲ್ಲಿ ಪ್ರಮಾಣವಾಗಿದೆ. ಆದ್ದರಿಂದ, ಮೀಮಾಂಸಕರು ದ್ವಾದಶಾಹವನ್ನು ಕ್ರತುವೆಂದು ಅಂಗೀಕರಿಸದಿರುವ ಕಾರಣ ಭಾಷ್ಯಕ್ಕೆ ಮೀಮಾಂಸಾಶಾಸ್ತ್ರವಿರೋಧವಿದೆಯೆಂಬ ಪ್ರಲಾಪಕ್ಕೆ ಅವಕಾಶವಿಲ್ಲ.

ಹೀಗೆ ಮುಕ್ತರಿಗೆ ದೇಹವಿದೆ-ಇಲ್ಲ ಎಂದು ಹೇಳುವ ಮತಗಳಿಗೆ ಪರಸ್ಪರ ವಿರೋಧ ಪರಿಹಾರವಾಗುವುದಾದರೂ, ಮುಕ್ತರಿಗೆ ದೇಹವಿಲ್ಲದಿದ್ದಲ್ಲಿ ಭೋಗವಾಗುವುದು ಹೇಗೆ ಸಾಧ್ಯ ಎಂಬ ಆಶಂಕೆಯನ್ನು ಪರಿಹರಿಸುವ ಸೂತ್ರ—

॥ ॐ तन्वभावे सन्ध्यवदुपपत्तेः ॐ ॥ ४.४.१३

तन्वभावे मुक्तौ बाह्यदेहाभावेऽप्युपपत्तेः भोगस्येति शेषः। कथं ? सन्ध्यवत्। स्वप्नावस्थायां देहाभिमानाभावेपि यथा भोगस्तथेति। अनभिमानस्याभावसाम्यात्। स्वाप्नार्थानां सत्यत्वोक्तेरिति भावः।

देहभावे तु सुतरां भोगो युक्त इत्याह—

॥ ॐ भावे जाग्रद्वत् ॐ ॥ ४.४.१४

---

**ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ ೪.೪.೧೩**

**ಸೂತ್ರಾರ್ಥ**

ತನ್ವಭಾವೇ – ಮುಕ್ತಿಯಲ್ಲಿ ಬಾಹ್ಯದೇಹವಿಲ್ಲದಿದ್ದರೂ, ಉಪಪತ್ತೇಃ – ಭೋಗವು ಉಪಪನ್ನವಾಗುವುದರಿಂದ. ಇಲ್ಲಿ 'ಭೋಗವು' ಎಂಬ ಪದವು ಶೇಷ ಪೂರಣವಾಗಿದೆ. ಬಾಹ್ಯದೇಹವಿಲ್ಲದಿದ್ದಾಗ ಭೋಗವು ಉಪಪನ್ನವಾಗುವುದು ಹೇಗೆಂಬ ಶಂಕೆಗೆ ಸಮಾಧಾನ— ಸಂಧ್ಯವತ್. ಸ್ವಪ್ನಾವಸ್ಥೆಯಲ್ಲಿ ದೇಹಾಭಿಮಾನವಿಲ್ಲದಿದ್ದರೂ ಹೇಗೆ ಭೋಗವಾಗುವುದೋ ಹಾಗೆ ಎಂದು ಅರ್ಥ. ದೇಹಾಭಿಮಾನವಿಲ್ಲದಿರುವುದು ದೇಹವಿಲ್ಲದಿರುವುದಕ್ಕೆ ಸಮಾನವಾಗಿದೆಯಾದ್ದರಿಂದ ಮುಕ್ತಿಯಲ್ಲಿ ಬಾಹ್ಯದೇಹವಿಲ್ಲದೆ ಭೋಗವಾಗುವುದಕ್ಕೆ ಸ್ವಪ್ನಾವಸ್ಥೆಯ ಭೋಗವು ದೃಷ್ಟಾಂತವಾಗಬಹುದು. ಸ್ವಾಪ್ನ ಪದಾರ್ಥಗಳು ಸತ್ಯವೆಂದು ಹಿಂದೆ ಹೇಳಲಾಗಿರುವುದರಿಂದ ಸ್ವಪ್ನದಲ್ಲಿ ಭೋಗವೇ ಇಲ್ಲದಿರುವ ಕಾರಣ ಸ್ವಾಪ್ನಭೋಗವು ದೃಷ್ಟಾಂತವಾಗಲಾರದು ಎಂಬ ಶಂಕೆಗೆ ಅವಕಾಶವಿಲ್ಲವೆಂದು ಭಾವ.

ಮುಕ್ತರಿಗೆ ದೇಹವಿದೆ ಎಂಬ ಪಕ್ಷದಲ್ಲಂತೂ ಅವರಿಗೆ ಭೋಗವಾಗುವುದು ಸುತರಾಂ ಯುಕ್ತವಾಗಿದೆ ಎಂದು ಹೇಳುವ ಸೂತ್ರ—

ಓಂ ಭಾವೇ ಜಾಗ್ರದ್ವತ್ ಓಂ ೪.೪.೧೪

यथा जाग्रद्दशायां देहभावे भोगस्तथा मुक्तावपि देहभावे भोगो युक्त इत्यर्थः। देहसत्त्वपक्षे भोगायोगाभावादयं योगः अवक्तुं शक्य इति चेन्न। प्रदीपवदिति वक्ष्यमाणदोषनिरासप्रस्तावार्थत्वादस्य। अन्यथैतद्विषयता तस्य न ज्ञायेतेति भावः।

देहभावे दुःखभोगोऽपि स्यादित्यत आह—

|| ॐ प्रदीपवदावेशस्तथा हि दर्शयति ॐ || ४.४.१५

---

**ಸೂತ್ರಾರ್ಥ**

ಜಾಗ್ರದವಸ್ಥೆಯಲ್ಲಿ ದೇಹವಿರುವಾಗ ಹೇಗೆ ಭೋಗವು ಯುಕ್ತವೋ ಹಾಗೆ ಮುಕ್ತಿಯಲ್ಲೂ ದೇಹವಿರುವುದಾದರೆ ಭೋಗವು ಯುಕ್ತವಾಗಿದೆ ಎಂದು ಅರ್ಥ.

**ಈ ಸೂತ್ರ ವ್ಯರ್ಥವಲ್ಲ**

ಮುಕ್ತರಿಗೆ ದೇಹವಿದೆ ಎಂಬ ಪಕ್ಷದಲ್ಲಿ ಅವರಿಗೆ ಭೋಗವಾಗದಿರುವ ಸಂಭವ ವಿಲ್ಲವಾದ್ದರಿಂದ ಈ ಸೂತ್ರವನ್ನು ಹೇಳದಿರಬಹುದು ಎಂದರೆ ಅದು ಸರಿಯಲ್ಲ, ಏಕೆಂದರೆ, 'ಪ್ರದೀಪವತ್' (ಬ್ರ.ಸೂ. ೪.೪.೧೫) ಎಂದು ಮುಂದೆ ಹೇಳಲಾಗುವ ದೋಷನಿರಾಕರಣೆಯ ಪ್ರಸ್ತಾಪಕ್ಕಾಗಿ ಈ ಸೂತ್ರವು ಆವಶ್ಯಕವಾಗಿದೆ. ಈ ಸೂತ್ರ ವಿಲ್ಲದಿದ್ದರೆ 'ಪ್ರದೀಪವತ್' ಇತ್ಯಾದಿ ಸೂತ್ರವು ಮುಕ್ತರಿಗೆ ದೇಹವಿರುವ ಪಕ್ಷದಲ್ಲಿ ಪ್ರಸಕ್ತವಾಗುವ ದೋಷಪರಿಹಾರಕ್ಕಾಗಿ ಸಂಬಂಧಪಟ್ಟಿದ್ದೆಂದು ತಿಳಿಯದೇ ಹೋದೀತೆಂದು ಭಾವ.

ಮುಕ್ತರಿಗೆ ದೇಹವಿರುವುದಾದರೆ ಅವರಿಗೆ ದುಃಖಭೋಗವೂ ಆಗಲಿ ಎಂಬ ಆಕ್ಷೇಪವನ್ನು ಪರಿಹರಿಸುವ ಸೂತ್ರ—

ಓಂ ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ಓಂ

೪.೪.೧೫

मुक्तानामावेशः शुद्धप्रकृतिमयज्योतीरूपबाह्यदेहप्रवेशः प्रदीपवत् प्रदीपस्य दीपिकावेश इव। यथा प्रदीपो दीपिकाविष्टः सन् तत्स्थतैलाद्येव भुङ्क्ते न कार्ष्ण्यादि तथा मुक्तो जडदेहप्रविष्टोऽपि न दुःखं भुङ्क्ते किन्तु सुखमेव। कुतः ? 'तीर्णो हि तदा सर्वान् हृदयस्य भवति' इति श्रुतिस्तथा मुक्तौ दुःखाभावं दर्शयति हि यतोऽत इति

यथा दीपिकां प्रकाशयन्नेव तैलादि भुङ्क्ते तथा मुक्तो

---

**ಸೂತ್ರಾರ್ಥ**

**ಆವೇಶಃ** – ಮುಕ್ತಜೀವರು ಶುದ್ಧಪ್ರಕೃತಿಮಯವಾದ ಮತ್ತು ತೇಜೋರೂಪವಾದ ಬಾಹ್ಯದೇಹವನ್ನು ಪ್ರವೇಶಿಸುವುದು, ಪ್ರದೀಪವತ್ - ಪ್ರದೀಪವು ದೀವಿಗೆಯನ್ನು ಪ್ರವೇಶಿಸಿದಂತೆ. ಹೇಗೆ ಪ್ರದೀಪವು ದೀವಿಗೆಯನ್ನು ಪ್ರವೇಶಿಸಿ ಅಲ್ಲಿರುವ ಎಣ್ಣೆ ಮೊದಲಾದುವನ್ನು ಮಾತ್ರ ಭುಜಿಸುವುದೋ, ಅಲ್ಲಿರುವ ಮಸಿ ಮೊದಲಾದವನ್ನು ಭುಜಿಸುವದಿಲ್ಲವೋ ಹಾಗೆ ಮುಕ್ತನೂ ಜಡದೇಹವನ್ನು ಪ್ರವೇಶಿಸಿದರೂ ದುಃಖವನ್ನು ಭುಜಿಸಲಾರನು, ಕೇವಲ ಸುಖವನ್ನು ಭುಜಿಸುವನು. ಈ ವಿಷಯದಲ್ಲಿ ಆಧಾರವೇನು ? ಎಂಬ ಶಂಕೆಗೆ ಉತ್ತರ— ತಥಾ ಹಿ ದರ್ಶಯತಿ. 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' (ಬೃ. ೬.೩.೨೨) ಎಂಬ ಶ್ರುತಿಯು ಮುಕ್ತರಿಗೆ ಮುಕ್ತಿಯಲ್ಲಿ ದುಃಖವಿಲ್ಲದಿರುವುದನ್ನು ತಿಳಿಸುವುದರಿಂದ ಎಂದು ಅರ್ಥ.

**ಸೂತ್ರದಲ್ಲಿ ಪ್ರದೀಪದೃಷ್ಟಾಂತವನ್ನು ಕೊಟ್ಟಿರುವುದರ ಕಾರಣ**

ಹೇಗೆ ದೀಪವು ದೀವಿಗೆಯನ್ನು ಬೆಳಗುತ್ತಲೇ ಅಲ್ಲಿರುವ ತೈಲಾದಿಗಳನ್ನು ಭುಜಿಸುವುದೋ ಹಾಗೆ ಮುಕ್ತನೂ ಜಡದೇಹವನ್ನು ಕೇವಲ ಪ್ರಕಾಶಗೊಳಿಸುತ್ತ ಸುಖವನ್ನನುಭವಿಸುವನು ಹೊರತು ದೇಹಧರ್ಮಗಳ ಸಂಪರ್ಕವನ್ನು ಪಡೆದು ಸುಖಭೋಗ

जडदेहं प्रकाशयन्नेव सुखं भुङ्क्ते न तु देहधर्मसंस्पृष्ट इति च द्योतनाय प्रदीपदृष्टान्तोक्तिः ।

'तीर्णो हि' इति वाक्यं स्वर्गस्थपरं किं न स्यादत आह—

॥ ॐ स्वाप्ययसम्पत्त्योरन्यतरापेक्षमाविष्कृतं हि ॐ ॥

४.४.१६

स्वाप्ययः सुप्तिः । सम्पतिर्मुक्तिः । अन्यतरशब्दोऽत्रोभयपरः । 'तीर्णो हि' इति वाक्यं सुप्तिमुक्त्युभयपरं, न स्वर्गविषयम् । कुतः ? हि यस्मादाविष्कृतं तदुभयविषयत्वमस्य वाक्यस्य विस्पष्टमत इत्यर्थः ।

---

ವನ್ನು ಹೊಂದುವುದಿಲ್ಲವೆಂದು ಸೂಚಿಸಲು ಸೂತ್ರದಲ್ಲಿ ಪ್ರದೀಪದ ದೃಷ್ಟಾಂತವನ್ನು ಹೇಳಲಾಗಿದೆ.

'ತೀರ್ಣೋ ಹಿ' ಎಂಬ ಶ್ರುತಿಯು ಸ್ವರ್ಗದಲ್ಲಿರುವ ಜೀವನನ್ನು ಕುರಿತ ದ್ದೆಂದೇಕೆ ಹೇಳಬಾರದು ಎಂಬ ಶಂಕೆಗೆ ಸಮಾಧಾನ—

ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ಓಂ ೪.೪.೧೬

**ಸೂತ್ರಾರ್ಥ**

ಸ್ವಾಪ್ಯಯವೆಂದರೆ ಸುಷುಪ್ತಿ. ಸಂಪತ್ತಿಯೆಂದರೆ ಮುಕ್ತಿ. ಈ ಸೂತ್ರದಲ್ಲಿ 'ಅನ್ಯತರ' ಶಬ್ದವು 'ಉಭಯ' ಎಂಬ ಅರ್ಥವನ್ನು ಹೇಳುವ ತಾತ್ಪರ್ಯವುಳ್ಳದ್ದು. ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಂ - 'ತೀರ್ಣೋ ಹಿ' ಎಂಬ ವಾಕ್ಯವು ಸುಷುಪ್ತಿ ಮತ್ತು ಮುಕ್ತಿ ಇವೆರಡನ್ನು ಕುರಿತದ್ದು ಹೊರತು ಸ್ವರ್ಗಕ್ಕೆ ಸಂಬಂಧಿಸಿದುದಲ್ಲ. ಏಕೆಂದರೆ, ಹಿ ಆವಿಷ್ಕೃತಂ – ಈ ವಾಕ್ಯವು ಸುಪ್ತಿ–ಮುಕ್ತಿಗಳಿಗೆ ಸಂಬಂಧಿಸಿದು

'अत्र पिताऽपिता भवत्यनन्वागतं पुण्येन' इत्यपितृत्वपुण्यपापाद्य-सङ्गत्वलिङ्गश्रवणात्। स्वर्गिणः श्राद्धादिभोक्तुस्तदयोगादिति भावः।

अन्यतरेत्यस्य द्वयोर्मध्य एकार्थत्वे वस्तुनि विकल्पापातात् स्वाप्ययापेक्षं सम्पत्त्यपेक्षमिति वा स्यात्। स्वाप्ययसम्पत्त्यपेक्षमिति वाच्ये एवमुक्तिः स्वाप्यये मोक्षे या सम्पत्तिः सुखिस्तदपेक्षमित्यर्थ

---

ದೆಂದು ಅತ್ಯಂತ ಸ್ಪಷ್ಟವಾದ್ದರಿಂದ ಎಂದು ಅರ್ಥ. 'ಅತ್ರ ಪಿತಾಽಪಿತಾ ಭವತಿ ... ಅನನ್ವಾಗತಂ ಪುಣ್ಯೇನ' ಎಂಬ ಶ್ರುತಿಯಲ್ಲಿ ಅಪಿತೃತ್ವ, ಪುಣ್ಯಪಾಪಾದ್ಯಸಂಗತ್ವ ಮೊದಲಾದ ಸುಪ್ತರ ಮತ್ತು ಮುಕ್ತರ ಅಸಾಧಾರಣಧರ್ಮಗಳು ಶ್ರುತವಾಗಿರುವುದ ರಿಂದ; ಶ್ರಾದ್ಧ ಮೊದಲಾದುವನ್ನು ಭುಜಿಸುವ ಸ್ವರ್ಗಸ್ಥನಾದ ಜೀವನಿಗೆ ಈ ಲಿಂಗ ಗಳು ಯುಕ್ತವಲ್ಲವಾದ್ದರಿಂದ ಎಂದು ಭಾವ.

**ಸೂತ್ರದಲ್ಲಿರುವ 'ಅನ್ಯತರ' ಪದಕ್ಕೆ 'ಉಭಯ' ಎಂಬ ಅರ್ಥದ ಸಮರ್ಥನೆ ಮತ್ತು ಪದಗಳ ಸ್ವಾರಸ್ಯ**

ಸೂತ್ರದಲ್ಲಿರುವ 'ಅನ್ಯತರ' ಶಬ್ದವು 'ಎರಡರಲ್ಲಿ ಒಂದು' ಎಂಬ ಅರ್ಥವುಳ್ಳ ದ್ದಾಗಿರುವುದಾದಲ್ಲಿ ವಸ್ತುವಿನಲ್ಲಿ ವಿರುದ್ಧ ನಾನಾ ಪ್ರಕಾರಗಳಿರುವ ಸಾಧ್ಯತೆ ಇಲ್ಲದಿರು ವುದರಿಂದ ಸೂತ್ರಕಾರರು 'ಸ್ವಾಪ್ಯಯಾಪೇಕ್ಷಂ' ಎಂದಾಗಲಿ, 'ಸಂಪತ್ತ್ಯಪೇಕ್ಷಂ' ಎಂದಾಗಲಿ ಹೇಳಬೇಕಾಗಿತ್ತು.[1] 'ಸ್ವಾಪ್ಯಯಸಂಪತ್ತ್ಯಪೇಕ್ಷಂ' – 'ತೀರ್ಣೋ' ಹಿ

---

1. 'ತೀರ್ಣೋ ಹಿ' ಎಂಬ ಶ್ರುತಿಯು ಸುಷುಪ್ತಿ-ಮುಕ್ತಿ ಇವೆರಡರಲ್ಲಿ ಒಂದನ್ನು ಕುರಿತದ್ದು ಎಂಬ ಅಭಿಪ್ರಾಯ ಸೂತ್ರಕಾರರಿಗಿರುವುದಾದರೆ ವಾಸ್ತವಿಕವಾಗಿ ಆ ಶ್ರುತಿಯು ಯಾವುದಕ್ಕೆ ಸಂಬಂಧಿಸಿದೆಯೋ ಅದನ್ನು ಸೂಚಿಸುವ 'ಸ್ವಾಪ್ಯಯಾಪೇಕ್ಷಂ' ಎಂಬ ಪದವನ್ನಾ ಗಲಿ, 'ಸಂಪತ್ತ್ಯಪೇಕ್ಷಂ' ಎಂಬ ಪದವನ್ನಾಗಲಿ ಸೂತ್ರಕಾರರು ಪ್ರಯೋಗಿಸಬೇಕಾಗಿತ್ತು. ಆ ಶ್ರುತಿಗೆ ಸುಪ್ತಿಪರತ್ವ-ಮುಕ್ತಿಪರತ್ವವೆಂಬ ವಿರುದ್ಧಪ್ರಕಾರಗಳು ಇರುವ ಸಾಧ್ಯತೆ ಇಲ್ಲದ್ದ ರಿಂದ 'ಎರಡರಲ್ಲಿ ಒಂದು' ಎಂಬ ಅರ್ಥದ 'ಅನ್ಯತರ' ಪದಪ್ರಯೋಗವು ಯುಕ್ತವಾಗುವುದಿಲ್ಲ ವೆಂದು ಭಾವ.

इति मन्दस्य शङ्का माभूदिति सम्बन्धमात्रषष्ठ्या स्वाप्ययसम्पत्त्योरपेक्षमित्युक्त्या पूर्तावप्यर्थद्वयस्य साम्येन मुख्यत्वाद् यथारुच्येकार्थो ग्राह्य इति द्योतनाय स्वाप्ययसम्पत्त्योर्मध्येऽन्यतरेत्युक्तिः । एतेन स्वाप्ययसम्पत्त्युभयापेक्षमिति वाच्यमिति निरस्तम् । तथात्वे द्वयोर्मुख्यत्वासूचनात् । एतच्च तत्त्वप्रदीपबृहद्भाष್यकर्मनिर्णयटीकासु व्यक्तम् ।

॥ ८ ॥

---

ಎಂಬ ವಾಕ್ಯವು ಸುಪ್ತಿ-ಮುಕ್ತಿಗಳನ್ನು ಕುರಿತದ್ದು' ಎಂಬುದಾಗಿ ಹೇಳಬಹುದಾಗಿದ್ದರೂ 'ಸ್ವಾಪ್ಯಯೋ ಯಾ ಸಂಪತ್ತಿಃ ತದಪೇಕ್ಷಂ' - ಮುಕ್ತಿಯಲ್ಲಿ ಯಾವ ಸುಪ್ತಿಯುಂಟಾಗುವುದೋ ಅದಕ್ಕೆ 'ತೀರ್ಣೋ ಹಿ' ಎಂಬ ವಾಕ್ಯವು ಸಂಬಂಧಿಸಿದೆ ಎಂದು ಅಲ್ಪಬುದ್ಧಿಗಳಿಗೆ ಶಂಕೆಯುಂಟಾಗದಿರಲಿ ಎಂಬ ಕಾರಣದಿಂದ 'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಂ' ಎಂದು ಹೇಳಲಾಗಿದೆ. 'ಸ್ವಾಪ್ಯಯಸಂಪತ್ತ್ಯೋರಪೇಕ್ಷಂ' ಎಂದೇ ಹೇಳಿದ್ದರೂ 'ಸ್ವಾಪ್ಯಯಸಂಪತ್ತ್ಯೋಃ' ಎಂಬಲ್ಲಿರುವ ಸಂಬಂಧಸಾಮಾನ್ಯಾರ್ಥಕವಾದ ಷಷ್ಠೀವಿಭಕ್ತಿಯ ಬಲದಿಂದ ಪೂರ್ತಿ ವಿಷಯ ಲಭಿಸುವುದಾದರೂ, ಸ್ವಾಪ್ಯಯ ಮತ್ತು ಸಂಪತ್ತಿ ಇವೆರಡೂ 'ತೀರ್ಣೋ ಹಿ' ಎಂಬ ಶ್ರುತಿಯ ಮುಖ್ಯಾರ್ಥವಾಗುವ ಸಾಮ್ಯವನ್ನು ಹೊಂದಿರುವುದರಿಂದ ಇಚ್ಛಾನುಸಾರವಾಗಿ ಸ್ವಾಪ್ಯಯ ಅಥವಾ ಸಂಪತ್ತಿ ಎಂಬ ಒಂದರ್ಥವನ್ನು ಶ್ರುತ್ಯರ್ಥವೆಂದು ಗ್ರಹಿಸತಕ್ಕದ್ದು ಎಂದು ಸೂಚಿಸಲು 'ಸ್ವಾಪ್ಯಯಸಂಪತ್ತ್ಯೋರನ್ಯತರ' ಎಂದು ಸೂತ್ರದಲ್ಲಿ ಹೇಳಲಾಗಿದೆ. ಇದರಿಂದ, 'ಸ್ವಾಪ್ಯಯಸಂಪತ್ತ್ಯುಭಯಾಪೇಕ್ಷಂ' ಎಂದು ಸೂತ್ರವಿರಬೇಕಾಗಿತ್ತು ಎಂಬ ಆಕ್ಷೇಪವೂ ಪರಿಹೃತವಾಗುವುದು. ಏಕೆಂದರೆ, ಹಾಗೆ ಸೂತ್ರಪಾಠವಿದ್ದಲ್ಲಿ ಸ್ವಾಪ್ಯಯ ಮತ್ತು ಸಂಪತ್ತಿ ಎರಡೂ ಈ ಶ್ರುತಿಯ ಮುಖ್ಯಾರ್ಥಗಳು ಎಂದು ಸೂಚಿತವಾಗಲಾರದು.[1] ಈ ವಿಷಯವು, ತತ್ತ್ವಪ್ರದೀಪ, ಬೃಹದಾರಣ್ಯಕ ಭಾಷ್ಯ ಮತ್ತು ಕರ್ಮನಿರ್ಣಯಟೀಕೆಗಳಲ್ಲಿ ಸ್ಪಷ್ಟವಾಗಿದೆ.

---

1. 'ಅನ್ಯತರ' ಪದದ ಬದಲು ಸೂತ್ರದಲ್ಲಿ 'ಉಭಯ' ಪದವನ್ನು ಪ್ರಯೋಗಿಸಿದ್ದರೆ 'ತೀರ್ಣೋ ಹಿ' ಎಂಬ ಶ್ರುತಿಗೆ ಸುಪ್ತಿ-ಮುಕ್ತಿಗಳೆರಡರಲ್ಲೂ ಸಮಾನವಾದ ಮುಖ್ಯ

## जगद्व्यापाराधिकरणम् — ९

### ॥ ॐ जगद्व्यापारवर्जम् ॐ ॥ ४.४.१७

अत्र मुक्तस्य भोगेयत्ता साध्यते। सृष्ट्यादिजगद्व्यापारवर्जं कामं मुक्त आप्नोति, न तु 'सर्वान् कामानाप्त्वाऽमृतः' इति श्रुत्या सृष्ट्यादिकामानपीत्यर्थः।

कुत इत्यत आह—

---

## ಜಗದ್ವ್ಯಾಪಾರಾಧಿಕರಣ—೯

### ಓಂ ಜಗದ್ವ್ಯಾಪಾರವರ್ಜಂ ಓಂ ೪.೪.೧೭

**ಸೂತ್ರಾರ್ಥ**

ಈ ಅಧಿಕರಣದಲ್ಲಿ, ಮುಕ್ತನಿಗೆ ಭೋಗದ ಮಿತಿಯನ್ನು ಸಮರ್ಥಿಸಲಾಗುವುದು. ಜಗದ್ವ್ಯಾಪಾರವರ್ಜಂ - ಸೃಷ್ಟಿ ಮೊದಲಾದ ಜಗತ್ತಿಗೆ ಸಂಬಂಧಿಸಿದ ಕ್ರಿಯೆಗಳನ್ನು ಬಿಟ್ಟು ಉಳಿದ ಕಾಮಗಳನ್ನು ಮುಕ್ತನು ಹೊಂದುವನು ಹೊರತು 'ಸರ್ವಾನ್ ಕಾಮಾನ್ ಆಪ್ತ್ವಾಽಮೃತಃ' (ಐ.ಆ. ೨.೫.೪) ಎಂಬ ಶ್ರುತಿಯನ್ನು ಅನುಸರಿಸಿ ಸೃಷ್ಟಿ ಮೊದಲಾದ ಕಾಮಗಳನ್ನಲ್ಲ ಎಂದು ಅರ್ಥ.

'ಸರ್ವಾನ್ ಕಾಮಾನಾಪ್ತ್ವಾ ಅಮೃತಃ' ಎಂಬ ಶ್ರುತಿಯನ್ನನುಸರಿಸಿ, ಮುಕ್ತರು ಜಗತ್ಸೃಷ್ಟ್ಯಾದಿಕಾಮಗಳನ್ನೂ ಹೊಂದುವರೆಂದೇಕೆ ಹೇಳಬಾರದು ಎಂಬ ಶಂಕೆಗೆ ಉತ್ತರ—

---

ತಾತ್ಪರ್ಯವಿದೆ ಎಂದು ತಿಳಿಯಲಾರದು. ಏಕೆಂದರೆ, ಎರಡರಲ್ಲಿ ಒಂದು ಅಮುಖ್ಯವಾದ ಅರ್ಥವಾಗಿದ್ದರೂ ಆ ಶ್ರುತಿಯು ಸುಪ್ತಿ-ಮುಕ್ತಿ ಉಭಯಪರವಾಗಿದೆ ಎಂದು ಹೇಳಲು ಸಾಧ್ಯವಿದೆ. ಆದರೆ ಆವೆರಡರಲ್ಲೂ ಆ ಶ್ರುತಿಗೆ ಮುಖ್ಯ ತಾತ್ಪರ್ಯವಿದ್ದು ಓದುಗನು ತನಗೆ ಬೇಕಾದಂತೆ ಸುಪ್ತಿಪರವಾದ ಅರ್ಥವನ್ನಾಗಲೀ ಮುಕ್ತಿಪರವಾದ ಅರ್ಥವನ್ನಾಗಲಿ ಗ್ರಹಿಸಬಹುದು ಎಂದು ಸೂಚಿಸಲು ಸೂತ್ರದಲ್ಲಿ 'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಂ' ಎಂಬ 'ಅನ್ಯತರ' ಶಬ್ದಯುಕ್ತವಾದ ಪದವನ್ನು ಪ್ರಯೋಗಿಸಲಾಗಿದೆ ಎಂದು ಭಾವ.

॥ ॐ प्रकरणादसंनिहितत्वाच्च ॐ ॥ ४.४.१८

'शरीरभेदादूर्ध्वमुत्क्रम्य' इति जीवप्रकरणात् जीवानां जगज्जननादिसामर्थ्येऽसंनिहितत्वात् तद्विदूरत्वात्तद्धीनत्वादिति यावत्–'सर्वान् कामान्' इति श्रुतेः संकोचो युक्त इत्यर्थः ।

उक्तमाक्षिप्याह –

॥ ॐ प्रत्यक्षोपदेशादिति चेन्नाधिकारिकमण्डलस्थोक्तेः ॐ ॥
४.४.१९

'ता यो वेद । स वेद ब्रह्म । सर्वेऽस्मै देवा बलिमावहन्ति'

---

ಓಂ ಪ್ರಕರಣಾದಸನ್ನಿಹಿತತ್ವಾಚ್ಚ ಓಂ ೪.೪.೧೮

**ಸೂತ್ರಾರ್ಥ**

'ಶರೀರಭೇದಾದೂರ್ಧ್ವಮುತ್ಕ್ರಮ್ಯ' ಎಂದು ಜೀವಪ್ರಕರಣವಾದುದರಿಂದ, ಮುಕ್ತರು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಸಾಮರ್ಥ್ಯದ ವಿಷಯದಲ್ಲಿ, ಅಸನ್ನಿಹಿತತ್ವಾಚ್ಚ - ವಿದೂರರಾಗಿರುವುದರಿಂದಲೂ – ಆ ಸಾಮರ್ಥ್ಯವಿಹೀನರಾಗಿರುವುದರಿಂದಲೂ ಎಂದು ಭಾವ– 'ಸರ್ವಾನ್ ಕಾಮಾನ್' ಎಂಬ ಶ್ರುತಿಗೆ ಅರ್ಥಸಂಕೋಚ ಮಾಡುವುದು ಯುಕ್ತವೆಂದು ಅರ್ಥ.

ಹೇಳದುದನ್ನು ಆಕ್ಷೇಪಿಸಿ ಸಮಾಧಾನ ನೀಡುವ ಸೂತ್ರ—

ಓಂ ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿಕಾರಿಕ
ಮಂಡಲಸ್ಥೋಕ್ತೇಃ ಓಂ ೪.೪.೧೯

**ಸೂತ್ರಾರ್ಥ**

[1]ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವ

---

1. ಭೂಃ, ಭುವಃ, ಸುವಃ ಮತ್ತು ಮಹಃ ಎಂಬ ನಾಲ್ಕು ವ್ಯಾಹೃತಿಗಳಿಂದ ವಾಚ್ಯರಾದ, ಲೋಕ, ಜ್ಯೋತಿ, ಪ್ರಾಣ ಮತ್ತು ವೇದಗಳಲ್ಲಿರುವ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ಮತ್ತು ವಾಸುದೇವ ಎಂಬ ನಾಲ್ಕು ಮೂರ್ತಿಗಳ ಅನಿರುದ್ಧ-ಅನಿರುದ್ಧ, ಅನಿರುದ್ಧ ಪ್ರದ್ಯುಮ್ನ ಇತ್ಯಾದಿ ಹದಿನಾರು ಭಗವದ್ರೂಪಗಳನ್ನು ಯಾರು ತಿಳಿಯುವನೋ ಅವನೇ ಬ್ರಹ್ಮಜ್ಞಾನಿ. ಈ ಹದಿನಾರು ಭಗವದ್ರೂಪಗಳ ಜ್ಞಾನಿಗೆ ಎಲ್ಲ ದೇವತೆಗಳೂ ಕಾಣಿಕೆಯನ್ನು ಅರ್ಪಿಸುವರು ಎಂದು ಶ್ರುತಿಯ ಭಾವ.

इति प्रत्यक्षं स्पष्टं मुक्तस्य सर्वदेवपूज्यत्वोपदेशात् मुक्तानां जगदैश्वर्यमस्तीति चेन्न। कुतः? आधिकारिकमण्डलस्थोक्तेः। अधिकारे नियुक्ता आधिकारिकाः–'तत्र नियुक्तः' इति ठक् –– स्वयोग्यपदवीं प्राप्ता देवाः। तेषां मण्डले नियामकतया स्थितस्य मुक्तविरिञ्चस्यैव तत्रोक्तेर्नाशेषमुक्तानां जगद्विषयैश्वर्यमित्यर्थः।

देवमण्डलेति वाच्ये एवमुक्तिर्मुक्तदेवानामपि मुक्तस्वावरनियमनाधिकारे नियुक्तत्वमस्तीति सूचयितुम्। तत्र तत्र स्थित्वा भोगान् भुङ्क्त इति मण्डलस्येत्युक्तमिति तत्त्वप्रदीपोक्तिः।

---

ಹಂತಿ ।' (ತೈ.ಉ. ೧.೫) ಎಂಬುದಾಗಿ, ಪ್ರತ್ಯಕ್ಷೋಪದೇಶಾತ್-ಪ್ರತ್ಯಕ್ಷಂ - ಸ್ಪಷ್ಟವಾಗಿ, ಉಪದೇಶಾತ್ - ಮುಕ್ತರಿಗೆ ಸರ್ವದೇವಪೂಜ್ಯತ್ವವನ್ನು ಹೇಳಿರುವುದರಿಂದ ಮುಕ್ತರಿಗೆ ಜಗದೀಶ್ವರತ್ವವಿದೆ ಎಂದರೆ ಅದು ಸರಿಯಲ್ಲ. ಏಕೆಂದರೆ, ಆಧಿಕಾರಿಕ ಮಂಡಲಸ್ಥೋಕ್ತೇಃ - ಅಧಿಕಾರಿಕರೆಂದರೆ ಅಧಿಕಾರದಲ್ಲಿ ನಿಯುಕ್ತರಾದವರು. 'ತತ್ರ ನಿಯುಕ್ತಃ' (ಪಾ.ಸೂ. ೪.೪.೬೯) ಎಂಬ ಸೂತ್ರದಿಂದ 'ಅಧಿಕಾರ' ಶಬ್ದಕ್ಕೆ ಠಕ್ ಪ್ರತ್ಯಯ ಸೇರಿ ಆಧಿಕಾರಿಕ ಎಂಬ ರೂಪವಾಗಿದೆ. ಆಧಿಕಾರಿಕ ಅಂದರೆ ಸ್ವಯೋಗ್ಯವಾದ ಪದವಿಯನ್ನು ಪಡೆದ ದೇವತೆಗಳ ಮಂಡಲದಲ್ಲಿ ನಿಯಾಮಕನಾಗಿರುವ ಮುಕ್ತ ಚತುರ್ಮುಖನನ್ನೇ ಆ ಶ್ರುತಿಯಲ್ಲಿ ಹೇಳಿರುವುದರಿಂದ ಎಲ್ಲ ಮುಕ್ತರಿಗೂ ಜಗತ್ತಿನ ಸ್ವಾಮಿತ್ವವಿಲ್ಲವೆಂದು ಅರ್ಥ.

**'ಆಧಿಕಾರಿಕ' ಶಬ್ದ ಪ್ರಯೋಗದ ಪ್ರಯೋಜನ**

ಮುಕ್ತದೇವತೆಗಳು ತಮಗಿಂತ ಅಧಮರಾದ ಮುಕ್ತರ ನಿಯಮನ ಮಾಡುವ ಅಧಿಕಾರದಲ್ಲಿ ನಿಯುಕ್ತರಾಗಿರುವರು ಎಂಬುದನ್ನು ಸೂಚಿಸಲು 'ದೇವಮಂಡಲ' ಎಂದು ಹೇಳುವ ಬದಲು 'ಆಧಿಕಾರಿಕಮಂಡಲ' ಎಂಬ ಪದವನ್ನು ಸೂತ್ರದಲ್ಲಿ ಪ್ರಯೋಗಿಸಲಾಗಿದೆ. ಆಯಾಯಾ ಮುಕ್ತಮಂಡಲದಲ್ಲಿದ್ದು ಮುಕ್ತಚತುರ್ಮುಖರು ಭೋಗಗಳನ್ನು ಭುಜಿಸುವರು ಎಂದು ಸೂಚಿಸಲು 'ಮಂಡಲಸ್ಥ' ಎಂದು ಪ್ರಯೋಗಿಸಲಾಗಿದೆ ಎಂದು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ.

मुक्तब्रह्मादीनाममुक्तजगद्व्यापारोऽपि कुतो नेत्यत आह—

**॥ ॐ विकारवर्ति च तथा हि दर्शयति ॐ ॥ ४.४.२०**

चो नेत्यनुकर्षार्थः। विकारं संसारमावर्तयतीति विकारावर्ति। तद्विषयं व्यापरणं मुक्तानां नास्ति। कुतः? 'इमं मानवमावर्तं नावर्तन्ते' (छा. ४.१५.६) इति श्रुतिस्तथा दर्शयति हि यतोऽत्र इत्यर्थः। मानवा यत्रावर्तन्ते स मानवावर्तः संसारः। तं नावर्तयन्तीति श्रुत्यर्थः ॥ ९ ॥

स्थित्यधिकरणम्—१०

**॥ ॐ स्थितिमाह दर्शयतश्चैवं प्रत्यक्षानुमाने ॐ ॥ ४.४.२१**

---

ಮುಕ್ತರಾದ ಬ್ರಹ್ಮಾದಿಗಳಿಗೆ ಅಮುಕ್ತ ಜಗತ್ತಿಗೆ ಸಂಬಂಧಿಸಿದಂತೆ ಪಾಲನಾದಿ ಕ್ರಿಯೆಗಳು ಏಕಿಲ್ಲ? ಎಂಬ ಆಶಂಕೆಗೆ ಸಮಾಧಾನ—

**ಓಂ ವಿಕಾರಾವರ್ತಿ ಚ ತಥಾ ಹಿ ದರ್ಶಯತಿ ಓಂ ೪-೪-೨೦**

**ಸೂತ್ರಾರ್ಥ**

ಸೂತ್ರದಲ್ಲಿರುವ 'ಚ' ಶಬ್ದವು ಹಿಂದಿನ ಸೂತ್ರದಿಂದ 'ನ' ಎಂಬ ಪದದ ಅನುವೃತ್ತಿಯನ್ನು ಸೂಚಿಸುವುದು. ವಿಕಾರಾವರ್ತಿ ನ - ವಿಕಾರವೆಂದರೆ ಸಂಸಾರ. 'ವಿಕಾರಂ ಆವರ್ತಯತಿ' ಎಂಬ ವ್ಯುತ್ಪತ್ತಿಯಂತೆ ಸಂಸಾರದ ಆವರ್ತನೆಗೆ ಕಾರಣವಾದ ಕ್ರಿಯೆಗಳು ಮುಕ್ತರಿಗಿಲ್ಲ. ಏಕೆಂದರೆ, ತಥಾ ಹಿ ದರ್ಶಯತಿ - 'ಇಮಂ ಮಾನವಮಾವರ್ತಂ ನಾವರ್ತಂತೇ' (ಛಾಂ. ೪.೧೫.೬) ಎಂಬ ಶ್ರುತಿಯು ಹಾಗೆ ತಿಳಿಸುವುದರಿಂದ ಎಂದು ಅರ್ಥ. ಮಾನವರು ಜನನ-ಮರಣಾದಿಗಳ ಆವೃತ್ತಿಯನ್ನು ಪಡೆಯುವ ಸಂಸಾರವು ಮಾನವಾವರ್ತ ಎಂದೆನಿಸುವುದು. ಅಂತಹ ಸಂಸಾರದ ವಿಷಯದಲ್ಲಿ ಮುಕ್ತರು ಪ್ರವರ್ತಿಸುವುದಿಲ್ಲವೆಂದು ಶ್ರುತಿಯ ಅರ್ಥ.

ಸ್ಥಿತ್ಯಧಿಕರಣ—೧೦

**ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ ೪-೪-೨೧**

अत्र मुक्तानां भोगादिना वृद्धिह्रासौ नेत्युच्यते। 'ब्रह्मणि सम्पन्नो न जायते न म्रियते न हीयते न वर्धते' इति श्रुतिः स्थितिं मुक्तानामेकप्रकारेणावस्थानमाह। महतां प्रत्यक्षं, 'मुक्तो न वृद्ध्यादिमान् तद्धेतुशून्यत्वात्' इत्यनुमानं च एवं एकप्रकारेणावस्थितिं दर्शयतः। महतां प्रत्यक्षमस्तीत्येतत् 'न ह्रासो न च वृद्धिर्वा' इत्यादिस्मृत्याऽवसेयम्।

---

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಕ್ತರಿಗೆ ಭೋಗಾದಿಗಳಿಂದ ವೃದ್ಧಿ-ಹ್ರಾಸಗಳುಂಟಾಗುವುದಿಲ್ಲವೆಂದು ಹೇಳಲಾಗುವುದು. ಸ್ಥಿತಿಂ ಆಹ - 'ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ'[1] ಎಂಬ ಶ್ರುತಿಯು ಮುಕ್ತರಿಗೆ ಏಕಪ್ರಕಾರದ ಇರುವಿಕೆಯನ್ನು ಹೇಳುವುದು. ಪ್ರತ್ಯಕ್ಷಾನುಮಾನೇ ಚ - ಮಹಾತ್ಮರ ಪ್ರತ್ಯಕ್ಷವೂ ಮತ್ತು 'ಮುಕ್ತರು ವೃದ್ಧಿಹ್ರಾಸರಹಿತರು, ವೃದ್ಧಿಹ್ರಾಸಗಳಿಗೆ ಕಾರಣವಿಲ್ಲದವರಾದ್ದರಿಂದ' ಎಂಬ ಅನುಮಾನಪ್ರಮಾಣವೂ, ಏವಂ ದರ್ಶಯತಃ - ಮುಕ್ತರಿಗೆ ಏಕಪ್ರಕಾರದ ಸ್ಥಿತಿಯನ್ನು ತಿಳಿಸುವುವು. ಮಹಾತ್ಮರಿಗೆ 'ಮುಕ್ತರಿಗೆ ವೃದ್ಧಿಹ್ರಾಸಗಳಿಲ್ಲ' ಎಂಬ ಪ್ರತ್ಯಕ್ಷವಿದೆ ಎನ್ನುವುದನ್ನು 'ನ ಹ್ರಾಸೋ ನ ಚ ವೃದ್ಧಿರ್ವಾ'[2] ಇತ್ಯಾದಿ ಸ್ಮೃತಿಯಿಂದ ತಿಳಿಯಬೇಕು.

---

1. "ಸ ಏಷ ಏತಸ್ಮಿನ್ ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ ಸ್ಥಿತ ಏವ ಸರ್ವದಾ ಭವತಿ ದರ್ಶನ್ನೇವ ಬ್ರಹ್ಮ ದರ್ಶನ್ನೇವಾತ್ಮಾನಂ ತಸ್ಯೈವಂ ಧರ್ಶಯತೋ ನಾಪತ್ತಿರ್ನ ವಿಪತ್ತಿಃ" — ಜಾಬಾಲಶ್ರುತಿ.

ಮೋಕ್ಷದಲ್ಲಿ ಪರಬ್ರಹ್ಮನನ್ನು ಪಡೆದ ಮುಕ್ತರಿಗೆ, ಸ್ವರೂಪತಃ ಉತ್ಪತ್ತಿನಾಶಾದಿಗಳಿಲ್ಲದಿರುವಂತೆ ದೇಹದ ಉತ್ಪತ್ತಿ, ನಾಶ, ವೃದ್ಧಿ, ಹ್ರಾಸಗಳೂ ಇಲ್ಲ. ಅವನು ಏಕಪ್ರಕಾರನಾಗಿಯೇ ಇರುವನು. ಯದ್ಯಪಿ ಆ ಮುಕ್ತನು ಪರಬ್ರಹ್ಮನನ್ನು ಉತ್ಕೃಷ್ಟನೆಂದರಿತು ಉಪಾಸನೆ ಮಾಡುವನು. ಹಾಗೆಯೇ ಅವನನ್ನು ಸ್ವಾಮಿಯೆಂದರಿತು ಉಪಾಸಿಸುವನು. ಈ ಉಪಾಸನೆಗಳಿಂದಾಗಿ ಆ ಮುಕ್ತನ ಆನಂದಾದಿಗುಣಗಳ ವೃದ್ಧಿ-ಹ್ರಾಸಗಳಿಗೆ ಪ್ರಸಕ್ತಿ ಇರುವುದು. ಆದರೂ ಮುಕ್ತನಿಗೆ ಯಾವುದೇ ಬಗೆಯ ವೃದ್ಧಿಯಾಗಲಿ, ಹ್ರಾಸವಾಗಲಿ ಇಲ್ಲ ಎಂದು ಈ ಜಾಬಾಲಶ್ರುತಿಯ ಭಾವ.

2. ನ ಹ್ರಾಸೋ ನ ಚ ವೃದ್ಧಿರ್ವಾ ಮುಕ್ತಾನಾಂ ವಿದ್ಯತೇ ಕ್ವಚಿತ್ ।
ವಿದ್ವತ್ಪ್ರತ್ಯಕ್ಷಸಿದ್ಧತ್ವಾತ್ ಕಾರಣಾಭಾವತೋಽನುಮಾ ॥
ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ ।
ನ ತು ಸಾಧನಭೂತಾ ಸಾ ಸಿದ್ಧಿರೇವಾತ್ರ ಸಾ ಯತಃ ॥ —ಬ್ರಹ್ಮವೈವರ್ತಪುರಾಣ

मुक्तानां भोगविशेषसत्त्वात् कथमेवमित्यत आह—

॥ ॐ भोगमात्रसाम्यलिङ्गाच्च ॐ ॥ ४.४.२२

भोगमात्रस्य साम्ये मुक्तस्यानन्दवृद्ध्याद्यकारणत्वे लिङ्गाच्च लिङ्गस्य सत्त्वाच्चेत्यर्थः । 'एतमानन्दमयमात्मानमनुविश्य न जायते न म्रियते न ह्रसते न वर्धते यथाकामम् चरति यथाकामम् पिबति यथाकामम् रमते यथाकाममुपरमते' इति श्रुतौ मुक्तस्य वृद्ध्याद्यभावोक्तिपूर्वं भोगभावाभावोक्तेर्भोगविशेषो नानन्दवृद्ध्यादि-

ಮುಕ್ತರಿಗೆ ಭೋಗವಿಶೇಷವಿರುವುದರಿಂದ ವೃದ್ಧ್ಯಾದಿಗಳಿಗೆ ಕಾರಣವಿಲ್ಲವೆನ್ನುವುದು ಹೇಗೆ ಎಂಬ ಶಂಕೆಗೆ ಸಮಾಧಾನ—

**ಓಂ ಭೋಗಮಾತ್ರಸಾಮ್ಯಲಿಂಗಾಚ್ಚ ಓಂ ೪-೪-೨೨**

**ಸೂತ್ರಾರ್ಥ**

ಮುಕ್ತರು ಅನುಭವಿಸುವ ಎಲ್ಲ ಭೋಗಗಳೂ ಸಾಮ್ಯವನ್ನು ಹೊಂದಿವೆ ಅಂದರೆ ಅವರ ಆನಂದವೃದ್ಧಿ ಮೊದಲಾದುವಕ್ಕೆ ಕಾರಣವಿಲ್ಲವೆಂಬ ವಿಷಯದಲ್ಲಿ ಲಿಂಗವಿರುವುದರಿಂದಲೂ ಎಂದು ಅರ್ಥ. 'ಏತಮಾನಂದಮಯಮಾತ್ಮಾನಮನುವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ಚರತಿ ಯಥಾಕಾಮಂ ಪಿಬತಿ ಯಥಾಕಾಮಂ ರಮತೇ ಯಥಾಕಾಮಮುಪರಮತೇ'[1] ಎಂಬ ಶ್ರುತಿಯಲ್ಲಿ ಮುಕ್ತನಿಗೆ ಆನಂದವೃದ್ಧಿ ಮೊದಲಾದವುಗಳಿಲ್ಲವೆಂದು ಹೇಳಿ ಅನಂತರ ಭೋಗವಿರುವುದು ಮತ್ತು ಇಲ್ಲದಿರುವುದನ್ನು ಹೇಳಿರುವುದರಿಂದ ಭೋಗ ವಿಶೇಷವು ಆನಂದವೃದ್ಧಿ ಮೊದಲಾದವುಗಳಿಗೆ ಕಾರಣವಲ್ಲ ಎಂಬ ವಿಷಯದಲ್ಲಿ ಲಿಂಗವಿರುವುದರಿಂದ ಎಂದು ಭಾವ.

ಜ್ಞಾನಿಗಳ ಪ್ರತ್ಯಕ್ಷದಿಂದ ಸಿದ್ಧವಾಗಿರುವ ಕಾರಣ ಮತ್ತು 'ಮುಕ್ತರಿಗೆ ಆನಂದಾದಿಗುಣಗಳ ವೃದ್ಧಿ-ಹ್ರಾಸಗಳಿಲ್ಲ, ವೃದ್ಧಿ-ಹ್ರಾಸಗಳಿಗೆ ಕಾರಣವಿಲ್ಲದ್ದರಿಂದ' ಎಂಬ ಅನುಮಾನ ಪ್ರಮಾಣದಿಂದಲೂ ಮುಕ್ತರ ಆನಂದಾದಿಗುಣಗಳಿಗೆ ಎಂದೂ ಹ್ರಾಸವಾಗಲಿ, ವೃದ್ಧಿಯಾಗಲಿ ಇಲ್ಲ. ಮುಕ್ತರು ಯಾವಾಗಲೂ ಮಾಡುವ ಕೇವಲ ಶ್ರೀಹರಿಯ ಉಪಾಸನೆಯು ಕೇವಲ ಸುಖಸ್ವರೂಪವಾಗುವುದು. ಮುಕ್ತಿಯಲ್ಲಿ ಮಾಡುವ ಉಪಾಸನೆಯು ಭಯರಹಿತವಾದ ಮೋಕ್ಷಫಲರೂಪವಾದ ಸಿದ್ಧಿಯೇ ಆಗಿರುವುದರಿಂದ ಆ ಉಪಾಸನೆಯು ಎಂದೂ ಸಾಧನರೂಪವಾಗಲಾರದು.

1. 'ಏತಮಾನಂದಮಯಮಾತ್ಮಾನಮನುವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ಚರತಿ ಯಥಾಕಾಮಂ ಪಿಬತಿ ಯಥಾಕಾಮಂ ರಮತೇ ಯಥಾಕಾಮಮುಪರಮತೇ' -- (ತೈ.ಆ. ಲ)

हेतुरित्यर्थे लिङ्गसत्त्वादिति भावः । 'यथाकामं रमते उपरमते' इति विशेषसूचनाय मात्रपदोक्तिरिति तत्त्वप्रदीपोक्तिः । भोगसामान्य एव साम्यं न तु तद्विशेष इत्यर्थ इति न्यायामृतोक्तिः ॥ १० ॥

अनावृत्त्यधिकरणम् — ११

॥ ॐ अनावृत्तिः शब्दादनावृत्तिः शब्दात् ॐ ॥ ४.४.२२

अत्र मुक्तस्य भोगान् भुञ्जानस्यापुनरावृत्तिरुच्यते । मुक्तानामनावृत्तिः, न तु सर्वकालस्यापि समाप्त्या स्वर्गिवत् पुनरावृत्तिः । कुतः ? 'न च पुनरावर्तते' इति शब्दात् श्रुतेरित्यर्थः । ज्ञायत इति शेषः । समस्तशास्त्रार्थावधारणार्था सूत्रस्यैवात्र द्विरुक्तिः ॥ ११ ॥

'ಯಥಾಕಾಮಂ ರಮತೇ ಯಥಾ ಕಾಮಂ ಉಪರಮತೇ' ಎಂಬ ಶ್ರುತಿಯಲ್ಲಿ ಹೇಳಿರುವ ಭೋಗವಿರುವಿಕೆ-ಇಲ್ಲದಿರುವಿಕೆ- ಈ ವಿಶೇಷಗಳನ್ನು ಸೂಚಿಸುವ ಸಲುವಾಗಿ ಸೂತ್ರದಲ್ಲಿ 'ಮಾತ್ರ' ಎಂಬ ಪದವನ್ನು ಪ್ರಯೋಗಿಸಲಾಗಿದೆ ಎಂದು ತತ್ತ್ವಪ್ರದೀಪದಲ್ಲಿ ಹೇಳಿದೆ. ಮುಕ್ತರ ಭೋಗಸಾಮಾನ್ಯದಲ್ಲಿ ಮಾತ್ರವೇ ಸಾಮ್ಯವಿರುವುದು ಹೊರತು ಭೋಗವಿಶೇಷದಲ್ಲಲ್ಲವೆಂದು ನ್ಯಾಯಾಮೃತದಲ್ಲಿ ಹೇಳಲಾಗಿದೆ.

ಅನಾವೃತ್ತ್ಯಧಿಕರಣ—೧೧

ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ ೪.೪.೨೨

**ಅಧಿಕರಣದ ವಿಷಯ ಮತ್ತು ಸೂತ್ರಾರ್ಥ**

ಈ ಅಧಿಕರಣದಲ್ಲಿ ಮುಕ್ತನಾಗಿ ಭೋಗಗಳನ್ನನುಭವಿಸುತ್ತಿರುವ ಜೀವನಿಗೆ ಪುನರಾವೃತ್ತಿ ಇಲ್ಲವೆಂದು ಹೇಳಲಾಗುವುದು.

ಅನಾವೃತ್ತಿಃ - ಮುಕ್ತರಿಗೆ ಆವೃತ್ತಿಯೇ ಇಲ್ಲ ಹೊರತು ಕಾಲವೆಲ್ಲವೂ ಸಮಾಪ್ತವಾಗಿ, ಸ್ವರ್ಗಕ್ಕೆ ಹೋದವನಿಗಿರುವಂತೆ ಪುನರಾವೃತ್ತಿ ಇಲ್ಲ. ಏಕೆಂದರೆ, ಶಬ್ದಾತ್ - 'ನ ಚ ಪುನರಾವರ್ತಂತೇ' ಎಂಬ ಶ್ರುತಿಯಿರುವುದರಿಂದ ಮುಕ್ತರಿಗೆ

---

ಸಾಯುಜ್ಯಮುಕ್ತಿಯನ್ನು ಪಡೆದ ಮುಕ್ತನು ಆನಂದಪೂರ್ಣನಾದ ಪರಮಾತ್ಮನನ್ನು ಪ್ರವೇಶಿಸಿ ದೇಹತಃ ಜನನ-ಮರಣಗಳಿಂದಲೂ ರಹಿತನಾಗುವನು. ಅವನ ಗುಣಗಳಿಗೆ ವೃದ್ಧಿಯಾಗಲಿ ಹ್ರಾಸವಾಗಲಿ ಇರುವುದಿಲ್ಲ. ತನ್ನ ಇಚ್ಛೆಗನುಸಾರವಾಗಿ ಭಕ್ಷಣ-ಪಾನಾದಿ ಭೋಗವಿಶೇಷಗಳನ್ನು ಅನುಭವಿಸುವನು. ತನ್ನ ಇಚ್ಛಾನುಸಾರ ಭೋಗವಿಶೇಷರಹಿತನಾಗುವನು ಎಂದು ಶ್ರುತಿಯ ಭಾವ.

कल्याणगुणपूर्णाय दोषदूराय विष्णवे ।
नमः श्रीप्राणनाथाय भक्ताभीष्टप्रदायिने ॥
सुधीन्द्रगुरुपादानां शिष्येण श्रीशतुष्टये ।
राघवेन्द्रेण यतिना कृतेयं तन्त्रदीपिका ॥

इति श्रीराघवेन्द्रयतिकृतायां तन्त्रदीपिकायां
चतुर्थाध्यायस्य चतुर्थः पादः ॥
॥ समाप्तेयं तन्त्रदीपिका ॥
॥ श्रीकृष्णार्पणमस्तु ॥

---

ಪುನರಾವೃತ್ತಿ ಇಲ್ಲದಿರುವುದು ತಿಳಿದುಬರುವುದು. ಈ ವಾಕ್ಯದಲ್ಲಿ 'ತಿಳಿದುಬರುವುದು' ಎಂಬ ಪದಗಳು ಶೇಷಪೂರಣವಾಗಿವೆ. ಸಮಸ್ತಶಾಸ್ತ್ರಾರ್ಥದ ನಿರ್ಣಯವನ್ನು ಸೂಚಿಸುವ ಸಲುವಾಗಿ ಇಡಿ ಸೂತ್ರಕ್ಕೆ ದ್ವಿರುಕ್ತಿಯನ್ನು ಮಾಡಲಾಗಿದೆ.

**ತಂತ್ರದೀಪಿಕೆಯ ಅಂತಿಮ ಮಂಗಲಾಚರಣ**

ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀ ಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ

ಭಗವಂತನು ಕಲ್ಯಾಣಗುಣಪರಿಪೂರ್ಣನೂ ದೋಷವಿದೂರನೂ ಆಗಿದ್ದಾನೆ. ಮುಖ್ಯಪ್ರಾಣನಿಗೂ ಸ್ವಾಮಿಯೂ, ಭಕ್ತರ ಅಭೀಷ್ಟಗಳನ್ನೆಲ್ಲ ದಯಪಾಲಿಸುವವನೂ ಆದ ಆ ವಿಷ್ಣುವಿಗೆ ನಮಸ್ಕಾರಗಳು.

ಸುಧೀಂದ್ರಗುರುಪಾದಾನಾಂ ಶಿಷ್ಯೇಣ ಶ್ರೀಶತುಷ್ಟಯೇ ।
ರಾಘವೇಂದ್ರೇಣ ಯತಿನಾ ಕೃತೇಯಂ ತಂತ್ರದೀಪಿಕಾ ॥

ಶ್ರೀ ಸುಧೀಂದ್ರಗುರುಪಾದರ ಶಿಷ್ಯರಾದ ಶ್ರೀ ರಾಘವೇಂದ್ರಯತಿಗಳಿಂದ ಶ್ರೀಶಸಂತುಷ್ಟಿಗಾಗಿ ತಂತ್ರದೀಪಿಕೆಯೆಂಬ ಈ ಗ್ರಂಥವು ರಚಿಸಲ್ಪಟ್ಟಿತು.

ಶ್ರೀ ರಾಘವೇಂದ್ರಯತಿಗಳು ರಚಿಸಿದ ತಂತ್ರದೀಪಿಕೆಯಲ್ಲಿ
ಚತುರ್ಥಾಧ್ಯಾಯದ ಚತುರ್ಥಪಾದವು ಸಮಾಪ್ತವಾಯಿತು.

ಫಲಾಧ್ಯಾಯವು ಸಂಪೂರ್ಣವಾಯಿತು.
ತಂತ್ರದೀಪಿಕೆಯು ಸಮಾಪ್ತವಾಯಿತು.

ಶ್ರೀ ಕೃಷ್ಣಾರ್ಪಣಮಸ್ತು